ಶ್ರೀ ಶಿವಃ ಶರಣಮ್

# ವೇದ ಪರಿಚಯ.

## ( ಪೂರ್ವ ಭಾಗ. )

ಗ್ರಂಥಕರ್ತರು.

ಶ್ರೀ ರೇಣುಕಾರಾಧ್ಯ, ಬೃಹನ್ಮಠಾಧೀಶ್ವರ,
ವಿದ್ಯಾವಾಚಸ್ಪತಿ, ಪರಮಪೂಜ್ಯ ಶ್ರೀ ಶ್ರೀಗುರು
ಶಂಭುಲಿಂಗಶಿವಾಚಾರ್ಯಮಹಾಸ್ವಾಮಿಗಳು
ಬೃಹನ್ಮಠ ವಿಜಾಪೂರ
...ಶ್ರಮ ಹುಲ್ಯಾಳ ( ತಾ|| ಜಮಖಂಡಿ )



ಮೂರನೆಯ ಮುದ್ರಣ

೧೯೭೯.

ಶ್ರೀ ಶಿವಃ ಶರಣಮ್

—೦—

# ವೇದಪರಿಚಯ.

( ಪೂರ್ವಭಾಗ )


ಗ್ರಂಥಕರ್ತರು.

ಶ್ರೀ ರೇಣುಕಾರಾಧ್ಯ, ಬೃಹನ್ಮಠಾಧೀಶ್ವರ
ವಿದ್ಯಾವಾಚಸ್ಪತಿ, ಪರಮಪೂಜ್ಯ ಶ್ರೀ ಶ್ರೀಗುರು
ಶಂಭುಲಿಂಗಶಿವಾಚಾರ್ಯಮಹಾಸ್ವಾಮಿಗಳು
ಬೃಹನ್ಮಠ ವಿಜಾಪುರ.
ಯೋಗಾಶ್ರಮ ಹುಲ್ಯಾಳ. (ತಾ|| ಜಮಖಂಡಿ)



ಪ್ರಕಾಶಕರು.

ವೇ|| ಶ್ರೀ ಶಿವಮೂರ್ತಿಸ್ವಾಮಿ ಸಿದ್ಧೇಶ್ವರಶಾಸ್ತ್ರಿ
ಹಿರೇಮಠ.

ಗ್ರಂಥ ದೊರೆಯುವ ಸ್ಥಳ

ಶ್ರೀ ಶಂಭುಲಿಂಗೇಶ್ವರ ಹಿರೇಮಠ
ಜೋರಾಪುರ ಪೇಟ. ಹಿರೇಮಠ ರಸ್ತೆ ವಿಜಾಪೂರ.
ಫೋ. 52351





ಮೂರನೆಯ ಮುದ್ರಣ ೧೯೭೪.

ಬೆಲೆ ೧೬ ರೂ.

ಶ್ರೀ ರೇಣುಕಾರಾಧ್ಯ, ಬೃಹನ್ಮಠಾಧೀಶ್ವರ, ವಿದ್ಯಾವಾಚಸ್ಪತಿ,
ಶ್ರೀ ಶ್ರೀಗುರು ಶಂಭುಲಿಂಗಶಿವಾಚಾರ್ಯ
ಮಹಾಸ್ವಾಮಿಗಳು ಬೃಹನ್ಮಠ
ಇವರು ಜೋರಾಪೂರದಲ್ಲಿ ತಮ್ಮ ಹಿರೇಮಠದಲ್ಲಿ
ಪ್ರಸಿದ್ಧಿಸಿದರು.
ಮತ್ತು ಇದನ್ನು ವಿಜಾಪುರದಲ್ಲಿ ಶ್ರೀ ಚನ್ನಪ್ಪ ಕ. ಹಿರೇಮನಿ ಇವರು
ಕಾಬ್ರಾಜಿ ಬಜಾರದಲ್ಲಿ ಇರುವ ತಮ್ಮ
" ಅಶೋಕ ಪ್ರಿಂಟರ್ಸ "
ದಲ್ಲಿ ಮುದ್ರಿಸಿದರು.



ರೇಣುಕ ದೇವನನ್ವಯ ಸುಧಾರ್ಣವ ಸಂಭವನಂಥ ಭಾವ ಮಂ।
ಮಾಣಿಸಿ ಸತ್ಯವಿದ್ಯೆಯ ಸುಧಾರುಚಿಯಿಂ ಧರೆಯಂ ಬೆಳಂಗುವಂ।
ಪಾಣಿಯ ಸಂತಸಕ್ಕೆ ಸಲೆ ಕೀರ್ತಿಯ ಚಂದ್ರಿಕೆ ಯಾದವಂ ಗಡಾ।
ಕ್ಷೋಣಿಗೆ ಶಂಭುಲಿಂಗ ಗುರುರಾಜನತರ್ಕ್ಯ ಚಿದಬ್ಧಿವರ್ಧನಂ॥



**ಗ್ರಂಥಕರ್ತರು.**

**ವಿದ್ಯಾವಾಚಸ್ಪತಿ, ಪರಮಪೂಜ್ಯ ಶ್ರೀ ಶ್ರೀಗುರು**
**ಶಂಭುಲಿಂಗಶಿವಾಚಾರ್ಯರು ಬೃಹನ್ಮಠ ವಿಜಾಪುರ.**
**ಯೋಗಾಶ್ರಮ ಹುಲ್ಯಾಳ. (ತಾ. ಜಮಖಂಡಿ)**

# निवेदनम् ।

करुणा-मसृणित-दृष्टिप्रचुर-प्रभया विभासयन्विदिशः ।
श्रीमद्रेणुकदेवः पायादायासतो गुरुवर्यः ॥ १ ॥

श्रीविद्यावाचस्पति बिरुदांचित शंभुलिंग शिवगुरुणा ।
रचितःपरिचयोऽयं वेदानां सकललोकहितदृष्टया ॥ २ ॥

विलोक्येमां ग्लानिं श्रुतिविहितधर्मस्य बहुला
मुपायः सुश्लिष्टस्तदपहरणेऽत्रैव निहितः ।
अतोऽयं यत्नो मे फलतु जनतायामविरतं
प्रकुर्वन् सद्धर्माचरणसुमतिं शंभुदयया ॥ ३ ॥

कुतः सर्वज्ञत्वं पटुतममतित्वादिविभुता
मनुष्याणां लोके विकलमनसां युक्तविषये ।
प्रयत्नः कर्तव्यः स्वमतिमनुलक्ष्यैव विदुषा
खगानां संचारो वियति निजपक्षैः स्वबलतः ॥ ४ ॥

भवेद्धि जगतीतले महति सज्जनः कर्हिचित्
शिवस्य शिवसद्मनो विरचितस्य प्रागेव यः ।
तनोति निजशक्तितो रुचिररम्य चित्रादिभि
स्सुवर्णरमणीयतामखिललोकमोदप्रदाम् ॥ ५ ॥

समर्पितोस्तु ग्रंथोऽयं पूर्वभागात्मकः शुभः ।
वेदशास्त्रनिदानाय शिवाय जनतात्मने ॥ ६ ॥



# ಮುನ್ನುಡಿ

— ೦ —

ಯಾವುದೊಂದು ಜನಾಂಗದೇಳ್ಗೆಗೆ ಆ ಜನಾಂಗದವರ ದೇಶ, ಭಾಷೆ, ಧರ್ಮ ಇವುಗಳಲ್ಲಿರುವ ವಿಚಾರಪೂರ್ಣವಾದ ಅಭಿಮಾನ, ಆದರ. ವಿಶ್ವಾಸಗಳೇ ಮುಖ್ಯ ಕಾರಣವು. ಈ ದೃಷ್ಟಿಯಿಂದ ನಮ್ಮ ವೇದವಾಙ್ಮಯದ ಚರಿತ್ರವನ್ನು ಪರಿಶೀಲಿಸಿದರೆ, ಮೇಲಿನ ಮಾತು ನಮ್ಮ ಆರ್ಯರ ಅನುಭವದ ಸಾರವಾಗಿದ್ದಿತೆಂದು ಒಡೆದು ಕಾಣುವುದು.

ತಮ್ಮ ದೇಶವೇ ಪುಣ್ಯಭೂಮಿ ತಮ್ಮ ಭಾಷೆಯೇ ದೇಶಭಾಷೆ, ತಮ್ಮ ಧರ್ಮವೇ ಸನಾತನವೆಂದು ಸಾರಿದರು ಆರ್ಯರು. ಇಷ್ಟೇ ಅಲ್ಲ, ತಮ್ಮ ಧರ್ಮವನ್ನು ಪ್ರತಿಪಾದಿಸುವ ತಮ್ಮ ಭಾಷೆಯ ಗ್ರಂಥ ಗಳು ಈಶ್ವರ ವಾಣಿಗಳಾಗಿ ಅಭ್ಯುದಯನಿಶ್ಶ್ರೇಯಸ್ಸುಗಳ ಪ್ರಾಪ್ತಿಯ ಸಾಧನಕ್ಕೆ ಸ್ವತಃ ಪ್ರಮಾಣಗಳೆಂದು ಉದ್ಘೋಷಿಸಿದರು. ಅವರ ವಿಚಾರ ಯುಕ್ತವಾದೀ ಸ್ವಾಭಿಮಾನವು ಈಗ ನಮಗೆ ಅವಶ್ಯವಾಗಿ ಬೇಕಾಗಿ ರುವುದು. ಈ ತರದ ಅಭಿಮಾನವು ನಿರರ್ಥಕವಲ್ಲ. ಈಗ ನಾವು ಬಯಸುತ್ತಿರುವ ಸ್ವತಂತ್ರತೆಯ ಸಾಧನಾಂಗವು. ಆ ಸ್ವತಂತ್ರತೆಯ ಮುಖ್ಯ ಸಾಧನವೇ ಧರ್ಮವು. ಆ ಧರ್ಮ ಮೂಲವೇ ವೇದವಾಙ್ಮ ಯವೆಂದು ನಮ್ಮವರ ನಿರ್ಣಯ.

ಇಂತಹ ಧರ್ಮದ ಜ್ಞಾನಭಾಂಡಾರವಾದ ವೇದದ ಪರಿಚಯ ವನ್ನು ಕನ್ನಡ ಭಾಷೆಯ ಮೂಲಕವಾಗಿ ಮಾಡಿಕೊಡುವ ಮಹತಾ ರ್ಯವನ್ನು ವಿಜಾಪುರದ ಬೃಹನ್ಮಠದ ಪಟ್ಟಾಧಿಕಾರಿಗಳಾದ ಶ್ರೀ ಶಂಭು ಲಿಂಗಶಿವಾಚಾರ್ಯರು ಕೈಕೊಂಡುದು ಸ್ತುತ್ಯವಾಗಿರುವುದು. ಇವರು ವೀರಶೈವಮತದ ಧರ್ಮಪ್ರಭುಗಳಿದ್ದಂತೆ ವಿದ್ಯಾಪ್ರಭುಗಳೂ ಇರುವರು. ಇವರಿಗಿರುವ '**ವಿದ್ಯಾವಾಚಸ್ಪತಿ**' ಯೆಂಬ ಬಿರುದೇ ಇವರಲ್ಲಿರುವ ವಿದ್ಯಾ ಮಹತ್ವದ ಸೂಚಕವಾಗಿರುವುದು. ಇವರಿಗೆ ವೇದ-ವೇದಾಂಗಾದಿ ವಿದ್ಯೆ ಗಳಲ್ಲಿ ಪೂರ್ಣ ಪಾಂಡಿತ್ಯವಿರುವುದೆಂಬುದಕ್ಕೆ ಇವರ '**ವೇದಪರಿಚಯ**' ವೆಂಬೀ ಗ್ರಂಥವೇ ಸಾಕ್ಷಿ. ಇವರಿಂದ ಆಗಮಪರಿಜ್ಞಾನ, ಮೊದಲಾದ ಮಹತ್ವದ ಗ್ರಂಥಗಳೂ ರಚಿತವಾಗಿವೆ. ಇವರ ಭಾಷಾಶೈಲಿಯು ಉದಾ

ರವೂ ಗಂಭೀರವೂ ಆಗಿದ್ದರೂ ವಾಚಕರಿಗೆ ಸರಳವಾಗಿ ಬೋಧೆಯಾಗುವಂತಿರುವುದು. ಶ್ರೀಗಳು ತಮ್ಮ ಧರ್ಮಾಧಿಕಾರಕ್ಕೆ ಸಲ್ಲುವ ಧಾರ್ಮಿಕ ತತ್ತ್ವಬೋಧೆಯ ಪ್ರವಚನ ಮತ್ತು ಗ್ರಂಥ ರಚನವೆಂಬ ಈ ವಿಧದ ಪವಿತ್ರಕಾರ್ಯದಲ್ಲಿ ತೊಡಗಿ, ವೀರಶೈವರಿಗಷ್ಟೇ ಅಲ್ಲ, ಅಖಿಲ ಕನ್ನಡಿಗರಿಗೂ ಅಭಿನಂದನೀಯರಾಗಿರುವರು.

**ವೇದಪರಿಚಯದಲ್ಲಿ** ವಿಷಯನಿರೂಪಣಕ್ರಮ— ವೇದವೆಂದರೆ ಒಂದು ಪುಸ್ತಕವಲ್ಲ. ಅದು ನಮ್ಮ ಹಿರಿಯರು ತಮ್ಮ ಇಹಪರಗಳ ಸುಖಪ್ರಾಪ್ತಿಗೆ ಯಾವುದು ಸಾಧನವೆಂದು ನಂಬಿದರೋ ಅಂತಹ ಧರ್ಮವನ್ನು ಪ್ರತಿಪಾದಿಸುವ ಪ್ರಮಾಣಭೂತ ಗ್ರಂಥರಾಶಿಯು. ಆ ವೇದವು ಅಂಗೋಪಾಂಗಗಳಿಂದ ಇಡೀ ಸಂಸ್ಕೃತ ವಾಙ್ಮಯದ ಧಾರ್ಮಿಕಗ್ರಂಥಗಳನ್ನೇ ಒಳಕೊಂಡಿದೆ. ಋಗಾದಿ ನಾಲ್ಕು ವೇದಗಳು, ಶಿಕ್ಷಾದಿಯಾದ ಆರು ಅಂಗಗಳು, ಪುರಾಣ, ನ್ಯಾಯ, ಮೀಮಾಂಸೆ, ಧರ್ಮಶಾಸ್ತ್ರ– ಎಂಬ ಚತುರ್ದಶ ವಿದ್ಯೆಗಳೂ ವೇದಪುರುಷನ ಗರ್ಭದಲ್ಲಡಗಿರುವವು. ಇಂತಹ ಬೃಹತ್ಕುಕ್ಷಿಯಾದ ವೇದದ ವಿಷಯನಿರೂಪಣವು ಅತಿ ಕಷ್ಟಸಾಧ್ಯವಾದರೂ ಲಲಿತವಾಗಿ ಶಾಸ್ತ್ರೀಯ ಪದ್ಧತಿಯಿಂದ ನಿರೂಪಿತವಾಗಿದೆ.

ಗ್ರಂಥವು ಮೂರು ಉಲ್ಲಾಸಗಳಿಂದ ಕೂಡಿರುವುದು ಒಂದನೆಯ ಉಲ್ಲಾಸದಲ್ಲಿ ಭಾರತ ಜನಾಂಗದ ಸಂಸ್ಕೃತಿಗೆ ತಳಹದಿಯಾದ ಧರ್ಮದ ಸ್ವರೂಪವನ್ನು ವಿವರಿಸಿ, ಆ ಧರ್ಮಕ್ಕೆ ಪ್ರಮಾಣವು ಅಂಗೋಪಾಂಗಸಹಿತವಾದ ವೇದವೆಂಬುದನ್ನು ಯುಕ್ತಿಯುಕ್ತವಾಗಿ ಸಾಧಿಸಿರುವರು. ವೇದವು ಅಪೌರುಷೇಯ (ಈಶ್ವರಕರ್ತೃಕ) ವಾದುದರಿಂದ ಸ್ವತಃ ಪ್ರಮಾಣವೆಂಬುದನ್ನು ಅನೇಕ ಶಾಸ್ತ್ರೋಕ್ತಿಗಳಿಂದ ಬಲಪಡಿಸಿ, ಈಶ್ವರನ ಅಸ್ತಿತ್ವವನ್ನೂ ತತ್ಸ್ವರೂಪವನ್ನೂ ದರ್ಶನಕಾರರ ಉಕ್ತಿಗಳಿಂದಲೂ ಸ್ವಾನುಭೂತಿಯಿಂದಲೂ ನಿರ್ಣಯಿಸಿರುವರು. ಅಲ್ಲಲ್ಲಿ ಆಧುನಿಕರ ಅವಿಚಾರರಮಣೀಯವಾದ ವಾದಗಳನ್ನು ಖಂಡಿಸುವಾಗ ಕಾಠಿಣ್ಯವು ಕಂಡುಬಂದರೂ ಅದು, ಶಿಷ್ಯರ ಆತ್ಮವಿಕಾಸಕ್ಕಾಗಿ ಉದ್ಭವಿಸಿದ ಗುರುವಿನ ಕರುಣಾರಸದಿಂದ ಮೃದುತ್ವವನ್ನೇ ಹೊಂದಿ ಆದರಣೀಯವಾಗಿದೆ. ಕಡೆಯಲ್ಲಿ ವೇದದ ಸಾಮಾನ್ಯ ಸ್ವರೂಪ ವಿವೇಚನೆಯಿಂದ ಉಲ್ಲಾಸವು ಕೊನೆಗಂಡಿದೆ.

ಎರಡನೆಯ ಉಲ್ಲಾಸದಲ್ಲಿ— ಪ್ರತಿಯೊಂದು ವೇದದ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು ಇವುಗಳ ವಿಭಾಗವೂ ಸ್ವರೂಪವೂ ಕ್ರಮಬದ್ಧವಾಗಿಯೂ ವಿಸ್ತಾರವಾಗಿಯೂ ನಿರೂಪಿತವಾಗಿರುವುದು ಮನನೀಯವಾಗಿದೆ.

ಮೂರನೆಯ ಉಲ್ಲಾಸದಲ್ಲಿ— ಅಂಗೋಪಾಂಗಗಳಿಂದ ಸಹಿತವಾದ ವೇದದ–ವೇದ. ವೇದಾಂಗ, ಪುರಾಣ, ನ್ಯಾಯ ಮೀಮಾಂಸೆ, ಧರ್ಮಶಾಸ್ತ್ರದ– ಮತ್ತು ಉಪವೇದ, ಉಪಪುರಾಣಗಳ, ಸಾಂಖ್ಯ, ಯೋಗ, ಪಾಶುಪತ, ವೈಷ್ಣವೆಂಬ ಮತತತ್ವಗಳ ನಿರೂಪಣೆಯು ಶಾಸ್ತ್ರೀಯ ದೃಷ್ಟಿಯಿಂದ ವಿವೇಚಿಸಲ್ಪಟ್ಟಿದೆ. ಮುಖ್ಯವಾಗಿ ವೇದಾಂಗಗಳ ವಿಚಾರವು ಅಭ್ಯಾಸಗಳಿಗೆ ಅತ್ಯಾವಶ್ಯಕವಾಗಿರುವುದು. ಈ ರೀತಿಯಾಗಿ ವೇದವಾಙ್ಮಯದ ಸಕ್ರಮಪರಿಚಯವನ್ನು ಮಾಡಿರುವುದಲ್ಲದೆ, ಪ್ರಮಾಣಗ್ರಂಥಗಳ ವಿಷಯದಲ್ಲಿರುವ ಆಕ್ಷೇಪಗಳಿಗೆ ಶಾಸ್ತ್ರೀಯವಾದ ಸಮಾಧಾನವನ್ನೂ, ಪ್ರಸಂಗಾನುಸಾರವಾಗಿ, ಜಾತಿವಾದದಲ್ಲಿರುವ ಖಂಡನಮಂಡನಗಳನ್ನೂ ವಿವರಿಸಿ, ಆಗಮಪ್ರಮಾಣ್ಯವನ್ನೂ ಅಪ್ರಾಕೃತಮತದ ( ವೀರಶೈವದ ) ದೀಕ್ಷಾತತ್ವವನ್ನೂ ಪ್ರಮಾಣಪೂರ್ವಕವಾಗಿ ವಿವೇಚಿಸಿರುವರು. ಕಡೆಯಲ್ಲಿ ಸದ್ಯದ ಶಿಕ್ಷಣದಲ್ಲಿರುವ ದೋಷವನ್ನೂ ಪೂರ್ವದ ಅಭ್ಯಾಸಕ್ರಮವನ್ನೂ ವಿವರಿಸಿ, ಕ್ರಮವಾಗಿ ವೇದಾಗಮಾದಿ ಶಾಸ್ತ್ರಗಳ ಅಧ್ಯಯನದಿಂದುಂಟಾಗುವ ಮಹತ್ಕಾರ್ಯೋಜನವನ್ನು . ಸೂಚಿಸಿ ಗ್ರಂಥವನ್ನು ಮುಗಿಸಿರುವರು.

ಮೇಲೆ ವಿವರಿಸಿದ ವೇದವಾಙ್ಮಯವೆಲ್ಲ ಧರ್ಮಮೂಲವಾದುದೆಂದು ನಮ್ಮವರ ನಂಬಿಕೆ. ನಮ್ಮ ಹಿರಿಯರು ತಾತ್ವಿಕ, ಸಾಮಾಜಿಕ, ನೈತಿಕ, ರಾಜಕೀಯಾದಿಯಾದ ಸರ್ವವಿಧದ ವಿಚಾರ ವ್ಯವಹಾರಗಳಿಗೆಲ್ಲ ಧರ್ಮಸ್ವರೂಪವನ್ನು ಕೊಟ್ಟು ಅವುಗಳೆಲ್ಲವನ್ನೂ ಧಾರ್ಮಿಕ ದೃಷ್ಟಿಯಿಂದಲೇ ವಿಚಾರಿಸಿರುವರೆಂದು ಕಂಡುಬರುವುದು. ಪ್ರಜಾಧರ್ಮ, ರಾಜಧರ್ಮ, ದೇಶಧರ್ಮ, ವರ್ಣಧರ್ಮ, ಆಶ್ರಮ ಧರ್ಮ, ಮತಧರ್ಮ, ಮೋಕ್ಷಧರ್ಮ ಇತ್ಯಾದಿಯಾಗಿ ಪ್ರತಿಯೊಂದು ವಿಷಯಕ್ಕೂ ಧರ್ಮ ಶಬ್ದದ ಜೋಡಣೆಯೇ ನಮ್ಮಲ್ಲಿ ದೃಗ್ಗೋಚರವಾಗುವುದು. ಇದರಿಂದ 'ಧರ್ಮ'ವೆಂಬ ಶಬ್ದದ ಅರ್ಥವು ಬಹಳ ವ್ಯಾಪಕವಾದುದೆಂದು ತಿಳಿದುಬರುವುದು. ವೇದಪರಿಚಯದಲ್ಲುಕ್ತವಾದ ಧರ್ಮ ಶಬ್ದದ ವಾಖ್ಯೆಯನ್ನು ವಿಚಾರ ಮಾಡಲಾಗಿ ಅದರ ವ್ಯಾಪ್ತಿಯು ಎಷ್ಟಿರುವುದೆಂಬುದು ಕಂಡು

ಬರುವುದಲ್ಲದೆ ಹಿಂದೂ ಧರ್ಮವು ಮಾನವ ಕುಟುಂಬದ ಧರ್ಮವಾಗುವ ಯೋಗ್ಯತೆಯುಳ್ಳದೆಂಬುದು ಸ್ಫುಟವಾಗುವುದು. ಮಾನವನ ಜೀವನವೇ ಧರ್ಮಮಯವಾದುದೆಂದು ನಮ್ಮವರ ಹೇಳಿಕೆ. ಮನುಷ್ಯ ಜನ್ಮವೆಂದುಬಂದಿತೋ ಅಂದೇ ಧರ್ಮವು ಗಂಟುಬಿದ್ದಿರುವುದು. ಆ ಧರ್ಮವು ಪ್ರಾರಂಭದಲ್ಲಿ ಉತ್ತಮವಾದ ಸ್ವತಂತ್ರತೆಗೆ ಮುಖ್ಯ ಸಾಧನವು. ಪ್ರತಿಯೊಂದು ಜೀವಿಯೂ ಸ್ವಾತಂತ್ರ್ಯಕ್ಕಾಗಿ ( ದುಃಖದ ಬಿಡುಗಡೆಗಾಗಿ ) ಹೋರಾಡುವುದು. ಅದೇ ಜೀವಿಗಳ ಧ್ಯೇಯವು. ಈ ಸ್ವಾತಂತ್ರ್ಯ ಸಂಗ್ರಾಮದ ಪರಿಣಾಮವೇ ಜಗತ್ತು. ಈ ಸ್ವತಂತ್ರತೆಯನ್ನೇ ಭೌತಿಕ ಶಾಸ್ತ್ರಜ್ಞರು ಜೀವವಿಕಾಸವೆಂದೂ ಆಧ್ಯಾತ್ಮಿಕ ತತ್ವಜ್ಞರು ಮುಕ್ತಿಯೆಂದೂ ಕರೆವರು. ಜೀವಿಗಳ ನೈಸರ್ಗಿಕವಾದೀ ಸ್ವತಂತ್ರತೆಯನ್ನು ಹೊಂದಲು ಮನುಷ್ಯ ಮಾತ್ರವಲ್ಲ ಪಶುಪಕ್ಷ್ಯಾದಿ ಜೀವಕೋಟಿಯೂ ಹೋರಾಡುವುದು. ಆದರೆ ಮನುಷ್ಯೇತರ ಜೀವಿಗಳ ಹೋರಾಟವು ಪಿಪೀಲಿಕಾಮಾರ್ಗದಿಂದ ಸಾಗಿದೆ. ಅದಕ್ಕೆ ಕಾಲಾವಧಿ ಹೆಚ್ಚು. ಮನುಷ್ಯನಾದರೋ ವಿಹಂಗಮ ಮಾರ್ಗದಿಂದ ಸ್ವತಂತ್ರತೆಗೆ ಹೋರಾಡುವನು. ಈ ಮಾರ್ಗದಿಂದ ಅಲ್ಪಕಾಲದಲ್ಲಿ ಮಾನವನು ದುಃಖಮುಕ್ತನಾಗುವನು. ಇದು ಮಾನವನ ಅಂತಃಪ್ರಜ್ಞೆಯಿಂದ ಲಬ್ಧವಾದ ಮಾರ್ಗ. ಈ ವಿಹಂಗಮ ಮಾರ್ಗದ ಧರ್ಮವೇ ಮನುಷ್ಯ ಧರ್ಮವು. 'ಧರ್ಮೋಹಿತೇಷಾಮಧಿಕೋ ವಿಶೇಷಃ' ಎಂಬ ವಾಕ್ಯವು ಪಶುಪಕ್ಷಿಗಳಿಗಿಂತಲೂ ಮನುಷ್ಯನಿಗೆ ಧರ್ಮವೊಂದು ಹೆಚ್ಚಿಗಿರುವುದೆಂದು ಹೇಳಿರುವುದಾದರೂ ಈ ಮನುಷ್ಯ ಧರ್ಮವನ್ನೇ ಮಾನವ ಜಾತಿಗೆ ಬಾಲ್ಯಾವಸ್ಥೆಯು ಕಳೆದು ಸಂಘಜೀವನವು ಎಂದು ಪ್ರಾರಂಭವಾಯಿತೋ ಅಂದೇ ಈ ಮನುಷ್ಯ ಧರ್ಮದ ಉದಯ. ಇದು ಮನುಷ್ಯನ ಸ್ವಾನುಭವಪೂರ್ವಕವಾದ ವಿಚಾರ ಶಕ್ತಿಯಿಂದ ಕಾಲಕಾಲಕ್ಕೆ ಅಭಿವೃದ್ಧಿಯನ್ನು ಹೊಂದಿ, ಈಗ ನಾವು ಸನಾತನವೆಂದು ಕರೆಯುವ ಧರ್ಮವಾಗಿ ಪ್ರಕಾಶಿಸುತ್ತಿರುವುದು. ಇಂತಹ ಸನಾತನ ಧರ್ಮದ ಸವಿಸ್ತಾರ ಪ್ರತಿಪಾದನವು ಶ್ರೀಗಳಿಂದ ವೇದಪರಿಚಯದಲ್ಲಿ ಮಾಡಲ್ಪಟ್ಟಿದೆ.

ಆದರೆ, ಜೀವಿಯು ನೈಸರ್ಗಿಕವಾದ ಸ್ವತಂತ್ರತೆಗೆ ( ಆತ್ಮವಿಕಾಸಕ್ಕೆ ) ಈ ಸನಾತನ ಧರ್ಮಮಾರ್ಗವು ಹೊಂದಿಕೊಂಡಿರುವವರೆಗೂ ಧರ್ಮಗ್ಲಾನಿಯು ಸಂಭವಿಸುವುದಿಲ್ಲ. ಕಾಲಾನುಗುಣವಾಗಿ ಸ್ವಾರ್ಥಸಾಧಕರು ಧರ್ಮಗ್ರಂಥಗಳಲ್ಲಿ ಮಾಡುವ ಪ್ರಕ್ಷಿಪ್ತಾದಿ ದೋಷದಿಂದ ಈ ಧರ್ಮವು

ದೂಷಿತವಾಗುವುದೇ ಧರ್ಮಗ್ಲಾನಿಗೆ ಕಾರಣ. ಧರ್ಮದ ಮೂಲ ತತ್ವಕ್ಕೆ (ಆತ್ಮವಿಕಾಸ ಮಾರ್ಗಕ್ಕೆ) ಬಾಧೆ ಬರದಂತೆ ಆ ಪ್ರಕ್ಷಿಪ್ತಾದಿ ದೋಷವನ್ನು ತೆಗೆದುಹಾಕುವುದೇ ಧರ್ಮದ ಸುಧಾರಣೆ. ಇಂತಹ ಸುಧಾರಣೆಯನ್ನು ಧರ್ಮಾಧಿಕಾರಿಗಳಾದ **ಶ್ರೀ ಶಂಭುಲಿಂಗಶಿವಾಚಾರ್ಯರು** ಈ ರೀತಿಯಾದ ಗ್ರಂಥಗಳ ರಚನೆ, ಮತ್ತು ಧರ್ಮಪ್ರವಚನದಿಂದ ಇತೋಪ್ಯತಿಶಯವಾಗಿ ಮಾಡಿ ಕನ್ನಡನಾಡಿನ ಸ್ತೋತ್ರಕ್ಕೆ ಪಾತ್ರರಾಗುವರೆಂದು ನನ್ನ ನಂಬಿಕೆ.

ತಾ. ೧೫-೧೧-೩೭
ಬೆಳಗಾವಿ.

ವೈ. ನಾಗೇಶಶಾಸ್ತ್ರಿ,
ಸಂಸ್ಕೃತ ಕನ್ನಡ ಪಂಡಿತ ಲಿಂಗರಾಜ ಕಾಲೇಜು.

# ವೇದಪರಿಚಯ ಗ್ರಂಥದ ವಿಷಯದಲ್ಲಿ

## ರಾ|| ಸಾ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ.

## ಇವರ ಅಭಿಪ್ರಾಯ.

ವಿಜಾಪುರ ಹಿರಿಯಮಠದ ಪಟ್ಟಾಧಿಕಾರಿಗಳಾದ 'ವಿದ್ಯಾವಾಚಸ್ಪತಿ' **ಶ್ರೀಶಂಭುಲಿಂಗ ಶಿವಾಚಾರ್ಯರು** ವೀರಶೈವ ಸಮಾಜದಲ್ಲಿ ತಮ್ಮ ಪ್ರವಚನರೂಪವಾದ ಬೋಧೆಯಿಂದ ಮುಂದುವರಿದಿರುವಂತೆಯೇ ತಾತ್ತ್ವಿಕ ವಿಚಾರ ಪ್ರತಿಪಾದಕಗ್ರಂಥಗಳನ್ನು ಬರೆದು ಪ್ರಕಾಶಪಡಿಸುವ ಮೂಲಕವೂ ಪ್ರಸಿದ್ಧಿಯನ್ನು ಪಡೆದಿರುವರು. ಈ ಮೊದಲೇ ಅವರು 'ಆಗಮಪರಿಜ್ಞಾನ' ಮೊದಲಾದ ಉಪಯುಕ್ತ ನಿಬಂಧಗಳನ್ನು ಹೊರಗೆಡಹಿದ್ದಾರೆ. ಈಗಲಾದರೋ ಅವರು '**ವೇದಪರಿಚಯ**' ವೆಂಬ ಗ್ರಂಥವನ್ನು ಬರೆದು ಅದರ ಪೂರ್ವಭಾಗವನ್ನು ಅಚ್ಚುಮಾಡಿಸಿ ಒಂದು ಪ್ರತಿಯನ್ನು ನಮ್ಮ ಕಡೆಗೆ ಅಭಿಪ್ರಾಯಕ್ಕಾಗಿ ಕಳಿಸಿದ್ದಾರೆ.

ಸಾಮಾನ್ಯಜನತೆಗೆ ವೇದವಾಙ್ಮಯದ ತಿಳಿವಳಿಕೆಯನ್ನುಂಟು ಮಾಡುವುದೇ ಈ ಗ್ರಂಥದ ಮುಖ್ಯೋದ್ದೇಶವಿದ್ದುದಾಗಿ ತೋರುವುದು. ಗಹನವಾದ ವಿಷಯಗಳನ್ನು ಬಚ್ಚಿಡದೆ, ಸರಳವಾದ ಭಾಷೆಯಿಂದ ಬಿಚ್ಚಿಬರೆದು ಕನ್ನಡಿಗರಿಗೆ ವೈದಿಕ ವಾಙ್ಮಯದ ಗುಟ್ಟನ್ನು ನಿರಾಯಾಸವಾಗಿ ತಿಳಿದುಕೊಳ್ಳುವ ಸೌಲಭ್ಯವನ್ನು ಒದಗಿಸಿ ಕೊಟ್ಟ ಗ್ರಂಥಕರ್ತರನ್ನು ನಾನು ಹೃತ್ಪೂರ್ವಕ ಅಭಿನಂದಿಸುವೆನು.

ವೇದವಾಙ್ಮಯವು ಹಿಂದೂ ದೇಶದಲ್ಲಿರುವ ತಾತ್ವಿಕ ವಿಚಾರಪರಗಳಾದ ಸರ್ವಮತಗಳಿಗೆ ತಳಹದಿಯಾಗಿದೆ. ಅದರ ಮೇಲೆಯೇ ಹಿಂದೂ ಮತಾನುಯಾಯಿಗಳೆಲ್ಲ ತಮ್ಮ ತಮ್ಮ ಧರ್ಮಗಳನ್ನೂ ಸಿದ್ಧಾಂತಗಳನ್ನೂ ಧೃಢಪಡಿಸಿಕೊಂಡು ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡಿದ್ದಾರೆ. ವೇದವಾಙ್ಮಯ ಪ್ರಭಾವದಿಂದೇ ಹಿಂದೂ ಧರ್ಮವು ಭೂಮಂಡಲದಲ್ಲಿರುವ ಸರ್ವಧರ್ಮಗಳಲ್ಲಿ ಹೆಚ್ಚಳವನ್ನು ಪಡೆದಿದೆ. ವೇದವಾಙ್ಮಯ ಪ್ರವಾಹವು ಬಹು ಪುರಾತನ ಕಾಲದಿಂದ ಈವರೆಗೆ ಅವಿಚ್ಛಿನ್ನವಾಗಿ ಪ್ರವಹಿಸುತ್ತಲೇ ಬಂದಿರುವುದು. ಆ ಪ್ರವಾಹವನ್ನು ತಡೆಗಟ್ಟಲು ಅನೇಕ ವಿಧರ್ಮೀಯರು ಕಾಲಕಾಲಕ್ಕೆ ಬಲವಾಗಿ ಯತ್ನಿಸಿದುದೂ ಇತಿಹಾಸ

ಪ್ರಸಿದ್ಧವಿದೆ. ಆದರೆ ಆವರ ಪ್ರಯತ್ನಗಳೆಲ್ಲ ನಿಷ್ಫಲವಾದುವು. ಹೀಗೆ ಈ ವಾಙ್ಮಯದಲ್ಲಿ ಒಂದು ಪ್ರಬಲ ಸಾಮರ್ಥ್ಯವು ಉಂಟಾಗಲು ಪರಿಸ್ಥಿತಿಗೆ ಅನುಸರಿಸಿ ಅದರಲ್ಲಿ ತಕ್ಕ ಯೋಜನೆಗಳು ಸಕಾಲದಲ್ಲಿ ಆಗುತ್ತ ಬಂದುದೇ ಮುಖ್ಯ ಹೇತು. ಈ ಯೋಜನಗಳ ಮೂಲಕ ಅನೇಕ ಉದ್ಗ್ರಂಥಗಳು ತಲೆದೋರಿ ಹಿಂದೂ ಜನಾಂಗಕ್ಕೆ ಮಾರ್ಗದರ್ಶಕವಾದುವು. ಅವುಗಳಲ್ಲಿ ವೇದದ ಅಂಗೋಪಾಂಗ ಗ್ರಂಥಗಳೇ ಮುಖ್ಯವಾದುವೆಂದು ಹೇಳಲ್ಪಡುತ್ತವೆ. ಈ ವಿಧವಾದ ವೇದವಾಙ್ಮಯದ ಹಬ್ಬುಗೆಯಿಂದ ವೈದಿಕ ಸಂಸ್ಕೃತಿಯು ಬಲಪಡುತ್ತಲೇ ಬಂದಿತು. ಆದರೆ ವಿಸ್ತೃತವಾದ ಈ ವಾಙ್ಮಯವನ್ನು ಸಾಮಾನ್ಯ ಜನರು ತಿಳಿದುಕೊಳ್ಳಲು ಸಾಧ್ಯವಿಲ್ಲದ್ದರಿಂದೇ ಹಿಂದೂ ಜನರಲ್ಲಿ ಇದರ ಪರಿಚಯವುಳ್ಳವರು ಬಹಳ ಕಡಿಮೆಯಿದ್ದಾರೆಂದು ಹೇಳಬಹುದು. ಪರ್ಯಾಲೋಚಿಸಿದರೆ, ಹೀಗಿರುವುದು ಹಿಂದೂ ಜನತೆಗೆ ಭೂಷಣವೇ ? ಈ ಕೊರತೆಯನ್ನು ದೂರಮಾಡುವ ಉದ್ದೇಶದಿಂದ **ಶ್ರೀ ಶಂಭುಲಿಂಗ ಶಿವಾಚಾರ್ಯರು** ಪ್ರಸ್ತುತ ಗ್ರಂಥವನ್ನು ರಚಿಸಿದ್ದಾರೆ. ಇದುವರೆಗೆ ಈ ಬಗೆಯ ಗ್ರಂಥವು ಕನ್ನಡ ಭಾಷೆಯಲ್ಲಿ ಪ್ರಕಾಶಿಸಲ್ಪಟ್ಟಿಲ್ಲವೆಂದು ಹೇಳಿದರೆ ಸಲ್ಲುವುದು. ಈ ದೃಷ್ಟಿಯಿಂದ ನೋಡಿದರೆ **ವೇದಪರಿಚಯದ** ಗ್ರಂಥಕರ್ತರಿಗೆ ಕನ್ನಡಿಗರೆಲ್ಲರೂ ಋಣಿಯಾಗಿರುವರು.

ಈ ಗ್ರಂಥದಲ್ಲಿ ಮೂರು ಉಲ್ಲಾಸಗಳಿವೆ. ಮೊದಲನೆಯ ಉಲ್ಲಾಸದಲ್ಲಿ ಸನಾತನ ಧರ್ಮದ ಸಾಮಾನ್ಯ ಸ್ವರೂಪವು ವರ್ಣಿಸಲ್ಪಟ್ಟಿದೆ. ಇದರಲ್ಲಿ ದೇವರ ಅಸ್ತಿತ್ವನಿರೂಪಣೆಯೂ ನಾಸ್ತಿಕ ವಾದನಿರಸನವೂ, ಸುಖದುಃಖಗಳ ವಿಚಾರವೂ ಮುಂತಾದ ಅನೇಕ ವಿಷಯಗಳು ಸರಳವಾಗಿ ಬರೆಯಲ್ಪಟ್ಟಿವೆ. ಇವುಗಳ ಮೇಲಿಂದ ಸನಾತನ ಧರ್ಮವು ಕೇವಲ ಮೂಢಶ್ರದ್ಧೆಯನ್ನವಲಂಬಿಸಿರದೆ ಉಚ್ಚ ವಿಚಾರಗಳನ್ನೊಳಗೊಂಡಿರುವದೆಂಬ ಅಭಿಪ್ರಾಯವು ವ್ಯಕ್ತವಾಗುವುದು. ಮುಂದಿನ ಎರಡನೆಯ ಮೂರನೆಯ ಉಲ್ಲಾಸಗಳಲ್ಲಿ ವೇದವಾಙ್ಮಯಕ್ಕೆ ಸಂಬಂಧಿಸಿದ ಅಂಗೋಪಾಂಗ ಗ್ರಂಥಗಳ ನಿರ್ದೇಶವೂ ಅವುಗಳಲ್ಲಿ ಪ್ರತಿಪಾದಿಸಲ್ಪಡುವ ವಿಷಯಗಳೂ ಹೃದಯಂಗಮವಾಗಿ ವಿವೇಚಿಸಲ್ಪಟ್ಟಿವೆ. ತಾತ್ವಿಕ ವಿಚಾರಪರರು ಒಮ್ಮೆಯಾದರೂ ಈ ಗ್ರಂಥವನ್ನು ಆ ಮೂಲಾಗ್ರವಾಗಿ ಓದಿದರೆ ಅವರ ನಿರ್ಮಲ ಬುದ್ಧಿಗೆ ಹಿಂದೂ ಸಂಸ್ಕೃತಿಯ ಹೆಚ್ಚಳದ ಅರಿವು ಚನ್ನಾಗಿ ಆಗುವದೆಂದು ನನ್ನ ಭಾವನೆ.

ಇಂತಹ ವಿಚಾರಪರ ಗ್ರಂಥಗಳನ್ನು ಕೊಂಡು ಓದುವ ಜನರು ನಮ್ಮ ನಾಡಿನಲ್ಲಿ ಬಹಳ ಕಡಿಮೆಯೆಂದು ಹೇಳಬಹುದು. ಆದ್ದರಿಂದ ವಿಶೇಷ ಧನಸಹಾಯವಿಲ್ಲದೇ ಇಂಥ ಮಹತ್ವವುಳ್ಳ ಗ್ರಂಥಗಳು ಬೆಳಕಿಗೆ ಬರಲು ಶಕ್ಯವಿಲ್ಲ. ಈ ಪರಿಸ್ಥಿತಿಯಲ್ಲಿ ಸಮಾಜದಲ್ಲಿರುವ ಉದಾರಿಗಳೂ ಧರ್ಮಾತ್ಮರೂ ಆದ ಶ್ರೀಮಂತರು ಇಂಥ ಉಚಿತ ಪ್ರಯತ್ನಗಳಿಗೆ ಸಹಾಯ ಮಾಡುವುದು ಅತ್ಯಾವಶ್ಯಕವಾದುದು. ಈ ವಿಧವಾದ ಸಹಾಯವು ಈ ಗ್ರಂಥಕರ್ತರಿಗೆ ದೊರೆದಿರುವುದು ಯೋಗ್ಯವಾದುದೇ ಸರಿ. ಈ ಗ್ರಂಥ ಮುದ್ರಣಕ್ಕೆ ಬಳ್ಳಾರಿಯಲ್ಲಿ ಸುಪ್ರಸಿದ್ಧ ವ್ಯಾಪಾರಿಗಳಾದ ಮ. ರಾ॥ ಪವಾಡಸೆಟ್ಟಿ ಮಲ್ಲಿಕಾರ್ಜುನಪ್ಪನವರು, ಮ. ರಾ॥ ಗಾಳಿ ಕರಿಬಸಪ್ಪನವರು, ಮ. ರಾ॥ ಜಾನೇಕುಂಟೆ ವಿರೂಪಾಕ್ಷಪ್ಪನವರು, ಮ. ರಾ॥ ಬಳೆಮರಿಯಣ್ಣನವರು ಸಹಾಯ ಮಾಡಿದ್ದಾರೆ. ಹೀಗೆ ಔದಾರ್ಯವನ್ನು ವ್ಯಕ್ತಪಡಿಸಿದ ಆ ಧರ್ಮಾತ್ಮರು ಎಲ್ಲರ ಅಭಿನಂದನಕ್ಕೆ ಪಾತ್ರರಾಗಿರುವರು. ಅವರ ಅನುಕರಣವನ್ನು ಇತರ ಧರ್ಮಾಭಿಮಾನಿಗಳೂ ಮಾಡಲೆಳಿಸುವುದು ವಿಹಿತವಲ್ಲವೇ ?

'ವಿದ್ಯಾವಾಚಸ್ಪತಿ' **ಶ್ರೀ ಶಂಭುಲಿಂಗಶಿವಾಚಾರ್ಯ**ರು ವೇದಪರಿಚಯವೆಂಬ ಈ ಗ್ರಂಥದ ಉತ್ತರ ಭಾಗವನ್ನೂ ತೀವ್ರವಾಗಿ ಬರೆದು ಪ್ರಕಾಶಪಡಿಸಲೆಂದೂ, ಇದೇ ಮೇರೆಗೆ ಗ್ರಂಥಪ್ರವಚನ ಲೇಖನಗಳಲ್ಲಿ ತೊಡಗಿ ತಮ್ಮ ಕರ್ತವ್ಯವನ್ನು ಅವಿಚ್ಛಿನ್ನವಾಗಿ ಮುಂದುವರಿಸಲೆಂದೂ ಅವರ ಸನ್ನಿಧಿಯಲ್ಲಿ ನನ್ನ ಸವಿನಯ ಪ್ರಾರ್ಥನೆ.

**ಫ. ಗು. ಹಳಕಟ್ಟಿ**

# ವಿನಯೋಕ್ತಿ



'ವಿದ್ಯಾವಾಚಸ್ಪತಿ' ಶ್ರೀ ಶ್ರೀಗುರು ಶಂಭುಲಿಂಗ ಶಿವಾಚಾರ್ಯರು ಹಿರಿಯಮಠ ಯೋಗಾಶ್ರಮ ಹುಲ್ಯಾಳ. ತಾ. ಜಮಖಂಡಿ ಇವರು ಬರೆದಿರುವ 'ವೇದಪರಿಚಯ' ಎಂಬ ಗ್ರಂಥವನ್ನು ಅವಲೋಕಿಸುವ ಸದವಕಾಶವು ನನಗೆ ದೊರೆಯಿತು. ವೇದವೇದಾಂಗ ವೇದಾಂತಗಳ ಬಗೆಗೆ ಇಂದು ಅಲ್ಲಲ್ಲಿ ಹೊರಹೊಮ್ಮುತ್ತಿರುವ ಕೆಲ ವಿಕೃತ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಶ್ರೀಗುರು ಶಂಭುಲಿಂಗ ಶಿವಾಚಾರ್ಯರು ಬರೆದು ಪ್ರಕಟಿಸುತ್ತಿರುವ ಗ್ರಂಥವು ನಿಜವಾಗಿಯೂ ಪ್ರಾಣವಾಯುವಿನಂತೆ. ಧರ್ಮನಿಷ್ಠರಿಗೂ, ಧರ್ಮಾಭಿಮಾನಿಗಳಿಗೂ ಚೈತನ್ಯದಾಯಕವೆಂದು ಹೇಳಬಹುದು. ಮನೆಯ ಕಿಟಕಿ ಬಾಗಿಲುಗಳನ್ನೇ ಭದ್ರವಾಗಿ ಮುಚ್ಚಿ ಹೊಗೆಯನ್ನು ಹಾಕಿದಾಗ ಒಳಗಿದ್ದ ಮನುಷ್ಯನು ಉಸಿರುಗಟ್ಟಿ ಸಾಯುವಂತೆ ವೇದಸಂಶೋಧನೆಯ ಹೆಸರಿನಲ್ಲಿ ಕೆಂಧೂಳೆಬ್ಬಿಸಿ ಹೊಸ ಪೀಳಿಗೆಯನ್ನು ತಲ್ಲಣಿಸುವಂತಿರುವ ಇಂದಿನ ಸನ್ನಿವೇಶದಲ್ಲಿ ಗ್ರಂಥಕರ್ತರು ಕೈಕೊಂಡಿರುವ 'ವೇದಪರಿಚಯ'ದ ಕಾರ್ಯವನ್ನು ವಿವೇಕಿಗಳಾದವರು ಸ್ವಾಗತಿಸಲೇಬೇಕು. ಶ್ರೀಗುರು ಶಂಭುಲಿಂಗ ಶಿವಾಚಾರ್ಯರು ಸ್ವತಃ ಸಂಸ್ಕೃತ ಪಂಡಿತರೂ, ಶ್ರೇಷ್ಠ ಯೋಗಸಾಧಕರೂ ಆಗಿರುವದರಿಂದ ಅವರ ಮಾತುಗಳಲ್ಲಿ ಒಂದು ಬಗೆಯ ಮಂತ್ರ ಶಕ್ತಿಯಿದೆ.

ಸನಾತನವಾದ ವೈದಿಕ ಧರ್ಮದಲ್ಲಿ ಇತರ ಧರ್ಮಗಳಿಗಿಂತ ಅದಾವ ವಿಶೇಷವೇನಿದೆ? ಎಂದರೆ ನಮಗೆ ಮುಖ್ಯ ಪ್ರಮಾಣಭೂತವಾದ ವೇದವು ಒಬ್ಬನಿಂದ ಇಲ್ಲವೇ ಅನೇಕರಿಂದ ಒಂದು ವಿಶಿಷ್ಟ ಕಾಲದಲ್ಲಿ ರಚಿಸಲ್ಪಟ್ಟುದೆಂದು ನಾವು ಸಮ್ಮತಿಸುವುದಿಲ್ಲ. ಅದು ಅಪೌರುಷೇಯವೂ ಅನಾದಿಯೂ ಆದುದೆಂದೇ ನಮ್ಮ ಬಲವಾದ ನಂಬಿಕೆ" ಎಂದು ಸ್ಪಷ್ಟವಾಗಿ ಅವರು ಹೇಳಿರುವರು. ಹಾಗೆಯೇ ಅವರು ವೇದಪಠನ, ವೇದಮಂತ್ರಾರ್ಥಗಳ ವಿಷಯವನ್ನು ಕುರಿತು ಸನಾತನ ಧರ್ಮಾನುಯಾಯಿಗಳು ಅನುಸರಿಸುತ್ತಿರುವ ಸಂಪ್ರದಾಯಗಳ ಮರ್ಮವೇನೆಂಬುದನ್ನು ತಿಳಿಯಾಗಿ ಓದುಗರಿಗೆ

ತಿಳಿಸಿದ್ದಾರೆ. ಅವರ ಪಾಂಡಿತ್ಯ ಪ್ರತಿಭೆಗಳ ದರ್ಶನವು ಈ ಗ್ರಂಥದಲ್ಲಿ ವಿವೇಚಕರಾದ ವಾಚಕರಿಗೆ ಚೆನ್ನಾಗಿ ಆಗುತ್ತದೆಂದು ಹೇಳಿದರೆ ಅತಿಶಯೋಕ್ತಿಯಾಗದು. ಮಾನವ ಜನ್ಮದ ಸಾರ್ಥಕತೆಯನ್ನು ಕಂಡುಕೊಳ್ಳಲು ನಮ್ಮ ಋಷಿಮುನಿಗಳು ವೇದವೇದಾಂತಗಳಲ್ಲಿ ಸಾಕಷ್ಟು ಉದಾತ್ತ ಉದ್ದೇಶ ಉದಾಹರಣೆಗಳನ್ನು ಬಿಟ್ಟು ಹೋಗಿರುವರು. ಅವುಗಳೇ ನಿರಂತರವಾದ ಶಾಶ್ವತವಾದ ಸುಖವನ್ನು ಪ್ರಪಂಚಕ್ಕೆ ನೀಡಬಲ್ಲವು. ಆದುದರಿಂದ ಶ್ರೀಗುರು ಶಂಭುಲಿಂಗಶಿವಾಚಾರ್ಯರು ಅರ್ಥಪೂರ್ಣವಾಗಿ "ಈಶ್ವರನ ಅಸ್ತಿತ್ವವನ್ನು ಅಂಗೀಕರಿಸಿ ಅವನ ಆಜ್ಞಾರೂಪಗಳಾದ ವೇದಾಗಮಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ಮೇರೆಗೆ ಆಚರಿಸುವುದರಿಂದ ಆ ಈಶ್ವರನ ಅನುಗ್ರಹವುಂಟಾಗುವುದು" ಎಂದು ನಿಚ್ಚಳವಾಗಿ ನುಡಿದಿರುವುದನ್ನು ಪ್ರಾಮಾಣಿಕವಾಗಿ ನಂಬಿ ನಡೆದರೆ ಅನಿಷ್ಟನಿವೃತ್ತಿಯಾಗಿ ಇಷ್ಟಪ್ರಾಪ್ತಿಯಾಗುವಲ್ಲಿ ಸಂದೇಹವಿಲ್ಲ. ಪ್ರಯುಕ್ತ ಶ್ರೀಗುರು ಶಂಭುಲಿಂಗಶಿವಾಚಾರ್ಯರು ನಮ್ಮ ಜನತೆಗೆ ಅವರ ಆತ್ಯಂತಿಕ ಕಲ್ಯಾಣದ ಮಾರ್ಗವನ್ನು ತೋರಿಸುವಲ್ಲಿ ಮಾಡಿದ ಈ ನಿಃಸ್ಪೃಹ ಹಾಗೂ ನಿಃಸ್ವಾರ್ಥ ಪ್ರಯತ್ನವು ಸ್ತುತ್ಯವಾಗಿದೆ. ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ದುಃಖಮಾಪ್ನುಯಾತ್.

ಓಂ ಶಾಂತಿಃ ಶಾಂತಿಃ ಶಾಂತಿಃ

ವಿಜಾಪುರ.
೨೨–೫–೧೯೭೯

ನಾಯಕ ವೆಂಕಟರಾಯ M A.
ಸಂಪಾದಕ
ಸಂದರ್ಶನ

# ಅನುಕ್ರಮಣಿಕೆ.



## ಮೊದಲನೆಯ ಉಲ್ಲಾಸದ ಮುಖ್ಯ ವಿಷಯಗಳು.


| | ಪುಟ. |
|---|---|
| ವಿಷಯಪ್ರವೇಶವು. | ೧ |
| ಭಾರತೀಯರಿಗೆ ವೇದವು ಪ್ರಮಾಣಗ್ರಂಥವು. | ೩ |
| ಈಶ್ವರಾಸ್ತಿತ್ವೋಪಪಾದನಾರಂಭವು. | ೫ |
| ಪ್ರತ್ಯಕ್ಷಾದಿಪ್ರಮಾಣಸ್ಫುಟೀಕರಣವು. | ೭ |
| ಧರ್ಮಾನುಸರಣದ ಆವಶ್ಯಕತೆಯು. | ೧೧ |
| ಸ್ವಭಾವವಾದದ ನಿರಸನವು | ೧೭ |
| ಈಶ್ವರನೇ ಜಗಜ್ಜನ್ಮಾದಿಕಾರಣನು. | ೧೮ |
| ಈಶ್ವರ ಸ್ವರೂಪ ವಿಷಯದಲ್ಲಿ ಬೇರೆ ಬೇರೆ ಮತದವರ ಅಭಿಪ್ರಾಯಗಳು. | ೨೧ |
| ಶಿವಾದ್ವೈತಮತದಲ್ಲಿ ನಿರೂಪಿಸಲ್ಪಡುವ ದೇವರ ಸ್ವರೂಪೋಪನ್ಯಾಸವು. | ೨೩ |
| ಶಿವಾದ್ವೈತಮತದಪ್ರವರ್ತಕರಾದ ಪುರಾತನರಲ್ಲಿ ಶ್ರೀ ರೇಣುಕನೂ ಒಬ್ಬನು. | ೨೬ |
| ಅಮಾನುಷರೂಪಾಂತರಗಳ ಶಕ್ತಿಯು. | ೨೭ |
| ಶಕ್ತಿದ್ರವ್ಯಗಳ ಸಮಷ್ಟಿಯೇ ಈಶ್ವರಸತ್ತೆ. | ೩೨ |
| ಈಶ್ವರಾಸ್ತಿತ್ವನಿರೂಪಣೋಪಸಂಹಾರವು. | ೩೩ |
| ವೇದಶಾಸ್ತ್ರಾಂಗೀಕಾರದ ಆವಶ್ಯಕತೆ. | ೪೦ |
| ಧರ್ಮಾವಿರುದ್ಧವಾದ ಲೌಕಿಕೋತ್ಕರ್ಷತೆಯ ಒಪ್ಪಿಗೆ. | ೬೨ |
| ಶ್ರುತ್ಯವಿರೋಧತರ್ಕದ ಅಂಗೀಕಾರವು. | ೬೩ |
| ಧರ್ಮಾಧರ್ಮಾಚರಣೆಗಳ ಪರಿಣಾಮವು. | ೬೫ |
| ವೇದಶಬ್ದದ ನಿರ್ವಚನವು. | ೭೦ |
| ವೇದಪ್ರವರ್ತಕರ ಸಂಪ್ರದಾಯಕಥನವು. | ೭೨ |
| ವೇದಾವಿರ್ಭಾವದ ಪೌರುಷಾಪೌರುಷೇಯ ವಿಚಾರವು. | ೭೫ |
| ವೇದನಿತ್ಯತ್ವನಿರೂಪಣಪೂರ್ವಕ ಸ್ವತಃ ಪ್ರಮಾಣಸಿದ್ಧಿಯು. | ೮೭ |

ವೇದವಾಙ್ಮಯ ಅಂತರಂಗಿಕಸ್ವರೂಪೋಪಪಾದನಾರಂಭವು. ೧೦೮
ಋಗ್ವೇದವು. ೧೧೨
ಯಜುರ್ವೇದವು. ೧೨೭
ಸಾಮಾಥರ್ವಣವೇದಗಳು ೧೩೧


## ಎರಡನೆಯ ಉಲ್ಲಾಸದ ಮುಖ್ಯ ವಿಷಯಗಳು.


ಬ್ರಾಹ್ಮಣವಾಙ್ಮಯವು. ೧೩೩
ಆರಣ್ಯಕೋಪನಿಷದ್ವಾಙ್ಮಯವು. ೧೫೦


## ಮೂರನೆಯ ಉಲ್ಲಾಸದ ಮುಖ್ಯ ವಿಷಯಗಳು.


ಶೈವಾಗಮವಾಙ್ಮಯವು ಸರ್ವಧರ್ಮಶಾಸ್ತ್ರಮೂಲಭೂತವು. ೧೬೧
ಆಯುರ್ವೇದಾದ್ಯುಪವೇದಸ್ವರೂಪನಿರ್ದೇಶವು. ೧೬೩
ವೇದಗಳ ಅಂಗೋಪಾಂಗನಿರೂಪಣೆ. ೧೬೬
ಶಿಷ್ಟಲಕ್ಷಣೋಪಪಾದನಪೂರ್ವಕವಾಗಿ ಆ ಶಿಷ್ಟರ ಆಚಾರ ವಿಚಾರಗಳ ನಿರ್ದೇಶವು. ೨೩೬
ಸ್ಮೃತಿಕಾರರ ಅಭಿಪ್ರಾಯಾನುಸಾರವಾದ ಜಾತಿಯ ಜನ್ಮಸಿದ್ಧತ್ವನಿರೂಪಣೆ. ೨೪೪
ಸಾಂಘಿಕಶಕ್ತಿಪ್ರಭಾವಕಥನವು. ೨೫೩
ನವಮತವಾದದ ನಿರಸನವು. ೨೫೭
ಅಪ್ರಾಕೃತಧರ್ಮಾಚರಣೆಗಳ ಪ್ರಾಶಸ್ತ್ಯಕಥನವು. ೨೭೦
ವಿದ್ಯಾಧಿಕಾರೋಪಪಾದನಪೂರ್ವಕ ವಿದ್ಯಾಸಂಪ್ರದಾಯ ವರ್ಣನೆ. ೨೭೮
ಅನುಬಂಧಚತುಷ್ಟಯ ನಿರೂಪಣದೊಡನೆ ಬ್ರಹ್ಮಚರ್ಯ ಪ್ರಭಾವಪ್ರದರ್ಶನವು. ೨೮೨
ವೈದಿಕವಾಙ್ಮಯವು ಪುರುಷಾರ್ಥಸಾಧನಭೂತವಾದುದೆಂಬ ಸೂಚನೆ. ೨೯೬




ಶ್ರೀಶಿವಃಶರಣಮ್.

# ವೇದಪರಿಚಯ.



## ವಿಷಯ ಪ್ರವೇಶವು.

ಶ್ರೀ ಮದ್ಭಾರತಖಂಡದಲ್ಲಿ ಯಾವ ವಿಧವಾದ ಚಳವಳಿಯಾದರೂ ಯಶಸ್ವಿಯಾಗಬೇಕಾದರೆ ಅದರ ಕಟ್ಟಡವು ಧರ್ಮದ ತಳಹದಿಯ ಮೇಲೆ ಪ್ರಾರಂಭಿಸಲ್ಪಡಬೇಕು. ಏಕೆಂದರೆ. ಭಾರತೀಯ ಆರ್ಯಜನರ ಧರ್ಮವು ಅಭ್ಯುದಯಕ್ಕೂ ( ರಾಷ್ಟ್ರೋನ್ನತಿಗೂ ) ನಿಃಶ್ರೇಯಸ್ಸಿಗೂ ( ಮೋಕ್ಷಕ್ಕೂ ) ಸಾಧನವಾಗಿರುವುದಷ್ಟೇ ! ಅದು ಕಾರಣವೇ ಭಾರತೀಯರ ಅಂತಃಕರಣವೃತ್ತಿಗಳು ತಮ್ಮ ಸನಾತನ ಧರ್ಮದೊಡನೆ ಬೆರೆದು ಹೋಗಿರುವುವೆಂಬ ವಿಷಯದಲ್ಲಿ ಅನುಭವಸಿದ್ಧವಾದ ಉದಾಹರಣೆಗಳು ಈಗಿನ ಪರಿಸ್ಥಿತಿಯಲ್ಲಿಯೂ ಬೇಕಾದಷ್ಟು ಸಿಕ್ಕುತ್ತವೆ. ಅತಿ ಪ್ರಾಚೀನ ಕಾಲದಿಂದ ಇಂದಿನ ವರೆಗೂ ಭಾರತೀಯ ಆರ್ಯರ ಧರ್ಮವು ಬಹುಮಟ್ಟಿಗೆ ಇದ್ದಕ್ಕಿದ್ದಂತೆ ನಡೆದು ಬಂದುದರಿಂದಲೇ ಅದು ಸನಾತನವಾದುದೆಂದು ಹೇಳಲ್ಪಡುತ್ತದೆ. ಹೀಗೆ ಅದು ಬುನಾದಿಯಿಂದ ಅಚ್ಚಳಿಯದೆ ಬಳಿಕೆಯಲ್ಲಿರಲು ಅದರ ಅಬಾಧಿತಗಳಾದ ತತ್ವಗಳೇ ಹೇತುವಾಗಿವೆ. ಯಾವನು ಅದುವೇ ತನಗೇ ಸನ್ಮಾರ್ಗವನ್ನು ತೋರಿಸುವಲ್ಲಿ ಪರಮಹಿತೈಷಿಯಾದ ಮಿತ್ರನೆಂದು ಭಾವಿಸುವನೋ; ಅವನಿಗೆ ಅದರಿಂದ ಶಾಶ್ವತ ಸುಖವೇ ಲಭಿಸುವುದು. ಹೇಗೆಂದರೆ ಅದರ ನೆರವನ್ನು ಮನಮುಟ್ಟಿ ಬಯಸುವಾತನ ಅಂತಃಕರಣದಲ್ಲಿ ಸಂಸ್ಕಾರ ರೂಪದಿಂದಿರುವ ಶ್ರದ್ಧೆಯನ್ನು ಅದು ಉದ್ಬುದ್ಧ (ಅಭಿವ್ಯಕ್ತ) ಗೊಳಿಸುವ ಮೂಲಕ ಉತ್ತಮ ಧ್ಯೇಯದ ದಾರಿಯನ್ನು ಹಿಡಿಸಿ ತನ್ನ ಕಾರ್ಯವನ್ನು ಸರಿಯಾಗಿ ಸಾಧಿಸಬಲ್ಲದು.

ಶ್ರದ್ಧೆಯೆಂಬ ತತ್ತ್ವಕ್ಷೇತ್ರದಲ್ಲಿ ಇಂದ್ರಿಯಗಳಿಗೆ ಅಗೋಚರವೂ ಅತರ್ಕ್ಯವೂ (ಬುದ್ಧಿಗ್ರಾಹ್ಯವಲ್ಲದುದೂ) ಆದ ಅಲೌಕಿಕ ವಿಷಯವ್ರಾತವೇ ಅಧಿಕವಾಗಿ ಸಂಭವಿಸುವ ಮೂಲಕ ಪ್ರತ್ಯಕ್ಷಾನುಮಾನಾದಿಪ್ರಮಾಣಗಳಿಗಿಂ

ತಲೂ ಭಿನ್ನವಾದ ಬೋಧಕ ಪ್ರಮಾಣವೊಂದನ್ನು ಶ್ರದ್ಧೆಯನ್ನು ವಿಕಾಸಕ್ಕೋಸ್ಕರ ಅವಲಂಬಿಸಬೇಕಾಗುವುದು. ಹೇಗೆ ಸಾಮಾನ್ಯವಾಗಿ ವ್ಯವಹಾರದಲ್ಲಿ ಇದು ನಿಜವೋ, ಅದು ದಿಟವೋ ಇದನ್ನು ಮಾಡಬೇಕೋ, ಅದನ್ನು ಮಾಡಬೇಕೋ, ಎಂಬೀ ವಿಧವಾದ ಸಂಶಯಗಳು ಮನಸ್ಸಿನಲ್ಲಿ ಹುಟ್ಟಲು, ಆಗ ಗುರು, ತಾಯಿ ತಂದೆ, ಅಣ್ಣಗೆಳೆಯ ಮೊದಲಾದವರ ನುಡಿಗಳನ್ನು 'ಆಪ್ತವಾಕ್ಯವು ಪ್ರಮಾಣವು' ಎಂಬ ನ್ಯಾಯಾನುಸಾರವಾಗಿ ನಂಬಿ ಕಾರ್ಯಗಳನ್ನು ಮಾಡಲು ತೊಡಗುವೆವೋ, ಹಾಗೆ ಅಲೌಕಿಕ ವಿಷಯಗಳಲ್ಲಿಯೂ ಶಬ್ದ ಪ್ರಮಾಣ (ಶಾಸ್ತ್ರ) ವನ್ನು ಒಪ್ಪದೆ ನಿರ್ವಾಹವಿಲ್ಲ.

ಈ ಜಗತ್ತಿನಲ್ಲಿ ಬೇರೆ ಯಾವ ಧರ್ಮದವರಾದರೂ ಅಲೌಕಿಕಾರ್ಥಪ್ರಾಪ್ತಿಗಾಗಿ ಶಬ್ದ ಪ್ರಮಾಣವನ್ನೇ ಅವಲಂಬಿಸಿದ್ದಾರೆ. ಕ್ರೈಸ್ತಧರ್ಮಾನುಯಾಯಿಗಳು 'ಬಾಯಬಲ್' ವೆಂಬುದು ಈಶ್ವರೀವಾಕ್ಯ ಎಂದು ಹೇಳುತ್ತಾರೆ. ಇಸ್ಲಾಮೀ ಧರ್ಮದಲ್ಲಿ 'ಕುರಾಣ' ವೆಂಬುದನ್ನು ಈಶ್ವರನ ಸಂದೇಶವೆಂದು ಹೇಳುವ ವಾಡಿಕೆಯಿದೆ. ನಮ್ಮ ಸನಾತನ ಧರ್ಮದಲ್ಲಿಯಾದರೋ ಅಲೌಕಿಕಾರ್ಥಗಳನ್ನೇ ಅಧಿಕವಾಗಿ ಪ್ರತಿಪಾದಿಸುವುದೂ, ಶ್ರದ್ಧೆಯನ್ನು ನಿಯತಿಪೂರ್ವಕವಾಗಿ ವಿಕಾಸಗೊಳಿಸುವುದೂ, ಪರಮೋನ್ನತಿಯ ಲಾಭವನ್ನುಂಟುಮಾಡಿಕೊಡುವುದೂ ಆದ ಶಬ್ದ ಪ್ರಮಾಣವು 'ವೇದವು' ಎಂಬದಾಗಿ ಪ್ರಸಿದ್ಧವಾಗಿರುವುದು. ಇದುವೇ ಶ್ರುತಿ, ಆಗಮ, ಸಮಾಮ್ನಾಯ, ಶಾಸ್ತ್ರವೆಂಬ ಅಪರಪರ್ಯಾಯನಾಮಗಳಿಂದ ಹೇಳಲ್ಪಡುವುದು.

ವೇದ ಪ್ರತಿಪಾದ್ಯವು ವೈದಿಕವು; ಅದುವೇ ಶ್ರೌತವು. ಸನಾತನವಾದ ವೈದಿಕ ಧರ್ಮದಲ್ಲಿ ಇತರ ಧರ್ಮಗಳಿಗಿಂತ ಅದಾವ ವಿಶೇಷವಿದೆ? ಎಂದರೆ ನಮಗೆ ಮುಖ್ಯ ಪ್ರಮಾಣಭೂತವಾದ ವೇದವು (ಶೃತಿಯು) ಒಬ್ಬನಿಂದ ಇಲ್ಲವೇ ಅನೇಕರಿಂದ ಒಂದು ವಿಶಿಷ್ಟ ಕಾಲದಲ್ಲಿ ರಚಿಸಲ್ಪಟ್ಟುದೆಂದು ನಾವು ಸಮ್ಮತಿಸುವುದಿಲ್ಲ. ಅದು ಅಪೌರುಷೇಯವೂ ಅನಾದಿಯೂ ಆದುದೆಂದೇ ನಮ್ಮ ಬಲವಾದ ನಂಬಿಕೆ, ಮತ್ತು ಅದರೊಳಗಿನ ವಾಕ್ಯಗಳಿಂದೇ ವಿಧಿನಿಷೇಧಾಚರಣೆಗಳನ್ನು (ಯಾವುದನ್ನು ಮಾಡಬೇಕು, ಯಾವುದನ್ನು ಮಾಡಕೂಡದು ಎಂಬೀತೆರದ ನಡವಳಿಕೆಗಳನ್ನು) ಅರಿತುಕೊಳ್ಳುತ್ತೇವೆ, ಕ್ರಿಸ್ತನು, ಮುಹಮ್ಮದನು, ಬುದ್ಧನು, ಮತ್ತು ಬೇರೊಬ್ಬನು ಎಂಬೀ ವಿಧವಾಗಿರತಕ್ಕವರಲ್ಲಿ ಯಾವುದಾದ

ರೊಂದು ವ್ಯಕ್ತಿಯ ಉತ್ಪಾದಕತ್ವಮೂಲಕ ಆ ಧರ್ಮಕ್ಕೆ ಯಾವ ಒಂದು ಬಗೆಯ ಪೌರುಷಾಭಿಮಾನದ ಏಕಾಂಗೀಸ್ವರೂಪವುಂಟಾಗಿರುವದೋ ಅದು ಮಾತ್ರ ನಮ್ಮ ಧರ್ಮದಲ್ಲಿ ಸಂಭವಿಸಿರುವುದಿಲ್ಲ.

ಈ ಮೇರೆಗೆ, ವೇದವನ್ನು ಪರಮಪ್ರಮಾಣವೆಂದೊಪ್ಪಿದ ಮೇಲೆ ಅದರೊಳಗಿನ ವಾಕ್ಯಗಳಿಂದ ಆಚಾರ ವಿಚಾರಗಳನ್ನು ತಿಳಿದುಕೊಳ್ಳುವುದಕ್ಕೋಸ್ಕರ ತದನುಕೂಲಗಳಾದ ಅನುಮಾನಾದಿ ಪ್ರಮಾಣಗಳನ್ನು ಪರಿಗ್ರಹಿಸುವಲ್ಲಿ ನಮ್ಮ ಧರ್ಮದೊಳಾವ ಪ್ರತಿಬಂಧಕವೂ ಇರುವದಿಲ್ಲ. ಸಾರಾಂಶ— ಚಿತ್ತವು ಸಮಾಧಾನವಾಗಿ, ಜೀವಿತಸಾಫಲ್ಯದ ಸದಿಚ್ಛೆಯು ತಲೆದೋರಿ, ಪರಮೇಶ್ವರನ ಅಸ್ತಿತ್ವವನ್ನೊಡಂಬಡುವ ಶ್ರದ್ಧೆಗೆ ಉತ್ತಮ ಫಲಪ್ರದಗಳಾದ ಕರ್ಮ, ಉಪವಾಸನೆ, ಜ್ಞಾನಗಳ ಮಾರ್ಗವನ್ನು ತೋರಿಸುವುದಕ್ಕಾಗಿಯೇ ಶಾಸ್ತ್ರರೂಪವಾದ ಶಬ್ದಪ್ರಮಾಣದ ಆವಶ್ಯಕತೆಯುಂಟೆಂಬುದು ಸ್ಪಷ್ಟವು.

ಯಾವನು ತನ್ನನ್ನು ವೈದಿಕಧರ್ಮಾನುಯಾಯಿಯೆಂದು ಹೇಳುವನೋ ಅವನು ವೇದಪ್ರಾಮಾಣ್ಯವನ್ನಂಗೀಕರಿಸದೆ ಗತ್ಯಂತರವೇ ಇಲ್ಲ. ಏಕಂದರೆ— ವೇದಮೂಲಕವಾಗಿಯೇ ಭಾರತೀಯರ ಜ್ಞಾನ, ವಿಚಾರ, ಸದ್ಭಾವನೆಗಳಿಗೆ ನಿಶ್ಚಿತ ಸ್ವರೂಪವು ಪ್ರಾಪ್ತವಾಗಿರುವುದು, ವೈದಿಕವಾಙ್ಮಯವು ಪ್ರಾಚೀನತಮಸ್ಥಿತಿಬೋಧಕವಾಗಿದೆ. ವಾಙ್ಮಯೇತಿಹಾಸದಲ್ಲಿ ವೇದಕ್ಕೆ ಅಗ್ರಸ್ಥಾನವು ಸಲ್ಲುವುದು. ಎಷ್ಟೋ ಸಾವಿರ ವರ್ಷಗಳಿಂದಲೂ ಕೋಟ್ಯವಧಿ ಭಾರತೀಯರು ವೇದಾಕ್ಷರವನ್ನು ಈಶ್ವರವಾಕ್ಯೆಂದು ಮನ್ನಿಸುತ್ತ ಬಂದಿರುವರಲ್ಲವೇ ! ಪ್ರಕೃತದಲ್ಲಿ ಉಪಲಬ್ಧರೂಪವಾದ ಭಾರತೀಯ ವಾಙ್ಮಯ ಪ್ರಪಂಚಕ್ಕೆ ಮೂಲಾಧಾರಭೂತವಾದ ವೈದಿಕ ವಾಙ್ಮಯದಲ್ಲಿ ಗತಿಯನ್ನು ಸಂಪಾದಿಸದೆ ಭಾರತೀಯರ ಆಧ್ಯಾತ್ಮಿಕ ಜೀವನ ಕ್ರಮವೂ ಸಂಸ್ಕೃತಿಯೂ ಎಂಬಿವುಗಳ ಸಂಬಂಧವಾದ ಜ್ಞಾನವನ್ನು ಪಡೆಯಲು ಅನ್ಯೋಪಾಯಗಳಿರುವುದಿಲ್ಲ. ಆದ್ದರಿಂದ ನಾವು ವೇದವಿಷಯಕವಾದ ಪೂಜ್ಯ ಬುದ್ಧಿಯನ್ನು ಅಬಾಧಿತವಾಗಿಟ್ಟುಕೊಳ್ಳುವುದು ವಿಹಿತವಾದುದೆಂದು ಖಂಡಿತವಾಗಿ ಹೇಳುತ್ತೇವೆ.

ಇನ್ನು, ಹಗಲಿರುಳು ಬಿಡುವಿಲ್ಲದೆ ಲೌಕಿಕ ವಿಷಯಗಳಲ್ಲಿಯೇ ತೊಡಗಿರುವವರೂ ಕ್ಷಣಭಂಗುರವಾದ ಮಾನುಷೀ ಬುದ್ಧಿಯ ಕರ್ತೃತ್ವ ವಿಷಯದಲ್ಲಿ ಹುಟ್ಟಿದ ವೃಥಾಭಿಮಾನ ಮೂಲಕವಾಗಿ ಅಂತಃಕರಣದಲ್ಲಿ

ಹುದುಗಿದ ಶ್ರದ್ಧಾಂಕುರವುಳ್ಳವರೂ ಆದ ಕೆಲಂಬರ ದೃಷ್ಟಿಗೆ ಧರ್ಮ ವೆಂಬುದೇ ಸರಿಯಾಗಿ ಗೋಚರಿಸದಿರುವುದರಿಂದ, ಅವರು ಧರ್ಮ ವನ್ನು ಶಾಸನಗೊಳಿಸುವ ವೇದವನ್ನು ಪ್ರಮಾಣಭೂತವಾದುದೆಂದು ಭಾವಿಸಿ ಅದು ವಿಧಿಸಿದಂತೇ ನಡೆಯಬೇಕೆಂಬುದು ಒಂದು ವಿಧವಾದ ದಾಸ್ಯವೆಂದೇ ಬಗೆವರು. ಆದರೆ ಬುದ್ಧಿಗೆ ಅಗಮ್ಯವಾದ ವಿಷಯಗಳು ಅನೇಕವಾಗಿರುವುವೆಂಬುದು ಅಡಿಗಡಿಗೆ ತಿಳಿದು ಬರುತ್ತಿದ್ದರೂ, ಮನು ಷ್ಯನ ಕರ್ತೃತ್ವವನ್ನು ಕ್ಷಣಮಾತ್ರದಲ್ಲಿ ನಾಶಗೊಳಿಸತಕ್ಕ ಅದೃಷ್ಟಶಕ್ತಿಯ ಅನುಭವವಾಗುತ್ತಿದ್ದರೂ, ಕಾರ್ಯಾಕಾರ್ಯ ವಿಷಯಗಳಲ್ಲಿ ನಿಶ್ಚಿತವಾ ದುದನ್ನು ನಿರ್ಣಯಿಸುವ ಬಗ್ಗೆ ಮಾನವೀ ಬುದ್ಧಿಯ ಅಪಾತ್ರತೆಯ ಗಳಿಗೆಗೊಮ್ಮೆ ಚಿತ್ತವನ್ನು ವಿಕ್ಷೇಪಗೊಳಿಸುತ್ತಿದ್ದರೂ, ಮತ್ತೆ ಮತ್ತೆ ತಮ್ಮ ಮಿದುಳಿನ ಹೊಳಪೇ ಎಲ್ಲಕ್ಕೂ ಆಸರವೆಂದೂ ಅದುವೇ ತಮಗೆ ಮಿಗಿ ಲಾದ ಪವಣವೆಂದೂ ಅರಿವ ಆ ಮಾನಿಸರು ತಾವು ಮನದ ಡಿಂಗರಿಗತನ (ದಾಸ್ಯ) ವನ್ನೊಪ್ಪಿಕೊಳ್ಳುತ್ತಿರುವರಲ್ಲವೇ ? ಇದು ಅವರ ಪೂರ್ವ ಕರ್ಮಾನುರೂಪ ಸುಸ್ಕಾರಜನ್ಯ ಪರಿಣಾಮವೆಂದೇ ನಮ್ಮ ಹೇಳುವಿಕೆಯು. ಅದು ಕಾರಣವೇ, ಆ ಚಲುವರು ವೇದವು ಈಶ್ವರೋಪದಿಷ್ಟವಾದುದ ರಿಂದ, ಅದು ಸರ್ವ ಶಿಷ್ಟಜನೋಪಾದೇಯವಾಗಿರುವುದೆಂಬ ವಾಕ್ಯವು ಕಿವಿಗೆ ಬಿದ್ದೊಡನೆಯೇ ವಿದೂಷಕನಂತೆ ನಟಿಸುವರು. ವಿಲಕ್ಷಣ ಸಂಸರ್ಗ ಜನಿತ ಸಂಸ್ಕಾರಪ್ರಭಾವಾತಿಶಯದಿಂದ ಸನಾತನ ಧರ್ಮ ವಿಚಾರ ವಿಷಯಕವಾಗಿ ಅವರು ಆಕ್ಷೇಪಿಸುತ್ತಿರುವ ನುಡಿಗಳನ್ನು ಈ ಕೆಳಗೆ ಬರೆದು ತೋರಿಸಿ ಅವುಗಳಿಗುಚಿತವಾದುತ್ತರವನ್ನೀಯಲುದ್ಯುಕ್ತರಾ ಗುತ್ತೇವೆ.

ಈಶ್ವರನೆಲ್ಲಿದ್ದಾನೆ ? ಅವನಿರುವನೆಂದು ಹೇಳುವ ನೀವು ಅವನನ್ನು ಪ್ರತ್ಯಕ್ಷವಾಗಿ ತೋರಿಸಿಕೊಡಬಲ್ಲಿರಾ ? ಎಲ್ಲಿಯವರೆಗೆ ನೀವು ಹಾಗೆ ಮಾಡಲು ಶಕ್ತರಲ್ಲವೋ ಆ ವರೆಗೆ 'ಈಶ್ವರನಿದ್ದಾನೆ' ಎನ್ನುವ ಕೇವಲ ಪ್ರತಿಜ್ಞಾಮಾತ್ರದಿಂದೇ ನಮ್ಮನ್ನು ಸಮಾಧಾನ ಪಡಿಸುವ ಹವ್ಯಾಸವುಳ್ಳ ವರಾಗಿರುವುದು ವ್ಯರ್ಥವೇ ಸರಿ; ಆದ್ದರಿಂದ, ಈಶ್ವರನೇ ಸಿದ್ಧಿಸದಿರಲು ಅವನಿಂದ ನಿರ್ಮಿತವಾದ ವೇದಕ್ಕೆ ಪ್ರಾಮಾಣ್ಯವದೆಂತು ಸಮನಿಸುವುದು ? ಎಂಬೀ ಆಕ್ಷೇಪವನ್ನು ಸಮಾಧಾನಗೊಳಿಸುವ ಮೊದಲು ನಾವು ವಾದಿಯ ಬಾಯಿಂದೇ ಎರಡು ಮಾತುಗಳನ್ನು ನಿರ್ಣಯಪಡಿಸಬೇಕಾಗಿದೆ. ಅದು ಹೇಗೆಂದರೆ—

'ಈಶ್ವರನು ಕಾಣಿಸುವುದಿಲ್ಲವಾದುದರಿಂದ ಅವನು ಇಲ್ಲ' ಎಂಬುದಾಗಿ ಹೇಳುವ ವಾದಿಯು, ಕೇವಲ ಇಂದ್ರಿಯಗೋಚರವಾದುದಷ್ಟೇ ಇರುವುದು. (ಪ್ರತ್ಯಕ್ಷವೇ ಒಂದು ಪ್ರಮಾಣವು.) ಎಂದು ತಿಳಿದಿರುವುದಾಗಿ ತೋರಿಬರುವುದು. ಆದ್ದರಿಂದ ಯಾವುದಕ್ಕೆ ಪ್ರಮಾಣವೆಂದು ಹೇಳಬೇಕೆಂಬುದನ್ನು ಮೊದಲು ಗುರುತಿಸಬೇಕು, ಅಂದರೆ ಪ್ರಮಾಣ ಲಕ್ಷ್ಯವನ್ನು ಗೊತ್ತುಪಡಿಸಬೇಕು.

(೨) ಈಶ್ವರನೆಂದರೆ ಯಾವನು ? ಈಶ್ವರನ ಲಕ್ಷಣವೇನು ? ಎಂಬುದರ ನಿರ್ಣಯವಾದರೂ ಆಗಲಿಕ್ಕೇಬೇಕು.

ಈ ಬಗ್ಗೆ ವಾದಿಯು— ಪ್ರಮಾಣವೆಂದರೆ ಜ್ಞಾನಸಾಧನವು, ಈಶ್ವರನೆಂದರೆ ಪ್ರತಿಕೂಲಜೀವರ ನಿಯಮನವನ್ನೂ ಅನುಕೂಲ ಜೀವರ ರಕ್ಷಣೆಯನ್ನೂ ಮಾಡುವಾತನು. ಅವನು ಆ ತನ್ನ ಕಾರ್ಯಗಳನ್ನು ನಿಗ್ರಹಾನುಗ್ರಹಗಳ ಮೂಲಕ ಮಾಡುತ್ತಾನೆ. ಆದ್ದರಿಂದ ಲೌಕಿಕ ಈಶ್ವರ (ಸಾರ್ವಭೌಮರಾಜ) ನೇ ಈಶ್ವರನೆಂದು ನಾವು ತಿಳಿದರೆ ಹಾನಿಯೇನು? ಎಂದು ಹೇಳುವನಾದರೆ, ಆ ನುಡಿಗಳನ್ನು ಅಲ್ಲಗಳೆಯುವ ಪರಿಯು ಈ ಮುಂದೆ ತೋರಿಸಿದಂತಿರುವುದು.

ಪ್ರಮಾಣವೆಂದರೆ ಪ್ರಮೇಯ ಕರಣವು? ಪ್ರಮೇಯ ಅಂದರೆ ಯಥಾರ್ಥಜ್ಞಾನವು; ಇದಕ್ಕೆ ಕರಣವು, (ಸಾಧನವು) ಇಂದ್ರಿಯವು. ಆದ್ದರಿಂದ ಇಂದ್ರಿಯವೇ ಪ್ರತ್ಯಕ್ಷಪ್ರಮಾಣವು. ಇಂದ್ರಿಯಗಳಿಗೂ ಪದಾರ್ಥಗಳಿಗೂ ಸಂಬಂಧವಾಗಿ ಅದರಿಂದುಂಟಾಗುವ ಜ್ಞಾನವು ಪ್ರತ್ಯಕ್ಷಜ್ಞಾನವು, ಎದುರಿಗಿರುವ ಕೊಡವನ್ನು ನಾವು ಕಣ್ಣಿನಿಂದ ನೋಡಿ ಇದು ಕೊಡವು ಎಂದರಿತುಕೊಳ್ಳುವುದು ಪ್ರತ್ಯಕ್ಷ ಜ್ಞಾನವು. ನೆರೆಮನೆಯಂತಿರುವ ಚಾವಡಿಯಲ್ಲಿ ಬಾರಿಸಿದ ಗಂಟೆಯ ಸಪ್ಪಳವನ್ನು ಕಿವಿಯಿಂದ ಕೇಳಿ ಈಗ ಇಷ್ಟು ಗಂಟೆಯಾಯಿತೆಂಬುದನ್ನು ತಿಳಿದುಕೊಳ್ಳುವುದೂ ಪ್ರತ್ಯಕ್ಷ ಜ್ಞಾನವು. ಇದೇ ಮೇರೆಗೆ ನಾಸಿಕಾದಿ ಇಂದ್ರಿಯಗಳಿಗೂ ಆ ಆ ಇಂದ್ರಿಯಗಳಿಗೆ ವಿಷಯಗಳಾದ ಪದಾರ್ಥಗಳಿಗೂ ಸಂಬಂಧವಾಗುವುದರಿಂದ ಹುಟ್ಟುವ ಅರಿವು ಪ್ರತ್ಯಕ್ಷ ಜ್ಞಾನವೆನ್ನಲ್ಪಡುವದು. ಈ ಬಗೆಯಾದ ಪ್ರತ್ಯಕ್ಷ ಪ್ರಮಾಣ (ಇಂದ್ರಿಯ) ವೆಂಬುದೊಂದರಿಂದೇ ಸರ್ವ ವ್ಯವಹಾರಗಳ ನಿರ್ವಾಹವಾಗದು; ಏಕಂದರೆ — ಪ್ರತ್ಯಕ್ಷ ಪ್ರಮಾಣವೊಂದರಮೇಲೆ ಕೈಯೂರಿದರೆ ಇಂದ್ರಿಯಕ್ಕೆ ಗೋಚರವಾಗದಿರುವ ವಿಷಯವನ್ನು ನಾವು ಅರಿ

ಯಲಸದಳವು. ಕಳವು, ಸುಲಿಗೆ, ಕೊಲೆ ಮುಂತಾದ ಅಪರಾಧಗಳನ್ನು ಮಾಡಿದವರಿಗೆ ಶಿಕ್ಷೆ ಕೊಡುವಾಗ ನ್ಯಾಯಾಧೀಶನು ಅವರಿಂದ ಮಾಡ ಲ್ಪಟ್ಟ ಆ ಆ ಅಪರಾಧಗಳನ್ನು ಪ್ರತ್ಯಕ್ಷ ಪ್ರಮಾಣದಿಂದ ಕಂಡು ನಿರ್ಣ ಯಿಸುವನೋ ? ಆದ್ದರಿಂದ ಪ್ರತ್ಯಕ್ಷವೆಂಬುದೊಂದೇ ಪ್ರಮಾಣವು. ವ್ಯವ ಹಾರಕ್ಕೆ ಸಾಲದು. ಅನುಮಾನ, ಶಬ್ದ ಎಂಬಿವುಗಳ ಸಹಾಯವೂ ಬೇಕಾಗುವದು. ವಾದಿಯಾದರೂ ಅನೇಕ ವೇಳೆ ಅನುಮಾನದಿಂದಲೂ ವ್ಯವಹರಿಸುವ ಪ್ರಸಂಗವೂ ಅಡಿಗಡಿಗೊದಗುವುದೆಂಬದನ್ನು ಹೇಳದಿರ ಲಾರನು. ಹಾಗೂ ಅನೇಕ ಸಾರೆ ತಾನು ಪರಡನೆಯುವರ ಶಬ್ದದ ಮೇಲೆ ವಿಶ್ವಾಸವನ್ನಿರಿಸಿ ಕಾರ್ಯದಲ್ಲಿ ಪ್ರವೃತ್ತನಾಗುವುದೂ ತಪ್ಪದು. ಇಷ್ಟಾನಿಷ್ಟಜ್ಞಾನಗಳ ಹೊರತು ಇಷ್ಟದಲ್ಲಿ ಪ್ರವೃತ್ತಿಯೂ ಅನಿಷ್ಟದಲ್ಲಿ ನಿವೃತ್ತಿಯೂ ಸಮನಿಸದು. ತನಗೆ ಯಾವುದಿಷ್ಟವಾದುದೋ ಅದನ್ನುದ್ದೇ ಶಿಸಿಯೇ ಪ್ರವೃತ್ತನಾಗುವುದೂ ಅನಿಷ್ಟವಾದುದರತ್ತಣಿಂದ ನಿವೃತ್ತನಾಗು ವುದೂ ಸರ್ವಜೀವಿಗಳ ಸ್ವಾಭಾವಿಕ ವ್ಯವಹಾರವು. ಸಾರಾಂಶ, ಇಷ್ಟ ಪ್ರವೃತ್ತಿಯೂ ಅನಿಷ್ಟನಿವೃತ್ತಿಯೂ ಎಂಬ ಕಾರ್ಯಗಳ ಮೇಲಿಂದ ಆ ವಿಷಯಗಳ ಜ್ಞಾನವಾದರೋ ಅದಕ್ಕೂ ಮೊದಲು ( ಪ್ರವೃತ್ತಿ ನಿವೃತ್ತಿ ಗಳಿಗಿಂತ ಮುನ್ನ ) ಇರಬೇಕೆಂಬುದನ್ನು ವಾದಿಯು ಒಪ್ಪದಿರಲಾರನು. ಆದರೆ ಇದನ್ನಾದರೂ ವಾದಿಯು ತಾನು ಯಾವ ಪ್ರಮಾಣದಿಂದು ಸಿರುವನು ? ಪ್ರವೃತ್ತಿ ನಿವೃತ್ತಿರೂಪ ವ್ಯವಹಾರಕ್ಕಿಂತ ಮುಂಚೆ ಅವ ಶ್ಯವಾಗಿರತಕ್ಕ ಜ್ಞಾನವು ಇಂದ್ರಿಯಗಳ ಯೋಗದಿಂದುಂಟಾಗುವುದು ಶಕ್ಯವಿದೆಯೇ ? ಇಲ್ಲ. ಆದರೂ ಆ ಜ್ಞಾನವು ಮಾತ್ರ ಉಂಟು ಎಂಬು ದನ್ನಾದರೂ ಒಪ್ಪಲೇಬೇಕು ಏಕಂದರೆ—ಅದಿಲ್ಲದೆ ಪ್ರವೃತ್ತಿ ನಿವೃತ್ತಿ ಗಳೆಂಬ ಕಾರ್ಯಗಳೇ ಸಂಭವಿಸವು ಇನ್ನು ಈ ಜ್ಞಾನದ ಜ್ಞಾನವು ಯಾವ ಸಾಧನದಿಂದುಂಟಾಗುವದು ? ಜ್ಞಾನವಾಗುವುದು ಎಂಬ ಬಗ್ಗೆ ವಾದವೇ ಇಲ್ಲ; ಅದು ಹೇಗಾಗುವುದೆಂಬ ವಿಷಯದಲ್ಲಿಯೇ ವಾದವಿದೆ. ಘಟ ( ಕೊಡ ) ದ ಜ್ಞಾನವು ಕಣ್ಣಿನಿಂದಾಗುವುದು, ಆದರೆ 'ಘಟವು ತನಗಿಷ್ಟವಾದುದು ತಾನು ಇದನ್ನು ನೆಗವಿಕೊಂಡು ಮನೆಗೊಯ್ಯಬೇಕು' ಎಂಬ ಜ್ಞಾನವು ( ಅರಿವು ) ಯಾವ ಸಾಧಧದಿಂದಾಗುವುದು ? ಕಣ್ಣಿ ನಿಂದಾಗುವುದು ಎನ್ನುವದಾದರೆ, ಅದರಿಂದ ಇತರ ಇಂದ್ರಿಯಗಳಿಗೆ ಗೋಚರಿಸುವ ಶಬ್ದ ಸ್ಪರ್ಶಾದಿ ವಿಷಯಗಳು ಅನುಕೂಲವಾದುವೋ ಪ್ರತಿವಾಕೂಲದುವೋ ಎಂಬುದು ಅರಿಯಲ್ಪಡುವುದಿಲ್ಲ; ಅವು ( ಆಶಬ್ದಾ

ದಿಕವು ) ಕಣ್ಣಿಗೆ ಕಾಣಿಸತಕ್ಕವುಗಳಲ್ಲವಷ್ಟೇ ! ಅದರಿಂದ ಅವುಗಳ ಇಷ್ಟಾ ನಿಷ್ಟತೆಯ ನಿರ್ಣಯವು ಸಂಭವಿಸದು. ಹಾಗೂ ಪ್ರತಿಯೊಂದು ಇಂದ್ರಿಯದ ಆವಾವ ವಿಷಯವುಂಟೋ ಆಯಾ ವಸ್ತುವಿನ ಇಷ್ಟಾನಿಷ್ಟರೂಪ ಜ್ಞಾನವು ಪ್ರತಿಯೊಂದು ಪ್ರಾಣಿಗೂ ಉಂಟಾಗುವುದರಿಂದ, ಅದರ ಬಲದಿಂದೇ ಎಲ್ಲ ವ್ಯವಹಾರವೂ ಜರಗಿಸಲ್ಪಡುವುದೆಂಬುದನ್ನು ಎಲ್ಲರೂ ಬಲ್ಲರು. ಆದ್ದರಿಂದ ಯಾವದಾದರೊಂದು ವಸ್ತುವು ಇಷ್ಟವಾದುದೋ ಅನಿಷ್ಟವಾದುದೋ ಎಂಬ ಜ್ಞಾನವು ಅಂತಃಕರಣಕ್ಕಾಗುವುದು ಅಂದರೆ ಆ ಜ್ಞಾನವು ಬಾಹ್ಯೇಂದ್ರಿಯಗಳಿಗೆ ವಿಷಯ ( ಗೋಚರ ) ವಾಗದಿದ್ದರೂ ಅಂತರಿಂದ್ರಿಯ ( ಅಂತಃಕರಣ ) ಕ್ಕೆ ವಿಷಯವಾಗುವುದೆಂದು ತಿಳಿಯತಕ್ಕದ್ದು ಅಂತರಿಂದ್ರಿಯದಿಂದುಂಟಾಗುವ ಜ್ಞಾನವಾದರೊ ಪ್ರತ್ಯಕ್ಷವಾದುದೆಂದು ಪ್ರತ್ಯಕ್ಷ ಪ್ರಮಾಣವಾದಿಯಾದರೂ ಹೇಳಲಾರನು. ಏಕಂದರೆ—ಪ್ರತ್ಯಕ್ಷ ಎಂಬೀ ಶಬ್ದದ ಅರ್ಥವೇ ಪ್ರತಿಯೊಂದು ' ಇಂದ್ರಿಯಕ್ಕಾಗುವ ವಿಶೇಷಜ್ಞಾನವು ' ಎಂದಿರುವುದಾದಕಾರಣ ಅಂತಃಕರಣಕ್ಕುಂಟಾಗುವ ಜ್ಞಾನವು ಘಟಾದಿಬಾಹ್ಯವಿಷಯಗಳ ಜ್ಞಾನದಂತೆ ಪ್ರತ್ಯಕ್ಷ ಜ್ಞಾನವಲ್ಲ. ಅದು ಆಂತರ ಪ್ರತ್ಯಕ್ಷವೆಂದರಿಯಲ್ಪಟ್ಟರೂ ಯಾವ ಜ್ಞಾನದ ವಿಷಯವು ಪ್ರತ್ಯಕ್ಷವಲ್ಲವೋ ಆ ಜ್ಞಾನವು ಪ್ರತ್ಯಕ್ಷವೆನಿಸದು. ಮತ್ತೇನಂದರೆ ಅದು ಅನುಮಾನ ಜ್ಞಾನವೇ.

ಇನ್ನು ' ಪ್ರತ್ಯಕ್ಷ ' ಎಂಬೀ ಪದದಲ್ಲಿ ಅಕ್ಷ ( ಅಂದರೆ ಇಂದ್ರಿಯ ) ವೆಂಬ ಶಬ್ದವಿದೆ. ಕೇವಲ ಪ್ರತ್ಯಕ್ಷ ಪ್ರಮಾಣವಾದಿಗೆ ಇಂದ್ರಿಯಗಳ ಜ್ಞಾನವೆಂತಾಗುವದು ? ಇಂದ್ರಿಯಗಳಿಂದೇ ಇಂದ್ರಿಯಗಳ ಗ್ರಹಣವು ಶಕ್ಯವಿಲ್ಲ; ಎಂದ ಮೇಲೆ ' ಇಂದ್ರಿಯಗಳಿಗೆ ' ಎಂದು ನುಡಿವ ಅಧಿಕಾರವಾದರೂ ವಾದಿಗಿರುವುದಿಲ್ಲ; ಒಂದು ಪಕ್ಷದಲ್ಲಿ ಅವನು 'ಪ್ರತ್ಯಕ್ಷ ಪ್ರತ್ಯಕ್ಷ' ವೆಂದು ಬಾಯಿಂದುಚ್ಚರಿಸುವನಾದರೂ ಇತರ ಜ್ಞಾನಗಳಿಗೆ ಸಾಧನಗಳಾದ ಅನುಮಾನಾದಿಗಳನ್ನು ಅಂಗೀಕರಿಸದಿದ್ದರೆ ಅವನ ತಲೆಯ ಮೇಲೆ ' ವದತೋ ವ್ಯಾಘಾತ ' ದೋಷವೆಂಬ ಕಾಗೆಯು ಕುಳಿತುಕೊಳ್ಳದೆ ಬಿಡದು. ವ್ಯಾಘಾತವೆಂದರೆ ಅಸಂಬದ್ಧವಾರ್ಥವುಳ್ಳ ವಾಕ್ಯವು. ಹೇಗೆಂದರೆ — ' ಯಾವಜ್ಜೀವಮಹಂ ಮೌನೀ ಬ್ರಹ್ಮಚಾರೀಚ ಮೇಪಿತಾ । ಮಾತಾತು ಮಮ ವನ್ಧ್ಯೈವ ಪುತ್ರ ಹೀನಃ ಪಿತಾಮಹಃ॥' ಅಂದರೆ ನಾನು ಯಾವಜ್ಜೀವವೂ ಮೌನವ್ರತಧಾರಿಯಾಗಿದ್ದೇನೆಂದು ತನ್ನ ಬಾಯಿಂದೇ ನುಡಿವುದು, ನನ್ನ ತಂದೆಯು ಬಾಲಬ್ರಹ್ಮಚಾರಿಯು,

ತಾಯಿಯೂ ಬಂಜೆಯು, ಅಜ್ಜ (ಮುತ್ತ) ನಾದವರೋ ಪುತ್ರಹೀನನಾಗಿದ್ದನೆಂದು ಹೇಳುವುದು ಅಸಂಬದ್ಧವಾದುದರಿಂದ ವ್ಯಾಘಾತಯುಕ್ತವಾಗಿದೆ.

ಪ್ರತ್ಯಕ್ಷ ಪ್ರಮಾಣವಾದಿಯು ಬೇರೊಬ್ಬ ವಾದಿಯೊಡನೆ ವಾದಿಸುವ ಪ್ರಸಂಗದಲ್ಲಿ 'ಇವನ ಮತವು ನನ್ನ ಮತಕ್ಕಿಂತ ಬೇರೆಯಾದುದು, ಇವನಿಗೆ ನನ್ನ ಹೇಳುವಿಕೆಯೇ ತಿಳಿಯುಲೊಲ್ಲದು, ಇವನಿಗೆ ಈ ವಿಷಯದಲ್ಲಿ ಸಂಶಯುವುಂಟಾಗಿದೆ' ಎಂಬುದೇ ಮೊದಲಾದ ಪ್ರತಿಪಕ್ಷಿಯಲ್ಲಿಯ ದೋಷಗಳು ಅವನಿಗೆ ಯಾವ ಇಂದ್ರಿಯಗಳಿಂದ ಅರಿಯಲ್ಪಡುವುವು ? 'ಅವನ ಭಾಷಣದ ಮೇಲಿಂದ ಅವನ ಆಶಯವು ವಾದಿಗೆ ಗೊತ್ತಾಗುವದು' ಎನ್ನುವದಾದರೆ, ಭಾಷಣವನ್ನು ಕೇಳುವಿಕೆ ಎಂಬ ಕಾರ್ಯವನ್ನಷ್ಟೇ ಮಾಡತಕ್ಕ ಶ್ರೋತೇಂದ್ರಿಯ ಮೂಲಕವಾಗಿ ಅವನ ಆಶಯದ (ಅಭಿಪ್ರಾಯದ,) ಸ್ವರೂಪವು ಅರಿಯಲ್ಪಡುವದು ಅಶಕ್ಯವೇ ಸರಿ. ಆದ್ದರಿಂದ ಶಬ್ದವೆಂಬ ಲಿಂಗದಿಂದ ಅವನ ಮನದೊಳಗಿನ ಆಶಯದ ಜ್ಞಾನವು ಪ್ರತ್ಯಕ್ಷಪ್ರಮಾಣವಾದಿಗಾದರೂ ಅನುಮಾನ ಪ್ರಮಾಣದಿಂದಲೇ ಉಂಟಾಗುವುದೆಂದು ತಿಳಿಯುವದುಚಿತವು. ಅದರ ಹೊರತು 'ವಿವಾದ ಮಾಡುವಿಕೆ' ಎಂಬ ಅವನ ವ್ಯವಹಾರವು ಉಪಪನ್ನವಾಗದು. ಸಾರಾಂಶ—ಅನುಮಾನವೆಂಬುದಾದರೂ ಜ್ಞಾನಕ್ಕೆ ಸಾಧನವಾಗಿರುವುದರಿಂದ ಅದೂ ಪ್ರಮಾಣವೆನಿಸುವುದು.

ಅನುಮಾನಪ್ರಮಾಣದಂತೆ ಶಬ್ದವೆಂಬುದೂ ಜ್ಞಾನಕ್ಕೆ ಸಾಧನವಾಗಿದೆ. ಶಬ್ದಜನ್ಯಜ್ಞಾನದಿಂದ ಮನುಷ್ಯನ ಪ್ರವೃತ್ತಿಯಾಗುವುದೆಂಬುದು ಎಲ್ಲೆಡೆಯಲ್ಲಿ ಕಂಡುಬರುವುದು. 'ಪ್ರತಿದಿನವೂ ಶಿವಪೂಜೆ ಮಾಡು' ಎಂಬ ನುಡಿಯನ್ನು ಕೇಳಿ ಶ್ರದ್ಧಾಳು ಜನವು ನಿತ್ಯವೂ ಅದನ್ನು ಮಾಡಲು ಪ್ರವೃತ್ತವಾಗುವದು. 'ಸುಳ್ಳನಾಡಲುಬೇಡ' ಶ್ರೀಗುರುವಚನೋಪದೇಶವನಾಲಿಸಿದ ಶಿಷ್ಯನು ತಾನು ಎಂದೂ ಸುಳ್ಳನಾಡಲೇಬಾರದೆಂದು ನಿಶ್ಚಯಿಸುವನು. 'ಚಿಕ್ಕವರಿರುವಾಗ ವಿದ್ಯೆಯೆಂಬ ವೃಕ್ಷವನ್ನು ಹಚ್ಚಿದವರಿಗೆ ಹರೆಯದಲ್ಲಿ ಅದರ ಹಣ್ಣುಗಳು ದೊರಕುವವು. ಎಂಬ ಆಪ್ತವಚನ ಶ್ರವಣದಿಂದ ಆರಂಭದಲ್ಲಿ ಕಷ್ಟದಾಯಕವಾದ ವಿದ್ಯೆಯನ್ನು ಸಂಪಾದಿಸಲು ಸಣ್ಣ ಹುಡುಗರು ಸಹ ಉದ್ಯುಕ್ತರಾಗುತ್ತಾರೆ. 'ಪರಮೇಶ್ವರನೇ ಇಲ್ಲ, ದೇಹವೇ ಆತ್ಮನು ಎಂದು ಹೇಳುವ ಪ್ರತ್ಯಕ್ಷಪ್ರಮಾಣವಾದಿಯ ವಾಕ್ಯದಲ್ಲಿ ವಿಶ್ವಾಸವುಳ್ಳವರಾದ ಅವನ ಅಂತೇ

ವಾಸಿಗಳು ( ಶಿಷ್ಯರು ) ಅನ್ಯರಿಗೂ ಅಂತೇ ಉಪದೇಶಿಸುತ್ತಾರೆ. ಅಂದರೆ ಪ್ರತ್ಯಕ್ಷಪ್ರಮಾಣವಾದಿಯ ಶಬ್ದಗಳಿಂದೇ ಅವನ ಶಿಷ್ಯರಿಗೆ ವೇದವೇ ಆತ್ಮನೆಂಬ ಜ್ಞಾನವುಂಟಾಗುವದು. ಮತ್ತು ಅವರಾದರೂ ಇತರರಿಗೆ ಅದನ್ನೇ ಉಪದೇಶ ಮಾಡತೊಡಗುವರು; ಇಷ್ಟೆಲ್ಲ ಜರುಗುತ್ತಿದ್ದರೂ ಮತ್ತೆ ಪ್ರತ್ಯಕ್ಷಾತಿರಿಕ್ತವಾಗಿ ಬೇರೆ ಪ್ರಮಾಣವಿಲ್ಲವೆಂದು ಗಳಹುವುದಾದರೂ 'ಮುಖಮಸ್ತೀತಿವಕ್ತವ್ಯಮ್' ಎಂಬ ನ್ಯಾಯಾನುಸಾರವಾಗಿ ಬಾಯಿರುವುದರಿಂದ ನುಡಿಯತಕ್ಕದ್ದು' ಎಂದಿಷ್ಟೇ ಅರ್ಥವನ್ನು ತೋರಿಸುವುದು.

ಯಾವನು ಅನುಕೂಲ ಜೀವರ ಪರಿರಕ್ಷಣೆಯನ್ನೂ ಪ್ರತಿಕೂಲ ಜೀವರ ನಿಯಮನವನ್ನೂ ಮಾಡುವನೋ ಅವನೇ ಈಶ್ವರನೆಂದು ತಿಳಿಯುವದಾದರೆ, ಓರ್ವ ಸಾಮಾನ್ಯ ಧನಾಢ್ಯನು ಸಹ ಈಶ್ವರನಾಗಬಹುದು. ಅವನಾದರೂ ತನಗೆ ಸಂಬಂಧಪಟ್ಟವರಾದ ಅನೇಕ ಜೀಪರನ್ನು ಸಲಹುವನು; ಮತ್ತು ಆ ತನ್ನ ಸಂಬಂಧಿಗಳೇ ಪ್ರತಿಕೂಲರಾದರೆ ಅವರ ನಿಯಮನ ( ಶಾಸನ ) ವನ್ನೂ ಮಾಡುವನು. ಈ ಸಂಗತಿಯು ಅತಿವ್ಯಾಪ್ತಿಯೆಂಬ ದೋಷದೂಷಿತವಾಗಿರುವುದು. ( ಅತಿವ್ಯಾಪ್ತಿ — ಅತಿಪ್ರಸಂಗ ) ಅತಿವ್ಯಾಪ್ತಿಯೆಂದರೆ ಅಲಕ್ಷ್ಯವೃತ್ತಿತ್ವವು; ಇದೊಂದು ಲಕ್ಷಣದ ದೋಷವು. ಪ್ರಕೃತದಲ್ಲಿ ಅನುಕೂಲ ಜೀವರನ್ನು ಕಾಪಾಡುವುದೂ, ಪ್ರತಿಕೂಲ ಜೀವರನ್ನು ನಿಗ್ರಹಿಸುವುದೂ ಎಂದು ಹೇಳಲ್ಪಡುವ ಈಶ್ವರನ ಲಕ್ಷಣವು ಒಬ್ಬಾನೊಬ್ಬ ಸಿರಿವಂತನಲ್ಲಿಯೂ ಕಂಡುಬರುವುದರಿಂದ ಅವನೂ ಈಶ್ವರನೆನಿಸಬಹುದಲ್ಲವೆ ? ಎಂಬ ಅತಿವ್ಯಾಪ್ತಿದೋಷಾರೋಪವಿದೆ. ಇದನ್ನು ಹೋಗಲಾಡಿಸಲು ವಾದಿಯು 'ಯಾವನು ಒಂದು ನಾಡಿಗೊಡೆಯನಾಗಿ ಆ ನಾಡಿನಲ್ಲಿರುವ ತನಗನುಕೂಲರೂ ಪ್ರತಿಕೂಲರೂ ಆದ ಜನರನ್ನು ಅನುಕ್ರಮವಾಗಿ ಸಂರಕ್ಷಣೆಯನ್ನೂ ನಿಯಮನವನ್ನೂ ಮಾಡುವನೋ ಅವನೇ ಈಶ್ವರನು. ಎಂದು ಹೇಳುವುದಾದರೂ ಸಮಂಜಸವಾದುದಲ್ಲ. ಒಂದು ದೇಶದ ಈಶ್ವರನು ( ಒಡೆಯನು ) ಅನಿತ್ಯನೆನಿಸುವನು. ಏಕೆಂದರೆ —- ಅವನಿಗಿಂತಲೂ ಬಲಾಢ್ಯನಾದ ಬೇರೊಬ್ಬ ಅರಸನು ಅವನ ಸಮಾಚಾರ ತೆಗೆದುಕೊಳ್ಳುವನು. ಹೀಗೆ ಅನ್ಯಶತ್ರುವಿನ ಭೀತಿಯುಳ್ಳವನಾದ್ದರಿಂದ ಸಭಯನೂ, ತನ್ನ ಒಂದು ದೇಶಕ್ಕೆ ಮಾತ್ರ ರಾಜನಾದುದರಿಂದ ಮರ್ಯಾದಿತನೂ

ಅಂದರೆ ಒಂದು ನಾಡಿನ ದೊರೆಯು ಮತ್ತೊಂದು ನಾಡಿಗೆ ಬಂದರೆ ರೈತನು ಎಂಬ ಗಾದೆಗೆ ಸರಿಯಾಗಿರುವಾತನೂ ಆದ ಲೌಕಿಕ ರಾಜನೋರ್ವನು ಸರ್ವ ಜೀವನಿಯಾಮಕನಾದ ಈಶ್ವರನೆನಿಸುವನು. ಈ ಮೇಲಿನ ದೋಷಗಳನ್ನು ಪರಿಹರಿಸಲೋಸುಗ ಎಲ್ಲ ಭೂಮಂಡಲವನ್ನೂ ಆಳುವ ಅರಸನಲ್ಲಿ ಈಶ್ವರತ್ವವಿದೆ" ಎಂದು ಹೇಳುವದಾದರೂ ಯುಕ್ತವಲ್ಲ; ಏಕೆಂದರೆ ಅವನಲ್ಲಿಯೂ ಈಶ್ವರತ್ವವು ವಾಸ್ತವಿಕವಾಗಿರುವುದಿಲ್ಲ; ಹಾಗೂ ಅವನ ಇಡೀ ಭೂಮಂಡಲದ ರಾಜ್ಯಾಧಿಕಾರವನ್ನಾದರೂ ಕಾಲವಶದಿಂದ ಪ್ರಜೆಗಳಲ್ಲಿ ಯಾವನಾದರೊಬ್ಬ ಬಲಾಢ್ಯನಾದ ವೀರ ಪುರುಷನಾಗಲಿ ಅಥವಾ ಈಗಣ ವಾತಾವರಣಕ್ಕೆ ಸರಿಯಾಗಿ ರಶಿಯಾ ಜರ್ಮನೀ ರಾಷ್ಟ್ರಗಳಂತೆ ಪ್ರಜೆಗಳೇ ಕಸಿದುಕೊಳ್ಳಬಹುದೆಂಬ ಸಂಗತಿಯೂ ಅಸಂಭವನೀಯವಲ್ಲ. ಇದಲ್ಲದೆ ನೆಲಕೆಲ್ಲಕೋರ್ವನೇ ಧೊರೆಯೆನಿಸುವ ಈ ಲೌಕಿಕ ಈಶ್ವರನೂ ಒಂದಿಲ್ಲೊಂದು ದಿನ ಮೃತ್ಯುವಿನ ಬಾಯಿಗೆ ತುತ್ತಾಗುವದೂ ಪ್ರತ್ಯಕ್ಷ ಕಂಡುಬರುವುದು. ಆದುಕಾರಣ ಅವನಿಂದ ಮಾಡಲ್ಪಡುವ ನಿಗ್ರಹಾನುಗ್ರಗಳೆಂಬಿವೆರಡೂ ಮರ್ಯಾದಿತವಾದವುಗಳೆಂಬುದು ಸ್ಪಷ್ಟವೇ.

ಮತ್ತು ಯಾವನು ಅನುಕೂಲ ಜೀವರನ್ನು ಮಾತ್ರ ಸಲಹುವಾತನಾಗಿ ಪ್ರತಿಕೂಲ ಜೀವರನ್ನು ನಿಯಮನಗೊಳಿಸುವನೋ ಅವನಾದರೂ ಈಶ್ವರನಲ್ಲ. ವಸ್ತುತಃ ಅವನು ಅನೀಶ್ವರ (ಜೀವ) ನೇ. ಏಕೆಂದರೆ :— ಸಾಮಾನ್ಯವಾದ ವ್ಯವಹಾರವುಳ್ಳ ಇತರ ಜೀವರಂತೆ ತಾನೂ ರಾಗ ದ್ವೇಷಗಳೆಂಬ ಚಿತ್ತದೋಷಗಳಿಗಧೀನನಾದವನು ( ಜೀವನು ) ಸ್ವತಃ ಪರಾಧೀನನಾಗಿರಲು ಸರ್ವ ನಿಯಾಮಕನಾದ ಈಶ್ವರನೆಂತಾಗುವನು ? ಆದ್ದರಿಂದ ಕೇವಲ ರಕ್ಷಣೆ ನಿಯಮುಗಳನ್ನು ಮಾಡುವಾತನೇ ಈಶ್ವರನೆಂದು ಒಂದು ವೇಳೆ ತಿಳಿದರೂ ಅವನೊಬ್ಬನೇ ಅನೇಕ ಜೀವರ ಸಂರಕ್ಷಣೆಯನ್ನೂ ನಿಯಮವನ್ನೂ ಮಾಡಲು ಹೇಗೆ ತಾನೇ ಸಮರ್ಥನಾಗುವನು? ಅನುಗ್ರಹ ಮೂಲಕ ಸಂರಕ್ಷಣೆಯನ್ನೂ ನಿಗ್ರಹಪೂರ್ವಕ ನಿಯಮವನ್ನೂ ಮಾಡುತ್ತಾನೆಂದು ಹೇಳಬಹುದಾದರೂ ಜನ್ಮ, ಮರಣ, ಜರೆ. ವ್ಯಾದಿಗಳನ್ನು ಪರಿಹರಿಸಲಾರದ ಇಂತಪ್ಪಲೌಕಿಕ ಈಶ್ವರನ ಅನುಗ್ರಹವೂ ನಿಗ್ರಹವೂ ಎಂಬಿವುಗಳನ್ನು ಅರ್ಥವಿಲ್ಲದ ಶಬ್ದಗಳೆಂದೇ ಹೇಳ

ಬೇಕಾಗುವುದು. ಇಲ್ಲವೆ ಅವುಗಳ ಅರ್ಥವು ಬಹು ಸಂಕುಚಿತವೆಂ ದಾದರೂ ಒಪ್ಪಬೇಕು. ಯಾವನಿಗೆ ಲೌಕಿಕ ನಿಗ್ರಹಾನುಗ್ರಹಗಳನ್ನಾ ದರೂ ತನ್ನ ಸಾಮರ್ಥ್ಯದಿಂದ ಮಾಡಲಾರದೆ ಅದಕ್ಕಾಗಿ ಭೃತ್ಯರೇ ಮೊದಲಾದ ಇತರರ ನೆರವನ್ನು ಅಡಿಗಡಿಗೆ ಬಯಸುವ ಹದವಿರು ವದೋ ಅವನದೆಂತಹ ಈಶ್ವರನು ? ಸಾರಾಂಶ — ಕೇವಲ ಪ್ರತ್ಯಕ್ಷ ಪ್ರಮಾಣವಾದಿಗೆ ತನ್ನ ಪ್ರಮಾಣದ ಬಗ್ಗೆಯೂ ಈಶ್ವರಸ್ವರೂಪ ವಿಷ ಯದಲ್ಲಿಯೂ ನಿರ್ದೋಷವಾಗಿ ಏನೂ ಹೇಳಲಿಕ್ಕೆ ಬರುವದಿಲ್ಲವೆಂದು ಸಿದ್ಧವಾಗುವದು.

ಸೃಷ್ಟಪದಾರ್ಥಗಳ ಧರ್ಮಗಳನ್ನನುಲಕ್ಷಿಸಿ ಹಾಗೆ ವರ್ತಿಸಿದರಾ ಯಿತು, ಈಶ್ವರನ ಅಸ್ತಿತ್ವವನ್ನಂಗೀಕರಿಸದಿರುವದರಿಂದ ಹಾನಿಯೇನು ? ನಿಸರ್ಗಕ್ಕಿಂತಲೂ ಬೇರೆ ಈಶ್ವರನಿರುವನೇ ? ಎಂಬಾಕ್ಷೇಪದ ಸಮಾ ಧಾನವು ಹೇಗೆಂದರೆ — ಸೃಷ್ಟ ಪದಾರ್ಥಗಳ ಧರ್ಮಗಳನ್ನನುಸರಿಯೇ ಪಶು, ಪಕ್ಷಿ, ಕೀಟ ಪತಂಗೆ ಮೊದಲಾದ ಭೂಲೋಕದೊಳಗಿರತಕ್ಕ ಮನುಷ್ಯೇತರ ಪ್ರಾಣಿಗಳಾದರೂ ವರ್ತಿಸುತ್ತಿರುವುವು, ಅವುಗಳಿಗೆ ಈಶ್ವರನ ಅಸ್ತಿತ್ವದ ಪ್ರಜ್ಞೆಯೇ ಇರುವದಿಲ್ಲ, ಅದರಿಂದ ಅವುಗಳಿಗೆ ಯಾವ ಹಾನಿಯುಂಟು ? ಆ ಪ್ರಾಣಿಗಳೂ ತಿನ್ನುವವು ಕುಡಿಯುವವು ನಿದ್ರೆಮಾಡುವವು. ಸಾಯುವತನಕ ತಮಗಿಂತ ಬಲಿಷ್ಠವಾದ ಪ್ರಾಣಿ ಗಳಿಗೆ ಭಯಪಡುತ್ತವೆ ಅವುಗಳಿಗೂ ಚೌಕಳಿಗಿಂತ ಹೆಚ್ಚಾಗಿ ಸಂತತಿ ಯಿರುವದು. ಅವಾದರೂ ಶರೀರ ಸಂಬಂಧಮೂಲಕವಾಗಿ ಪೂರ್ವ ಕರ್ಮಾನುಸಾರ ಸಂಭವಿಸಿದ ಸುಖದುಃಖಗಳನ್ನು ಭೋಗಿಸುತ್ತವೆ. ಜನ್ಮ, ಬಾಲ್ಯ, ತಾರುಣ್ಯ, ಜರೆ, ಮರಣ, ಜಾಗೃತಿ, ಸ್ವಪ್ನ, ಸುಷುಪ್ತಿ ಮೊದಲಾದ ಭಾವವಿಕಾರಗಳನ್ನೂ ಅವಸ್ಥೆಗಳನ್ನೂ ಅನುಭವಿಸುತ್ತವೆ. ಕರ್ಮದಿಂದೊದಗಿದ ಆಯುಷ್ಯವಿರುವತನಕ ಜೀವಿಸಿ ಕಡೆಗೊಮ್ಮೆ ಸಾಯುವವು. ಅವುಗಳಂತೆ ಮನುಷ್ಯನಾದರೂ ಆ ಸರ್ವ ವ್ಯವಹಾರ ಗಳನ್ನು ನಿರ್ವಿಘ್ನವಾಗಿ ನೆರವೇರಿಸುವನು. ಯಾವ ಜೀವನಾದರೂ ಜನ್ಮ ವನ್ನೆತ್ತುವದಕ್ಕಿಂತ ಮುಂಚೆ ಅವನ ಈ ಸರ್ವ ವ್ಯವಹಾರಕ್ಕೆ ಕಾರಣ ವಾದದು ನಿಶ್ಚಿತವಾಗಿರುತ್ತದೆ. ಆದ್ದರಿಂದ ವ್ಯವಹಾರದಲ್ಲಿ ಪೂರ್ವ ನಿಶ್ಚಿತದಂತೇ ಸರ್ವವೂ ಘಟಿಸುವದು. ಆದರೆ ಮನುಷ್ಯನು ಅನ್ಯ ಪ್ರಾಣಿಗಳಿಗಿಂತ ಪೃಥಕ್ಕಾಗಿರುವನು. ಅವನ ಆತ್ಮನು ಅಧಿಕವಾಗಿ ಆವಿರ್ಭೂತನಾಗಿರುತ್ತಾನೆ. ಈ ವಿಷಯದಲ್ಲಿ ನಮ್ಮ ಪುರಾತನ ಋಷಿ

ಗಳು ಹೀಗೆ ಹೇಳುತ್ತಾರೆ. ಐತರೇಯಾರಣ್ಯಕದಲ್ಲಿ (೩-೨-೧೪) 'ಪುರುಷೇ ತ್ವೇವಾ ವಿಸ್ತರಾಮಾತ್ಮಾ ಸಹಿ ಪ್ರಜ್ಞಾನೇನ ಸಂಪನ್ನತಮೋ ವಿಜ್ಞಾತಂ ವದತಿ ವಿಜ್ಞಾತಂ ಪಶ್ಯತಿ ವೇದ ಶ್ವಸ್ತನಂ ವೇದಲೌಕಾಲೋಕೌ ಮರ್ತ್ಯೇ ನಾಮೃತಮಿಪ್ಸತ್ಯೇವಂ ಸಂಪನ್ನಃ' ಮನುಷ್ಯ, ಪಶು, ಪಕ್ಷಿ ಮೊದ ಲಾದವುಗಳೆಲ್ಲವೂ ಪ್ರಾಣಿಗಳೆನಿಸಿಕೊಳ್ಳುತ್ತವೆ; ಆದರೆ ಅವುಗಳಲ್ಲಿ ಮನುಷ್ಯ ಪ್ರಾಣಿಯಲ್ಲಿಯೇ ಆತ್ಮನ ಆವಿರ್ಭಾವವು ಅತಿಶಯವಾಗಿರುವುದು. ಪಶು ಮುಂತಾದ ಪ್ರಾಣಿಗಳಲ್ಲಾದರೋ ಹಾಗೆ ಆತ್ಮಾವಿರ್ಭಾವವಿರುವದಿಲ್ಲ. ಆದೇಕೆ ? ಎಂದರೆ, ಮನುಷ್ಯನು ಪ್ರಕೃಷ್ಟಜ್ಞಾನಸಂಪನ್ನನಾಗಿರು ವನು. ಹೇಗೆ ? ಎಂದರೆ, ಕಳೆದುಹೋದ ದಿವಸಗಳಲ್ಲಿ ಅರಿಯಲ್ಪಟ್ಟ ವಸ್ತುವನ್ನು ಈ ದಿವಸ ನೆನಪುಮಾಡಿಕೊಂಡು 'ನನಗೆ ಅದು ಗೊತ್ತಿದೆ' ಎಂದು ಅನ್ಯರಿಗೆ ಹೇಳುತ್ತಾನೆ. ಎಷ್ಟೋ ದಿವಸಗಳ ಹಿಂದೆ ಒಂದೆಡೆ ಯಲ್ಲಿ ತಾನರಿತುದನ್ನು ಈ ದಿವಸ ಸ್ಮರಿಸಿ ಆ ಸ್ಥಳಕ್ಕೆ ಹೋಗಿ ಅದನ್ನು ಮತ್ತೆ ಗುರುತಿಸುವನು. ಪಶ್ವಾದಿಗಳು ಗುರುತಿಸುವದರಲ್ಲಿಯೂ, ಸ್ಮರಿ ಸುವದರಲ್ಲಿಯೂ ಸಮರ್ಥವಾಗಿರುವವಾದರೂ, ಅವುಗಳಿಗೆ ವಿಶೇಷ ವಿವೇಕವಿಲ್ಲದ್ದರಿಂದ ಪ್ರತಿಯೊಂದು ವಸ್ತುವಿನ ಪೂರ್ಣವಾದ ಜ್ಞಾನ ವುಂಟಾಗುವುದಿಲ್ಲ. ಮನುಷ್ಯನು ಹಿಂದಿನ ಕಾಲದಲ್ಲಿ ನಡೆದ ಸಂಗತಿ ಯನ್ನು ಹೇಳಲು ಶಕ್ತನಾಗಿರುವಂತೆ ತನ್ನ ಮುಂದಿನ ಕರ್ತವ್ಯವನ್ನೂ ತಿಳಿಯಲು ಸಮರ್ಥನಾಗಿರುತ್ತಾನೆ. ಇಷ್ಟೇ ಅಲ್ಲ. ಶಾಸ್ತ್ರಗಳ ಪಠನಶ್ರ ವಣಮೂಲಕವಾಗಿ ಹೇಯೋಪಾದೇಯವಿಷಯಗಳನ್ನೂ ಅರಿತು ನಿತ್ಯಾ ನಿತ್ಯ ವಿವೇಕ ಬಲದಿಂದ ಅನಿತ್ಯ (ನಶ್ವರ) ವಾದುದನ್ನು ಅಪೇಕ್ಷಿಸದೆ ನಿತ್ಯ (ಶಾಶ್ವತ) ವಾದುದನ್ನೇ ಪಡೆಯಲಿಚ್ಛಿಸುತ್ತಾನೆ.

ಮತ್ತು '**ಅಥ ಇತರೇಷಾಂ**' ಎಂಬ ಮುಂತಾದ ಮುಂದಿನ ವಾಕ್ಯಗಳಲ್ಲಿ ಪಶ್ವಾದಿಗಳಿಗೆ ಹಸಿವು ನೀರಡಿಕೆ ಮೊದಲಾದ ದೇಹ ಧರ್ಮಗಳ ಜ್ಞಾನಮಾತ್ರವಿರುವುದು. ಅವು ತಾವು ಅರಿಯಲ್ಪಟ್ಟುದನ್ನು ಪೇಳಲಿಕ್ಕೂ ಮತ್ತೆ ನೋಡಲಿಕ್ಕೂ ಹೇಗೆ ಶಕ್ತಗಳಲ್ಲವೋ, ಹಾಗೇ ಅವು ಗಳಿಗೆ ನಾಳಿನ ಕರ್ತವ್ಯವೇನೆಂಬುದೂ ಗೊತ್ತಾಗುವುದಿಲ್ಲ. ಹಾಗೂ, ಇಹಪರಗಳ ಜ್ಞಾನವಾದರೂ ಅವುಗಳಿಗಿರುವುದಿಲ್ಲ. ಅವುಗಳಿಗೆ ತಮ್ಮೆ ದುರಿಗೆ ಪ್ರತ್ಯಕ್ಷವಾಗಿ ಸಂಭವಿಸುವ ಇಷ್ಟಾನಿಷ್ಟಗಳ ಜ್ಞಾನಮಾತ್ರವಿರು ವುದು; ಎಂಬೀ ಮೊದಲಾದ ಸವಿಸ್ತರವರ್ಣನೆಯುಂಟು. ಆದ್ದರಿಂದ ಮನುಷ್ಯರು ಸೃಷ್ಟಪದಾರ್ಥಗಳ ಧರ್ಮಗಳಂತೆ ವರ್ತಿಸುವುದರಿಂದಲೂ

ಈಶ್ವರನ ಅಸ್ತಿತ್ವವನ್ನೊಪ್ಪದಿರುವುದರಿಂದಲೂ ಅವರ ಬಾಳುವೆಯಲ್ಲಿ ಯಾವ ಹಾನಿಯೂ ತಟ್ಟದೆ ಅನ್ಯಪ್ರಾಣಿಗಳಂತೆ ನಿಃಶಂಕವಾಗಿ ವ್ಯವಹರಿಸಬಹುದು! ವಸ್ತುತಃ ಸೃಷ್ಟಿಯ ನಿಯಮಾನುಸಾರವಾಗಿ ವರ್ತಿಸುವದರಲ್ಲಿ ಮನುಷ್ಯರಿಗಿಂತಲೂ ಇತರ ಪ್ರಾಣಿಗಳೇ ವಿಶೇಷದಕ್ಷವಾಗಿರುತ್ತವೆ. ಮನುಷ್ಯರು ಎಷ್ಟೋಸಾರೆ ಸೃಷ್ಟಿಯನಿಯಮವನ್ನುಲ್ಲಂಘಿಸಿ ನಡೆವುದರಿಂದ ಅತೀವ ದುಃಖಿಗಳಾಗುತ್ತಿರುವರು. ಅವರು ಹೀಗೆ ಸೃಷ್ಟಿಯ ನಿಯಮವನ್ನತಿಕ್ರಮಿಸಿ ನಡೆಯುವವರಾಗಿ ಪ್ರಾಣಿಸಾಧಾರಣವಾಗಿರತಕ್ಕ ತಮ್ಮ ಶಕ್ತಿಯಲ್ಲಿ ಬಹುಭಾಗವನ್ನು ದುರ್ವ್ಯಯಮಾಡಿಬಿಡುವರು. ಸೃಷ್ಟಿನಿಯಮನಿರಪೇಕ್ಷವಾದ ಈ ಬಗೆಯ ನಡತೆಯಿಂದ ಆ ಮಾನಿಸರು ವಿಚಿತ್ರಗಳಾದ ಅನೇಕ ರೋಗಗಳ ಮೂಲಕವಾಗಿ ಪರಿಪರಿಯಾದ ಮಾನುಷೀ ದೈವೀ ಆಪತ್ತುಗಳಿಗೀಡಾಗಿ ಬಳಲುವರು ಮನುಷ್ಯೇತರ ಪ್ರಾಣಿಗಳು ಸೃಷ್ಟಿಯ ನಿಯಮಾನುಸಾರ ವರ್ತಿಸುವುವುಗಳಾಗಿ ಸಂತತಿವಿಷಯಕವಾದ ಅಮೋಘವೀರ್ಯವನ್ನು ಕಾಪಾಡಿಕೊಂಡಿರುತ್ತವೆ. ನಾವೇ ಜಾಣರೆಂದು ಹೆಮ್ಮೆಪಡುವ ಮಾನೀಸರಾದರೋ—

ಸ್ವೈರಾಚಾರೇಣ ಜೀವಾನಾಂ ನಶುಭಾ ಗತಿರೀಕ್ಷಿತಾ |
ನಿಗ್ರಹೇಣೇನ್ದ್ರಿಯಾಣಾಂತು ನಿಶ್ಚಿತಾ ಪರಮಾಗತಿಃ ||

ಎಂಬುದಾಗಿ ಹೇಳಲ್ಪಡುವ ಹಿರಿಯರ ನುಡಿಗಳಿಗೆ ಕಿವಿಗೊಡದೆ ಮನಬಂದತೆರದಿ ನಡೆದು ಮೋಘವೀರ್ಯರಾಗುತ್ತಿರುವರು. ಇಂತಿರುವವರಾದರೂ ಈ ದುರ್ಬಲಮನುಷ್ಯರು ' ಸೃಷ್ಟಿಪದಾರ್ಥಗಳ ಧರ್ಮದಂತಾಚರಿಸುವುದರಿಂದಲೂ ಈಶ್ವರನೇ ಇಲ್ಲವೆಂದು ತಿಳಿಯುವುದರಿಂದಲೂ ಯಾವ ಹಾನಿಯುಂಟು ? ಎಂಬುದಾಗಿ ಪ್ರಶ್ನೆಮಾಡುತ್ತಿರುವ ರೀತಿಯಾದರೋ ನಮಗೆ ಈಸುವುದಕ್ಕೆ ಬರುವುದಿಲ್ಲ, ಆದಾಗ್ಯೂ, ನಾವು ಆಳವಾದ ಕಡಲಿನಲ್ಲಿ ಹಾರಿದರೇನಾಗುವುದು ? ಎನ್ನುವ ಗಾಂಪರನುಡಿಗೆಣೆಯಾಗಿರುವುದು.

ಚೆನ್ನಾಗಿ ವಿಚಾರಮಾಡಿದಲ್ಲಿ ಮಾನವಪ್ರಾಣಿಯು ಪಶು ಮೊದಲಾದ ಇತರ ಪ್ರಾಣಿಗಳಂತೆ ಸೃಷ್ಟಿಧರ್ಮವನ್ನನುಸರಿಸಿ ನಡೆವುದೇ ಅವನ ಕರ್ತವ್ಯವಲ್ಲ; ಮತ್ತೇನೆಂದರೆ ಅದನ್ನು ಅತಿಕ್ರಮಿಸಿ ತನ್ನ ಆತ್ಮೋನ್ನತಿಯನ್ನು ಮಾಡಿಕೊಳ್ಳಲೂ ಸಮರ್ಥನಾಗಿದ್ದಾನೆ. ಅದಕ್ಕಾಗಿಯೇ ಈಶ್ವರನು ಈ ಜಗತ್ತಿನಲ್ಲಿ ' ಧರ್ಮ ' ವೆಂಬುದೊಂದು ಕಟ್ಟಳೆಯನ್ನು

ಕಲ್ಪಿಸಿದ್ದಾನೆ. ಪಶ್ವಾದಿಪ್ರಾಣಿಗಳು ತಿಳಿವಳಿಕೆಯಿಲ್ಲದವುಗಳೆಂದು ಹೇಳಿಸಿಕೊಳ್ಳಲ್ಪಡತಕ್ಕವಾದರೂ ಅವು ಸ್ವಾಭಾವಿಕವಾಗಿ ನಿಸರ್ಗವನ್ನತಿಕ್ರಮಿಸುವುದಿಲ್ಲವಾದ್ದರಿಂದ ಅವುಗಳ ನಿಯಂತ್ರಣಗೋಸ್ಕರ ನಿಯಾಮಕವಾದ ಧರ್ಮದ ಅವಶ್ಯಕತೆಯಿರುವುದಿಲ್ಲ. ಮನುಷ್ಯನು ಸೃಷ್ಟಿಯ ನಿಯಮವನ್ನುಲ್ಲಂಘಿಸತಕ್ಕವನಾದುದರಿಂದ ಅವನ ನಡತೆಯನ್ನು ನಿಯಮನಗೊಳಿಸುವ ಧರ್ಮವು ಇರಲಿಕ್ಕೇ ಬೇಕಾಯಿತು. ಅಂತಪ್ಪ ಧರ್ಮವನ್ನು ಕೂಡ ಲೆಕ್ಕಿಸದೆ ಮನಬಂದಂತೆ ನಡೆವುದರಿಂದೇನಾಗುವುದೆಂಬ ವಿಷಯದಲ್ಲಿ ಭಗವಂತನು ಹೇಳುವುದೇನೆಂದರೆ :—

**ಯೇ ತ್ವೇತದಭ್ಯಸೂಯನ್ತೋ ನಾನು ತಿಷ್ಠನ್ತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾ ನಚೇತಸಃ ॥**

ಎಲೈ ಪಾರ್ಥನೇ ! ಈಶ್ವರಾರ್ಪಿತಬುದ್ಧಿಯಿಂದ ಶಾಸ್ತ್ರವಿಹಿತವಾದ ಕರ್ಮಗಳನ್ನನುಷ್ಠಿಸತಕ್ಕದ್ದು, ಎಂಬ ಈ ನನ್ನ ಮತವನ್ನೊಪ್ಪಿ ಆದರಂತೆ ಶ್ರದ್ಧೆಯಿಂದ ಆಚರಿಸುವವರು ಧರ್ಮಾಧರ್ಮರೂಪವಾದ ಕರ್ಮಬಂಧರಹಿತರಾಗುವರು. ಇನ್ನು ಯಾರು ಈ ನನ್ನ ಮತದಲ್ಲಿ ದೋಷದೃಷ್ಟಿಯುಳ್ಳವರಾಗಿ ಆದರಂತೆ ಅನುಷ್ಠಿಸುವುದಿಲ್ಲವೋ ಅವರು ಸರ್ವಪ್ರಕಾರವಾದ ಜ್ಞಾನವಿಷಯದಲ್ಲಿ ಮೂಢರು ಅವಿವೇಕಿಗಳೂ ನಷ್ಟರೂ ( ಅಂದರೆ ಪುರುಷಾರ್ಥಕ್ಕೆ ಅನಧಿಕಾರಿಗಳೂ ) ಆಗಿರುವರೆಂದು ತಿಳಿ.

ಧರ್ಮವೆಂಬುದು ಮುಖ್ಯವಾಗಿ ಮರಣೋತ್ತರದಲ್ಲಿ ಉತ್ತಮಾವಸ್ಥೆಯನ್ನು ಅಥವಾ ದೇಹವಿರುವಾಗಲೇ ಜೀವನು ತನ್ನ ಮೂಲಸ್ವರೂಪಭೂತವಾದ ಶಿವತ್ವಾಭಿವ್ಯಕ್ತತೆಯನ್ನು ಪಡೆಯುವುದಕ್ಕೆ ಸಾಧನವಾಗಿರುವುದು. ಕೇವಲ ನಾಸ್ತಿಕತೆಯಿಂದ ಹಾಗೆ ( ಧರ್ಮವನ್ನನುಸರಿಸಿ ) ನಡೆಯದಿದ್ದರೆ ಧರ್ಮಕ್ಕೆ ಯಾವ ಹಾನಿಯೂ ಇಲ್ಲ. ವೇದಾಗಮಶಾಸ್ತ್ರಗಳು ಮಾನವನಿಗೆ ಹಿತೋಪದೇಶವನ್ನು ಮಾಡುವುದಷ್ಟೇ ಅವುಗಳ ಕೆಲಸವು. ಆ ಪ್ರಕಾರವಾಗಿ ಅವು ಆ ಕೆಲಸವನ್ನು ಸರಿಯಾಗಿ ಮಾಡುತ್ತಲೇ ಇರುವುವು. ಯಾವನು ಅವುಗಳ ಹಿತೋಪದೇಶದಲ್ಲಿ ಶ್ರದ್ಧೆಯುಳ್ಳವನಾಗಿ ಧರ್ಮವನ್ನನುಸರಿಸಿ ನಡೆಯುವನೋ ಅವನ ಮನುಷ್ಯತ್ವವೂ ಪಶ್ವಾದಿಭಿನ್ನತ್ವವೂ ಸಿದ್ಧವಾಗುವುದು. ಆ ಹಿತೋಪದೇಶವನ್ನು ಲೆಕ್ಕಿಸದೆ ಯಥೇಷ್ಟಾಚರಣೆಯುಳ್ಳವನಾದರೆ ಅವನ ಮನುಷ್ಯತ್ವವು ಸಿದ್ಧಿಸುವುದಿಲ್ಲವೆಂಬುದಿಷ್ಟೇ ! ಈ ಕಾಲದಲ್ಲಿ ಯಾರು ಕೆಲಂಬರು ಧರ್ಮ

ದಲ್ಲಿಯೂ ಈಶ್ವರನಲ್ಲಿಯೂ ವಿಶ್ವಾಸವಿಲ್ಲದವರಾಗಿರಬಹುದು, ಇದ್ದು ಕೊಂಡಿರಲಿ; ಅದರಿಂದ ನಮಗೆ ಯಾವ ಹಾನಿಯೂ ಇಲ್ಲವಷ್ಟೆ ? ಏಕೆಂದರೆ— ನಾವು ನಮ್ಮ ಕರ್ಮದ ಫಲವನ್ನು ಭೋಗಿಸುತ್ತಿರುವಂತೆ ಇತರರು ತಮ್ಮ ತಮ್ಮ ಕರ್ಮದ ಫಲವನ್ನು ಭೋಗಿಸತಕ್ಕವರಾಗಿ ದ್ದಾರೆಂಬುದು ನಿಶ್ಚಿತವಾದುದು. ಆಯುರ್ವೇದವು ಯಾವದಾದರೊಂದು ರೋಗಕ್ಕೆ ಔಷಧವನ್ನೇ ಹೇಳದಿದ್ದ ಪಕ್ಷದಲ್ಲಿ ಆ ವೇದವು ಅಪರಾಧಿ ಯೆನಿಸಬಹುದಾಗಿದ್ದಿತು. ಹಾಗೂ ಆಯುರ್ವೇದವನ್ನು ಬಲ್ಲವನು ರೋಗಿಗೆ ಆ ಔಷಧವನ್ನು ಹೇಳದಿದ್ದರೆ ಆ ವೈದ್ಯನು ದೋಷಾರೋಪ ಣೆಗೆ ಗುರಿಯಾಗುತ್ತಿದ್ದನು; ಆದತೆ ಆಯುರ್ವೇದವು ಯೋಗ್ಯವಾದ ಔಷಧವನ್ನು ಹೇಳಿದ್ದರೂ ವೈದ್ಯನು ರೋಗಿಗೆ ಆ ಔಷಧವನ್ನು ತೆಗೆದು ಕೊಳ್ಳುವಂತೆ ಆಗ್ರಹವನ್ನು ಮಾಡಿದರೂ ಕೂಡ ರೋಗಿಯು ಅಶ್ರದ್ಧೆ ಯಿಂದ ಔಷಧವನ್ನು ಸೇವಿಸದಿದ್ದರೆ ಆಯುರ್ವೇದದ ಮತ್ತು ವೈದ್ಯನ ಹಾನಿಯೇನಿದೆ ? ಅಶ್ರದ್ಧೆಯ ಮೂಲಕ ರೋಗಿಯು ಸಾಯುವನು. ಮತ್ತೇನಾಗುವುದು ? ಈ ಮಾತಿಗನುಸರಿಸಿ ಒಬ್ಬ ಕವಿಯು ಹೀಗೆ ನುಡಿಯುತ್ತಾನೆ—

**ಶಾಸ್ತ್ರಂಭೂರಿ ನಿಜಸ್ವರೂಪವಮತಯೇ ಸ್ವಾರಾಧನಾರ್ಥಂ ವಪುಃ**
**ಸ್ವಧ್ಯಾನಾಯ ಮನಶ್ಚ ಬುದ್ಧಿಮನಘಾಂ ಲಬ್ಧುಂಚ ತೀರ್ಥಾದಿ ಕಮ್ ।**
**ತತ್ವಾತ್ಸನ್ಯುಪದೇಷ್ಟುಮುತ್ತಮಗುರೂನ್ ದತ್ವಾನುಗೃಹ್ಣಾತಿ ಯಃ**
**ಸಂಸಾರೇ ತದಪಿ ಭ್ರಮೇಮ ಯದಿ ಕಿಂ ಕುರ್ವೀತ ಸರ್ವೇಶ್ವರಃ॥**

ಪರಮಾತ್ಮನು ತನ್ನ ಅಂಶೀಭೂತರಾದ ಜೀವರು ನಿಜಸ್ವರೂಪ ವನ್ನರಿಯಲೆಂದು ವೇದಾಗಮರೂಪಶಾಸ್ತ್ರವನ್ನೂ, ತನ್ನನ್ನು ಪೂಜಿಸ ಲೆಂದು ಮಿಗಿಲಾದ ಮಾನವದೇಹವನ್ನೂ, ತನ್ನನ್ನು ಧ್ಯಾನಿಸಲೆಂದು ಮನಸ್ಸನ್ನೂ, ಬುದ್ಧಿಯು ಪಾಪರಹಿತವಾಗಲೆಂದು ತೀರ್ಥ ಮೊದಲಾ ದುವನ್ನೂ, ತತ್ವೋಪದೇಶವನ್ನು ಮಾಡುಲೋಸುಗ ಉತ್ತಮ ಗುರು ಗಳನ್ನೂ ಅನುಗ್ರಹಪೂರ್ವಕವಾಗಿ ಅನುಕೂಲಮಾಡಿಕೊಟ್ಟಿರುವನಾದರೂ ನಾವು ಅದೆಲ್ಲವನ್ನೂ ಲೆಕ್ಕಿಸದೆ ಜನನಮರಣಾತ್ಮಕ ಸಂಸೃತಿಯಲ್ಲಿ ತೊಳಲಿ ಬಳಲುವವರಾದರೆ ಆ ಸರ್ವೇಶ್ವರನು ಏನು ತಾನೇ ಮಾಡಬೇಕು ?

ಈ ಕಾಲದಲ್ಲಿ ಆದಿಭೌತಿಕ ಶಾಸ್ತ್ರವನ್ನು ಕಲಿಯುವುದರಲ್ಲಿಯೇ ಜನರ ಮನದೊಲವು ಹೆಚ್ಚಾಗಿದೆ. ಆ ಶಾಸ್ತ್ರದ ಸಂಸ್ಕಾರ ಬಲದಿಂದ ಅವರು ಯಾವದೊಂದು ವಿಷಯುವನ್ನಾಗಲಿ ಆ ಶಾಸ್ತ್ರಕ್ಕೆ ಒರೆಹಚ್ಚಿ ನೋಡುವ ಸ್ವಭಾವವುಳ್ಳವರಾದುದರಿಂದ ಅಧ್ಯಾತ್ಮ ವಿಷಯುವನ್ನಾದರೂ ಆ ಬಹಿರ್ಮುಖರು ಆದಿಭೌತಿಕ ವಿಷಯುಗಳಿಗೆ ಹೋಲಿಸಿನೋಡಲು ಹೆಣಗಾಡುತ್ತಿರುವರು. ವಿಷಯುಗಳ ಭಿನ್ನತೆಯ ವಿಚಾರವನ್ನೇ ಮಾಡದಿರುವ ಅವರಿಗೆ ಅಧ್ಯಾತ್ಮಶಾಸ್ತ್ರದ ತಿರುಳು ಗೊತ್ತಾಗದಿರುವುದು ಸಾಹಜಿಕವು. ಆದಿಭೌತಿಕಶಾಸ್ತ್ರಕ್ಕೂ ಅಧ್ಯಾತ್ಮಶಾಸ್ತ್ರಕ್ಕೂ ಮಹದಂತರವಿದೆ. ಆದಿಭೌತಿಕಶಾಸ್ತ್ರದ ವಿಷಯುಗಳು ಇಂದ್ರಿಯಗೋಚರವಾಗಿವೆ; ಅಧ್ಯಾತ್ಮಶಾಸ್ತ್ರದ ವಿಷಯುಗಳಾದರೋ ಅತೀಂದ್ರಿಯಗಳಾಗಿವೆ. ಇನ್ನು ಆದಿಭೌತಿಕಶಾಸ್ತ್ರದ ವಿಷಯಗಳಾದರೂ ಎಲ್ಲವೂ ಸರಿಯಾಗಿ ಇಂದ್ರಿಯ ಗೋಚರವಾದುವೆಂದೇ ಹೇಳಲಿಕ್ಕಾಗದು. ಸದ್ಯಃ ಆ ವಿದ್ಯೆಯಲ್ಲಿ ನಿಷ್ಣಾತರಾಗಿರುವರೆಂದು ಪ್ರಖ್ಯಾತಿಯುನ್ನು ಪಡೆದವರು ಕೂಡ ಆದಿಭೌತಿಕಶಾಸ್ತ್ರದ ವಿಷಯಗಳಲ್ಲಿ ಎಷ್ಟೋ ಪದಾರ್ಥಗಳು ಇಂದ್ರಿಯಗೋಚರವಾಗದಿರುತ್ತವೆಂದೂ ಅವು ಮುಂದಾದರೂ ಅತೀಂದ್ರಿಯಗಳಾಗಿಯೇ ಉಳಿಯತಕ್ಕವೆಂದೂ ಹೇಳುತ್ತಾರೆ. ಈ ರೀತಿಯಾಗಿ ಕಾರ್ಯರೂಪಗಳೂ ನಶ್ವರಗಳೂ ಆಗಿರತಕ್ಕ ಆದಿಭೌತಿಕ ವಿಷಯಗಳು ಇಂದ್ರಿಯಗಳಿಗೆ ಗೋಚರಿಸದೆ ಉಳಿದಿರಲು ಅವೆಲ್ಲಕ್ಕೂ ಆಚೆಗಿರುವುದೂ ಅವುಗಳಿಗೆ ಮೂಲಭೂತವೂ ಆದ ಸೂಕ್ಷ್ಮ ವಸ್ತುವು ಅದೇನು ಸಾಮಾನ್ಯವಾಗಿರುವುದೇ ? ಈ ಸಂಗತಿಯನ್ನೆಲ್ಲಾ ಅರಿತೋ ಅರಿಯದೆಯೋ ಜಗತ್ತಿನ ಮೂಲಕಾರಣವಾದ ವಸ್ತುವೆಂಬುದು ನಮಗೆ ಬೇಕಾದಾಗ ಕಣ್ಣಿಗೆ ಕಾಣಿಸುವಂತಿದ್ದರೇನೇ ನಾವು ಅದರ ಅಸ್ತಿತ್ವವನ್ನು (ಇರುವಿಕೆಯುನ್ನು) ಒಪ್ಪುವೆವೆಂದೂ, ಅದು ಇಂದ್ರಿಯಗೋಚರವೆನಿಸದಪಕ್ಷದಲ್ಲಿ ಅದನ್ನು ಇಲ್ಲವೇ ಇಲ್ಲವೆಂದು ಧಾರಾಳವಾಗಿ ಹೇಳಬಹುದೆಂದೂ ನುಡಿವ ಆ ಪಂಡಿತವಕ್ಕಿಗಳಿಗೇನೆನ್ನಬೇಕು ? ಕೇವಲ ಪ್ರತ್ಯಕ್ಷ ಪ್ರಮಾಣವೊಂದನ್ನೇ ನಂಬಬೇಕೆಂದೂ ಅನುಮಾನಾದಿ ಬೇರೆ ಪ್ರಮಾಣಗಳ ಆವಶ್ಯಕತೆಯೇ ಇಲ್ಲವೆಂದೂ ವಾದಿಸುವ ಆಧುನಿಕ ಸುಶಿಕ್ಷಿತನೆನಿಸುವಾತನು ತಾನು ತಮ್ಮಪ್ಪನ ಮಗನೇ ಎಂಬುದನ್ನು ಪ್ರತ್ಯಕ್ಷ ಪ್ರಮಾಣದಿಂದೇ ಅರಿತುಕೊಳ್ಳಲು ಸಾಧ್ಯವಿದೆಯೆ ? ಕಾರ್ಯಾವಲೋಕನೆಯಿಂದ ಕಾರಣದಕಲ್ಪನೆಯುಂಟಾಗುವುದೆಂದವನುಸಿರಿದೊಡೆ, 'ಕಾರ್ಯಾತ್ಕಾರಣಮನುಮೇಯಮ್' ಎಂಬುದಾಗಿ ನಮ್ಮ ಹಿರಿಯರು

ಹೇಳುವ ನುಡಿಯು ಮೊದಲೇ ಸಿದ್ಧವಾಗಿರುವುದಲ್ಲವೇ ? ಇದರಿಂದ ತಾನೂ ಅನುಮಾನಪ್ರಮಾಣದ ಹಂಗಿನವನೆಂದು ಅವನೇ ಒಪ್ಪಿದ ಹಾಗಾಯಿತು. ಮತ್ತು ಆಪ್ತವಾಕ್ಯದಿಂದಲೂ ತಾನು ಇಂಥವನ ಮಗ ನೆಂಬುದನ್ನು ಅರಿತುಕೊಳ್ಳುವೆನೆಂದೂ ಅವನು ಹೇಳುವುದಾದರೆ, ತನ್ನ ಸರ್ವಸ್ವವೆನಿಸಿದ ಪ್ರತ್ಯಕ್ಷಪ್ರಮಾಣಕ್ಕೆ ತಿಲಾಂಜಲಿಯನ್ನಿತ್ತು ಶಬ್ದಪ್ರಮಾ ಣಕ್ಕೆ ಶರಣುಹೊಕ್ಕನೆಂಬುದೇ ಸಿದ್ಧವಾಗುವುದಲ್ಲದೆ ಮಿಕ್ಕಮಾತೇನು ?

ಮತ್ತು ಈ ಜಗತ್ತು ಸ್ವಭಾವಸಿದ್ಧವಾದುದು, ಯಾವನೂ ಇದನ್ನು ಮಾಡಿರುವುದಿಲ್ಲವಾದುದರಿಂದ ಇದಕ್ಕೋರ್ವನು ಕರ್ತನಿದ್ದಾನೆಂದು ಹೇಳಕೂಡದು; ಹೀಗಿರುತ್ತಿರಲು ಅವನ ಅಸ್ತಿತ್ವದ ವಿಚಾರದಲ್ಲಿ ತೊಡ ಗುವುದಾದರೋ ಕಾಕದಂತಪರೀಕ್ಷೆಯನ್ನು ಹೋಲುವುದು ಎಂದು ನುಡಿ ವಾತನನ್ನು ಹೀಗೆ ಕೇಳಬೇಕು. ಏನಯ್ಯಾ ? ಈ ಜಗತ್ತು ಸ್ವಭಾವ ಸಿದ್ಧವಾದುದೆಂಬ ಸಂಗತಿಯನ್ನು ನೀನೇ ಅರಿತು ಹೇಳುತ್ತಿರುವೆಯೋ, ಪರಪ್ರತ್ಯಯನೇಯ ಬುದ್ಧಿಯಿಂದುಸಿರುವಿಯೋ ? ನಾನೇ ಅರಿತು ಹೇಳುವೆನೆಂದರೆ, ಅದಾವ ಪ್ರಮಾಣದಿಂದರಿದವನಾದೆ ? ಪ್ರತ್ಯಕ್ಷ ಪ್ರಮಾಣದಿಂದೋ ? ಅಲ್ಲ; ಅನುಮಾನ ಪ್ರಮಾಣದಿಂದೆನ್ನುವದಾದರೆ, ಅದಕ್ಕೆ ಗಮಕವಾವುದುಸಿರು ? ಮತ್ತು ನಿನ್ನ ಆ ಅನುಮಾನವು ತರ್ಕ ಶುದ್ಧವಾದುದೆಂದೇ ಹೇಗೆ ತಿಳಿಯತಕ್ಕದ್ದು ? ನಿನ್ನ ಆ ಊಹೆಯನ್ನು ನಿರಸನಗೊಳಿಸತಕ್ಕ ಬೇರೊಂದು ತರ್ಕವನ್ನೊಡ್ಡಲು ನಮಗೆ ಸಾಧ್ಯವಿಲ್ಲ ವೇನು ? ನಾವಾದರೂ ಅನುಕೂಲವಾದ ಯುಕ್ತಿವಾದವನ್ನಂಗೀಕರಿಸು ತ್ತೇವೆ; ಆದರೆ ಶ್ರುತಿಪ್ರಮಾಣವೆಂಬ ಸೋರೆಕಾಯಿಯ ಬೆಂಬಲವಿಲ್ಲದೆ ತರ್ಕಪ್ರವಾಹದಲ್ಲಿ ಈಸಲು ನಾವು ಒಪ್ಪುವುದಿಲ್ಲ; ನಿನ್ನ ಶುಷ್ಕತರ್ಕಕ್ಕೆ ಪರ್ಯವಸಾನವೇ ಇಲ್ಲವಷ್ಟೇ ! ಕೇವಲ ಅದೊಂದರ ಮೇಲೆ ಕೈಯೂರಿ ನಿನಗಭಿಮತವಾದ ಸ್ವಭಾವವಾದವನ್ನು ನಿಶ್ಚಿತಗೊಳಿಸುವುದು ನಿನ್ನಿಂದಾ ಗದ ಕೆಲಸವೇ ಸರಿ. ಇನ್ನು ಈ ಜಗತ್ತು ಸ್ವಭಾವಸಿದ್ಧವಾದುದೆಂಬು ದನ್ನು ನಾನು ಅನ್ಯರ ವಾಕ್ಯದಿಂದರಿತು ಹೇಳುವೆನೆಂದು ನೀನಾಡುವ ಪಕ್ಷದಲ್ಲಿ, ಅನ್ಯರೆಂದರೆ ಅದಾರು ? ಅವರು ನಿನ್ನ ಹಿತೈಷಿಗಳೋ? ದ್ವೇಷಿ ಗಳೋ ? ಅವರೇ ನಿನ್ನ ಹಿತೈಷಿಗಳಾದ ಪರಮಾಪ್ತರೆಂದು ನೀನವರನ್ನು ಅದು ಹೇಗೆ ನಂಬಿರುವೆ ? ಅವರಲ್ಲಿ ಅದಾವವೈಶಿಷ್ಟ್ಯವಿರುವುದು ? ಅಯ್ಯೋ ಪಾಪ ! ಪರಮ ಆಪ್ತರೆಂದರೆ ಕೃತಕೃತ್ಯರಾದ ಅನಿಮಿತ್ತ ಬಂಧು ಗಳೆಂಬುದನ್ನರಿಯದ ಪಸುಳನು ನೀನಲ್ಲಾ ! ಸನಾತನವೈದಿಕ ಧರ್ಮ

ಬಾಹ್ಯರಲ್ಲಿಯೂ ವಿಬುಧರನೇಕರಿರುವುರಾದ್ದರಿಂದ ಅವರೇನು ಜಾವಳರೇ ? ಎಂದು ನೀನು ಹೇಳುವದಾದರೆ, ಅವರಲ್ಲಿ ಮಹಾಪಂಡಿತರು ಇರಲೇ ಬಾರದೆಂದು ನಮ್ಮ ಅಭಿಪ್ರಾಯವಿರುವುದಿಲ್ಲ; ಆದರೆ ಅವರ ಇತ್ತಂಡ ವಾದಕ್ಕೆ ನಾವು ಹೇಸುವೆವು. ಆದ್ದರಿಂದ ಸನಾತನವೈದಿಕ ಧರ್ಮದ ಸರಣಿಯನ್ನನುಸರಿಸಿ ಪರ್ಯಾಲೋಚಿಸಿದರೆ ಅಸಂಸ್ಕೃತಾತ್ಮರೂ ಪ್ರಾಕೃತೃಕ ಶರಣರೂ ಆದ ಛಲವಾದಿ ವರ್ಗದವರ ವಾರ್ತೆಯೇ ನಮಗೆ ಬೇಡವೆನಿಸುವುದು !

ಈಶ್ವರನನ್ನು ಅಂಗೀಕರಿಸದೆ ಸ್ವಭಾವ ಮೊದಲಾದುದು ಜಗತ್ತಿಗೆ ಕಾರಣವಾದುದೆಂದು ಹೇಳತಕ್ಕವರು ವೈದಿಕಸಾಹಿತ್ಯ ಪ್ರಸಾರ ಕಾಲದಲ್ಲಿಯೂ ಇದ್ದುದರಿಂದೇ ಅವರ ವಿಚಾರದಿರವು ವೈದಿಕವಾಙ್ಮಯದಲ್ಲಿ ನಿರ್ದೇಶಿಸಲ್ಪಟ್ಟಿರುವುದು. ಪ್ರಾಚೀನ ಕಾಲದಲ್ಲಿ ಕೆಲವರು ಸ್ವಭಾವ ಕಾಲ ಮುಂತಾದುವು ಜಗತ್ತಿಗೆ ಕಾರಣಗಳೆಂದು ವಾದಿಸುತ್ತಿದ್ದರೆಂದೂ, ಸಿದ್ಧಾಂತಿಗಳು ಅವುಗಳ ಆಚೆಗೆ ಹೋಗಿ ಈಶ್ವರನು ಜಗತ್ತಿನ ಮೂಲ ಕಾರಣನೆಂದರಿತುಕೊಂಡಿದ್ದರೆಂದೂ ಶ್ವೇತಾಶ್ವತರೋಪನಿಷತ್ತಿನ ಆರನೆಯ ಅಧ್ಯಾಯದ ಮೊದಲನೆಯ ಮಂತ್ರದಿಂದರಿಯಲ್ಪಡುವುದು. ಹಾಗೂ, ವೇದ ಕಾಲದಲ್ಲಿ ಜಗತ್ತಿನ ಮೂಲಕಾರಣವೇನೆಂಬುದನ್ನು ಯಥಾರ್ಥವಾಗಿ ತಿಳಿದುಕೊಳ್ಳಬೇಕೆಂಬುದ್ದೇಶದಿಂದ ಜಿಜ್ಞಾಸಾಬುದ್ಧಿಯುಳ್ಳವರಾದ ಕೆಲವರು ಆ ವಿಷಯದಲ್ಲಿ ಪ್ರಯತ್ನಿಸಿದುದು ಋಗ್ವೇದಾಂತರ್ಗತವಾದ ನಾಸದೀಯ ಸೂಕ್ತಾದಿಗಳಿಂದ ಗೊತ್ತಾಗುವುದು. ನಾಸದೀಯಸೂಕ್ತದೊಳಗಿನ ಆರನೆಯ ಮಂತ್ರದಲ್ಲಿ—

ಕೋ ಅಧ್ಧಾ ವೇದ ಕ ಇಹ ಪ್ರವೋಚತ್
ಕುತ ಆಜಾತಾ ಕುತ ಇಯಂ ವಿಸೃಷ್ಟಿಃ ।
ಅರ್ವಾಗ್ ದೇವಾ ಅಸ್ಯ ವಿಸರ್ಜನೇನಾಥ
ಕೋ ವೇದ ಯತ ಆಬಭೂವ ॥

ಈ ವಿಸರ್ಗವು ಅಂದರೆ, ಪ್ರಮಾತೃಪ್ರಮಾಣಪ್ರಮೇಯರೂಪವಾದ ಈ ಪ್ರಸಾರವು ಏತರಿಂದ ಮತ್ತು ಎಲ್ಲಿಂದ ಬಂದಿತು. ಎಂಬುದನ್ನು. (ಇದಕ್ಕಿಂತ) ಪ್ರ-ಅಂದರೆ ವಿಸ್ತರಿಸಿ (ವಿಶದೀಕರಿಸಿ) ಯಾರು ಹೇಳಲು ಶಕ್ತರು ? ಇದರ ಯಥಾರ್ಥ ಸ್ವರೂಪವನ್ನು ಯಾರು ತಾನೇ ತಿಳಿಯ ಬಲ್ಲರು ? ದೇವತೆಗಳು ಕೂಡ ಈ ಸತ್ಸೃಷ್ಟಿಯ ಆವಿರ್ಭಾವಾನಂತರ

ವಲ್ಲಿ ಹುಟ್ಟಿದವರು ಎಂದಮೇಲೆ, ಈ ವಿಶ್ವಪ್ರಪಂಚವು ಎಲ್ಲಿದ ಹುಟ್ಟಿತೆಂಬುದನ್ನು ಯಾರು ನಿರೂಪಿಸುವರು.

ಈ ಮೇಲಿನ ವಾಕ್ಯವು ಅಜ್ಞೇಯವಾದವನ್ನು ಸಾಧಿಸುವುದೆಂದು ತಿಳಿಯಕೂಡದು. ಏಕೆಂದರೆ— ಇದೇ ಸೂಕ್ತದ ೨ನೆಯ ಮಂತ್ರವು ದೇವರ ಸ್ವರೂಪವನ್ನು ಸ್ಪಷ್ಟವಾಗಿ ಸಾರುವದು, ಅದನ್ನು ಈ ಮುಂದೆ ತೋರಿಸುವೆವು. ಮತ್ತು ಋಗ್ವೇದದೊಳಗಿನ ೧೦ನೆಯ ಮಂಡಲಾಂತರ್ಗತವಾದಃ— **'ಏತಾವಾನ್ ಅಸ್ಯ ಮಹಿಮಾತೋ ಜ್ಯಾಯಾಂಶ್ಚ ಪೂರುಷಃ'** ಎಂಬ ಮಂತ್ರವು, ಸರ್ವ ಸೃಷ್ಟಿಯೂ ಯಾವನ ಮಹಿಮೆ (ಶಕ್ತಿ) ಯೋ ಆ ಮೂಲ ದ್ರವ್ಯ (ವಸ್ತು) ವು ಈ ಎಲ್ಲವುಗಳ ಆಚೆಗಿದ್ದು ಎಲ್ಲಕ್ಕಿಂತ ಶ್ರೇಷ್ಠವೂ, ಭಿನ್ನವೂ ಆಗಿರುತ್ತದೆ. ಎಂಬುದಾಗಿ ಜಗತ್ತಿನ ಮೂಲಕಾರಣದಿರವನ್ನು ತಿಳಿಸುವುದು. ಆದ್ಧರಿಂದ ನಾವಾದರೂ ತ್ರಿಪುಟಿರೂಪಶಾಖೆಗಳ ಮೂಲತತ್ವವೇ ದೇವರೆಂದು ಹೇಳುತ್ತೇವೆ. ಈ ವಿಶ್ವ ಪ್ರಪಂಚದ ಬುಡವನ್ನು ಶೋಧಿಸಲು ತೊಡಗಿದ ಪರಿಶುದ್ಧವಾದ ಅಂತರ್ಮುಖವೃತ್ತಿಗೆ ಹೊಳೆವ ತತ್ವವೇ ದೇವರು. **'ಯತೋವಾಚೋ ನಿವರ್ತನ್ತೇ ಅಪ್ರಾಪ್ಯ ಮನಸಾ ಸಹ'** (ತೈ. ೨-೯) ಎಂಬ ಮುಂತಾದ ವಾಕ್ಯಗಳು ಮಾತುಮನಂಗಳಿಂದತ್ತತ್ತಮೀರಿದ ವಸ್ತುವೆಂದು ದೇವರ ಅಜ್ಞೇಯ ಸ್ವರೂಪವನ್ನು ಬಣ್ಣಿಸುತ್ತವೆ. ಆದಾಗ್ಯೂ ಇಂತಪ್ಪ ಆಗಮ್ಯ ಸ್ಥಿತಿಯಲ್ಲಿಯೂ ಆ ದೇವರ ಸ್ವರೂಪವನ್ನು ನಮ್ಮ ಬುದ್ಧಿಯಿಂದ ಒಂದು ಬಗೆಯಾಗಿ ನಿರ್ಣಯಿಸಲಿಕ್ಕೆ ಬರುವುದೆಂದು ಅಧ್ಯಾತ್ಮಶಾಸ್ತ್ರವು ನಿಶ್ಚಯಿಸಿರುತ್ತದೆ.

ದೇವರು ಪ್ರತಿಯೊಬ್ಬರ ಬುದ್ಧಿಗೆ ಹೊಳೆಯತಕ್ಕವನೆಂದು ನಿಮ್ಮ ಹೇಳುವಿಕೆಯ ತಾತ್ಪರ್ಯವಿರುವುದಾದರೆ, ಈ ವರೆಗೆ ಆ ದೇವರು ನಮ್ಮ ಬುದ್ಧಿವೃತ್ತಿಗೆ ಗೋಚರಿಸದಿರಲು ಕಾರಣವೇನು ? ಎನ್ನುವದಾದರೆ, ಪ್ರತಿಯೊಬ್ಬನ ಬುದ್ಧಿಯೂ ಸಮಾನವಾಗಿಯೇ ಶುದ್ಧವಾಗಿರುತ್ತಿದ್ದರೆ, ಈ ಶಂಕೆಯು ಯುಕ್ತವೆನಿಸಬಹುದು; ಆದರೆ ಸರ್ವರ ಬುದ್ಧಿಯ ನೈರ್ಮಲ್ಯವು ಹಾಗೆ ಒಂದೇ ಬಗೆಯಾಗಿರುವುದೇ ? ಇಲ್ಲ. ಆದ್ದರಿಂದ ಯಾವನ ಅಂತಃಕರಣವು ಪರಿಶುದ್ಧವಾಗಿರುವುದೋ ಅಂತಪ್ಪ ಪುಣ್ಯಾತ್ಮನ ಬುದ್ಧಿವೃತ್ತಿಗೆ ಆ ದೇವರು ಅನುಭವಗಮ್ಯನಾಗಿದ್ದಾನೆ. ಅವನವರಿಗೆ ಅವನ ಅನುಭವವು ಅಸಾಧ್ಯವಲ್ಲ. ಸಜಾತೀಯ ವಸ್ತುಗಳಲ್ಲಿ ಪಾರಸ್ಪರಿಕ ನಿಕಟ

ಸಂಬಂಧವಿರುವದು ಕಂಡುಬರುವುದಷ್ಟೇ! ಸೂರ್ಯಕಾಂತವೆಂಬ ಶಿಲೆಯಲ್ಲಿ ಸೂರ್ಯನ ಕಿರಣಗಳು ವ್ಯಕ್ತವಾಗುವುದು ಅನುಭವಸಿದ್ಧವಲ್ಲವೇ? ಆ ದೇವರು ಸುಜ್ಞಾನಿಗಳಿಗೆ ದೂರಿರುವುದಿಲ್ಲ. ಆ ಮಾತು ಹಾಗಿರಲಿ; ಅವನು ಸರ್ವರ ಅಂತರ್ಯಾಮಿಯಾಗಿರುತ್ತಾನೆ. ಆದಾಗ್ಯೂ ಯಾವನು ವಿಹಿತಾಚರಣೆಗಳಿಂದ ಚಿತ್ತನೈರ್ಮಲ್ಯವನ್ನು ಪಡೆದು ಬಾಹ್ಯಾಭ್ಯಂತರಗಳಲ್ಲಿಯೂ ಆ ದೇವರನ್ನು ಭಕ್ತಿಯಿಂದ ಭಜಿಸುತ್ತಾನೋ ಅವನ ಬಗ್ಗೆ ತನ್ನವನೆಂಬಭಿಮಾನವನ್ನು ವಹಿಸಿದವನಾಗಿ ದೇವರು ಅವನಲ್ಲಿ ನಿಜಸ್ವರೂಪವನ್ನಭಿವ್ಯಕ್ತಗೊಳಿಸುವನು. ಹೀಗೆ ದೇವರೊಲುಮೆಗೆ ಪಾತ್ರರಾದ ಪವಿತ್ರ ಹೃದಯರ ಅನುಭವವೇ ಸರ್ವರಿಗೂ ಮಾರ್ಗದರ್ಶಕವೆನಿಸಿರುವುದಿಲ್ಲವೆ? ಮಹಾಭಾರತಾಂತರ್ಗತವಾದ ಶಾಂತಿಪರ್ವದಲ್ಲಿ (೩೨೦-೩೦) ಜನಕನು ಸುಲಭೆಯನ್ನು ಕುರಿತು :—

**ಜ್ಞಾನೇನ ಕುರುತೇ ಯತ್ನಂ ಯತ್ನೇನ ಪ್ರಾಪ್ಯತೇ ಮಹತ್ ।**

ಜ್ಞಾನವು ಅಂದರೆ ಸತ್ಕ್ರಿಯಾವಿಶಿಷ್ಟಜ್ಞಾನವು. ಅಂತಹ ಜ್ಞಾನವಾದ ತರುವಾಯ ಮುಮುಕ್ಷು ಪುರುಷನು ತನ್ನ ಆತ್ಮೋನ್ನತಿಯ ಮಾರ್ಗದಲ್ಲಿ ನಡೆಯಲು ಯತ್ನಿಸುವನು. ಈ ಯತ್ನದಿಂದೇ ಕೊನೆಗೆ ಅವನಿಗೆ ಮಹತತ್ತ್ವವು (ಧರೆ ಮೊದಲಾಗಿ ಮೂಲ ಬಿಂದುವೇ ಕಡೆಯಾದ ಸರ್ವತತ್ತ್ವಗಳಿಗೂ ಆಧಾರಭೂತವಾದುದು) ಲಭಿಸುವುದು., ಎಂಬುದಾಗಿ ಹೇಳಿದ್ದಾನೆ. ಈ ಅಧ್ಯಾತ್ಮವಾಕ್ಯಾನುಸಾರವಾಗಿ ಪಾರಮಾರ್ಥಿಕಸರಣಿಯನ್ನವಲಂಬಿಸಿ ಪ್ರಯತ್ನಿಸುವವರಿಗೆ ಈಶ್ವರಾನುಭವವು ಸಿದ್ಧಿಸುವುದು. ಅದಿಲ್ಲದೆ ಕುತರ್ಕವನ್ನಾಶ್ರಯಿಸಿ ಶಾಬ್ದಿಕಜ್ಞಾನದ ಹೆಮ್ಮೆಯಿಂದ ಸ್ವೇಚ್ಛಾಚಾರಪರರಾದ ಜಡವಾದಿಗಳಿಗೆ ಅತರ್ಕ್ಯವೂ ಅಚಿಂತ್ಯವೂ ಆದ ಈಶ್ವರ ಸ್ವರೂಪದನುಭವವು ಅದೆಂತು ಸುಕರವಾಗುವುದು? ಮಹಾನುಭಾವಿಗಳ ಮಾತಿನಲ್ಲಿ ವಿಶ್ವಾಸವನ್ನಿರಿಸದೆ ತಮಗಾದರೂ ತಿಳಿದುಕೊಳ್ಳುವ ಯೋಗ್ಯತೆಯಿಲ್ಲದೆ ಕೇವಲ ತರ್ಕದಿಂದೇ ಈಶ್ವರಾಸ್ತಿತ್ವದನುಭವದಪೇಕ್ಷೆಯನ್ನು ಸಾರ್ಥಕಗೊಳಿಸಬೇಕೆಂದು ವಿಪ್ರಲಪಿಸುವ ಆ ವಿಷಯಾಂಧರ ಹಂಬಲವು ನಿರರ್ಥಕವಾದುದೇ ಸರಿ. ಮಹಾಭಾರತಾಂತರ್ಗತವಾದ ಭೀಷ್ಮಪರ್ವದಲ್ಲಿ (೫-೧೨) :—

**ಅಚಿನ್ತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಚಿಂತಯೇತ್ ।**
**ಪ್ರಕೃತಿಭ್ಯಃ ಪರಂ ಯತ್ತು ತದಚಿನ್ತ್ಯಸ್ಯ ಲಕ್ಷಣಮ್ ॥**

ಇಂದ್ರಿಯಗೋಚರವೆನಿಸದ ಮೂಲಕ ಯಾವ ಪದಾರ್ಥಗಳನ್ನು ನಾವು ಚಿಂತಿಸಲಾರೆವೋ, ಅಂಥವುಗಳನ್ನು ಕೇವಲ ತರ್ಕಬಲದಿಂದ ನಿರ್ಣಯಗೊಳಿಸಲು ಹೆಣಗಬಾರದು. ಪ್ರಾಕೃತ ತತ್ತ್ವಗಳಿಗಿಂತಲೂ ಆಚೆಗಿರುವುದೇ ಅಚಿಂತ್ಯ ( ಈಶ್ವರತತ್ತ್ವ ) ವೆನಿಸಿಕೊಳ್ಳಲ್ಪಡುವುದು.

ಎಂದು ಹೇಳಲ್ಪಟ್ಟಿರುವ ಮೇರೆಗೆ, ಆರಧ್ವಗಳನ್ನು ಮೀರಿದ ದೇವರ ಸದ್ರೂಪದನುಭವವು ಜಡವಾದಿಗಳ ಬುದ್ಧಿಶಕ್ತಿಗೆ ನಿಲುಕದಿರುವುದು. ಕುರುಡನಿಗೆ ಕೊರಡು ಕಾಣಿಸದಿದ್ದರೆ ಅದಾರ ತಪ್ಪು ? ನವ್ಯಶಿಕ್ಷಾದೀಕ್ಷಿತರು ದುರಭಿಮಾನವನ್ನು ಬದಿಗೊತ್ತಿ ಸುವಿಚಾರವನ್ನವಲಂಬಿಸಿದ ಮಹಾತ್ಮರೊಡನಾಡಿ, ವೇದಬಾಹ್ಯಜನಸಂಸರ್ಗಜನಿತಕುಕಲ್ಪನೆಗಳನ್ನೀಡಾಡಿ, ಸಚ್ಛಾಸ್ತ್ರಶ್ರವಣಮಾಡಿ, ಸಚ್ಚಿದಾನಂದಾದಿಲಕ್ಷಣಲಕ್ಷಿತನಾದೀಶ್ವರನೊಳೊಂದುಗೂಡಿ ಕೃತಾರ್ಥರಾಗಲೆಂದು ಹಾರೈಸುತ್ತೇವೆ.

ಇನ್ನು ಸದ್ರೂಪನಾದ ಆ ಈಶ್ವರನ ಸ್ವರೂಪವನ್ನು ಬೇರೆ ಬೇರೆ ಮತವಾದಿಗಳು ಬೇರೆ ಬೇರೆ ತೆರನಾಗಿ ಪ್ರತಿಪಾದಿಸುವರು. ಅವರಲ್ಲಿ ಕೆಲವರ ಅಭಿಪ್ರಾಯಗಳನ್ನು ಇಲ್ಲಿ ತೋರಿಸುತ್ತೇವೆ.

ನೈಯಾಯಿಕರು:— **‘ ನಿತ್ಯಜ್ಞಾನಾದ್ಯಧಿಕರಣಮೀಶ್ವರಃ ’** ನಿತ್ಯಜ್ಞಾನವು, ಇಚ್ಛೆಯು, ಪ್ರಯತ್ನವು ಎಂಬಿವುಗಳಿಗೆ ಆಧಿಕರಣ (ಆಶ್ರಯ) ನಾದವನು ಈಶ್ವರನು. ಈಶ್ವರತ್ವವೆಂಬುದೇ ಪರಮಾತ್ಮನ ಲಕ್ಷಣವು. ‘ಯಾವನು ಸರ್ವಜ್ಞನಾಗಿ ಒಬ್ಬನೇ ಇರುತ್ತಿರುವನೋ ಅವನೇ ನಮ್ಮ ಈಶ್ವರನು’ ಎಂದು ನ್ಯಾಯಮಂಜರಿಯಲ್ಲಿ ಹೇಳಲ್ಪಟ್ಟಿದೆ. ಲೋಗಾಕ್ಷಿಭಾಸ್ಕರಕೃತ ನ್ಯಾಯ ಗ್ರಂಥದಲ್ಲಿ— **‘ ಶರೀರನಿರಪೇಕ್ಷಜ್ಞಾನವಾನೀಶ್ವರಃ ’** ಶರೀರದ ಅಪೇಕ್ಷೆಯಿಲ್ಲದೆ ಜ್ಞಾನವುಳ್ಳವನಾಗಿರುವವನು ಈಶ್ವರನು ಎಂದು ಹೇಳಲ್ಪಟ್ಟಿರುವುದು.

ವೈಶೇಷಿಕರು—

**ಕ್ಷಿತ್ಯಂಕುರಾದಿಕಂ ಕಾರ್ಯಂ ಸ್ವರ್ಗಾಪೂರ್ವಾದಿನಾಮು ಚ ।**
**ಲಿಙ್ಗಮೀಶ್ವರಸದ್ಭಾವೇ ಕಾಣಾದಾಃ ಸಂಪ್ರಚಕ್ಷಿರೇ ॥**

ಕ್ಷಿತ್ಯಂಕುರಾದಿಕಾರ್ಯವೂ ಸ್ವರ್ಗ, ಅಪೂರ್ವ ಮೊದಲಾದ ನಾಮುಗಳೂ ಈಶ್ವರನ ಆಸ್ತಿತ್ವ ವಿಷಯದಲ್ಲಿ ಪ್ರಮಾಣವಾಗಿರುವುವೆಂದು ಕಾಣಾದರು ಹೇಳುತ್ತಾರೆ.

ಯೋಗದರ್ಶನಕಾರರು :— '**ಕ್ಲೇಶಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷವಿಶೇಷ ಈಶ್ವರಃ**' ( ಯೋ. ದ. ೧–೧೪ ) ಅವಿದ್ಯಾದಿಕ್ಲೇಶಗಳೂ ಪುಣ್ಯಪಾಪಾದಿ ಕರ್ಮಗಳೂ ಸುಖದುಃಖಾದಿಫಲಗಳೂ ವಾಸನೆಯೂ ಎಂಬಿವುಗಳಿಂದ ಮೂರು ಕಾಲದಲ್ಲಿಯೂ ಅಸಂಸ್ಪೃಷ್ಟನಾದೋರ್ವ ಪುರುಷನೇ ಈಶ್ವರನೆಂದು ನಿರೂಪಿಸುವರು.

ಮಾಯಾವಾದಿಗಳು :— **ಮಾಯಾವಿಶಿಷ್ಟಂ ಕಿಂವಾ ಮಾಯಾಪ್ರತಿಬಿಂಬಿತಂ ಚೈತನ್ಯಮೀಶ್ವರಃ**'— ಮಾಯೆಯೆಂಬ ವಿಶೇಷಣ ವಿಶಿಷ್ಟವಾದ ಅಥವಾ ಮಾಯೆಯಲ್ಲಿ ಪ್ರತಿಬಿಂಬಿತ ಚೈತನ್ಯವೇ ಈಶ್ವರನು. ಈ ಮಾಯಾವಾದಿಗಳಲ್ಲಿಯೂ ಅಂದರೆ ಬ್ರಹ್ಮವ್ಯತಿರಿಕ್ತವಾಗಿ ಮಿಕ್ಕುದೆಲ್ಲವು ಮಿಥ್ಯೆಯೆಂದು ಹೇಳುವ ಕೇವಲಾದ್ವೈತಿಗಳಲ್ಲಿಯೂ, ವಿವರಣಕಾರರು ಮೊದಲಾದವರ ರುಚಿವೈಚಿತ್ರ್ಯಗಳಿವೆ.

ಕೇವಲಾದ್ವೈತಿಗಳ ಮುಖಂಡರಾದ ಶಂಕರಾಚಾರ್ಯರು ಶಾರೀರಕ ಭಾಷ್ಯದಲ್ಲಿ ಈಶ್ವರನ ಸ್ವರೂಪ ವಿಷಯವಾಗಿ ಹೇಳಿದುವನ್ನು ನಾವಿಲ್ಲಿ ಅನುವಾದಿಸುತ್ತೇವೆ :—

'ಅವಿದ್ಯೆಯಿಂದ ಮಾಡಲ್ಪಟ್ಟ ನಾಮರೂಪಗಳೆಂಬ ಉಪಾಧಿಗಳನ್ನನುಸರಿಸಿ ಈಶ್ವರನಿರುವನು. ಹೀಗೆ ಈಶ್ವರನ ಈಶ್ವರತ್ವ. ಸರ್ವಜ್ಞತ್ವ, ಸರ್ವಶಕ್ತಿತ್ವವೆಂಬಿವು ಅವಿದ್ಯಾತ್ಮಕೋಪಾಧಿಯಿಂದುಂಟಾದ ಪರಿಚ್ಛೇದವನ್ನವಲಂಬಿಸಿಯೇ ಇರುತ್ತವೆ. ವಸ್ತುತಃ ಇರುವುದಿಲ್ಲ. ' ( ಬ್ರ. ಸೂ. ಶಾ. ಭಾ. ೨—೧—೧೪ ) ಈ ರೀತಿಯಾಗಿ ಬ್ರಹ್ಮವೆಂಬ ಹೆಸರುಳ್ಳ ದೇವರೊಬ್ಬನೇ ಈಶ್ವರನೆನಿಸುವನೆಂದು ಅವರ ಅಭಿಪ್ರಾಯವು.

ಪೂರ್ವಮೀಮಾಂಸಕರೂ ಸಾಂಖ್ಯರೂ ದೇವರೇ ಇಲ್ಲವೆಂದು ಹೇಳುತ್ತಿರುವರಂತೆ! ಇದು ನಿಜವೋ ? ಎಂದರೆ, ಪೂರ್ವಮೀಮಾಂಸಾಶಾಸ್ತ್ರವು ಕೇವಲ ಕರ್ಮಕಾಂಡಕ್ಕೆ ಪ್ರಾಧಾನ್ಯತೆಯನ್ನು ಪ್ರತಿಪಾದಿಸುವಮಾತ್ರದಿಂದೇ ಅದು ಅನೀಶ್ವರ ಮತಬೋಧಕವೆನಿಸಲಾರದು. ಪೂರ್ವಮೀಮಾಂಸಾಶಾಸ್ತ್ರಪ್ರವರ್ತಕರಲ್ಲಿ ಮುಖಂಡರಾದ ಕುಮಾರಿಲ ಭಟ್ಟರು ಅನೀಶ್ವರವಾದಿಗಳಾಗಿದ್ದಲ್ಲಿ ಅವರನ್ನು ಆಸ್ತಿಕಶಿರೋಮಣಿಗಳಾದ ಶಂಕರಾಚಾರ್ಯರೇ ಮೊದಲಾದವರು ಪೂಜ್ಯಭಾವನೆಯಿಂದ ಸ್ತುತಿಸುತ್ತಿದ್ದರೆ ? ಬೌದ್ಧವಿದ್ವಾಂಸನ ಬಳಿಯಲ್ಲಿ ಛದ್ಮವೇಷದಿಂದ ತಾನು ಅಧ್ಯಯನ ಮಾಡಿದುದರ ದೋಷಪರಿಮಾರ್ಜನಕ್ಕೋಸುಗ ಕುಮಾರಿಲ

ಭಟ್ಟರು ತಮ್ಮ ದೇಹವನ್ನು ಚಿತೆಯಲ್ಲಿರಿಸಿ ಸುಟ್ಟರಲ್ಲವೇ ? ಮರಣಕ್ಕಿಂತ ಮುಂಚೆ ಶಂಕರಾಚಾರ್ಯರೊಡನೆ ಕುಮಾರಿಲಭಟ್ಟರ ಸಂಭಾಷಣವು ಜರುಗಿತೆಂಬ ಸಂಗತಿಯು ಶಂಕರದಿಗ್ವಿಜಯದಲ್ಲಿ ಹೇಳಲ್ಪಟ್ಟಿದೆ. ಆಗ ಶಂಕರಾಚಾರ್ಯರು ಕುಮಾರಿಲಭಟ್ಟರನ್ನು ಕುರಿತು :—

**' ಶ್ರುತ್ಯರ್ಥಧರ್ಮವಿಮುಖಾನ್ ಸುಗತಾನ್ನಿಹಸ್ತುಂ ಜಾತಂ ಗುಹಂ ಭುವಿ ಭವನ್ತಮಹಂ ನು ಜಾನೇ '** ಎಂದು ಸ್ತುತಿಸುವಲ್ಲಿ, ಕುಮಾರಿಲಭಟ್ಟರು ಸ್ಕಂದನೆಂಬ ಗಣವರನ ಅವತಾರವೆಂದು ಸೂಚಿಸಿರುವುದನ್ನು ನೋಡಿದರೆ, ಪೂರ್ವಮೀಮಾಂಸಾಪ್ರವರ್ತಕರು ಸೇಶ್ವರವಾದಿಗಳೆಂದೇ ಸಿದ್ಧವಾಗುವದು.

ಹಾಗೂ ಕರ್ದಮಪುತ್ರನಾದ ಕಪಿಲನು ತನ್ನ ತಾಯಿಯಾದ ದೇವಹೂತಿಗೆ ಹೇಳಿದ ಸಾಂಖ್ಯಶಾಸ್ತ್ರವು ವೈದಿಕಸಾಂಖ್ಯವು. ಈಗ ಉಪಲಬ್ಧವಾಗುವ ಸಾಂಖ್ಯದರ್ಶನವು ವೈದಿಕಸಾಂಖ್ಯಕ್ಕಿಂತ ಭಿನ್ನವಾದದು. ಪ್ರಕೃತಿ, ಮಹತ್ತು, ಅಹಂಕಾರ, ಪಂಚತನ್ಮಾತ್ರವೆಂಬೀ ಮುಂತಾದವುಗಳ ನಾಮಸಾದೃಶ್ಯದ ಮೇಲಿಂದ ಆಧುನಿಕರಾದನೇಕರು ವೈದಿಕಸಾಂಖ್ಯವೂ ಸಾಂಖ್ಯದರ್ಶನವೂ ಒಂದೇ ಎಂದು ತಿಳಿಯುತ್ತಾರೆ; ಆದರೆ ಅದು ಸರಿಯಲ್ಲ. ಶೈವಾಗಮಗಳಲ್ಲಿಯೂ ಶ್ವೇತಾಶ್ವೇತರಾದ್ಯುಪನಿಷತ್ತುಗಳಲ್ಲಿಯೂ ಸಿದ್ಧಾಂತಶಿಖಾಮಣಿಯಲ್ಲಿಯೂ ಗೀತೆಯಲ್ಲಿಯೂ ವೈದಿಕಸಾಂಖ್ಯವೇ ಉಲ್ಲೇಖಿಸಲ್ಪಟ್ಟಿದೆ. ಆದ್ದರಿಂದ ಸಾಂಖ್ಯಮತವು ಸೇಶ್ವರ ಮತ್ತು ನಿರೀಶ್ವರವೆಂಬುದಾಗಿ ಎರಡು ಪ್ರಕಾರವಿರುವುದೆಂದು ವಿವೇಕವು.

ಇನ್ನು ಶಿವಾದ್ವೈತಮತದಲ್ಲಿ ಅಭಿಮತನಾದ ದೇವರ ಸ್ವರೂಪವನ್ನು ಸಂಕ್ಷೇಪವಾಗಿ ಹೇಳಲ್ಪಡುವ ಬಗೆಯು ಹೀಗಿದೆ—

ಈ ಧರೆಮೊದಲಾಗಿ ಮೂಲಬಿಂದುವೇ ( ಪರಾಶಕ್ತಿಯೇ ) ಕಡೆಯಾದ ಜಡಾಜಡಾತ್ಮಕವಿಶ್ವಪ್ರಪಂಚರೂಪವೃಕ್ಷದ ಮೂಲವೇ ದೇವರು. ಆ ದೇವರೇ ಶಿವ, ಲಿಂಗ, ಸ್ಥಲ, ಎಂಬೀ ಮುಂತಾದ ಹೆಸರುಗಳಿಂದ ಹೊಗಳಲ್ಪಡುತ್ತಾನೆ.

ರೇಣುಕ ಭಗವತ್ಪಾದರು :—

**ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ |**
**ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ||**

ಪ್ರಮಾತೃ, ಪ್ರಮಾಣ, ಪ್ರಮೇಯಗಳೆಂಬ ಪತ್ರಶಾಖಾದಿರೂಪದಿಂದೊಪ್ಪುವ ಈ ವಿಶ್ವಪ್ರಪಂಚವೆಂಬ ಮರದ ಬುಡವೇ ದೇವರು, ಅವನೇ ಶಿವನು, ಆ ಒಬ್ಬ ಶಿವನೇ ತ್ರಿಕಾಲಾಬಾಧಿತನಾಗಿರುವನು, ಎಂಬುದಾಗಿ ಅಗಸ್ತ್ಯಮುನಿಗುಪದೇಶಿಸಿದ್ದಾರೆ.

ಹೀಗೆ ಅಂತಪ್ಪ ಶಿವನೇ ತನ್ನ ವಿನೋದಕ್ಕಾಗಿ (ಶಿವಾದಿಭೂಮ್ಯಂತಗಳಾದ) ಮೂವತ್ತಾರು ತತ್ತ್ವಾತ್ಮಕನಾಗಿರುವುದರಿಂದ 'ತತ್ತ್ವ' ಶಬ್ದದ ಮುಖ್ಯಾರ್ಥರೂಪನಾಗಿದ್ದಾನೆ. ಆದುಕಾರಣವೇ ಆ ಶಿವನು '**ಪರತತ್ತ್ವಾಯ ತತ್ತ್ವಾನಾಂ ತತ್ತ್ವಭೂತಾಯ ವಸ್ತುತಃ**' ಎಂಬ ವಾಕ್ಯಗಳಿಂದ 'ಪರತತ್ತ್ವನೆಂದು ಹೊಗಳಲ್ಪಡುತ್ತಾನೆ. ಪರತತ್ತ್ವಭೂತನಾದ ಶಿವನೇ ಕಾರ್ಯಕಾರಣಾತ್ಮಕಗಳಾದ ಮೂವತ್ತಾರು ತತ್ತ್ವರೂಪನಾಗಿ ಪರಿಣಮಿಸುವಲ್ಲಿ ಮೊದಲು ಅಂಕುರಿಸಲ್ಪಟ್ಟ ವಿಶ್ವಪ್ರಪಂಚವನ್ನು 'ಅಹಮಿದಮ್' ಎಂಬ ಸ್ವಶಕ್ತಿಸ್ಫುರಣದಿಂದಾಚ್ಛಾದಿತನಾಗಿರುವಿಕೆಯೇ 'ಈಶ್ವರನು' ಎಂದು ಹೇಳಿಸಿಕೊಳ್ಳಲ್ಪಡುವನು. ಈ ಈಶ್ವರತತ್ತ್ವವು ಶಿವಾಭೂಮ್ಯಂತಗಳಾದ ಮೂವತ್ತಾರು ತತ್ತ್ವಗಳಲ್ಲಿ ನಾಲ್ಕನೆಯದೆನಿಸುವುದು.

ಒಟ್ಟಿನಲ್ಲಿ, ಶಿವಾದ್ವೈತಮತದಲ್ಲಿ :—

**ಸರ್ವಜ್ಞಃ ಸರ್ವಕರ್ತೃತ್ವಾತ್ಸಾಧನಾಙ್ಗಫಲೈಃ ಸಹ ।**
**ಯೋ ಯಜ್ಜಾನಾತಿ ಕುರುತೇ ಸ ತದೇವೇತಿ ಸುಸ್ಥಿತಮ್ ॥೧೪॥**

ಎಂಬ ಮೃಗೇಂದ್ರಾದ್ಯಾಗಮವಚನಾನುಸಾರವಾಗಿ, ಸರ್ವಜ್ಞತ್ವ ಸರ್ವಕರ್ತೃತ್ವರೂಪ ಶಕ್ತಿದ್ವಯೋಪೇತನಾದವನೇ ಪರಮೇಶ್ವರನೆಂಬಭಿಪ್ರಾಯವಿರುವುದು. ಆ ಪರಮೇಶ್ವರನು ಪ್ರಾಚೀನ ಮಹರ್ಷಿಗಳಿಂದ (ಋ ೧೦—೯೨—೯) ಶಿವನು ಎಂಬ ನಾಮದಿಂದ ಸ್ತುತಿಸಲ್ಪಡುವನಾದ್ದರಿಂದ ಶಿವಾದ್ವೈತಿಗಳಾದರೂ ಅವನನ್ನು ಶಿವನೆಂಬಭಿಧಾನದಿಂದಲೇ ಹೊಗಳುವರು. ಗುಣಮೂರ್ತಿಗಳೆಂದು ಪ್ರಸಿದ್ಧರಾದ ಬ್ರಹ್ಮ ವಿಷ್ಣು ರುದ್ರರಿಗಿಂತಲೂ ಅಧಿಕವಾದ ಈಶ್ವರ ಸದಾಶಿವ ತತ್ತ್ವಗಳಿಗೂ ಕೂಡ ಅಧಿಷ್ಠಾನಭೂತವಾದ ಆ ಪರಶಿವಚೈತನ್ಯವು ಈ ಮೇಲೆ ನಿರ್ದೇಶಿಸಲ್ಪಟ್ಟ ಮೇರೆಗೆ ಶಕ್ತಿಯುಕ್ತವಾದುದರಿಂದ ಅದನ್ನು 'ಶಕ್ತಿವಿಶಿಷ್ಟ ಬ್ರಹ್ಮ' ವೆಂದೂ ಭಜಿಸುವರು. ಈ ರೀತಿಯಾಗಿ ಶಿವಾದ್ವೈತಿಗಳಿಗಭಿಮತನಾದ ದೇವರು ಶಕ್ತಿವಿಶಿಷ್ಟನೆಂಬಲ್ಲಿ ವೇದವೇ ಮುಖ್ಯ ಪ್ರಮಾಣವಾಗಿರುವುದು.

ಋಗ್ವೇದಾಂತರ್ಗತವಾದ ಹತ್ತನೆಯ ಮಂಡಲದ ನಾಸದೀಯ (೧೨೯ನೆಯ) ಸೂಕ್ತದಲ್ಲಿ—

ನ ಮೃತ್ಯುರಾಸೀದಮೃತಂ ನ ತರ್ಹಿ
ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ
ತಸ್ಮಾದ್ಧಾನ್ಯನ್ನ ಪರಂಃ ಕಿಂಚನಾಸ ॥ ೨ ॥

ಸೃಷ್ಟಿಯ ಮೂಲಾರಂಭದಲ್ಲಿ ಮೃತ್ಯು-ಅಂದರೆ ಮೃತ್ಯುಗ್ರಸ್ತವೂ ನಾಶವಂತವೂ ಆದ ಸೃಷ್ಟಿಯಿದ್ದಿಲ್ಲ; ಅಮೃತ ಅಂದರೆ ಅವಿನಾಶಿಯಾದ ನಿತ್ಯ ಪದಾರ್ಥ ( ಶೈವಪ್ರಪಂಚ ) ವೂ ಇದ್ದಿಲ್ಲ; ರಾತ್ರಿ ಹಗಲುಗಳ ಭೇಧವನ್ನರಿಯುವ ಸಾಧನವೂ ಇದ್ದಿಲ್ಲ; ಇದ್ದದ್ದೆಲ್ಲ ಒಂದೇ ಒಂದಾಗಿತ್ತು. ಅದು (ಆ ಪರಮಶಿವಚೈತನ್ಯವು ಸ್ವಧೆಯಿಂದ ಅಂದರೆ ತನ್ನ ಶಕ್ತಿಯಿಂದ ಸ್ಫುರಿಸುತ್ತಿತ್ತು; ಅದರ ಹೊರತು ಅಥವಾ ಅದರಾಚೆಗೆ ಅನ್ಯದಾವುದೂ ಇದ್ದಿಲ್ಲ.

ಎಂದು ಹೇಳಲ್ಪಟ್ಟಿದೆ. ಈ ಮೇಲಿನ ಮಂತ್ರದಲ್ಲಿ ಬೀಜಭೂತವಾಗಿರುವ ಚಿಚ್ಛಕ್ತಿ ವಿಶಿಷ್ಟ ಬ್ರಹ್ಮಸ್ವರೂಪದ ವಿವೇಕವೇ ಶಿವಾದ್ವೈತ ಮತದ ಮೂಲವು. ಇಂತಹ ತಾತ್ತ್ವಿಕಜ್ಞಾನರೂಪ ರತ್ನಗಳು 'ವೇದ' ವೆಂಬ ಸಾಗರದಲ್ಲಿ ವಿಪುಲವಾಗಿ ವಿರಾಜಿಸುತ್ತಿವೆ. ಅವನ್ನು ಲೋಕದಲ್ಲಿ ಮೊದಲು ಪ್ರಕಾಶಪಡಿಸಿದ ಪುರಾತನ ಮಹರ್ಷಿಗಳಲ್ಲಿ ರೇಣುಕ, ದಾರುಕ, ಶಂಕುಕರ್ಣ ಮುಂತಾದ ಕೆಲವು ಪುರಾತನರೂ ಗಣ್ಯರಾಗಿರುವರು. ಅದು ಕಾರಣವೇ ಆ ಪ್ರಾಚೀನರ ವಾಕ್ಯಗಳನ್ನು ಮೂಲಾಧಾರವಾಗಿಟ್ಟುಕೊಂಡು ರಚಿಸಲ್ಪಟ್ಟ ಪರಂಪರಾನುಗತವಾದ ಶಿವಾದ್ವೈತ ಮತ ಪ್ರವರ್ತಕ ಗ್ರಂಥ ರಾಶಿಯಲ್ಲಿ ಅವರನ್ನೇ ಪ್ರಾಧಾನ್ಯವಾಗಿ ಸ್ತುತಿಸಿರುವುದು ಅಸಮಂಜಸವಾದುದಲ್ಲ. ಹಾಗು ಆ ಪುರಾತನರ ಅಸ್ತಿತ್ವದ ಬಗ್ಗೆಯೂ ಸಂಶಯಕ್ಕಾಸ್ಪದವಿಲ್ಲ. ಈ ಮೇಲೆ ನಿರ್ದೇಶಿಸಲ್ಪಟ್ಟವರಲ್ಲಿ ಮೊದಲಿಗನ ಪ್ರಾಚೀನಾಸ್ತಿತ್ವದ ವಿಷಯಕ ವಿಚಾರವನ್ನು ಕುರಿತು ಪ್ರಾಮಾಣಿಕವಚನಗಳನ್ನು ಆರ್ಯರ ಪ್ರಾಚೀನ ವಾಙ್ಮಯದಲ್ಲಿ ಹುಡುಕಿ ಕಂಡುಕೊಳ್ಳಬೇಕಾಗಿರುವಂತೆ ಮಿಕ್ಕವರ ವಿಷಯದಲ್ಲಿಯೂ ಅದೇ ಮಾರ್ಗವು. ಈಗ ಉಪಲಬ್ಧವಿರುವ ಪ್ರಾಚೀನವೈದಿಕ ವಾಙ್ಮಯದಲ್ಲಿಯಾದರೋ ಮಧ್ಯಕಾಲೀನರಾದ ಮತದುರಭಿಮಾನವುಳ್ಳ ಕೆಲವರು ಸ್ವಹಸ್ತಕ್ಷೇಪ

ಮೂಲಕ ಎಷ್ಟೋ ಮೂಲಭೂತ ವಿಷಯಗಳನ್ನು ವಿಪರ್ಯಾಸಗೊಳಿಸಿ ರುವರೆಂಬುದಾಗಿ ಅವುತ್ಸರ ಮತಿಗಳು ಹೇಳುವುದು ಸುಳ್ಳಲ್ಲ; ಆದರೆ ಆ ಮೂಲ ಗ್ರಂಥಗಳಲ್ಲಿರುವ ಪಾರಮಾರ್ಥಿಕ ವಿಷಯಗಳನ್ನು ತಿಲ ಮಾತ್ರವೂ ವ್ಯತ್ಯಾಸಪಡಿಸದೆ ಯಥಾ ವತ್ತಾಗಿ ಅನುವಾದಿಸುವವರಾದ ಪ್ರಾಮಾಣಿಕರ ವಚನಗಳಿಂದ ಆ ಆ ವಿಷಯಗಳು ಆ ಆ ಮೂಲ ಗ್ರಂಥಸ್ಥವಾದವುಗಳೇ ಎಂದು ವಿಶ್ವಾಸವನ್ನಿಡುವುದು ಅನುಚಿತವಲ್ಲ. ಮಹಾಭಾರತದವನಪರ್ವದಲ್ಲಿ ಮೊದಲು ಪುಲಸ್ತ್ಯನಿಂದ ಭೀಷ್ಮನಿಗು ಪದಿಷ್ಟವಾದ ತೀರ್ಥಗಳ ಮಹಾತ್ಮ್ಯವನ್ನೇ ನಾರದನು ಯುಧಿಷ್ಠಿರನಿಗೆ ಬೋಧಿಸುವ ಪ್ರಸಂಗದಲ್ಲಿ ಅಗಸ್ತ್ಯಾದಿಸರೋವರಗಳ ಪ್ರಾಶಸ್ತ್ಯದ ನಿರ್ದೇಶದೊಡನೆ ರೇಣುಕ ಸರೋವರದ ಮಹಾತ್ಮ್ಯವನ್ನೂ ಬಣ್ಣಿಸಿದ್ದಾನೆ. ಅಗಸ್ತ್ಯ, ಕಣ್ವ ಮುಂತಾದವರ ಹೆಸರುಗಳಿಂದ ಸುಪ್ರಸಿದ್ಧವಾಗಿರ ತಕ್ಕ ಸರೋವರಗಳಾಗಲಿ, ಆಶ್ರಮಗಳಾಗಲಿ ಅವರವರ ಪ್ರಾಗ್ಭಾವ ಸೂಚಕಗಳಾಗಿರುವಂತೆ ಮಹಾಭಾರತಾಂತರ್ಗತವಾದ ಸರ್ವ ವಿಷ ಯಗಳ ವಸ್ತುಸ್ಥಿತಿಯನ್ನೂ ಸ್ವಲ್ಪವಾದರೂ ವ್ಯತ್ಯಾಸವಿಲ್ಲದಂತೆ ಸಂಕ್ಷೇ ಪವಾಗಿ ಪ್ರತಿಪಾದಿಸಲುದ್ಯುಕ್ತನಾದ ೧೦ ನೇಯ ಶತಮಾನದ ಮಧ್ಯದಲ್ಲಿ ಬೆಳಕಿಗೆ ಬಂದ ಕಾಶ್ಮೀರಕ ಮಹಾಕವಿ ಶ್ರೀ ಕ್ಷೇಮೇಂದ್ರನು 'ಭಾರತ ಮಂಜರಿ' ಯಲ್ಲಿ ಈ ಮೇಲೆ ಸೂಚಿಸಿದಂತೆ ವನಪರ್ವದಲ್ಲಿ ಹೇಳಲ್ಪ ಡುವ ಅನೇಕ ತೀರ್ಥಗಳನ್ನು ಅನುಕ್ರಮವಾಗಿ ವರ್ಣಿಸುವಾಗ 'ಅಗಸ್ತ್ಯಂ ಚ ಸರಃ ಪುಣ್ಯಂ' ಎಂದು ಉಲ್ಲೇಖಿಸಿರುವ ಹಾಗೇ 'ಬ್ರಹ್ಮ ತುಂಗಂ ಸಕೌಮಾರಂ, ರೇಣುಕಂ ಚ ಸರೋವರಮ್' ಎಂಬುದಾಗಿ ರೇಣುಕ ಸರೋವರದ ವೈಶಿಷ್ಟ್ಯವನ್ನು ವ್ಯಕ್ತಪಡಿಸಿರುವನು. ಈ ವಾಕ್ಯದಿಂದ ರೇಣುಕನ ಅಸ್ತಿತ್ವವು ಅಗಸ್ತ್ಯನ ಸಮಕಾಲೀನವಾದುದೆಂದು ಊಹಿಸಲ ವಕಾಶವಿರುವುದಷ್ಟೇ ! ಈ ಊಹೆಯನ್ನು 'ಸಿದ್ಧಾಂತಶಿಖಾಮಣಿ' ಎಂಬ ಶಿವಾದ್ವೈತಮತಪ್ರಚಾರಕಗ್ರಂಥದಿಂದ ದೃಢಪಡಿಸಿಕೊಳ್ಳಲೂ ಅಭ್ಯಂತರ ವಿಲ್ಲ. ಆದಕಾರಣ ಶಿವಾದ್ವೈತಪ್ರವರ್ತಕರಾದ ಪುರಾತನರಲ್ಲಿ ರೇಣುಕ ನೆಂಬ ಮಹಾತ್ಮನೂ ಗಣ್ಯನಾಗಿರುವನೆಂದು ಈ ಹಿಂದೆ ನಾವು ಬರೆದುದು ಅನುಪಪನ್ನವಲ್ಲ.

ಪ್ರಕೃತ ವಿಷಯದ ಪ್ರತಿಪಾದನಾನುಗುಣವಾಗಿ ವೇದ ಮಂತ್ರ ನಿಷ್ಪನ್ನವಾದ ಶಕ್ತಿ ವಿಶಿಷ್ಟ ಬ್ರಹ್ಮದ ಅಸ್ತಿತ್ವ ವಿಚಾರವನ್ನು ವಿಶದೀಕರಿ ಸುವುದಕ್ಕಾಗಿಯೇ ಆ ಮಂತ್ರಾರ್ಥಾನುಕೂಲಗಳಾದ ಕೆಲವು ಯುಕ್ತಿ ದೃಷ್ಟಾಂತೋಪೇತವಾಕ್ಯಗಳನ್ನು ಉಲ್ಲೇಖಿಸುತ್ತೇವೆ.

ವಿಶ್ವದಲ್ಲಿ ಮಾನವನ ಕೃತಿಗೆ ಬಾಹ್ಯವಾದ ರಚನೆಗಳು ಬಹಳ ವಾಗಿವೆ. ಆ ರಚನೆಗಳಲ್ಲಿ ಮನುಷ್ಯನ ಅಧಿಕಾರವಿರುವುದಿಲ್ಲ. ಮನುಷ್ಯನು ಅವುಗಳನ್ನು ನಿರ್ಮಿಸಲು ಸಮರ್ಥನಾಗಲಾರನು. ಮನುಷ್ಯನಿಂದ ಯಾವ ವಸ್ತುಗಳು ಮಾಡಲ್ಪಡಲು ಅಸದಳವಾಗಿವೆಯೋ ಅವನ್ನು ತನ್ನವೆಂದು ಹೇಳುವ ಅಧಿಕಾರವು ಅವನಿಗಿರುವುದಿಲ್ಲ. ಮಾಡಲ್ಪಟ್ಟಿರುವ ಮೂಲ ವಸ್ತುಗಳನ್ನೇ ಪರಿಪರಿಯಿಂದ್ನಾರದಿಂದ ಬದಲಾವಣೆಗೊಳಿಸಿ ಹೊಸದಾದ ರೂಪವನ್ನೂ ನಾಮವನ್ನೂ ಕಲ್ಪಿಸುವದರಲ್ಲಿ ನರನ ಜಾಣತನದ ಎಲ್ಲೆಯು, ಹಿಂದುಸ್ಥಾನಕ್ಕೆ ಬರುವ ಸರಕು 'ವಿಲಾಯತಿಯ ಮಾಲು' ಎನಿಸಿದರೂ ಕಚ್ಚಾಮಾಲು ಹೋಗಿ ಪಕ್ಕಾ ಆಗಿಬರುವುದು. ಯಾವ ವಸ್ತುಗಳಿಗೆ ಅವರು ಹೊಸ ರೂಪವನ್ನುಂಟುಮಾಡುವರೋ ಅವುಗಳ ಮೂಲ ಸ್ವರೂಪವನ್ನು ಅವರು ಮಾಡಲಾರರು. ಮನುಷ್ಯರು ರೂಪಾಂತರ ಕರ್ತರು, ಆದರೆ ವಿಶ್ವದಲ್ಲಿ ವಿಷ್ಟೋ ರೂಪಾಂತರಗಳಿರುತ್ತವೆ. ಅವೆಲ್ಲವೂ ಮನುಷ್ಯರಿಂದೇ ಮಾಡಲ್ಪಟ್ಟವೆಂದು ಹೇಳಲಾಗುವುದೇ ? ಮನುಷ್ಯರಿಂದ ರೂಪಾಂತರಗೊಳಿಸಲ್ಪಡುತ್ತಿರುವುದರ ಕ್ಷೇತ್ರವಾದರೂ ಅಲ್ಪಪ್ರಮಾಣದಿಂದಿರುವುದು, ಮನುಷ್ಯರ ಈ ರೂಪಾಂತರದ ಕ್ಷೇತ್ರಕ್ಕಿಂತ ಭಿನ್ನವಾದುದರ ಕ್ಷೇತ್ರವು ಬಹಳ ಅಧಿಕವಾಗಿದೆ. ಮನುಷ್ಯರು ಯಾವ ರೂಪಾಂತರವನ್ನು ಮಾಡಲಾರರೋ ಆ ರೂಪಾಂತರದ ರೂಪಾಂತರವಾಗುವುದರಲ್ಲಿಯೂ ಸಂದೇಹವೇ ಇಲ್ಲ: ಹಾಗಾದರೆ ಆ ರೂಪಾಂತರವು ಯಾವನಿಂದ ಮಾಡಲ್ಪಡುವುದು ? ಅವು ಹೇಗೆ ಆಗುವುವು ? ಅದಕ್ಕೆ ಕಾರಣವಾವುದು ? ಎಂಬ ಪ್ರಶ್ನಗಳು ತಲೆದೋರುತ್ತವೆ.

ರೂಪಾಂತರವಾಗಲು ಶಕ್ತಿಯು ಬೇಕಲ್ಲವೇ ? ಅದಿಲ್ಲದೆ ರೂಪಾಂತರವು ಸಂಭವಿಸದು ವಿಶ್ವದ ಸೂಕ್ಷ್ಮಾವಯವಗಳಲ್ಲಿ ಯಾವ ಉಚ್ಚತಮವಾದ ಶಕ್ತಿಯುಂಟೋ ಅದು ಸೂಕ್ಷ್ಮದರ್ಶಕ ಯಂತ್ರಸಾಧನೆಯಿಂದ ಗೋಚರವಾಗುತ್ತಿರುವುದೆಂದು ಹೇಳಬಹುದಾದರೂ ಅತೀವ ಸೂಕ್ಷ್ಮವಾದ ಶಕ್ತಿಯು ಅದಕ್ಕಿಂತಲೂ ಆಚೆಗಿರುವುದೆಂದು ಪದಾರ್ಥವಿಜ್ಞಾನ ಕುಶಲರೇ ಮುಕ್ತಕಂಠದಿಂದುದ್ಘೋಷಿಸುತ್ತಿರುವರು. ಆ ಅತ್ಯಂತ ಸೂಕ್ಷ್ಮ ಶಕ್ತಿಯು ರೂಪಾಂತರವಾಗುತ್ತಿರುವುದರ ಪರಿಯನ್ನು ಈಗಣ ಕಾಲದಲ್ಲಿ ಸಹ ಯಾವನು ತಾನೇ ಅರಿಯ ಬಲ್ಲನು ? ರೂಪಾಂತರವು ತನ್ನ ಕ್ರಮಿಕ ಧಾರೆಯ ಆಧಾರದ ಮೇಲೆಯೇ ಸ್ಥೂಲ ಪದಾರ್ಥಗ

ಳಲ್ಲಿ ದೃಷ್ಟಿಗೋಚರವಾಗುತ್ತಿರುವವಲ್ಲವೇ ? ರೂಪಾಂತರವು ಅಂದರೆ ವಿಭಿನ್ನಾವಯುವಸಂಸ್ಥೆಯು.

ರೂಪಾಂತರವಾಗಲು ಕೇವಲ ಶಕ್ತಿಯು ಆವಶ್ಯಕತೆಯೇ ಪ್ರಾಧಾನ್ಯವಾದುದಾದರೂ ಆ ಶಕ್ತಿಯು ಯಾವ ದ್ರವ್ಯದಲ್ಲಿ ಕಾರ್ಯವನ್ನುಂಟು ಮಾಡಲು ಯೋಗ್ಯವಾಗಿರುವುದೋ ಆ ದ್ರವ್ಯವೂ ಅವಶ್ಯವಾದುದು. ದ್ರವ್ಯವೂ ಶಕ್ತಿಯೂ ಎಂಬಿವೆರಡರ ಪರಸ್ಪರ ತಾದಾತ್ಮ್ಯ ಸಂಬಂಧವಿಲ್ಲದೆ ಯಾವುದರ ರಚನೆಯೂ ಸಂಘಟಿಸದು. ಯಾವ ರಚನೆಯಾದರೂ ಅದೊಂದು ವಿಶೇಷ ರೂಪವು. ಆ ರಚನೆಯು ಘಟಕಾವಯುವಗಳಲ್ಲಿ ಅಥವಾ ದ್ರವ್ಯದಲ್ಲಿ ಅವಯುವ ಸಂಸ್ಥಾನವು ಯಾವಾಗ ಬದಲಾಯಿಸುವುದೋ ಆಗಳೇ ರೂಪಾಂತರವು ಉಪಸ್ಥಿತವಾಗುವುದು. ಹೀಗೆ ಯಾವ ರೂಪಾಂತರವಾದರೂ ಶಕ್ತಿಯೂ ದ್ರವ್ಯವೂ ಎಂಬಿವೆರಡರ ಸಂಬಂಧದ ಪರಿಣಾಮವಾಗಿದೆ. ವಿಶ್ವರಚನೆಯ ಒಂದೊಂದು ರೂಪವು ಶಕ್ತಿ ದ್ರವ್ಯಗಳನ್ನೂ ಅವೆರಡರ ಸಂಬಂಧವನ್ನೂ ಪ್ರತಿ ಕ್ಷಣದಲ್ಲಿ ನಿರ್ದೇಶಮಾಡುತ್ತಿರುವುದು. ಆ ಶಕ್ತಿ ದ್ರವ್ಯಗಳಲ್ಲಿ ಒಂದಾದರೂ ನಿಮಿಷ ಮಾತ್ರ ಇಲ್ಲವಾದರೆ ಹಾಗೂ ಅವೆರಡರ ಪಾರಸ್ಪರಿಕ ಸಂಬಂಧವಿಚ್ಛೇದವು ಒಂದು ಕ್ಷಣವಾದರೂ ಸಂಬಂಧಿಸಿದರೆ ಆ ಕೂಡಲೇ ವಿಶ್ವದ ಅಳಿವು. ದ್ರವ್ಯವಾಗಲಿ ಅದರ ಶಕ್ತಿಯಾಗಲಿ ವಿಶ್ವವನ್ನು ತೊಲಗಿ ಹೋಗುವದೆಲ್ಲಿಗೆ ? ಎಲ್ಲಿಗೂ ಹೋಗದು; ಇವುಗಳ ಸಂಬಂಧ ವಿಚ್ಛೇದವೂ ಸಂಭವಿಸದು. ಇವೆರಡೂ ಕೂಡಿಯೇ ಇರುತ್ತವೆ; ಅದು ಕಾರಣವೇ ವಿಶ್ವದಲ್ಲಿ ಒಂದಿಲ್ಲ ಒಂದರ ರೂಪದ ವಿದ್ಯಮಾನತೆಯು ಸಂಭವಿಸುತ್ತಿರುವುದು. ವಿಶ್ವದ ಪ್ರತಿಯೊಂದು ರೂಪವೂ ಶಕ್ತಿಯೂ ದ್ರವ್ಯವೂ ಎಂಬಿವೆರಡರ ಸಮವೇತವೇ, ಬೇರೊಂದಿಲ್ಲ. ಶಕ್ತಿ ದ್ರವ್ಯಗಳ ಸಮಷ್ಟಿಯೇ **ಈಶ್ವರ ಸತ್ತೆಯ ಸ್ವರೂಪವು.** ಇದಕ್ಕೆ ಅನ್ಯವಾಗಿ ಈಶ್ವರ ಸತ್ತೆಯ ಸ್ವರೂಪವು ಬೇರೆಯಿಲ್ಲ. ಹೀಗೆ ವಿಶ್ವ ಪ್ರಪಂಚವು ಈಶ್ವರ ಸತ್ತೆಯ ಸ್ವರೂಪಕ್ಕಿಂತ ಭಿನ್ನವಾಗಿ ಏನೂ ಇಲ್ಲವಾದುದರಿಂದ ಇದೆಲ್ಲವೂ ಈಸ್ವರ ಸತ್ತೆಯೇ ಇದೆ.

ಈಶ್ವರ ಸತ್ತಾ ಎಂಬುದೇ ಚೇತನವು, (ಎಂದರೆ) ವಿಶ್ವದ ಪ್ರತಿಯೊಂದು ರಚನೆಯೊಡನೆ ಜ್ಞಾನದ ಸಂಬಂಧವಿದೆ. ಯಾವ ಜ್ಞಾನದ ಆಧಾರದ ಮೇಲೆ ಆ ರಚನೆಯು ತನ್ನ ಸ್ವರೂಪವನ್ನಿಟ್ಟುಕೊಂಡಿರುವುದೋ ಅಂತಹ ಜ್ಞಾನವು ಪ್ರತಿಯೊಂದು ರಚನೆಯನ್ನು ಬೆಂಬಿಡದು.

ಮನುಷ್ಯನು ಒಂದು ಮನೆಯನ್ನು ರಚಿಸುತ್ತಾನೆ, ಆ ಮನೆಯು ಸ್ಥೂಲ ರೂಪದಲ್ಲಿ ಬರುವದಕ್ಕೆ ಮೊದಲು ಮನುಷ್ಯನ ಮಸ್ತಿಷ್ಕದಲ್ಲಿ ಜ್ಞಾನ ರೂಪದಿಂದ ವಿದ್ಯಮಾನವಾಗಿರುತ್ತದೆ. ಹಾಗಿರದಿದ್ದರೆ ಮನೆಯು ಸ್ಥೂಲ ರೂಪವು ಎಂದೂ ನಮ್ಮ ದೃಗ್ಗೋಚರವಾಗದು. ಇದರಿಂದ ಸಿದ್ಧಿಸುವ ದೇನಂದರೆ ಯಾವದೊಂದು ವಸ್ತುವಿನ ಸ್ಥೂಲ ರಚನೆಗಿಂತ ಮೊದಲು ಆ ರಚನೆಯ ಜ್ಞಾನರೂಪವಾದ ಭಾವವು ವಿದ್ಯಮಾನವಾಗಿರಲೇಬೇಕು. ಹೇಗೆ ಸ್ಥೂಲ ರಚನೆಗಿಂತ ಮೊದಲು ಅದರ ರಚನೆಯು ಜ್ಞಾನರೂಪ ದಲ್ಲಿ ವಿದ್ಯಮಾನವಾಗಿರುವುದರ ಅವಶ್ಯಕತೆಯುಂಟೋ ಹಾಗೆ ಸೂಕ್ಷ್ಮ ರಚನೆಗಿಂತ ಮೊದಲಾದರೂ ಆ ರಚನೆಯು ಜ್ಞಾನರೂಪದಲ್ಲಿ ವಿದ್ಯ ಮಾನವಾಗಿರುವುದರ ಆವಶ್ಯಕತೆಯುಂಟು. ಸ್ಥೂಲ ರಚನೆಯಲ್ಲಿಯೂ ಸೂಕ್ಷ್ಮ ರಚನೆಯಲ್ಲಿಯೂ ಆಪೇಕ್ಷಿಕವಾದ ಭಾವವು ಇದ್ದೇ ಇದೆ. ಯಾವ ರಚನೆಯಾದರೂ ಯಾವದಾದರೊಂದು ಅನ್ಯ ರಚನೆಯ ಅಪೇ ಕ್ಷೆಯಿಂದ ಸ್ಥೂಲವೂ ಸೂಕ್ಷ್ಮವೂ ಎಂದು ಹೇಳಲ್ಪಡುವುದಾದ್ದರಿಂದ ಸಾಧಾರಣ ನಿಯಮವು ಸಿದ್ಧಿಸುವುದೇನಂದರೆ ಯಾವದರ ರಚನೆಗಾ ದರೂ ಮುಂಚೆ ಆ ರಚನೆಯ ಜ್ಞಾನ ರೂಪ ಸದ್ಭಾವವು ಇರಲಿಕ್ಕೇ ಬೇಕು. ರಚನೆಯ ಕ್ರಮದೊಡನೆ ಮುಂಚಿತವಾಗಿರತಕ್ಕ ಜ್ಞಾನ ಕ್ರಮವು (ಜ್ಞಾನದ ಕ್ರಮಿಕ ಧಾರೆಯು) ನಿಷ್ಪತ್ತ್ಯೂಹವಾಗಿರುವುದ ರಿಂದ ಈ ಧಾರಾವಾಹಿಕವಾದ ಜ್ಞಾನಾತ್ಮಕ ರೂಪದಲ್ಲಿ ಹೇಗೆ ಹೇಗೆ ಶಕ್ತಿಗೆ ಹೇತುವಾದ ದ್ರವ್ಯದ ಪೂರಣತೆಯುಂಟಾಗುವುದೋ ಹಾಗೆ ಹಾಗೆ ರಚನೆಯ ಕ್ರಮವು ಅಭಿವ್ಯಕ್ತವಾಗುತ್ತಲಿರುವುದು. ಹೀಗೆ ಯಾವ ದರ ರಚನೆಯು ರೂಪವಾದರೂ ಆ ರಚನೆಯ ಜ್ಞಾನ ರೂಪವಾಗಿರು ವುದು. ರಚನೆಯೂ ಜ್ಞಾನವೂ ಬೇರೆ ಬೇರೆ ಇರುವದಿಲ್ಲ. ಮಾನುಷ ಬುದ್ಧಿಯಲ್ಲಿ ತೋರುವ ರಚನೆಯ ರೂಪವು ಜ್ಞಾನವೇ ಆಗಿದೆ, ಯಾವ ದರ ಆಧಾರದ ಮೇಲೆ ಆ ರಚನೆಯು ವಿದ್ಯಮಾನವಾಗಿರುವುದೋ ಆ ರೂಪವು ಜ್ಞಾನವೇ; ಹೇಗೆಂದರೆ ಬುದ್ಧಿಯಲ್ಲಿ ಮನೆಯ ರೂಪವೂ ಜ್ಞಾನವೂ ಇರುವುದು, ಆದರೆ ಮನೆಯಿಲ್ಲ; ಇದರಿಂದ ಸ್ಪಷ್ಟವಾಗುವ ದೇನಂದರೆ ರಚನೆಗಿಂತ ಭಿನ್ನವಾದ ಜ್ಞಾನವು ಇದಕ್ಕಿಂತ ಮುಂಚೆ ಯಾದರೂ ಸ್ವತಂತ್ರ ರೂಪದಿಂದ ಇರುವಂತೆ ತರುವಾಯದಲ್ಲಿಯೂ ಇರುವುದು. ರಚನೆಯಾದರೋ ನಡುವೆ ಕ್ಷಣಿಕವೂ ಕಲ್ಪಿತ ರೂಪವೂ ಆಗಿದೆ; ಕಲ್ಪಿತವೆಂದರೆ ಮಿಥ್ಯೆಯಲ್ಲ.

ರೂಪದಲ್ಲಿ ದ್ರವ್ಯದ ಹಾಗು ಶಕ್ತಿಯ ಧಾರೆಯು ಪ್ರವಹಿಸುತ್ತಿರುವುದಷ್ಟೇ ! ದ್ರವ್ಯವೂ ಶಕ್ತಿಯೂ ಪರಸ್ಪರ ಸಾಹಚರ್ಯ ಸಂಬಂಧದಿಂದಿರುವಂತೆ ಇವೆರಡರೊಡನೆ ಜ್ಞಾನವಾದರೂ ಅವಿನಾಭಾವ ಸಂಬಂಧದಿಂದಿರುವುದು. ಈ ರೀತಿಯಾಗಿ ಜ್ಞಾನವು ದ್ರವ್ಯಾಶ್ರಿತವಾದ ಶಕ್ತಿಯೊಡನೆ ಸಾಹಚರ್ಯ ಸಂಬಂಧದಿಂದಿರುವುದೆಂದು ಸಿದ್ಧವಾದ ಮೇಲೆ ಜ್ಞಾನವೂ ಶಕ್ತಿಯೂ (ಕ್ರಿಯಾಶಕ್ತಿಯೂ) ದ್ರವ್ಯವೂ ( ಆ ಜ್ಞಾನಕ್ರಿಯಾಶಕ್ತಿಗಳಿಗಾಧಾರವಾದ ದ್ರವ್ಯ (ವಸ್ತು) ವೂ ಎಂಬೀ ಮೂರೂ ಪ್ರಮಾತೃ ಪ್ರಮಾಣ ಪ್ರಮೇಯಾತ್ಮಕವಾದ ವಿವಿಧ ರೂಪದಿಂದ ಈ ವಿಶ್ವಪ್ರಪಂಚದಲ್ಲಿ ವಿದ್ಯಮಾನವಾಗಿವೆ.

ಜ್ಞಾನವು ' ಸಂವಿತ್ ' ಎಂದು ಹೇಳಲ್ಪಡುವದು, ' ಸಂವಿತ್ ' ಎಂಬುದೇ ಚೈತನ್ಯವು; ಜ್ಞಾನಶಕ್ತಿಯ ಸ್ಥೂಲ ರೂಪವೇ ಕ್ರಿಯಾಶಕ್ತಿಯು. 'ಸಂವಿತ್' ಎಂದು ಹೇಳಲ್ಪಡುವ ಚೈತನ್ಯವೇ ಈಶ್ವರನು. ವಿಶ್ವಪ್ರಪಂಚದ ನೈಸರ್ಗಿಕ ರೂಪಾಂತರಗಳು ಆ ಆ ವಸ್ತುಗಳಲ್ಲಿ ಅಧಿಷ್ಠಾನದಿಂದಿರುವ ಆ ಈಶ್ವರ ಚೈತನ್ಯ ಸ್ಫುರಣದಿಂದೇ ಸಂಭವಿಸುವುವು. ಚೈತನ್ಯ ಸ್ಫುರಣವೆಂಬುದೇ ಈಶ್ವರನಲ್ಲಿ ಅವಿನಾಭೂತವಾದ ಮೂಲಶಕ್ತಿಯು. ಆ ಶಕ್ತಿಯೂ ಅದರ ಕಾರ್ಯೋನ್ಮುಖತೆಯೂ ಸೂಕ್ಷ್ಮವಾಗಿರುವ ಮೂಲಕ ಇಂದ್ರಿಯಾತೀತವಾಗಿವೆ. ( ಎಂದರೆ ಈಶ್ವರ ಶಕ್ತಿಯ ಕಾರ್ಯ ಪರಿಣಾಮವು ಕೇವಲ ಇಂದ್ರಿಯ ಗೋಚರವಲ್ಲ. ) ಈ ಬಗ್ಗೆ ಛಾಂದೋಗ್ಯೋಪನಿಷತ್ತಿನಲ್ಲಿ ( ೬-೧೨ ) ದೃಷ್ಟಾಂತಪೂರ್ವಕವಾಗಿ ಹೀಗೆ ನಿರೂಪಿಸಲ್ಪಟ್ಟಿರುವುದು.

ಆರುಣಿಯು ಶ್ವೇತಕೇತುವಿಗೆ ಆಜ್ಞಾಪಿಸುವನು — ' ನ್ಯಗ್ರೋಧಫಲಮತ ಆಹರೇತೀದಂ ಭಗವ ಇತಿ; ಕಿಮತ್ರ ಪಶ್ಯಸೀತ್ಯಣ್ವ್ಯ ಇವೇಮಾಧಾನಾ ಭಗವ ಇತ್ಯಾಸಾ ಮಂಗೈಕಾಂ ಭಿನ್ಧೀತಿ, ಭಿನ್ನಾ ಭಗವ ಇತಿ; ಕಿಮತ್ರ ಪಶ್ಯಸೀತಿ ನ ಕಿಂಚನ ಭಗವ ಇತಿ ॥೧॥ ತಂ ಹೋವಾಚ ಯಂ ವೈ ಸೌಮ್ಯೈತಮಣಿಮಾನಂ ನವಿಭಾಲಯುಸ ಏತಸ್ಯ ವೈ ಸೌಮ್ಯೈಷೋಽಣಿಮ್ನ ಏವಂ ಮಹಾನ್ಯಗ್ರೋಧಸ್ತಿಷ್ಠತಿ ಶ್ರದ್ಧಸ್ವ ಸೋಮ್ಯೇತಿ' ॥೨॥

ಮಗು ! ಒಂದು ಆಲದ ಹಣ್ಣನ್ನು ತೆಗೆದುಕೊಂಡು ಬಾರಪ್ಪ ?
ಇಗೋ, ತಂದೆನು.

ಅದನ್ನು ಒಡೆ ?
ಒಡೆದೆನು.

ಅದರಲ್ಲಿ ನಿನಗೆ ಏನು ಕಂಡು ಬರುವುದು ?

ಇವು ತೀರ ಸಣ್ಣ ಪರಮಾಣುಗಳಂತೆ ಬೀಜಗಳು ಗೋಚರವಾಗುತ್ತವೆ.

ಅವುಗಳಲ್ಲಿ ಒಂದನ್ನು ಒಡೆ ?

( ಹಾಗೆ ಮಾಡಿ ) ಸ್ವಾಮಿ ! ಒಡೆದೆನು.

ಅದರಲ್ಲಿ ಏನಿರುವುದನ್ನು ನೋಡುವಿ ?
ಅದರಲ್ಲಿ ಏನೂ ಕಂಡು ಬರುವುದಿಲ್ಲ.

ಹಾ ! ಯಾವ ಈ ಅತಿ ಸೂಕ್ಷ್ಮವಾದ ವಸ್ತುವು ( ಪದಾರ್ಥವು ) ನಿನಗೆ ಗೋಚರಿಸುವುದಿಲ್ಲವೋ ಅದೇ ಸೂಕ್ಷ್ಮವಾದ ಅಂಶದಿಂದೇ ಈ ಪ್ರಚಂಡವಾದ ವೃಕ್ಷವು ( ಎಂದರೆ ವಿಶಾಲವಾಗಿ ಬೆಳೆದಿರುವ ಆಲದ ಮರವು ) ನಿಂತಿರುವುದು; ಈ ಬೀಜದೊಳಗಿನ ಅವ್ಯಕ್ತವಾದ ಅಂಶದಲ್ಲಿ ಶ್ರದ್ಧೆಯನ್ನಿರಿಸು.

ಬೀಜದಲ್ಲಿರುವ ಅವ್ಯಕ್ತ ಶಕ್ತಿಯೇ ವಟವೃಕ್ಷ ರೂಪದಿಂದ ವ್ಯಕ್ತವಾಗಿ ತೋರುತ್ತಿರುವುದೆಂಬುದನ್ನು ತಿಳುಹಿಸಿಕೊಡುವುದಕ್ಕೋಸ್ಕರವೇ ಆರುಣಿಋಷಿಯು ಶ್ವೇತಕೇತುವಿನಿಂದ ಈ ಪ್ರಯೋಗವನ್ನು ಮಾಡಿಸಿದನು. ಸೂಕ್ಷ್ಮವಾದ ಬೀಜದಲ್ಲಿ ಏನೂ ಕಾಣಬರುವುದಿಲ್ಲವಾದರೂ ಅದರಲ್ಲಿ ಏನೂ ಇಲ್ಲವೆಂದು ತಿಳಿಯಕೂಡದು: ಏಕೆಂದರೆ ಆ ಬೀಜದಲ್ಲಿ ಯಾವದು ಗೋಚರಿಸುವುದಿಲ್ಲವೋ ಅದರಿಂದೇ ಈ ದೊಡ್ಡ ಆಲದ ಮರವು ಹುಟ್ಟಿರುವುದು, ಈ ಆಲದ ಮರದ ಕಾರಣರೂಪವು ಆ ಸೂಕ್ಷ್ಮ ಬೀಜದಲ್ಲಿಯೇ ಇರುವುದು; ಅದು ಕಾಣಬಾರದಿದ್ದರೂ ಅದರ ಕಾರ್ಯವಾದ ವಟವೃಕ್ಷದಿಂದ ಆ ಕಾರಣ ತತ್ತ್ವವು ಈ ಸೂಕ್ಷ್ಮ ಬೀಜದಲ್ಲಿಯೇ ಇರುವುದೆಂಬುದು ನಿಃಸಂಶಯವಾಗಿ ಸಿದ್ಧವಾಗುವುದು. ಆದ್ದರಿಂದ ಆ ಕಾರಣ ತತ್ತ್ವವು ಕಣ್ಣಿಗೆ ತೋರಿಬರದಿದ್ದರೂ ಅಷ್ಟು ಮಾತ್ರದಿಂದೇ ಅದರ ಅಸ್ತಿತ್ವವೇ ಇಲ್ಲವೆಂದು ತಿಳಿಯುವುದು ತಪ್ಪು; ಆ ಕಾರಣದ ದೆಸೆಯಿಂದ ಕಾರಣ ತತ್ತ್ವದ ಅಸ್ತಿತ್ವವನ್ನು ನಿಜವೆಂದು ತಿಳಿಯತಕ್ಕದ್ದು.

ಎರಡನೆಯ ಮಂತ್ರದಲ್ಲಿ 'ಶ್ರದ್ಧಸ್ವ' ಎಂಬ ಪದವಿದೆ, ನಂಬು ಎಂದು ಅದರರ್ಥವು. ಕಾರಣತ್ವದ ಅಸ್ತಿತ್ವವನ್ನು ಅದರ ಕಾರ್ಯದ

ತೋರಿಕೆಯ ಮೂಲಕ ಸಿದ್ಧಮಾಡಿ ತೋರಿಸಿ, ಬಳಿಕ ಅದರಲ್ಲಿ ವಿಶ್ವಾಸವನ್ನಿರಿಸಲು ಹೇಳಿರುವ ಈ ಸಂಗತಿಯು ಅವಶ್ಯವಾಗಿ ಲಕ್ಷದಲ್ಲಿಡತಕ್ಕದಾಗಿದೆ. ಇದರಿಂದ ಶ್ರದ್ಧೆಯು ಎಂದರೆ ಜೊಳ್ಳು ನಂಬಿಕೆ ಎಂಬ ಅರ್ಥದಿಂದ 'ಶ್ರದ್ಧಸ್ವ' ಎಂಬ ಪದವು ಪ್ರಯೋಗಿಸಲ್ಪಟ್ಟಿಲ್ಲ. ಈ ಮೇಲೆ ಉದಾಹೃತವಾದ ವಚನ ನಿಚಯದಿಂದ ಉತ್ಪಾದಕ ಶಕ್ತಿಯು ಸರ್ವ ಪದಾರ್ಥಗಳಲ್ಲಿ ಸೂಕ್ಷ್ಮರೂಪದಿಂದ ಇರುವುದರ ಪರಿಯು ವಿವರಿಸಲ್ಪಟ್ಟಿದೆ. ಅದೇ ಉಪನಿಷತ್ತಿನಲ್ಲಿ ಮುಂದೆ (೬. ೧೩) ಉಪ್ಪಿನ ಉದಾಹರಣೆಯು ಪ್ರಯೋಗ ಪೂರ್ವಕವಾಗಿ ತೋರಿಸಲ್ಪಡುವುದು. ಉಪ್ಪು ನೀರಿನಲ್ಲಿ ಕೂಡಿದ ಬಳಿಕ ಅದರ ಅಸ್ತಿತ್ವವು ಮೇಲೆ ಕಂಡು ಬರುವುದಿಲ್ಲವಾದರೂ ನೀರಿನ ರುಚಿಯ ಅನುಭವದಿಂದ ಅದು ಅರಿಯಲ್ಪಡುವುದು. ಉಪ್ಪಿನ ಬಣ್ಣ. ಆಕಾರ, ಭಾರವೆಂಬಿವುಗಳಲ್ಲಿ ಒಂದಾದರೂ ಗೋಚರವಾಗದಿದ್ದರೂ ನೀರಿನೊಳಗಿರುವ ಅದರ (ಉಪ್ಪಿನ) ಅಸ್ತಿತ್ವವು ನಿಶ್ಚಯದಿಂದ ಹೇಳಲಿಕ್ಕೆ ಬರುತ್ತದೆ. ಹಾಗೇ ಸೃಷ್ಟ ಪದಾರ್ಥಗಳ ಯಾವದೊಂದು ಗುಣಧರ್ಮದ ಮೇಲಿಂದ ಬ್ರಹ್ಮ ತತ್ತ್ವದ ಅಸ್ತಿತ್ವವು ನಿಶ್ಚಯಿಸಲ್ಪಡಲು ಸಾಧ್ಯವಿಲ್ಲವಾದರೂ ಪದಾರ್ಥಗಳ ಆಕರ್ಷಣ, ಉತ್ಸಾರಣ ಮುಂತಾದ ಶಕ್ತಿಗಳ ಮೇಲಿಂದ ಅದು ನಿಶ್ಚಯಿಸಲ್ಪಡುವುದು. ಇಂತಹ ಶಕ್ತ್ಯುಪೇತ ವಸ್ತುವೇ ಸರ್ವ ಜಗತ್ತಿನ ಮೂಲವು. ಮತ್ತು ಭಟ್ಟ ಶ್ರೀ ಕ್ಷೀರಸ್ವಾಮಿಯೆಂಬಾತನು ೧೧ನೆಯ ಶತಮಾನದಲ್ಲಿದ್ದವನೆಂದು ಪ್ರಾಚ್ಯೇತಿಹಾಸಾಭಿಜ್ಞರು ಹೇಳುವರು. ಇವನು ಶಕ್ತಿವಿಶಿಷ್ಟಾದ್ವೈತ ಮತಾನುಯಾಯಿಯು. ಅದು ಕಾರಣವೇ ಇವನು ಅಮರಕೋಶದ ಉದ್ಘಾಟನವೆಂಬ ವ್ಯಾಖ್ಯಾನಾರಂಭದಲ್ಲಿ—

ದಿಶ್ಯಾಚ್ಛಿವಾನಿ ಶಿವಯೋಸ್ತಿಲಕಾಯಮಾನ
ಗೋರೋಚನಾರುಚಿಲಲಾಟ ವಿಲೋಚನಂ ವಃ ।
ಅನ್ಯೋನ್ಯಗಾಢಪರಿರಂಭನಿಪೀಡನೇನ
ಪಿಂಡೀಭವನ್ ಬಹಿರಿವ ಸ್ಫುಟಿತೋಽನುರಾಗಃ ॥

ಎಂಬುದಾಗಿ ತನ್ನ ಉಪಾಸ್ಯದೇವತೆಯನ್ನು ಕುರಿತು ಮಂಗಲಾಚರಣವನ್ನನುಷ್ಠಿಸಿದ್ದಾನೆ. ಈ ಪದ್ಯದಲ್ಲಿ ಶಿವಶಕ್ತಿಗಳ ಅವಿನಾಭಾವ ಸಂಭಂದಾರ್ಥವು ಸ್ಫುಟವಾಗಿರುತ್ತದೆ. ಇಂತಪ್ಪ ಶಕ್ತಿ ವಿಶಿಷ್ಟಬ್ರಹ್ಮವೇ ವೇದದ ಪೂರ್ವಕಾಂಡದಲ್ಲಿ 'ಅಗ್ನಿ,' 'ಇಂದ್ರ,' 'ರುದ್ರ' ಎಂಬ ಮುಂತಾದ ಶಬ್ದಗಳಿಂದ ನಿರ್ದಿಷ್ಟವಾಗಿದೆ. ಈ ಪರವಸ್ತುವೇ ವೇದಾಗಮೋ

ಪನಿಷತ್ತುಗಳಲ್ಲಿ 'ಪತಿ' ಎಂಬಭಿಧಾನದಿಂದಲೂ ಸ್ತುತಿಸಲ್ಪಡುವುದು. ಶಕ್ತಿವಿಶಿಷ್ಟಬ್ರಹ್ಮರೂಪವಾದ ಈ ಪತಿಯು ಪರಿಜ್ಞಾನವಿಲ್ಲದ ಪ್ರಾಕೃತಾತ್ಮರು ಬೇರೆ ಬೇರೆ ಭಾವಿಸಿ ಬಳಲುತ್ತಿರುವರು. ಆ ಪತಿಯ ಯಥಾರ್ಥಸ್ವರೂಪವನ್ನು ಬಲ್ಲವರಾದ ಅಪ್ರಾಕೃತಾತ್ಮರಾದರೋ, ಸರ್ವಾಂತರ್ಯಾಮಿಯಾದ ಪತಿಯೋರ್ವನೇ ದೇವರೆಂದು ಅವನನ್ನು ಅನನ್ಯಭಕ್ತಿಯಿಂದ ಭಜಿಸುವರು. ಈ ಮಾತು ಹೊಸದಲ್ಲ, ಋಗ್ವೇದದ ೧೦ನೆಯ ಮಂಡಲಾಂತರ್ಗತವಾದ ೧೨೧ನೆಯ ಸೂಕ್ತದ ಮೊದಲನೆಯ ಮಂತ್ರದಲ್ಲಿ:—

**ಹಿರಣ್ಯಗರ್ಭಃ ಸಮವರ್ತತಾಗ್ರೇ**
**ಭೂತಸ್ಯ ಜಾತಃ ಪತಿರೇಕ ಆಸೀತ್ ।**
**ಸದಾಧಾರಪೃಥಿವೀಂ ದ್ಯಾಮುತೇಮಾ**
**ಕಸ್ಮೈದೇವಾಯ ಹವಿಷಾ ವಿಧೇಮ ॥**

ವಿಶ್ವವಿಸ್ತಾರಕರ್ತೃವಾದ ಪತಿಯು ಮೊದಲು ಒಬ್ಬನೇ ಇದ್ದನು. ಅವನೇ ಸಮಸ್ತ ತನುಕರಣಭುವನಗಳಿಗಾಧಾರರೂಪನಾಗಿದ್ದಾನೆ. ಹೀಗೆ ಸರ್ವಾಂತರ್ಯಾಮಿಯಾದ ಒಬ್ಬನೇ ದೇವರಿದ್ದಾನೆಂಬ ಅರಿವು ಉಂಟಾದ ಬಳಿಕ ನಾವಿನ್ನು ಬೇರೆ ಯಾವ ದೇವತೆಗೋಸುಗ ಹವಿಸ್ಸಿನ ಯೋಗದಿಂದ ಸೇವೆಮಾಡುವಾ ? ಎಂಬ ಉದ್ಗಾರಾತ್ಮಕವಾಗಿ ಪುರಾತನವಾಗಿರುವುದು. ಇದೇ ಮಾತಿನ ಸ್ಪಷ್ಟೀಕರಣವು ಶ್ವೇತಾಶ್ವತರ ಶಾಖಾಪ್ರವರ್ತಕರಿಂದ ಹೀಗೆ ಹೇಳಲ್ಪಡುವುದು ( ಶ್ವೇ. ಉ. ೬—೭ ) :—

**ತಮೀಶ್ವರಾಣಾಂ ಪರಮಂ ಮಹೇಶ್ವರಂ**
**ತಂ ದೈವತಾನಾಂ ಪರಮಂ ಚ ದೈವತಮ್ ।**
**ಪತಿಂ ಪತೀನಾಂ ಪರಮಂ ಪರಸ್ತಾತ್**
**ವಿದಾಮ ದೇವಂ ಭುವನೇಶಮೀಡ್ಯಮ್ ॥**

ಈಶ್ವರಶಬ್ದವಾಚ್ಯರುಗಳಿಗೆಲ್ಲಾ ಶ್ರೇಷ್ಠವಾದ ಮಹೇಶ್ವರನೂ, ದೇವತೆಗಳೆಲ್ಲರಿಗೂ ಶ್ರೇಷ್ಠವಾದ ದೇವರೆನಿಸಿಕೊಳ್ಳಲ್ಪಡುವವನೂ, ಪತಿಶಬ್ದದಿಂದ ಕರೆಯಿಸಿಕೊಳ್ಳುವವರಿಗೆ ಪತಿಯಾದವನೂ, ಶ್ರೇಷ್ಠವಾದುದರೊಳಗೆ ಶ್ರೇಷ್ಠವಾಗಿರುವವನೂ, ಪೂಜಾರ್ಹನೂ, ವಿಶ್ವೇಶನೂ ಆದ ಪರಮೇಶ್ವರನನ್ನು ನಾವು ನಮ್ಮ ದೇವರೆಂದು ಅರಿಯುತ್ತೇವೆ.

ಈ ರೀತಿಯಾಗಿ ಸಕಲಚಿದಚಿದಾತ್ಮಕ ಪ್ರಪಂಚಕ್ಕೆ ಮೂಲಭೂತನಾದ ಪರಮೇಶ್ವರನ ಅಸ್ತಿತ್ವವು ತ್ರಿಕಾಲಾಬಾಧಿತವಾಗಿದೆ. ಆ ಪರ

ಮೇಶ್ವರನಿಂದುಪದಿಷ್ಟವಾದುದರಿಂದೇ ಸಮಾಮ್ನಾಯವೆಂದು ಪ್ರಸಿದ್ಧವಾಗಿರುವ ವೇದವು ಸ್ವತಃ ಪ್ರಮಾಣಭೂತವಾಗಿರುವುದು. ಆದ್ದರಿಂದ ಮನುಷ್ಯರ ಬುದ್ಧಿಯಲ್ಲಿ ವೈಕಲ್ಯವನ್ನುಂಟುಮಾಡದೆ, ಆ ಬುದ್ಧಿಗೆ ಕಾರ್ಯದಕ್ಷತೆಯ ಜೊತೆಯನ್ನೊದಗಿಸಿಕೊಟ್ಟು, ಅಂತಪ್ಪ ಬುದ್ಧಿಯ ಮತ್ತು ಶ್ರದ್ಧೆಯ ಸಹಾಯದೊಡನೆ ಜೀವಿತೆಯ ಪರಮಧ್ಯೇಯದಕಡೆಗೆ ಹೋಗತಕ್ಕ ಒಳ್ಳೆಯ ದಾರಿಯನ್ನು ತೋರಿಸುವ ಅನಾದಿಯೂ, ಅಪೌರುಷೇಯವೂ, ಅಮೋಘಶಕ್ತಿಯುತವೂ ಆಗಿರತಕ್ಕ ಆ ವೇದವು ಸನಾತನ ಧರ್ಮಾನುಯಾಯಿಗಳಾದ ನಮಗೆ ಸದ್ಭಾಗ್ಯದಿಂದ ಲಭಿಸಿರುವುದಾದ ಕಾರಣ, ಅದರ ಶಾಸನವನ್ನು ಮನ್ನಿಸಿ ಅದರಂತೆ ನಾವು ಕರ್ತವ್ಯ ತತ್ಪರರಾಗಿರುವುದೇ ಇಹಾಮುತ್ರಸುಖಸಾಧನವು.

ನಾವು ವೇದಾಗಮರೂಪವಾದ ಶಾಸ್ತ್ರಾಧಾರವನ್ನಂಗೀಕರಿಸದೆ, ಯಾವನಾದರೊಬ್ಬ ಅಧಿಕಾರಿಪುರುಷನ ವಚನಗಳನ್ನೇ ಯೋಗ್ಯವಾದುವೆಂದು ನಂಬಿ ನಡೆವುದಾದರೆ, ಅದರಿಂದ ನಾವು ಸನಾತನಧರ್ಮಾನುಯಾಯಿಗಳೆನಿಸುವುದು ಸುಳ್ಳಾಗಬಹುದೋ ? ಆ ತೆರದ ನಡತೆಯುಳ್ಳ ನಮ್ಮನ್ನು ನೀವು ಧರ್ಮ ಬಹಿಷ್ಕೃತರನ್ನಾಗಿ ಮಾಡಬಲ್ಲಿರಾ ? ನಿಮ್ಮ ಕೈಯಲ್ಲೇನಿದೆ ? ನೀವು ಮಾಡುವುದಾದರೂ ಏನು ? ನೀವು ತಲೆಯಮೇಲೆ ಹೊತ್ತುಕೊಂಡು ಕುಣಿಯುವ ವೇದಾಗಮಗಳನ್ನೇ ಎಲ್ಲರೂ ಶಾಸ್ತ್ರಗಳೆಂದು ನಂಬಬೇಕೆಂಬ ಈ ನಿರ್ಬಂಧವೇಕೆ ? ನಾವು ಮಾತ್ರ ಅವುಗಳನ್ನು ಮನ್ನಿಸುವುದೇ ಇಲ್ಲ; ಎಂಬೀ ಮುಂತಾದ ನುಡಿಗಡಣದಿಂದ ಗುಡುಗುಡಿಸುವವರನ್ನು ಕುರಿತು ನಾವು ಹೇಳುವುದೇನಂದರೆ:— ಜಗತ್ತಿನಲ್ಲಿ ಯಾವನಾದರೊಬ್ಬ ಗೃಹಸ್ಥನು ತನಗೆ ಏನಾದರೊಂದು ಹೆಸರನ್ನಿಟ್ಟುಕೊಳ್ಳುವದರಲ್ಲಿಯೂ ವಸ್ತುತಃ ತಾನು ಅದರಂತೆ ವರ್ತಿಸುವುದರಲ್ಲಿಯೂ ಬಹು ವ್ಯತ್ಯಾಸವಿದೆ. ವೇದಾಗಮಶಾಸ್ತ್ರಗಳನ್ನಪೇಕ್ಷಿಸದೆ, 'ಯಾವನಾದರೊಬ್ಬ ಅಧಿಕಾರಿಪುರುಷನ ಹೇಳುವಿಕೆಯು ಯೋಗ್ಯವಾದುದು.' ಎಂಬ ನಂಬಿಕೆಯುಳ್ಳ ನೀವು ನಿಮ್ಮನ್ನು ಸನಾತನಧರ್ಮಾನುಯಾಯಿಗಳೆಂದೂ ಹೇಳಿಕೊಳ್ಳಲಪೇಕ್ಷಿಸುವಿರಾ ? ಅಯ್ಯೋ ! ಈ ವಚನವು '**ವದತೋ ವ್ಯಾಘಾತ**' ಪಾಂಕ್ತೇಯವಾಗುವುದಿಲ್ಲವೇ ? ವೇದಾಗಮಶಾಸ್ತ್ರಾಧಾರವನ್ನು ಮನ್ನಿಸದ ಮಾನಿಸರು ಸನಾತನ ವೈದಿಕ ಧರ್ಮಾನುಯಾಯಿಗಳಪ್ಪರೇ ? ವೇದಾಗಮಶಾಸ್ತ್ರಗಳಿಗೆ ದೂರವಾಗಿರತಕ್ಕವರು ತಾವೂ ಸನಾತನ ಹಿಂದುಗಳೆಂದು ಹೇಳಿ

ಸಿಕೊಳ್ಳಬೇಕೆನ್ನುವುದರಲ್ಲೇನರ್ಥವಿದೆ ? ಏಕೆಂದರೆ — ಯಾರು ವೇದಾಗಮಶಾಸ್ತ್ರಗಳನ್ನೊಪ್ಪರೋ ಅವರು ಸನಾತನ ಹಿಂದುಗಳೆನಿಸಲಾರರಷ್ಟೇ ! ಯಾರು ಸನಾತನ ವೈದಿಕಧರ್ಮಾನುಯಾಯಿಗಳೋ ಅವರು ವೇದಾಗಮಶಾಸ್ತ್ರಗಳನ್ನೊಪ್ಪುವುದಿಲ್ಲವೆಂಬುದಾದರೋ ಅಸಂಭವವೇ ಸರಿ ! ಯಾವಳೋ ಒಬ್ಬ ತಾಯಿಯು ತನ್ನ ಚಿಕ್ಕಮಗುವನ್ನು ಅಕ್ಕರತೆಯಿಂದ 'ಬಲುಜಾಣನು, ಬಂಟರೊಡೆಯನು' ಎಂಬ ಮೊದಲಾದ ಮುದ್ದಿನ ನುಡಿಗಳಿಂದ ಕರೆದ ಮಾತ್ರಕ್ಕೆ ಆ ಪಸುಳನು ಪಂಡಿತನೂ, ಶೂರನೂ ಆಗುತ್ತಿರುವುದಷ್ಟರಲ್ಲೇ ಇದೆ ! ಹಾಗೆ ವೇದಾಗಮಶಾಸ್ತ್ರಾಧಾರವನ್ನು ಮನ್ನಿಸದವರು ತಮ್ಮನ್ನು ಸನಾತನವೈದಿಕಧರ್ಮಾನುಯಾಯಿಗಳೆಂದು ಹೆಸರಿಟ್ಟುಕೊಳ್ಳುವುದರಿಂದುಪಯೋಗವೇನು ? ಎಂಥವರಿಗೆ ಅಧಿಕಾರ ಪುರುಷರೆನ್ನಬೇಕೆಂಬ ವಿಚಾರವಾದರೂ ಬೇಡವೇ ? 'ಯೇನಕೇನ ಪ್ರಕಾರೇಣ' ಪ್ರಸಿದ್ಧ ಪುರುಷರೆನ್ನಿಸಿಕೊಳ್ಳುವವರೆಲ್ಲರನ್ನೂ ಅಧಿಕಾರಿಗಳೇ ಎಂದು ತಿಳಿವುದುಚಿತವೇ ? ತಮ್ಮ ಮನಸ್ಸಿಗೊಪ್ಪಿಗೆಯಾದವನೇ ಅಧಿಕಾರಿಪುರುಷನೆಂದೂ, ಅವನ ವಚನವೇ ಶಾಸ್ತ್ರವೆಂದೂ ಜಲ್ಪಿಸುವವರು ಮತ್ತೆ ತಮ್ಮನ್ನು ಸನಾತನಹಿಂದುಗಳೆಂದು ಹೇಳಿಕೊಳ್ಳುವುದಕ್ಕೂ ಹಿಮ್ಮೆಟ್ಟದಿರುವ ಪರಿಯನ್ನು ನೋಡಿದರೆ, ಇದೊಂದು ಅಪೂರ್ವವಾದ ಗೌಡ ಬಂಗಾಲವೆಂದೇ ಹೇಳಬಹುದು. ನೀವು ನಮ್ಮನ್ನು ಧರ್ಮದಿಂದ ಹೊರ ದೂಡುವಿರಾ ? ಎಂದು ನಮ್ಮನ್ನು ವಿಚಾರಿಸುವುದರಿಂದೇನೂ ಪ್ರಯೋಜನವಿಲ್ಲ. ಯಾವನಾದರೊಬ್ಬನು ಒಂದಾನೊಂದು ವಿಶಿಷ್ಟಸ್ಥಿತಿಯನ್ನು ತೊರೆದು ತಾನೇ ಹೊರಬಿದ್ದು ಹೋಗಿ ಮತ್ತೇ ಆ ವಿಶಿಷ್ಟಸ್ಥಿತಿಯಲ್ಲಿರ ತಕ್ಕವರನ್ನು ಕುರಿತು 'ನೀವು ನಮ್ಮನ್ನು ಬಹಿಷ್ಕರಿಸುವಿರಾ ?' ಎಂದು ಮೂದಲಿಸಿ ನುಡಿವುದು ಸಮಂಜಸವಾದುದಲ್ಲ. ತನ್ನ ಕೃತಿಯಿಂದೇ ಹೊರಗಾಗಿರುವಾತನನ್ನು ಹೊರದೂಡುವುದೇನಿದೆ ? **'ಕೃತಸ್ಯ ಕರಣಂ ನಾಸ್ತಿ, ಮೃತಸ್ಯ ಮರಣಂ ತಥಾ'** ಎಂಬ ಗಾದೆಯು ಜ್ಞಾಪಕವಾಗುತ್ತದೆ. ನೀವು ನಮಗೆ ಏನು ತಾನೇ ಮಾಡಬಲ್ಲಿರಿ ? ವೇದಾಗಮಶಾಸ್ತ್ರಗಳ ಹಂಗಿಲ್ಲದ ನಮಗೆ ಅವನ್ನು ಪ್ರಮಾಣಗಳೆಂದು ಭಾವಿಸುವ ಅಗತ್ಯವೇನಿದೆ ? ಎಂದು ನುಡಿವವರಿಗೆ ಅವರ ಹೇಳುವಿಕೆಯಲ್ಲಿಯೇ ಉತ್ತರವಿದೆ. ಈ ಬಗ್ಗೆ ಹಿಂದೀ ಭಾಷೆಯಲ್ಲಿರುವ **'ದಿಗಂಬರಕೋ ಈಶ್ವರಭೀ ಥರತಾಹೈ'** ಎಂಬ ಆಭಣಕವು ಎದುರಾಳಿಗಳನ್ನು ಲಕ್ಷೀಕರಿಸುತ್ತದೆ. ಕೇಳಿರೋ ! ನಾವು ನಿಮಗೆ ಏನನ್ನೂ ಮಾಡಲಾರೆವು.

ನಿಮಗೆ ಯಾವ ಬಗೆಯ ಕೇಡನ್ನೆಣಿಸದೆ ನಿಮ್ಮೊಡನೆ ವ್ಯವಹರಿಸುವ ಪ್ರಸಂಗವೊದಗಿದಲ್ಲಿ ನಮ್ಮ ವೇದಾಗಮಶಾಸ್ತ್ರಗಳು ವಿಧಿಸುವಂತೆ ನಮ್ಮ ಮನಸ್ಸನ್ನು ಸಂತೈಸಲು ನಾವು ಮೈತ್ರೀ, ಕರುಣಾ, ಮುದಿತಾ, ಉಪೇಕ್ಷಿತಾ ಎಂಬೀ ನಾಲ್ಕು ಸಾಧನಗಳಲ್ಲಿಯ ಅಂತಿಮ ಸಾಧನವನ್ನವಲಂಬಿಸಿ, ವೇದಾಗಮಶಾಸ್ತ್ರಾಧಿಗತಸ್ವಧರ್ಮಶ್ರದ್ಧೆಯಿಂದ ಆತ್ಮೋನ್ನತಿಯನ್ನು ಪಡೆಯಲೋಸುಗ ನಮ್ಮ ಕರ್ತವ್ಯಾಭಿಮುಖರಾಗುತ್ತೇವೆ.

ಆಧುನಿಕ ಸುಶಿಕ್ಷಿತರೆನಿಸಿಕೊಳ್ಳಲ್ಪಡುವವರಲ್ಲಿ ಅನೇಕರು ಯಾವ ವಿಚಾರದಲ್ಲಿಯೂ ನಿಮಗಭಿಮತಗಳಾದ ವೇದಾಗಮಶಾಸ್ತ್ರಗಳನ್ನು ಪುರಸ್ಕರಿಸುವುದಿಲ್ಲವಾದಕಾರಣ, ಆ ವೇದಾಗಮಶಾಸ್ತ್ರಾಧಾರದ ಪರಿಣಾಮವೇನು? ಎಂದರೆ— 'ವೇದಾಗಮಶಾಸ್ತ್ರಾಧಾರದ ಪರಿಣಾಮವೇನು? ಎಂಬ ವಾಕ್ಯದೊಳಗಿನ 'ಪರಿಣಾಮ' ವೆಂಬ ಶಬ್ದದರ್ಥವೇ ನಮಗೆ ಹೊಳೆಯುಲೊಲ್ಲದು. ಆದ್ದರಿಂದ ಮೇಲಿನ ನುಡಿಗಳಿಗೆ ಸರಳವಾದ ಉತ್ತರವನ್ನು ಕೊಡುವುದು ಕಠಿಣವು; ಆದರೂ ಮೀಮಾಂಸೆಯ ನ್ಯಾಯಸರಣಿಯನ್ನನುಸರಿಸಿ ವಿಶೇಷವಾಕ್ಯದ ಮೇಲಿಂದ "ಶಾಸ್ತ್ರಾಧಾರದ ಪರಿಣಾಮವು ಅಂದರೆ ಉಪಯೋಗವೇನು, ಅಥವಾ ಶ್ರೋತೃಜನರ ಮನಸ್ಸಿನಲ್ಲಿ ಆ ಶಾಸ್ತ್ರಾಧಾರದ ಪರಿಣಾಮವೆಂತಪ್ಪುದು ? ಏಕೆಂದರೆ, ಈಗಿನ ಸುಧಾರಕರೆಂಬವರು ವಿಚಾರಾವಸರದಲ್ಲಿ ಆ ಶಾಸ್ತ್ರಗಳನ್ನಂಗೀಕರಿಸುವುದಿಲ್ಲ" ಎಂಬರ್ಥವನ್ನು ಕಲ್ಪಿಸಿ ಉತ್ತರವನ್ನು ಹೇಳುತ್ತೇವೆ. ಆ ಸುಧಾರಕರು ವಿಚಾರಾವಸರದಲ್ಲಿ ವೇದಾಗಮಶಾಸ್ತ್ರಗಳನ್ನಂಗೀಕರಿಸದಿದ್ದ ಮಾತ್ರವೇ ಆ ವೇದಾಗಮಶಾಸ್ತ್ರಗಳು ಅಪ್ರಮಾಣಗಳೆನಿಸಲಾರವು. ಶಾಸ್ತ್ರದೃಷ್ಟಿಯುಳ್ಳವರಿಗೆ ಅವುಗಳ ಉಪಯೋಗವಾಗದಿರದು. ಅವರ ಮನಸ್ಸಿನಲ್ಲಿ ಆ ಶಾಸ್ತ್ರಗಳ ಪರಿಣಾಮವಾಗುವುದು. 'ನಹಿ ಪುರುಷಾಪರಾಧೇನ ಪರಮಾರ್ಥಸ್ತು ದುಷ್ಯತಿ' ಪುರುಷನ ಅಪರಾಧ (ದೋಷ) ದಿಂದ ಸತ್ಯ (ನಿರ್ದೋಷ) ವಸ್ತುವು ದೂಷಿತವಾಗಲಾರದೆಂಬ ನ್ಯಾಯವಿದೆ, ಯಾರು ಸ್ವಧರ್ಮವನ್ನು ತ್ಯಜಿಸಿ ಪರಧರ್ಮಕ್ಕೆ ಮೆಚ್ಚಿರುವರೋ ಅವರಿಗೆ ವೇದಾಗಮಶಾಸ್ತ್ರಗಳ ವಾಕ್ಯಗಳು ಕಿವಿಗೆ ಬಿದ್ದೊಡನೆಯೇ ಶಿರೋವೇದನೆಯುಂಟಾಗುವುದು. ಸ್ವಧರ್ಮದಂತಾಚರಿಸುತ್ತಿರುವವರಿಗಾದರೋ ಆ ಶಾಸ್ತ್ರಗಳ ಉಪಯೋಗವಿಲ್ಲವೆನ್ನುವಂತಿಲ್ಲ. ತಿಮಿರದೃಷ್ಟಿಗೆ ಚಂದ್ರನು ಎರಡಾಗಿ ತೋರಿದರೂ ಎರಡು ಎಂದೂ ಆಗುವುದಿಲ್ಲವಷ್ಟೇ ! ಶಾಸ್ತ್ರಾಧಾರವು ಶಾಸ್ತ್ರದೃಷ್ಟಿಯುಳ್ಳವರ ಸಲುವಾಗಿರುವುದೇ ಹೊರತು ಶಾಸ್ತ್ರಗಳ

ನ್ನೊಪ್ಪದಿರುವವರಿಗೋಸ್ಕರವಿರುವುದಿಲ್ಲ. ಭಾರತವರ್ಷದ ಸರ್ವಜನರೂ ಯಾವ ಕಾಲಕ್ಕೆ ಸುಧಾರಕರಾಗುವರೋ ಆಗ ಮಾತ್ರ ಈ ಪ್ರಶ್ನೆಯು ಸಂಭವಿಸಬಹುದು. ಈಗ ತಮ್ಮನ್ನು ಸುಧಾರಕರೆಂದು ಹೇಳಿಕೊಳ್ಳು ತ್ತಿರುವವರ ಪೂರ್ವಜರು ವೇದಾಗಮಶಾಸ್ತ್ರಗಳನ್ನೊಪ್ಪುತ್ತಿದ್ದರು. ಒಂದು ವೇಳೆ ಈ ಚಂಚಲ ( ಅಸ್ಥಿರ ) ವಾದ ಕಾಲಚಕ್ರವು ಹೊಡಮರಳಿದರೆ ಈ ಸುಧಾರಕರ ಪೀಳಿಗೆಯಾದರೂ ಭವಿಷ್ಯತ್ಕಾಲದಲ್ಲಿ ವೇದಾಗಮ ಶಾಸ್ತ್ರಗಳನ್ನು ಒಪ್ಪಲೂಬಹುದು. ಸದ್ಯಃ ಶಾಸ್ತ್ರಾಧಾರವನ್ನೊಪ್ಪತಕ್ಕ ಸುಧಾರಕೇತರಜನರಾದರೂ ಇದ್ದಾರೆ. ಅವರ ಅಭಾವವನ್ನು ಹೇಳ ಲಾಗುವುದಿಲ್ಲ; ಆದ್ದರಿಂದೆ ನಾವು ಶಾಸ್ತ್ರದೃಷ್ಟಿಯುಳ್ಳವರಾಗಿ ಆ ವೇದಾ ಗಮಶಾಸ್ತ್ರಾಧಾರದಿಂದೇ ಧರ್ಮನಿರ್ಣಯಮಾಡಬೇಕಾಗಿದೆ. ಈ ಚಂಚ ಲವಾದ ಕಾಲದ ಅಥವಾ ಪರಿಸ್ಥಿತಿಯ ಸೆಳವಿಗೆ ಬಿದ್ದು ನಮ್ಮ ಪ್ರಾಚೀನ ಜ್ಞಾನ ಸಂಪತ್ತಿಗೆರವಾಗತಕ್ಕವರು ನಾವಲ್ಲ.

ಸುಶಿಕ್ಷಿತರೆನಿಸಿಕೊಳ್ಳುವವರಲ್ಲಿಯೇ ಕೆಲವರು ನಮ್ಮೆದುರಾಳಾಗಿ ನಿಂತು 'ನಿಮ್ಮ ಸನಾತನಧರ್ಮಕ್ಕೆ ಧಿಕ್ಕಾರವಿರಲಿ, ಸನಾತನಧರ್ಮವು ಹಾಳಾಗಿಹೋಗಲಿ; ನಿಮ್ಮ ಧರ್ಮವೇ ನಮಗೆ ಬೇಕಾಗಿಲ್ಲ' ಎಂದು ಮೊದಲಾದ ತಮ್ಮ ತೀಕ್ಷ್ಣಜ್ಞಾನತಂತುಗಳ ಹುರುಪಿನಿಂದ ಸನಾತನ ವೈದಿಕ ಧರ್ಮವನ್ನು ಮೇರೆದಪ್ಪಿ ಹೀಯಾಳಿಸಿ ನುಡಿಯುತ್ತಿರುವರು; ಇಷ್ಟೇ ಅಲ್ಲ, ತಮ್ಮ ಮೊತ್ತವನ್ನಿತ್ತಿತ್ತಲೊತ್ತರಿಸಿ ಬೆಳಯಿಸತೊಡಗಿ ದ್ದಾರೆ. ಅವರ ಪರಸಂಸ್ಕೃತಿಪ್ರಭಾವಜನ್ಯವಿಕ್ಷೇಪದೋಷದೂಷಿತಾಂತಃ ಕರಣವೃತ್ತಿ ವ್ಯಾಪ್ತದೃಷ್ಟಿಗೆದುರಾದ ಸನಾತನ ಧರ್ಮವು ವಿಪರೀತವಾಗಿ ಭಾಸವಾಗುತ್ತಿರುವುದು ಸಾಹಜಿಕವಲ್ಲವೇ? ಅದುಕಾರಣವೇ ನೀತಿಜ್ಞರು:—

**ನಿಜದೋಷಾವೃತಮನಸಾಮತಿಸುಂದರಮೇವಭಾತಿ ವಿಪರೀತಮ್ ।**
**ಪಶ್ಯತಿ ಪಿತ್ತೋಪಹತಃ ಶಶಿಶುಭ್ರಂ ಶಂಖಮಪಿ ಪೀತಮ್ ॥**

ಯಾವುದಾದರೊಂದು ದೋಷದಿಂದಾವೃತವಾದ ಮನಸ್ಸುಳ್ಳವರಿಗೆ ಬಲು ಚಂದವಾಗಿರತಕ್ಕೊಡವೆಯಾದರೂ ವಿಪರೀತವಾಗಿ ತೋರುವುದು. ಪಿತ್ತೋದ್ರೇಕಾದಿಗಳಿಂದ ಸಂಭವಿಸಿದ ಒಂದು ಬಗೆಯ ರೋಗ (ಕಾಮಣಿ) ಪೀಡಿತನಾದವನ ಕಣ್ಣಿಗೆ ಚಂದ್ರನಂತೆ ಬಿಳಿದಾದ ಶಂಖವು ಹಳದಿ ಯಾಗಿ ಕಂಡುಬರುವುದಲ್ಲವೇ ? ಎಂದುದಾಗಿ ಹೇಳುತ್ತಾರೆ.

ಅಂತಹ ಜನರ ಮನಸ್ಸಿನಲ್ಲಿ ಸದ್ಧರ್ಮವಿಷಯಕವಾದ ಶ್ರದ್ಧೆಯನ್ನು ಹುಟ್ಟಿಸುವುದು ಸುಲಭವಾದ ಕೆಲಸವಲ್ಲ; ನಿಜವಾಗಿ ಗಾಢ ಸುಷುಪ್ತಿಸುಖವನ್ನನುಭವಿಸುತ್ತಿರುವವನನ್ನು ಯಾರಾದರೂ ಎಚ್ಚರಗೊಳಿಸಬಹುದು; ಆದರೆ ಮೇಲುಮುಸುಕನಿಕ್ಕಿ ಟಕ್ಕಿನಿಂದ ಮಲಗಿ ಗುರುಕಿಶಬ್ದಗಳನ್ನು ಹೊರಡಿಸುವ ಠಕ್ಕನನೆಬ್ಬಿಸುವುದು ಕಡುಕಷ್ಟವು. ಬಿಲ್ಹಣನು :—

ವ್ಯುತ್ಪತ್ತಿರಾವರ್ಜಿತಕೋವಿದೋಽಪಿ
ನ ರಂಜನಾಯ ಕ್ರಮತೇ ಜಡಾನಾಮ್
ನ ಮೌಕ್ತಿಕಚ್ಛಿದ್ರಕರೀ ಶಲಾಕಾ
ಪ್ರಗಲ್ಭತೇ ಕರ್ಮಣಿ ಟಂಕಿಕಾಯಾಃ ||

ಎಂದುಸಿರಿರುವುದ ಈ ಮೇಲಿನ ನಮ್ಮ ನುಡಿಗಳಿಗುಪೋದ್ಬಲಕ (ಸ್ವಾಭಿಪ್ರಾಯಪುಷ್ಟ್ಯರ್ಥ) ವಾದುದೆನಿಸಬಹುದಲ್ಲವೇ ? ಒಂದು ಪಕ್ಷದಲ್ಲಿ ಸಮಕ್ಷವಾಗಿ ಅಂತಪ್ಪ ಜನರ ತಿರಸ್ಕಾರವಚನ ನಿಚಯವನ್ನು ತರ್ಕಬಲದಿಂದಲ್ಲಗಳೆಯಬಹುದಾದರೂ ಕೊನೆಗೆ 'ಪವನಾಗ್ನಿಸಮಾಗಮೋಹ್ಯಯಮ್' ಎಂಬ ವಾಕ್ಯಾರ್ಥಾನುಭವವೇ ಫಲಿತಾಂಶರೂಪವಾಗಿ ಪರಿಣಮಿಸುವುದು.

ಒಟ್ಟಿನಲ್ಲಿ ಹೇಗಾದರೂ 'ಅಪೃಷ್ಟೋಽಪಿ ಹಿತಂ ಬ್ರೂಯಾತ್' ಎಂಬ ಧರ್ಮನೀತಿಯನ್ನನುಸರಿಸಿ ನಮ್ಮವರೆನಿಸುವವರಿಗೆ ಧರ್ಮಾಧರ್ಮವಿಚಾರಕ್ಕೊಳಪಟ್ಟ ನಾಲ್ಕು ಮಾತುಗಳನ್ನು ನಮಗೆ ತಿಳಿದಮಟ್ಟಿಗುಪದೇಶಿಸಬೇಕೆಂದು ನಮ್ಮ ಮನವೆಳಿಸುವುದು.

'ಸನಾತನಧರ್ಮಕ್ಕೆ ಧಿಕ್ಕಾರವಿರಲಿ, ಸನಾತನಧರ್ಮವು ಹಾಳಾಗಿ ಹೋಗಲಿ' ಎಂಬುದಾಗಿ ವೇದಬಾಹ್ಯರಾದ ಕೆಲವರು ನುಡಿದರೂ ನುಡಿಯುತ್ತಿರಬಹುದು. ತನಗೆ ನಿಲುಕದಿರುವ ದ್ರಾಕ್ಷೆಯ ಹಣ್ಣಿನ ಗೊಂಚಲವನ್ನು ಹುಳಿಯೆಂದು ಹೀಯಾಳಿಸಿ ನುಡಿಯುವ ಗುಳ್ಳನಂತಿರುವವರ ಅಧಿಕ್ಷೇಪವಚನಗಳಿಗೆ ನಾವು ಪಳಿಯೆವು, ಮುಳಿಯೆವು. ಆದರೆ ಸನಾತನವೈದಿಕಧರ್ಮಾನುಯಾಯಿಗಳ ವಂಶೀಯರೆನಿಸಿಕೊಳ್ಳುವವರೇ ಇಹಾಮುತ್ರಸುಖಸಾಧನೀಭೂತವಾದ ಸ್ವಧರ್ಮವನ್ನು ಪೂರ್ವಾಪರವಿಚಾರವಿಲ್ಲದೆ ಧಿಕ್ಕರಿಸಿ ನುಡಿವ ಮಾತುಗಳನ್ನು ಕಿವಿಯಾರ ಕೇಳುವ ನಮ

ಗಷ್ಟೇ ಅಲ್ಲ. ಸನಾತನ ವೈದಿಕಧರ್ಮದಲ್ಲಿ ನಿಷ್ಠೆಯುಳ್ಳ ಯಾರಿಗಾದರೂ ಸಖೇದಾಶ್ಚರ್ಯವೆನಿಸದಿರದು.

ಸರ್ವಪುರುಷಾರ್ಥಸಾಧನವಾದ ಧರ್ಮವೇ ಹಾಳಾಗಿ ಹೋಗಲೆಂದು ಬಯಸುವ ಪರಿಯು 'ಮೂಲೇ ಕುಠಾರಃ' ಎಂಬಂತಿರುವುದು. ಮತ್ತು, 'ಸನಾತನ' ವೆಂದರೆ ನಿತ್ಯವೆಂದರ್ಥವು. ನಿತ್ಯವಾದ ಧರ್ಮವನ್ನು ಯಾರಾದರೂ ಧಿಕ್ಕರಿಸಿದರೂ, ಇಲ್ಲವೆ ಅದು ಹಾಳಾಗಿ ಹೋಗಲೆಂದು ಅನಿಷ್ಟಚಿಂತನೆಗೆಯ್ದರೂ, ಅಷ್ಟು ಮಾತ್ರದಿಂದೇ ಅದಕ್ಕೆ ಯಾವ ಹಾನಿಯೂ ತಟ್ಟದು. ಪುರಾತನರು :— **'ಧರ್ಮ ಏವ ಹತೋ ಹನ್ತಿ'** ( ಮನು. ೮-೧೫ ) ಎಂದು ನುಡಿದಿರುವಂತೆ ಧರ್ಮಕ್ಕೆ ಕೇಡೆನಿಸುವಾತನು ತಾನೇ ಹಾಳಾಗಿ ಹೋಗುವನು. ನಿತ್ಯವಾದ ಧರ್ಮವೆಂದಿಗೂ ಅಳಿಯದು.

ವೈದಿಕಧರ್ಮದ ಅಂತಿಮಸಾಧ್ಯವು ಕೇವಲ ಮೋಕ್ಷವಂತೆ ! ಅದರಿಂದ ಲೌಕಿಕೋತ್ಕರ್ಷವು ಸಂಭವಿಸುವುದುಂಟೇ ? ಆದ್ದರಿಂದ, ವ್ಯಕ್ತಿಯ ಲೌಕಿಕೋತ್ಕರ್ಷಕ್ಕೂ, ರಾಷ್ಟ್ರೋನ್ನತೆಗೂ ಅಂತಹ ಧರ್ಮದಿಂದುಪಯೋಗವೇನು ? ಎಂದಾಶಂಕಿಸುವ ಚದುರರಿಗೆ ನಾವು ಹೇಳುವುದೇನಂದರೆ— ಸನಾತನವೈದಿಕಧರ್ಮದ ಅಂತಿಮ ಸಾಧ್ಯವು ಕೇವಲ ಮೋಕ್ಷವೆಂಬುದೇನೋ ನಿಜ; ಆದರೂ ವೈದಿಕಧರ್ಮದಲ್ಲಿ ಲೌಕಿಕೋತ್ಕರ್ಷತೆಯು ಅನಿಷ್ಟವಾಗಿರುವುದಿಲ್ಲ. ಐಹಿಕೋತ್ಕರ್ಷವನ್ನು ಸಂಪಾದಿಸುವುದೇ ಮಾನವನ ಪ್ರಧಾನಕರ್ತವ್ಯವೆಂಬುದು ವೈದಿಕಧರ್ಮಾಭಿಮತವಲ್ಲವೆಂಬೀ ಸಂಗತಿಯನ್ನಾದರೋ ಯಾರೂ ಮರೆಯಕೂಡದು. ವೈದಿಕಧರ್ಮದಲ್ಲಿ ಪ್ರತಿಪಾದಿಸಲ್ಪಡುವ ನಿಜವಾದ ಮೋಕ್ಷಸ್ವರೂಪವು ಸಮಸ್ತಜೀವರ ಅಂತಿಮಧ್ಯೇಯವಾಗಿರುವುದೆಂಬ ವಿಷಯವನ್ನು ಆ ಚದುರರಾದರೂ ವಿಚಾರಪೂರ್ವಕವಾಗಿ ಸಂಮತಿಸುವುದಾದರೆ, ಆ ಅಂತಿಮಧ್ಯೇಯಸಾಧಕವಾದ ಧರ್ಮವು ಸರ್ವರಿಗೂ ಉಪಾದೇಯವಾಗಿರುವುದೆಂದೇ ಹೇಳಲ್ಪಡುವುದಲ್ಲವೇ ? ಅಂತಪ್ಪ ಧರ್ಮವಾದರೋ:— **ಯತೋಽಭ್ಯುದಯನಿಃಶ್ರೇಯಸಸಿದ್ಧಿಃ ಸಧರ್ಮಃ** (ವೈ. ದ. ೧-೨) ಎಂಬಂತೆ ಐಹಿಕೋತ್ಕರ್ಷತೆಗೂ ಸಾಧನವಾಗಿರುತ್ತಿರುವಲ್ಲಿ ಸುಧಾರಕಂಮನ್ಯರು ಸನಾತನವೈದಿಕ ಧರ್ಮದಿಂದೇನುಪಯೋಗವೆಂದುಸಿರುವುದೇಕೆ ? ಕೃಷ್ಣದ್ವೈಪಾಯನಮುನಿಯು ಭಾರತದ ಕೊನೆಯಲ್ಲಿ :—

**ಊರ್ಧ್ವಬಾಹುರ್ವಿರೌಮ್ಯೇಷ ನಚ ಕಶ್ಚಿಚ್ಛೃಣೋತಿ ಮೇ ।**
**ಧರ್ಮಾದರ್ಥಶ್ಚ ಕಾಮಶ್ಚ ಸ ಧರ್ಮಃ ಕಿಂ ನ ಸೇವ್ಯತೆ ॥**

ಈ ನಾನು ಕೈಯತ್ತಿ ಗಟ್ಟಿಯಾಗಿ ಕೂಗಿ ಸರ್ವರನ್ನೂ ಕುರಿತು:— ಧರ್ಮವನ್ನನುಸರಿಸಿ ನಡೆವುದರಿಂದ ಅರ್ಥಕಾಮಗಳೆಂಬೆರಡು ಪುರುಷಾರ್ಥಗಳೂ ಸಾಧಿಸಲ್ಪಡುತ್ತವೆ. ಹೀಗಿರಲು ನೀವು ಸರ್ವಾರ್ಥಸಾಧಕವಾದ ಆ ಧರ್ಮವನ್ನದೇಕೆ ಅನುಷ್ಠಿಸುವುದಿಲ್ಲ ? ಎಂದು ವಿಚಾರಿಸುತ್ತೇನೆ; ಆದರೆ, ನನ್ನ ಈ ಆಕ್ರೋಶವನ್ನು ಯಾರೂ ಲಕ್ಷಿಸುವುದೇ ಇಲ್ಲ; ಏನುತಾನೇ ಮಾಡಲಿ ! ಎಂದು ಹೇಳಿರುವ ಮಾತುಗಳನ್ನೇ ನಾವೂ ಈಗ ಆಡಿತೋರಿಸುವ ಪ್ರಸಂಗವು ಪ್ರಾಪ್ತವಾಗಿರುವುದು.

ಪ್ರತಿಯೊಬ್ಬ ಮನುಷ್ಯನಿಗೂ ಐಹಿಕೋತ್ಕರ್ಷದಿಚ್ಛೆಯು ಇದ್ದೇ ಇರುವುದು. ನಾನು ವಿದ್ವಾಂಸನಾಗಬೇಕು, ವಿಶೇಷವಾಗಿ ಧನವನ್ನು ಸಂಪಾದಿಸಬೇಕು, ನನ್ನ ಕೀರ್ತಿಯು ಹಬ್ಬಲಿ, ಮನೆ, ಹೊಲ, ಮಡದಿ, ಮಕ್ಕಳು ಎಂಬೀ ಮುಂತಾದ ಸುಖಸಾಧನ ವಸ್ತುಗಳು ನನ್ನಿಷ್ಟಪ್ರಕಾರವಾಗಿ ದೊರೆಯಲಿ, ಬಹು ಜನರು ನನ್ನನ್ನು ಸತ್ಕರಿಸಲಿ ಎಂಬ ಮೊದಲಾದ ಬಯಕೆಯನ್ನೀಡೇರಿಸಿಕೊಳ್ಳುವುದಕ್ಕೋಸ್ಕರವೇ ಪ್ರತಿಯೊಬ್ಬನೂ ಹೆಣಗಾಡುತ್ತಿರುವನು. ದೈವವು ಅನುಕೂಲವಿರುವಾಗ ಅವರ ಮನೋರಥವು ನ್ಯೂನಾಧಿಕ ಪ್ರಮಾಣದಿಂದ ಕೈಗೂಡುವುದು. ದೈವವು ಪ್ರತಿಕೂಲವಾಗಿರಲು:—

**ಯಚ್ಚಿನ್ತಿತಂ ತದಿಹ ದೂರತರಂ ಪ್ರಯಾತಿ ।**
**ಯಚ್ಚೇತಸಾ ನಗಣಿತಂ ತದಿಹಾಭ್ಯುಪೈತಿ ॥**

ಎಂಬ ಸ್ಥಿತಿಯೊದಗುವುದು. ಇದು ಒಬ್ಬ ವ್ಯಕ್ತಿಯ ಲೌಕಿಕೋತ್ಕರ್ಷದ ಮಾತಾಯಿತು. ಇನ್ನು, ರಾಷ್ಟ್ರೋತ್ಕರ್ಷದ ಪ್ರಕಾರವಾದರೂ ಹೀಗೆ ಇರುವುದು. ಮೇಲೆ ಹೇಳಿದಂತೆ ಐಕೋತ್ಕರ್ಷತೆಯ ಇಚ್ಛೆಯುಳ್ಳ ವ್ಯಕ್ತಿಗಳ ಸಮೂಹವೇ ರಾಷ್ಟ್ರವು. ಏಕೆಂದರೆ— ಮನುಷ್ಯನು ರಾಷ್ಟ್ರದ ಘಟಕಾವಯವನೆಂಬ ಮಾತು ಸರ್ವಸಮ್ಮತವಾದುದು. ಸಮಾನವಾಗಿರತಕ್ಕ ಧರ್ಮ, ಭಾಷೆ, ವೇಷ; ಆಚಾರ ಮುಂತಾದುದರ ಯೋಗದಿಂದ ಏಕರಾಷ್ಟ್ರದ ಕಲ್ಪನೆಯು ರೂಢವಾಗಿರುವುದು. ಆ ಆ ರಾಷ್ಟ್ರದೊಳಗಿನ ಜನರು ಇತರ ರಾಷ್ಟ್ರಗಳನ್ನು ತಮಗೆ ಸಂಬಂಧಪಟ್ಟವುಗಳಲ್ಲವೆಂಬ ಭೇದಭಾವನೆಯುಳ್ಳವರಾಗಿರುವುದರಿಂದೇ ತಮ್ಮ ರಾಷ್ಟ್ರದು

ತ್ಕರ್ಷವಾಗಬೇಕೆಂಬ ಹಂಬಲದಿಂದ ಆ ಬಗ್ಗೆ ಬಹುವಿಧವಾಗಿ ಪ್ರಯ ತ್ನಿಸುತ್ತಿರುವರು.

ಇವೆರಡು ಸಂಗತಿಗಳೂ ಮಾನವ ಸ್ವಭಾವವನ್ನನುಸರಿಸಿವೆ. ವ್ಯಕ್ತಿಯ ಮತ್ತು ರಾಷ್ಟ್ರದ ಸ್ವಾರ್ಥಬುದ್ಧಿಯು ಸ್ವಾಭಾವಿಕವಾದುದು. ಈ ಸ್ವಾರ್ಥ ಬುದ್ಧಿಮೂಲಕವಾಗಿಯೇ ಜಗತ್ತಿನ ಆರಂಭದಿಂದ ವರ್ತ ಮಾನ ಸಮಯದ ವರೆಗೆ ಈ ಸೃಷ್ಟಿಯಲ್ಲಿ ಅಸಂಖ್ಯವಾದ ಅನರ್ಥಗಳು ಘಟಿಸಿವೆ, ಘಟಿಸುತ್ತಲಿವೆ, ಕಲ್ಪಾಂತದ ವರೆಗೆ ಘಟಿಸತಕ್ಕವುಗಳೇ. ಆದರೆ ತನ್ನ ಮತ್ತು ತನ್ನ ರಾಷ್ಟ್ರದ ಐಹಿಕೋತ್ಕರ್ಷವಾಗಬೇಕೆಂಬ ಮಾನವನ ಭಾವನೆಯು ಸ್ವಾಭಾವಿಕವಾದುದಾದರೂ ಅದು 'ನಾನು ಮತ್ತು ನನ್ನ' ದೆಂಬಭಿಮಾನಪೂರ್ವಕವಾದುದರಿಂದ ಆ ಭಾವನೆಯು ರಾಗ ದ್ವೇಷಗಳಿಂದ ಯುಕ್ತವಾಗಿರುವುದು. ರಾಗದ್ವೇಷೋಪೇತವಾದ ಆ ಭಾವನೆಯಿಂದ ತನ್ನ ಮೇಲೆಯೂ ಅನ್ಯರ ಮೇಲೆಯೂ ಯಾವ ಕಾಲಕ್ಕೆ ಯಾವ ವಿಧವಾದ ಅನರ್ಥಗಳಾವರಿಸುವುವೆಂಬದು ನಿಯ ಮವೇ ಇಲ್ಲ. ಪರಿಪರಿಯಾದ ಅನರ್ಥಗಳಿಗೆದೆಗೊಟ್ಟು ಕಷ್ಟಪಟ್ಟು ಇಷ್ಟೆಲ್ಲ ಪ್ರಯಾಸದಿಂದ ಸಂಪಾದಿಸಲ್ಪಟ್ಟ ಐಹಿಕೋತ್ಕರ್ಷವಾದರೂ ಅಲ್ಪ ಕಾಲವೇ ಇರತಕ್ಕದ್ದಾದಕಾರಣ, ಅದು ನಿಜವಾದುತ್ಕರ್ಷವೇ ಅಲ್ಲ.

ಜಗತ್ತಿನ ಆರಂಭದಿಂದ ಇಂದಿನವರೆಗೆ ಅನೇಕ ವ್ಯಕ್ತಿಗಳೂ, ರಾಷ್ಟ್ರಗಳ ಮುಖಂಡರೂ ವ್ಯಕ್ತಿಗಳ ಮತ್ತು ರಾಷ್ಟ್ರಗಳ ಉತ್ಕರ್ಷತೆ ಗಾಗಿ ಮನವಾರೆ ಹೆಣಗಾಡಿ ಮನದಬಯಕೆಯನ್ನೀಡೇರಿಸಿಕೊಂಡ ರೆಂಬುದು ಸುಪ್ರಸಿದ್ಧವಾಗಿರುವುದು. ಆದರೆ, ಅವರು ಸಾಧಿಸಿಕೊಂಡ ಉತ್ಕರ್ಷಗಳಲ್ಲಿ ಯಾವ ಉತ್ಕರ್ಷವು ಚಿರಕಾಲಿಕವಾಗಿ ಉಳಿದಿರುವುದು ? ಯಾವುದೂ ಇಲ್ಲ. ಪರ್ಯಾಲೋಚಿಸಿದರೆ :—

**ಕಸ್ಯೈಕಾಂತಂ ಸುಖಮುಪನತಂ ದುಃಖಮೇಕಾಂತಶೋ ವಾ ।**
**ನೀಚೈರ್ಗಚ್ಛತ್ಯುಪರಿಚ ದಶಾ ಚಕ್ರನೇಮಿಕ್ರಮೇಣ ॥**

ಎಂಬುದಾಗಿ ಮಹಾಕವಿಯಾದ ಕಾಳಿದಾಸನು ಹೇಳಿರುವಂತೆ, ಸುಖದ ಹಿಂದೆ ಹೇಗೆ ದುಃಖವು ನಿಯತವಾದುದೋ ಹಾಗೇ ಉತ್ಕ ರ್ಷದ ಬೆಂಬಿಡದೆ ಅಪಕರ್ಷವು ನಿಯತವಾಗಿದೆ. ಆದ್ದರಿಂದ ಯಾವ ಬಗೆಯಾದ ಲೌಕಿಕೋತ್ಕರ್ಷತೆಗಿಂತಲೂ ಧಾರ್ಮಿಕದುತ್ಕರ್ಷತೆಯು ಮಿಗಿಲಾದುದು. ಈ ಮೇಲೆ ಹೇಳಿದಂತೆ, ಧಾರ್ಮಿಕೋತ್ಕರ್ಷವು ಐಹಿಕ-

ಪಾರಲೌಕಿಕವೆಂಬೆರಡೂ ವಿಧವಾಗಿರುವುದರಿಂದೇ ಅದು ನಿತ್ಯವಾಗಿರುವುದು. ಅದರಲ್ಲಿ ರಾಗದ್ವೇಷಾದಿದೋಷಗಳಿಲ್ಲದುದರಿಂದ ನಿರುಪದ್ರವವೂ; ಉತ್ತರೋತ್ತರವಾಗಿ ಅಭಿವೃದ್ಧಿಯನ್ನೈದುವುದರಿಂದ ಮುಮುಕ್ಷುಗಳಿಗೆ ಅತ್ಯಂತಾಭೀಷ್ಟವಾದುದೂ ಆಗಿರುವುದೆಂಬಲ್ಲಿ ತಿಲಮಾತ್ರವೂ ಸಂದೇಹವಿಲ್ಲ. ಅದುಕಾರಣವೇ, ಸಾರಾಸಾರಾ ವಿಚಾರಪರಾಯಣನಾದ ಮನುಷ್ಯನು ಯಾವ ಲೌಕಿಕೋತ್ಕರ್ಷದಲ್ಲಿಯೂ ವಿಶೇಷಾಸಕ್ತನಾಗದೆ ಧಾರ್ಮಿಕದುತ್ಕರ್ಷತೆಗೋಸುಗ ಭಗೀರಥ ಪ್ರಯತ್ನವನ್ನು ಮಾಡತಕ್ಕದ್ದು. ಹಾಗೂ ಧರ್ಮಾನುಷ್ಠಾನವನ್ನು ಪ್ರಾಧಾನ್ಯವಾಗಿಟ್ಟುಕೊಂಡು ತದನುಸಾರವಾಗಿ ಲೌಕಿಕದುತ್ಕರ್ಷತೆಯನ್ನೂ ಮಾಡಿಕೊಳ್ಳಲೇಬೇಕು. ಏಕೆಂದರೆ— ಸಾತ್ವಿಕವಾದ ಐಹಿಕೋತ್ಕರ್ಷವೇ ಅತ್ಯಂತಾಭೀಷ್ಟವಾದುದು. ರಾಜಸವೂ, ತಾಮಸವೂ ಆಗಿರತಕ್ಕ ಐಹಿಕಪಾರಲೌಕಿಕೋತ್ಕರ್ಷಗಳು ತ್ಯಾಜ್ಯವೂ, ಹೀನವೂ, ಅನಿಷ್ಟವೂ ಎಂಬುದಾಗಿಯೇ ವೈದಿಕಧರ್ಮಪ್ರವರ್ತಕರಾದ ಪುರಾತನರು ನಿರೂಪಿಸಿದ್ದಾರೆ.

ಅನಂತರೂಪವಾಗಿರುವ ಈ ವಿಶ್ವದಲ್ಲಿ ಯೋಚಿಸಿ ನೋಡಿದರೆ, ಮಾನವ ಜನ್ಮವೇ ಸರ್ವೋತ್ಕೃಷ್ಟವಾದುದೆಂದು ಅನುಭವಸಿದ್ಧವಾಗುವುದು. ಮಾನವನಿಗೆ ತನ್ನ ಜನ್ಮದ ಯೋಗ್ಯತೆಯು ಎಂತಹದೆಂಬುದು ಗೊತ್ತಾದರೇನೇ ಸಾತ್ವಿಕವೃತ್ತಿಯ ವಿಕಾಸವೂ ಸರ್ವ ಜೀವರಲ್ಲಿ ಸಮತೆಯೂ, ಅಹಂಭಾವದ ಅಭಾವವೂ, ಕರ್ತವ್ಯ ಜಾಗೃತಿಯನ್ನು ಸ್ಥಿರಗೊಳಿಸುವ ಮನೋನಿಗ್ರಹವೂ ಮುಂತಾದುದು ಅವನಲ್ಲಿ ತಲೆದೋರಲು ಅನುವಾಗುವುದು. ಆತ್ಮವಿಶ್ವಾಸವನ್ನು ಜೊತೆಗೊಳಿಸಿ ಆತ್ಮೋದ್ಧಾರದ ನಿಲುಕಡೆಗೆ ಒಯ್ದು ಮುಟ್ಟಿಸತಕ್ಕದ್ದಾದ ಆಧ್ಯಾತ್ಮಿಕೋನ್ನತಿಯನ್ನು ಪ್ರತಿಯೊಬ್ಬನೂ ಪಡೆಯಬೇಕಾದುದು ಅತ್ಯಾವಶ್ಯಕವಾದ ಆದ್ಯಕರ್ತವ್ಯವು. ಇಷ್ಟೇ ಅಲ್ಲ; ಮನುಷ್ಯನು ತನ್ನ ಜನ್ಮದ ಯೋಗ್ಯತೆಯನ್ನು ಎಲ್ಲಿಯು ವರೆಗೆ ತಿಳಿಯದವನಾಗಿರುವನೋ ಅಲ್ಲಿಯವರೆಗೂ ಅವನು ಕಲಿತವನೂ, ಶರೀರದಿಂದ ಗಟ್ಟಿಮುಟ್ಟನೂ, ಚಿತ್ತೋನ್ನತಿಯುಳ್ಳವನೂ ಆಗಿದ್ದರೂ ಕೂಡ ಆ ಜಾಣತನ ಗಟ್ಟಿಮುಟ್ಟತನ, ಚಿತ್ತೋನ್ನತಿಗಳಿಗೆ ಆಧ್ಯಾತ್ಮಜ್ಞಾನದ ಜೋಡು ( ಜೊತೆಯು ) ಇಲ್ಲದ ಮೂಲಕ ಅವನು ಏಕಾಂಗಿಯೆಂದೇ ಹೇಳಲ್ಪಡುತ್ತಾನೆ, ಒಟ್ಟಿನಲ್ಲಿ ಮನುಷ್ಯನು ಕೇವಲ ವ್ಯಾವಹಾರಿಕ ಕೃತ್ಯಗಳಲ್ಲಿ ತೊಡಗಿರುವುದೇ ಅವನ ಮುಖ್ಯವಾದ ಧ್ಯೇಯವಲ್ಲ. ಎಂತಹ ಬಿಕ್ಕಟ್ಟಿನ ಪ್ರಸಂಗವು ಬಂದೊದಗಿದರೂ ಮನ

ಸ್ಸನ್ನು ಚಂಚಲವಾಗದ ಹಾಗೆ ಮಾಡಿ ಆಧ್ಯಾತ್ಮಿಕೋನ್ನತಿಯಿಂದ ಆ ಮನಸ್ಸಿಗೆ ಪೂರ್ಣ ಶಾಂತಿಯನ್ನೊದಗಿಸಿಕೊಡಲು ಶಕ್ಯವಿದೆ. ಹಂಸದ ಚಂಚೂಪುಟವು ಹಾಲು ನೀರುಗಳನ್ನು ಬೇರ್ಪಡಿಸುತ್ತಿರುವಂತೆ, ಆಧ್ಯಾತ್ಮಿಕ ಸಂಸ್ಕಾರ ವಿಶಿಷ್ಟವಾದ ಮನೋವೃತ್ತಿಯು ವಿಶ್ವದೊಳಗಿನ ಸಾರಾಸಾರವನ್ನು ವಿಂಗಡಿಸುವುದು. ಅಧ್ಯಾತ್ಮ ವಿಚಾರದ ದಾರಿಯನ್ನೇ ಅರಿಯದ ಮನವು ಸಮಾಧಾನವನ್ನು ಹೊಂದದೆ ಬಿಸಿಲ್ಗುದುರೆಯನ್ನು ಅಗ್ಗಣಿಯೆಂದರಿದು ಕೋಟಲೆಗೊಳ್ಳುವನಂತೆ, ಅಸಾರರೂಪಗಳಾದ ವಸ್ತುಗಳ ಹಂಬಲದಿಂದ ಬಹಳವಾಗಿ ಒಳಲುವುದು. ನೀರು ಹಸರು, ಹಳದಿ, ಕೆಂಪು ಮೊದಲಾದ ಬೇರೆ ಬೇರೆ ಬಣ್ಣಗಳೊಡನಾಟದಿಂದ ಆ ಆ ರೂಪಗಳನ್ನು ಪಡೆಯುವಂತೆ, ಮನುಷ್ಯನ ಇಚ್ಛೆಯೆಂಬುದು ಮೊದಲು ಶುದ್ಧವಾಗಿರುವುದು, ಅದು ಬಹಿರ್ಮುಖವಾಗಿ ಹೊರಗಿನ ಬೇರೆ ಬೇರೆ ವಿಷಯಗಳನ್ನವಲಂಬಿಸಿ ವನಿತೇಚ್ಛೆ, ಧನೇಚ್ಛೆಯೆಂಬೀ ಮುಂತಾದ ಹೆಸರುಗಳನ್ನು ಪಡೆಯುವುದು. ಬಾಹ್ಯವಿಷಯಗಳ ಹಂಬಲವುಳ್ಳ ಮನಸ್ಸು ಯಾವಾಗಲೂ ನಾನಾವಿಧ ಕಲ್ಪನೆಗೊಳಗಾಗಿ ನಿಜವಾದ ಶಾಂತಿಯನ್ನು ಪಡೆಯದೆ ಕೊರಗುತ್ತಿರುವುದು. ಆದರೆ, ಸಾರಭೂತವೆನಿಸುವ ಆಧ್ಯಾತ್ಮಿಕ ವಿಷಯದ ಕಡೆಗೆ ಹೊರಳಿದ ಅಂತರ್ಮುವೃತ್ತಿಯುಳ್ಳ ಮನಸ್ಸಾದರೋ ತೀವ್ರವಾಗಿ ಸುಖಶಾಂತಿಯನ್ನು ಹೊಂದುವುದು. ಇಷ್ಟೇ ಅಲ್ಲ; ಆಧ್ಯಾತ್ಮಿಕ ವಿಷಯದಲ್ಲಿ ವಿಶೇಷವಾಗಿ ಆಸಕ್ತಿಯುಳ್ಳ ಚಿತ್ತವೃತ್ತಿಗೆ ಇಂಥದೇ ಇಷ್ಟೇ ಲಾಭವಾಗುವುದೆಂದು ಹೇಳಲಿಕ್ಕೆ ಬರುವುದಿಲ್ಲ. ಆದರೆ ಅದನ್ನು ಸಾಧಿಸದಿರುವುದರಿಂದ ಮಾತ್ರ ಅಪರಿಮಿತ ಹಾನಿಯಾಗುವುದು.

ನಾನು ಯಾರು ? ಎಲ್ಲಿಂದ ಬಂದೆನು ? ನಾನು ಈ ವಿಧವಾಗಿ ಜನ್ಮವನ್ನೆತ್ತಿ ಸಂಸೃತಿ ಪ್ರವಾಹದೊಳು ಬಿದ್ದು ಹರಿದು ಹೋಗುತ್ತಿರಲು ಕಾರಣವೇನು ? ಕಡೆಗೆ ನಾನು ಎಲ್ಲಿಗೆ ಹೋಗಬೇಕಾಗಿರುವುದು ? ಪ್ರತಿದಿನವೂ ಮಾನಸಿಕ ಶಾರೀರಿಕ ಕರ್ಮಗಳನ್ನು ಮಾಡಲೇಬೇಕಾದುದೆಂಬೀ ಕೋಟಲೆಯು ನನ್ನ ಬೆಂಬಿಡದಿರಲು ಕಾರಣವೇನಿರಬಹುದು ? ಇದೆಲ್ಲದರ ನಿಯಂತೃತ್ವವು ಯಾರ ಕಡೆಗಿರುವುದು ? ಅವನು ಇದೆಲ್ಲವನ್ನೂ ಮಾಡುವುದರಲ್ಲಿ ಹೇತುವೇನಿರಬಹುದು ? ಎಂಬೀ ಮುಂತಾದುದರ ವಿಚಾರವಿಲ್ಲದವನು ಮನುಷ್ಯಕೋಟಿಯಲ್ಲಿ ಪರಿಗಣಿಸಲ್ಪಡುತ್ತಿರುವವನಾದರೂ ಮಾನವ ಜನ್ಮದ ಯೋಗ್ಯತೆಯನ್ನರಿಯದವನಾದುದ

ರಿಂದ ಅವನಲ್ಲಿ ಮನುಷ್ಯತ್ವವಿರುವುದೆಂದು ಹೇಳಬಹುದೇನು ? ಓರ್ವ ಔತ್ತರೇಯ ಸಾಧುಪುರುಷನು :—

**ಆದಮಿ ಆದಮಿ ಸಬ್ ಕೋಯಿ ಕಹೆ,**
**ಆದಮಿಕಾ ಬಡಾ ಸುಕಾಲ ಹೈ ।**
**ಮಗರ್ ಜಿಸ್ ಆದಮಿಮೆ ಆದಮಿಪನ್ ಹೊ**
**ಉಸಕಾ ಬಡಾ ದುಕಾಲ ಹೈ ॥**

ನಾನೂ ಮನುಷ್ಯನೇ, ನೀನೂ ಮನುಷ್ಯನೇ, ಎಂದು ಎಲ್ಲರೂ (ತಾವು ಮನುಷ್ಯರೆಂದೇ) ಎದೆ ತಟ್ಟಿ ಹೇಳುತ್ತಾರೆ; ಎಲ್ಲಿನೋಡಿದಡಲ್ಲಿ ಮನುಷ್ಯರ ಸುಗ್ಗಿಯೇ ! ಆದರೆ, ಮನುಷ್ಯತ್ವವುಳ್ಳ ಮಾನವರ ಬರಗಾಲವಾದರೋ ಹೆಚ್ಚಾಗಿರುವುದು ಕಂಡುಬರುತ್ತದೆ; ಎಂಬುದಾಗಿ ಹೇಳಿರುವುದು ಮನನೀಯವಾಗಿದೆ.

ಮನುಷ್ಯ ಜನ್ಮದ ಮಹತ್ವವನ್ನರಿತು, ಅದರಿಂದ ಸಾಧಿಸಲ್ಪಡತಕ್ಕದ್ದು ಮುಖ್ಯವಾದುದು ಯಾವುದು ? ಎಂಬೀ ಮುಂತಾದ ವಿಚಾರಪರಾಯಣನಾದವನಿಗೆ ಆಧ್ಯಾತ್ಮಿಕ ಜ್ಞಾನದಿಂದ ಈ ಮೇಲೆ ನಿರ್ದಿಷ್ಟವಾದ ಎಲ್ಲದರ ಜಿಜ್ಞಾಸೆಯು ತೃಪ್ತವಾಗಿ, ಆ ಮೂಲಕ ವಿಶಿಷ್ಟತರವಾದ ಮಾನಸಿಕ ಮತ್ತು ಶಾರೀರಕ ಸ್ವಾಸ್ಥ್ಯವು ಲಭಿಸುವುದು. ಈಶ್ವರ ವಿಷಯಕವಾದ ಜ್ಞಾನದಿಂದ, ಸಾಮಾನ್ಯವಾಗಿ ತೋರಲ್ಪಡುವ ಕ್ಷುಲ್ಲಕ ಪದಾರ್ಥಗಳಲ್ಲಿಯು ಕೂಡ ಎಷ್ಟು ಅಲೌಕಿಕತ್ವವು ತುಂಬಿದೆಯೆಂದೂ ಈ ನಾಮರೂಪಾತ್ಮಕ ವಿಶ್ವಪ್ರಪಂಚನಿರ್ಮಾಣದಲ್ಲಿ ಅವನು ತೋರಿಸಿದ ಕೌಶಲವು ಎಷ್ಟು ವಿಚಿತ್ರವಾಗಿರುವುದೆಂದೂ ಈ ಮುಂತಾದ ಪರಮೇಶ್ವರನ ಆಗಾಧವಾದ ಸಾಮರ್ಥ್ಯದ ವಿಷಯದಲ್ಲಿ ಮನುಷ್ಯನ ಬುದ್ಧಿವೃತ್ತಿಯು ಕುಂಠಿತವಾಗುವುದಲ್ಲದೆ, ತನ್ನಲ್ಲಿ ಅಹಂಮನ್ಯತೆಯು ಅಡಗಿ ಸಾರ್ವತ್ರಿಕವಾಗಿ, ಉಚ್ಚತಮವೂ, ಸಾತ್ವಿಕವೂ ಆದ ಭಾವನೆಯುಂಟಾಗುವುದು. ಮನುಷ್ಯನಿಗೆ ಒಮ್ಮೆ ಈ ಬಗೆಯ ಆಧ್ಯಾತ್ಮಿಕ ದೃಷ್ಟಿಯು ಪ್ರಾಪ್ತವಾಯಿತೆಂದರೆ ಅವನ ಒಲವೇ ಬೇರೆಯಾಗುತ್ತದೆ.

ಈ ವಿಶ್ವಪ್ರಪಂಚವು ಆಧ್ಯಾತ್ಮಿಕಭಾವನೆಯುಳ್ಳವನನ್ನು ಬಾಧಿಸಲಾರದು. ಪ್ರಪಂಚವು ಅಂದರೆ, ನಾಮರೂಪಾತ್ಮಕವಿಸ್ತಾರವು. ಆಧ್ಯಾತ್ಮಿಕ ಭಾವನೆಯುಳ್ಳವನೆಂದರೆ, ಶಾಂಭವ ಜ್ಞಾನಸಂಪನ್ನನು. ಅಂತಪ್ಪ

ಶಿವಜ್ಞಾನಿಗಾದರೂ ಶರೀರಾದಿ ಪ್ರಪಂಚವಿರುವುದಿಲ್ಲವೆಂತಲ್ಲ, ಆದರೂ ಅವನು ನಾಮರೂಪಾತ್ಮಕಗಳಾದ ಶರೀರಾದಿ ಆ ಅನಾತ್ಮಪದಾರ್ಥಗಳಲ್ಲಿ 'ನಾನು, ನನ್ನದು' ಎಂಬ ಅಹಂಕಾರ, ಮಮಕಾರ ರಹಿತನಾಗಿರುವುದರಿಂದ ಬಾಧಕವಿಲ್ಲ ಆತ್ಮಾನಾತ್ಮವಿವೇಕ ಶೂನ್ಯರಾದ ಜಡವಾದಿಗಳಿಗಾದರೋ ಆ ಶರೀರಾದಿ ಪ್ರಪಂಚವು ಬಾಧಕವಾಗಿರುವುದು. ಅದುಃಕಾರಣವೇ, ಅಧ್ಯಾತ್ಮ ಸಂಸ್ಕಾರ ವೃತ್ತಿಯುಳ್ಳವನು ಯಾವಾಗಲೂ ತನ್ನಲ್ಲಿ ವಿವೇಕವು ಜಾಗರೂಕವಾಗಿರುವುದರಿಂದ ಧೈರ್ಯವುಳ್ಳವನೂ ಸಮಾಧಾನಿಯೂ ಆಗಿರುತ್ತಾನೆ. ದೇಹ ಮುಂತಾದ ಅನಾತ್ಮ (ಜಡ, ಅಸಾರ, ಭೌತಿಕ) ಪದಾರ್ಥಗಳಲ್ಲಿ 'ನಾನು, ನನ್ನದು' ಎಂಬ ತಾದಾತ್ಮ್ಯಬುದ್ಧಿಯುಳ್ಳವನಾದರೋ ಪ್ರಪಂಚಮೋಹಿ ಎನಿಸುತ್ತಾನೆ, ಇಂತಹ ಮನುಷ್ಯನೇ ಸಂಸಾರಿಯು, ಸಂಸಾರಿಯೇ ಬದ್ಧನು; ಸಂಸಾರಿಯೆನಿಸುವ ಜೀವನಿಗೆ ಎಂದಿಗೂ ಶಾಂತಿಯೇ ಇಲ್ಲ. ಏಕೆಂದರೆ ಪ್ರಾಪಂಚಿಕ ವಿಷಯಗಳ ಮೇಲಿನ ಮೋಹವು ಆತ್ಮನ ಸಾಹಜಿಕವಾದ ಶಾಂತಿಗೆ ಪ್ರತಿಬಂಧಕವಾಗಿದೆ. ಆದ್ದರಿಂದ, ಬಲ್ಲವರು 'ಮೋಹವೇ ಸಂಸೃತಿ ದುಃಖಕ್ಕೆ ಬೀಜ' ವೆಂದುಸಿರುವರು. ಇದರಿಂದ ವನಿತಾದಿ ಪ್ರಾಪಂಚಿಕ ವಿಷಯಗಳು ಬಂಧಕಗಳಲ್ಲ. ಅವುಗಳ ಮೇಲಿನ ಮೋಹವೇ ಜೀವನ ಸಂಸಾರದೆಡೆಯಾಟಕ್ಕೆ ಹೇತುವೆಂಬುದು ಸಿದ್ಧವಾಗುತ್ತದೆ.

ಮೋಹವು ತೊಲಗಬೇಕಾದರೋ ದೋಷದೃಷ್ಟಿಯು ಬೇಕು; ಮೋಹವು ಅಂದರೆ, ಯಾವುದಾದರೊಂದು ವಿಷಯದಲ್ಲಿ ಅದು ಸುಖಕ್ಕೆ ಸಾಧನೆಯೆಂಬ ಭಾವನೆಯುಂಟಾಗುವಿಕೆಯು; ಅದೇ ವಿಷಯವೇ ನಮಗೆ ಪ್ರತಿಕೂಲವಾಗಿ ದುಃಖಕ್ಕೆ ಸಾಧನೆಯೆಂದು ತಿಳಿಯಲ್ಪಟ್ಟಾಗಲೇ ಆ ವಿಷಯದಲ್ಲಿ ಮೋಹಕ್ಕೆ ವಿರುದ್ಧವಾದ ದ್ವೇಷರೂಪವಾದ ದೋಷ ದೃಷ್ಟಿಯುಂಟಾಗುವುದು. ಪ್ರತಿಯೊಂದು ವಿಷಯವೂ ಯಾವಾಗಲೂ ಸುಖಕ್ಕೇನೇ ಸಾಧನೆಯಾಗಿರುವುದೆಂದು ಹೇಳಲಾಗುವುದಿಲ್ಲ; ಇಷ್ಟೇ ಅಲ್ಲ, ಜಗತ್ತಿನಲ್ಲಿ ಆನಂದನಿಧಿಯಾದ ಪರಶಿವನ ಹೊರತು ಮಿಕ್ಕ ಯಾವ ವಿಷಯಗಳಾದರೂ ಅನಿತ್ಯ, ಜಡ, ದುಃಖರೂಪಗಳಾದುದರಿಂದ, ಅವೆಲ್ಲವೂ ಸುಖರೂಪಗಳೂ ಅಲ್ಲ, ಸುಖಕ್ಕೆ ಸಾಧನೆಗಳಂತೂ ಅಲ್ಲವೇ ಅಲ್ಲ.

ವಿಷಯಗಳು ಸುಖರೂಪಗಳಾಗಿರದಿದ್ದರೆ ಹೋಗಲಿ, ಸುಖಕ್ಕೆ ಸಾಧನೆಗಳೂ ಆಗಲಾರವೊ ? ಹಾಗಲ್ಲದ ಪಕ್ಷದಲ್ಲಿ ದೊಡ್ಡ ದೊಡ್ಡ

ಪಂಡಿತರೆನಿಸಿಕೊಳ್ಳುವ ಭೌತಿಕ ಸುಖವಾದಿಗಳು ದಡ್ಡರೇನು ? ಎಂದರೆ, ಅವರಿಗೆ ನಾವು ದಡ್ಡರೆಂದು ಹೇಳಲಾರೆವು. ಆದರೆ ವಿಷಯಗಳೇ ಸುಖಕ್ಕೆ ಸಾಧನೆಗಳೆಂದು ಅವರು ಛಲವಾದಿ ( ಹಠವಾದಿ ) ಗಳಾದರೆ ಮಾತ್ರ ಅವರನ್ನು, ಮಳಲನ್ನು ಗಾಣದಲ್ಲಿ ಹಾಕಿ ಅದರಿಂದ ಎಣ್ಣೆಯನ್ನು ತೆಗೆದು ಹಣವನ್ನು ಗಳಿಸಿ ಸುಖಿಯಾಗುವೆನೆಂಬ ಅರೆಮರುಳನ ಸಹಾಧ್ಯಾಯಿಗಳೆಂದು ತಿಳಿಯದಿರಲಾರೆವು 'ತುಷ್ಯತು ದುರ್ಜನಃ' ಎಂಬ ನ್ಯಾಯದಂತೆ. ವಿಷಯಗಳಿಂದ ಸುಖವುಂಟೆಂದೊಪ್ಪಿದರೂ ತನ್ಮೂಲಕ ಈ ಜಗತ್ತಿನಲ್ಲಿ ಯಾವನು ತಾನೇ ಕೃತಾರ್ಥನಾಗಿದ್ದಾನೆ ? ಮತ್ತು ವಿಷಯ ಸುಖವು ಹಂಗಿಸದು; ವಿಷಯಗಳೂ ಅವುಗಳನ್ನು ಪಭೋಗಿಸತಕ್ಕ ಇಂದ್ರಿಯಾದಿಗಳೂ ಒಂದೇ ಕಾಲದಲ್ಲಿ ಸರಿಯಾಗಿ ಇದ್ದರೇನೇ ಅಲ್ಲವೇ ವಿಷಯ ಸುಖವು ? ಹಾಗಿದ್ದರೂ ಮನುಷ್ಯನ ಮನಸ್ಸು ಯಾವಾಗಲೂ ಒಂದೇ ಬಗೆಯ ಒಂದೇ ವಿಷಯದ ಇಚ್ಛೆಯುಳ್ಳದ್ದಾಗಿಯೂ ಅದೊಂದನ್ನೇ ತನಗೆ ಸುಖಸಾಧನರೂಪವಾದುದೆಂಬುದಾಗಿಯೂ ನಂಬುವುದೇ ? ವಿಷಯಗಳಾದರೋ ಆ ಬಗೆಯ ವಿಶ್ವಾಸಕ್ಕೆ ಪಾತ್ರವಾಗಿಯೇ ? ಈ ದಿವಸ ಯಾವ ವಿಷಯವು ಸುಖಸಾಧನರೂಪವಾದುದೆಂದು ತಿಳಿಯಲ್ಪಡುವುದೋ ಮರುದಿವಸವೇ ಇಷ್ಟೇ ಅಲ್ಲ, ಮರುಗಳಿಗೆಯಲ್ಲಿಯೇ ಅದೇ ವಿಷಯವು ತನಗೆ ದುಃಖವನ್ನುಂಟು ಮಾಡುವುದೆಂಬುದಾಗಿ ಮೋಹವಿದ್ದೆಡೆಯಲ್ಲಿ ದೋಷ ದೃಷ್ಟಿಯು ಬಂದು ಕುಳಿತುಕೊಳ್ಳುವುದು; ಹೀಗೆಯೇ ವಿಷಯಗಳು ನಿಯತಗಳಾದ ಸುಖಸಾಧನರೂಪವಾದವುಗಳೆಂದು ಯಾವನೂ ಸಿದ್ಧಮಾಡಲಾರನು.

ಗುದ್ದಿಸಿಕೊಳ್ಳುವುದೂ ಒಂದು ಸುಖಸಾಧನೆಯೇ ? ಅಲ್ಲ; ಹಾಗಿದ್ದರೆ ಒಬ್ಬರಿಗೊಬ್ಬರು ಹೊಡೆದಾಡುವುದರಿಂದ ಸುಖವುಂಟೆಂದು ತಿಳಿಯಬಹುದಾಗಿದ್ದಿತಲ್ಲವೇ ? ವಾತರೋಗಿಯಾದರೋ ಮೋಡಮುಸುಕಿ ತಂಗಾಳಿ ಬೀಸುವ ದಿನದಲ್ಲಿ, ಗುದ್ದಿಸಿಕೊಳ್ಳುವುದರಿಂದೇ ತನಗೆ ಸುಖವುಂಟೆಂದು ಹೇಳುತ್ತಾನೆ: ಅವನ ಹೇಳುವಿಕೆಯಂತೆ ಮಿಕ್ಕವರೂ ಗುದ್ದಿಸಿಕೊಳ್ಳುವುದರಿಂದೇ ಸುಖವುಂಟೆಂದು ಭಾವಿಸಿ ಆ ಕೆಲಸದಲ್ಲಿ ತೊಡಗಿದವರುಂಟೇ ? ಹಾಗೇ ಅಜ್ಞಾನ ಇಲ್ಲವೆ ವಿಷಯ ವ್ಯಾಮೋಹವೆಂಬ ರೋಗಪೀಡಿತರು ಕಷ್ಟಕರಗಳಾದ ವಿಷಯಗಳನ್ನೇ ಸುಖಸಾಧನೆಗಳೆಂದು ಸಾರುತ್ತಿರುವುದು ಸೋಜಿಗವಲ್ಲ.

ಅಸ್ಥಿಗತಜ್ವರವು ಅರುಚಿ, ಬಾಯಾರಿಕೆ ಮೊದಲಾದ ವಿಕಾರಗಳಿಂದರಿಯಲ್ಪಡುತ್ತಿರುವಂತೆ, ಮನುಷ್ಯನ ಮನೋಗತವಾದ ವಿಷಯವ್ಯಾಮೋಹವು ಅನುಕೂಲ ಪ್ರತಿಕೂಲಗಳ ಸಂದರ್ಭಗಳಲ್ಲಿ ರಾಗದ್ವೇಷಾದಿಗಳ ಮೂಲಕ ತಿಳಿಯಲ್ಪಡುತ್ತದೆ. ಆ ಜ್ವರರೋಗಪೀಡಿತನ ಬಾಯಾರಿಕೆಯು ಅವನು ಬೇಡಿದ ಹಾಗೆಲ್ಲ ತಣ್ಣೀರನ್ನು ಕೊಡುತ್ತ ಹೋದರೇನೇ ಅವನಿಗೆ ಸುಖವುಂಟಾಗುವುದೆಂದು ಹೇಳುವುದು ತಪ್ಪು; ಹಾಗೇ ಆತ್ಮನನ್ನು ಅಂಟಿಕೊಂಡಿರುವ ಅಜ್ಞಾನ ( ಮೋಹ ) ರೂಪವಾದ ಅಸ್ಥಿಗತ ಜ್ವರನಿವೃತ್ತಿಗೆ ಉಪಾಯವಾವುದೋ ಅದನ್ನು ಯೋಚಿಸದೆ ವಾಸನಾರೂಪ ಬಾಯಾರಿಕೆಯನ್ನು ಕಳೆಯುವುದಕ್ಕೆಂದು ಮನಸ್ಸು ಬೇಡಿದ ಹಾಗೆಲ್ಲ ವಿಷಯರೂಪವಾದ ಸೀತಾಳವನ್ನೊದಗಿಸಿಕೊಡಲು ವಾಸನಾರೂಪ ಬಾಯಾರಿಕೆಯು ಮತ್ತಿಷ್ಟು ಹೆಚ್ಚಾಗುತ್ತಲಿರುವುದೆಂಬ ಸಂಗತಿಯು ಸರ್ವಾನುಭವ ಸಿದ್ಧವಾಗಿರುವುದು. ಮತ್ತು ಪುರಾತನರಾದ ಬ್ರಹ್ಮರ್ಷಿಗಳೂ ರಾಜರ್ಷಿಗಳೂ ಈ ಬಗ್ಗೆ ತಮ್ಮ ಅನುಭವಸಿದ್ಧವಾದ ವಚನಗಳಿಂದ ಚೆನ್ನಾಗಿ ಭೋಧಿಸಿದ್ದಾರೆ. ಪೂರ್ವಕಾಲದಲ್ಲಿ ಸಪ್ತರ್ಷಿಗಳು ತಪಸ್ಸನ್ನಾಚರಿಸುತ್ತ ಸಂಚರಿಸುತ್ತಿರಲು, ದೈವವಶದಿಂದ ಒಮ್ಮೆ ಅನಾವೃಷ್ಟಿಮೂಲಕ ಬರಗಾಲವೊದಗಿತು; ಆದರೂ ಆ ಮಹರ್ಷಿಗಳು ಅಲ್ಲಲ್ಲಿ ಅಲ್ಪಸ್ವಲ್ಪವಾಗಿ ಸಿಕ್ಕ ಕಂದಮೂಲಾದಿಗಳ ಸೇವನೆಯಿಂದೇ ಸಂತುಷ್ಟರಾಗಿ ತಮ್ಮ ಧಾರ್ಮಿಕಾನುಷ್ಠಾನದಲ್ಲಿ ಆಸಕ್ತರಾಗಿರಲು, ವೃಷಾದರ್ಭಿಯೆಂಬ ರಾಜನು ಅವರ ಬಳಿಗೆ ಬಂದು ಭೂರಿ ಧನ ಮುಂತಾದುದನ್ನು ಅವರಿಗೆ ಅರ್ಪಿಸಲು ಸಿದ್ಧನಾಗಿದ್ದರೂ ಕೂಡ ಆ ತಪಸ್ವಿಗಳು ಅದನ್ನು ನಿರಾಕರಿಸಿ ತಮಗೆ ಪರಮೇಶ್ವರನು ಅನುಕೂಲಮಾಡಿಕೊಟ್ಟಿದ್ದುದರಲ್ಲಿಯೇ ಸಂತೃಪ್ತರಾಗಿ ಹೆಚ್ಚಿನ ವಿಷಯಗಳಾಶೆಯನ್ನು ತೊರೆದು ತಮ್ಮ ಆತ್ಮೋನ್ನತಿಗೆ ಮುಖ್ಯ ಸಾಧನವಾದ ಸದ್ಧರ್ಮಾನುಷ್ಠಾನವೊಂದು ಅವ್ಯಾಹತವಾಗಿ ಸಾಗಿದರೆ ಸಾಕೆಂಬ ನಿಶ್ಚಿತವೃತ್ತಿಯುಳ್ಳವರಾಗಿದ್ದುದರಿಂದೇ ಅವರ ಬಾಯಿಂದ—

**ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ಸರ್ವಂ ತನ್ನಾಲಮೇಕಸ್ಯ ತಸ್ಮಾದ್ವಿದ್ವಾಂಚ್ಛಮಂ ಚರೇತ್ ॥**

ಪೃಥಿವಿಯೊಳಗಿನ ನೆಲ್ಲು ಇಲ್ಲವೆ ಜವೆ, ಬಂಗಾರ, ಪಶುಗಳು, ಸ್ತ್ರೀಯರು ಎಂಬೀ ವಸ್ತುಗಳೆಷ್ಟಿರುವವೋ ಅವೆಲ್ಲವೂ ಒಬ್ಬನ ಸುಖ

ವಾಸನೆಗಳನ್ನು ಕೂಡ ತೃಪ್ತಿಪಡಿಸಲಾರವು, ಆದ್ದರಿಂದ ವಿದ್ವಾಂಸನು ಮನೋನಿಗ್ರಹದಿಂದ ಶಾಂತಿಯನ್ನು ಪಡೆಯತಕ್ಕದ್ದು; ಎಂಬ ವಾಕ್ಯಗಳು ಹೊರಬಿದ್ದವು. ಈ ವಿಷಯವು ಮಹಾಭಾರತದಲ್ಲಿ ಅನುಶಾಸನ ಪರ್ವದ ೯೩ ನೆಯ ಅಧ್ಯಾಯದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಮತ್ತು ಆದಿ ಪರ್ವದ ೭೫ ನೆಯ ಅಧ್ಯಾಯದಲ್ಲಿರುವ ಯಯಾತಿಯ ಕಥೆಯಾದರೂ ಬೋಧಪ್ರದವಾಗಿದೆ. ಯಯಾತಿಯು ತನ್ನ ಮಗನ ಯೌವನವನ್ನು ತೆಗೆದುಕೊಂಡು, ಬಹುಕಾಲದ ವರೆಗೆ ವಿಷಯ ಸೌಖ್ಯವನ್ನನುಭವಿಸಿಯೂ ಕೊನೆಗೆ ತೃಪ್ತನಾಗದೆ ಮರಳಿ ಮಗನಿಂದ ತನ್ನ ಮುಪ್ಪನ್ನು ತೆಗೆದು ಕೊಂಡು ತನಗೆ ಅನುಭೂತವಾದ ವಿಷಯದ ಬಗ್ಗೆ ಹೀಗೆ ನುಡಿದಿರುವನು—

**ನಜಾತು ಕಾಮಃ ಕಾಮನಾಮುಪಭೋಗೇನಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೆ ॥**

ವಿಷಯಗಳುಪಭೋಗದಿಂದ ವಿಷಯವಾಸನೆಯು ತೃಪ್ತವಾಗದೆ, ಹವನದ್ರವ್ಯದಿಂದ ಅಗ್ನಿಯು ಪ್ರಜ್ವಲಿತವಾಗುವಂತೆ ಉಪಭೋಗದಿಂದ ಅದು ಮತ್ತಿಷ್ಟು ಹೆಚ್ಚಾಗುವುದು.

ವಿಷಯವಾಸನೆಯೆಂಬ ಕೂಳಬಕ್ಕನಾಗಿರುವ ಸಹಸ್ರಾಧಿಪನೇನು, ಸಾಹುಕಾರನೇನು, ಸಾರ್ವಭೌಮನೇನು, ಇಂದ್ರನೇನು. ಯಾರಿಗೂ ಶಾಂತಿಯೆಂಬುದೇ ಇಲ್ಲ. ಈ ಜಗತ್ತಿನಲ್ಲಿ ವಿಷಯವ್ಯಾಮೋಹವಿಲ್ಲದ ಶಿವಜ್ಞಾನಿಯೋರ್ವನೇ ಅಚ್ಚಸುಖಿಯು. ಇದಕ್ಕೆ ವಿಪರೀತವಾಗಿ, ಕುಕ್ಷಿತುಂಬ ಕೂಳನುಂಡು ಚಕ್ಷುತುಂಬ ನಿದ್ದೆಮಾಡಿ ಇಷ್ಟು ಚಾಪನಾಟದಲ್ಲಿ ಕಾಲಕಳೆಯುವುದೇ ಅಚ್ಚ ಸುಖವೆಂಬುದಾಗಿ ಅರಿತಿರುವ ನಮ್ಮ ಮನವೆಳಸಿದ ವಿಷಯಗಳನ್ನು ಮನವಾರೆ ಉಪಭೋಗಿಸಲು ಅನುಕೂಲಗಳಾದ ಸಾಧನಸಾಮಗ್ರಿಗಳು ಎಲ್ಲಿ ನೋಡಿದಡಲ್ಲಿ ಹೇಗೆಬೇಕೋ ಹಾಗೆ ದೊರೆಯುತ್ತಿರುವ ಈಗಿನ ಕಾಲವೇ ಸುಧಾರಿಸಿದ ಕಾಲವಂತೆ! ಹಿಂದಿನಕಾಲದ ಹಿಂದುಗಳ ಮಿದುಳು ಮದಡವಾಗಿದ್ದಿತಂತೆ! ಅಯ್ಯೋ ಅಜ್ಞಾನವೇ!

ಗುಡ್ಡವನ್ನೆಲ್ಲ ತೋಡಿ ಕಡೆಗೆ ಒಂದು ಇಲಿಯನ್ನು ಸಂಪಾದಿಸಿದನೆಂಬ ಗಾದೆಯ ಮಾತಿನಂತೆ, ನೆಲ, ನೀರು, ಬೆಂಕಿ, ಗಾಳಿ ಮುಂತಾದ ಜಡಪದಾರ್ಥಗಳನ್ನೆಲ್ಲ ಮಥಿಸಿ ವಿಷಯೋಪಭೋಗದ ಎಷ್ಟು ಸಾಮ

ಗ್ರಿಗಳನ್ನು ಹೆಚ್ಚಿಸಿದರೂ ಕಡೆಗೆ ಅದರಿಂದ ಸುಖಾಭಾಸಮಾತ್ರ ದೊರೆ ದಂತಾಗುವುದಲ್ಲದೆ ನಿಜವಾದ ಸುಖವು ಲಭಿಸುವದುಂಟೇ ? ವಿಷಯಜನ್ಯ ಸುಖಾಭಾಸಕ್ಕೂ ನಿರ್ವಿಷಯ ರೂಪವಾದ ನಿಜಾನಂದಕ್ಕೂ ಪಡುವಣ, ಮೂಡಣ, ಹುಣ್ಣಿಮೆ, ಅಮಾಸೆಗಳಿಗಿರುವಷ್ಟು ವ್ಯತ್ಯಾಸವಿದೆ, ರೋಗಿಯು ಎದುರಿಗೆ ಅಪಥ್ಯ ಪದಾರ್ಥಗಳನ್ನಿರಿಸಿದರೆ, ಮೊದಲೇ ಬಾಯುಸವಿ ಗೆಳೆಸುವ ಅವನು ಅವುಗಳನ್ನು ತಿನ್ನದಿರುವನೇ ? ತಿಂದಬಳಿಕ ರೋಗವು ಉಲ್ಬಣವಾಗದಿರುವುದೇ ? ಹಾಗೇ ವಿಷಯಗಳಲ್ಲಿ ಪ್ರವೃತ್ತಿ ಸುವುದೇ ಸ್ವಾಭಾವಿಕವಾದ ಮನೋವೃತ್ತಿಯುಳ್ಳ ಜೀವರಿಗೆ ಅವರಿಷ್ಟ ಪ್ರಕಾರವಾಗಿ ವಿಷಯೋಪಭೋಗ ಸಾಧನೆಗಳನ್ನು ಕಲ್ಪಿಸಿಕೊಟ್ಟಹಾಗೆಲ್ಲ ಅವರ ಸಂಸೃತಿ ರೋಗವು ಹೆಚ್ಚಾಗುವುದರಿಂದ ಅವರು ನಿಜಾನಂದಕ್ಕೆರ ವಾಗುವರೆಂಬಲ್ಲಿ ಸಂದೇಹವೇ ಇಲ್ಲ. ಇದರಿಂದ ಭೌತಿಕ ಸುಖವಾದಿ ಗಳನ್ನು 'ಸ್ವಯಂನಷ್ಟಃ ಪರಂನಾಶಯತಿ' ಎಂಬ ಗಾದೆಗೆ ಗುರಿಯಾ ದವರೆಂದು ಹೇಳಬಾರದೇಕೆ ? ಈಗಲಾದರೋ ಎಲ್ಲರೂ ವಿಮಾನದಲ್ಲಿ ಕುಳಿತು ವಿಹರಿಸುವ ಕಾಲವೆಂದು ಬಹು ಜನರು ಹಿಗ್ಗಿರುವರು. ಮುಂದೆ ಇದಕ್ಕಿಂತ ಮಿಗಿಲಾದ ವ್ಯಾವಹಾರಿಕ ಸೌಕರ್ಯಗಳೊದಗಿ ಸಲ್ಪಡುವುವಾದರೂ ಅಷ್ಟುಮಾತ್ರದಿಂದೇ ಜೀವರು ತೃಪ್ತರಾಗುವುದಕ್ಕೆ ಬದಲಾಗಿ ಅದಕ್ಕಿಂತ ಹೆಚ್ಚಿನ ಸೌಕರ್ಯಗಳನ್ನು ಕಂಡುಹಿಡಿಯುವು ದಕ್ಕೋಸ್ಕರ ಈಗಿನಂತೆಯೇ ಹೆಣಗಾಡುವವರಾಗಿ, ಮತ್ತು ಅಚ್ಚಸುಖದ ದಾರಿಯನ್ನೇ ಬಿಟ್ಟು ಬಹುವಿಧವಾದ ಕೋಟಲೆಯಿಂದ ಬಳಲುವರೆಂಬ ಭವಿಷ್ಯವನ್ನು ಈಗಲೇ ಹೇಳಲಭ್ಯಂತರವೇನು ?

ಹೂವು, ಗಂಧ, ಹೆಣ್ಣು ಮುಂತಾದ ವಿಷಯಜನ್ಯ ಸುಖವನ್ನೇ ಮುಖ್ಯವಾದ ಧ್ಯೇಯವೆಂಬ ಭಾವನೆಯುಳ್ಳವರು ಕೇವಲ ಸ್ವಾರ್ಥಿಗಳಾಗಿ ವ್ಯವಹರಿಸುತ್ತಾರೆ. ಇವರು ತಮ್ಮ ವಿಷಯೋಪಭೋಗಕ್ಕೆ ಸ್ವಲ್ಪವಾದರೂ ಕೊರತೆ ಬರಬಾರದೆಂಬ ಹೇತುವಿನಿಂದ ಹಗಲಿರುಳೆನ್ನದೆ ಆ ಬಗ್ಗೆ ಬಹು ಶ್ರಮಪಟ್ಟು ಸ್ವಕಾರ್ಯವನ್ನು ಸಾಧಿಸಿಕೊಳ್ಳು ವುದರಲ್ಲಿಯೇ ಮುಂದುವರಿಯುತ್ತಿರುವರು. ಇಂಥವರಿಗೆ ಧಾರ್ಮಿಕ ವಿಚಾರವೆಂದರೆ ಗೊತ್ತೇ ಇರುವುದಿಲ್ಲ; ಪ್ರಸಂಗಾನುಸಾರವಾಗಿ ಯಾರಾ ದರೂ ಆ ವಿಷಯಕವಾಗಿ ಒಂದೆರಡು ಮಾತುಗಳನ್ನು ಪ್ರಸ್ತಾಪಿಸಿದರೆ ಅದನ್ನು ಇವರು ಕಿವಿಯಲ್ಲಿಯೇ ಹಾಕಿಕೊಳ್ಳುವುದಿಲ್ಲ; ಅಕಸ್ಮಾತ್ತಾಗಿ ಕಿವಿಗೆ ಬಿದ್ದರೂ ಆ ಬಹಿರ್ಮುಖ ಚಿತ್ತರು— ಧರ್ಮ, ಧರ್ಮವಂತೆ !

ಗೊಡ್ಡು ಧರ್ಮವು; ಅದರಲ್ಲೇನಿದೆ ಹುರುಳು ? ಧರ್ಮವು ಅಂದರೆ; ಅದೊಂದು ಬಗೆಯ ಮಾದಕ ದ್ರವ್ಯದಂತಿರುವುದು; ಎಂದು ಹೀಯಾಳಿಸುವರು. ಇಷ್ಟೇ ಅಲ್ಲ, ದುಡಿಯಲಾರದ ಸೋಮಾರಿಗಳೂ ವ್ಯಾವಹಾರಿಕ ಜ್ಞಾನವಿಲ್ಲದ ಮದಡರೂ ಏನೇನೋ ಭಾವಿಸಿಕೊಂಡು ಬರೆದಿಟ್ಟಿರುವ ಕೆಲಸಕ್ಕೆ ಬಾರದ ಮಾತುಗಳಿಗೆ 'ಶಾಸ್ತ್ರ' ಗಳೆಂದೂ ಅವುಗಳಿಂದ ಪ್ರತಿಪಾದಿಸಲ್ಪಡುವುದೇ ಧರ್ಮವೆಂದೂ ತಿಳಿಯುವುದು ನಮ್ಮಂಥ ಸುಶಿಕ್ಷಿತರಿಗೊಪ್ಪತಕ್ಕದ್ದಲ್ಲ; ಎಂಬುದಾಗಿ ಬರಹದಿಂದ ಹುಯಿಲುಗೊಳಿಸುತ್ತಲೂ ಇದ್ದಾರೆ. ಆರ್ಯಸಂಸ್ಕೃತಿಗೆ ದೂರವಾಗಿರತಕ್ಕವರ ಬಾಯಿಂದ ಈ ತೆರದ ನುಡಿಗಳು ಹೊರಡುವುದು ನ್ಯಾಯವಾದುದೇ ಸರಿ, ಆದರೆ ಯಾರಿಗೆ ಪರಮ ಪುರುಷಾರ್ಥವೇ ತಮ್ಮ ಮುಖ್ಯವಾದ ಧ್ಯೇಯವಾಗಿದ್ದಿತೋ ಅಂತಪ್ಪ ಆರ್ಯರ ವಂಶೀಯರೆಂದು ಹೇಳಲ್ಪಡುವವರು ಕೂಡ ವಿಷಯಾಸಕ್ತತೆಯಿಂದ ಕಂಗೆಟ್ಟು ಕಂಗಾಲರಾಗಿ ತಾವು ಯಾರೆಂಬುದರ ಪರಿವೆಯಿಲ್ಲದೆ ಮನಬಂದಂತೆ ವ್ಯವಹರಿಸುತ್ತಿರುವರಲ್ಲಾ ! ಅವರು ಇನ್ನಾದರೂ ತಮ್ಮ ಹಿರಿಯರ—

**ಪತಿತಃ ಪಶುರವಿ ಕೂಪೇ ನಿಃಸರ್ತುಂ ಚರಣಚಾಲನಂ ಕುರುತೇ ।**
**ಧಿಕ್ ತ್ವಾಂ ಚಿತ್ತ ಭವಾಬ್ಧೇರಿಚ್ಛಾಮಪಿ ನೋಬಿಭರ್ಷಿ**
**ನಿಃಸರ್ತುಮ್ ॥**

ಎಂಬುದಾಗಿರುವ ಹಿತೋಪದೇಶ ವಚನವನ್ನು ಮುಂದಿರಿಸಿಕೊಂಡು ತಮ್ಮ ಮನಸ್ಸಿಗಾದರೂ ತಾವೇ ಬುದ್ಧಿಯನ್ನು ಹೇಳಿಕೊಳ್ಳುವುದೊಳಿತಲ್ಲವೇ ?

ಮಿತಿಮೀರಿ ವಿಷಯವಾಸನಾರೂಪ ಪ್ರವಾಹದಲ್ಲಿ ಧುಮಿಕಿರುವ ಈ ಕಾಲದಲ್ಲಿಯ ನಮ್ಮ ಸ್ಥಿತಿಯು ಒಡಲು ತುಂಬಿ ಹರಿಯುವ ಹೊಳೆಯ ಸೆಳವಿಗೆ ಸಿಲ್ಕಿದವನ ಪರಿಯಂತಿರುವುದು. ವೃಕಾಗ್ನಿಯೆಂಬ ದೋಷದೂಷಿತವಾದ ಹೊಟ್ಟೆಯುಳ್ಳವನಿಗೆ ಹಸಿವು ಹಿಂಗದಿರುವಂತೆ, ವಿಷಯವಾಸನಾದೋಷದೂಷಿತ ವೃತ್ತಿಯುಳ್ಳವರಿಗಾದರೋ ತೃಪ್ತಿಯೆಂಬುದು ಎಂದಿಗೂ ಸಂಭವಿಸದು. ಜಡವೂ ಅನಿತ್ಯವೂ ಆದ ಅಸಾರರೂಪಗಳಾದ ಅನಾತ್ಮ ಪದಾರ್ಥಗಳ ಮಥನಾಸಕ್ತರಾಗಿ ತೃಪ್ತಿಪಡೆಯದೆ ದಿನ ದಿನಕ್ಕೆ ಹೆಚ್ಚಾಗಿ ವಿಷಯೋಪಭೋಗಸಾಮಗ್ರಿಗಳನ್ನೇ ಕಂಡುಹಿಡಿಯಲು ಯತ್ನಿಸುತ್ತಿರುವವರ ಗಡಬಿಡಿಯ ಗದ್ದಲದ ಸದ್ದು ಇಂದಿಲ್ಲ ಮುಂದೆ

ಕೆಲವೆಡೆಯಲ್ಲಾದರೂ ಕ್ರಮೇಣ ಅಡಗಬಹುದು. ಆಗಲಾದರೂ ಜಡ ವಾದಿಗಳು, ಓಹೋ ! ನಾವು ದಾರಿಯನ್ನೇ ತಪ್ಪಿದ್ದೇವೆ ಎಂದೆಚ್ಚತ್ತು, ಅಚ್ಚ ಸುಖವು ದೊರೆವ ದಾರಿಯಕಡೆ ಹೊರಳದಿರಲಾರರು.

ಈಗ ಎತ್ತ ನೋಡಿದಡತ್ತ ಪರಿಸ್ಥಿತಿಯ ವಿಲಕ್ಷಣಪರಿಣಾಮ ಮೂಲಕವಾಗಿ ಸಂಭವಿಸಿರುವ ಜೀವನಕಲಹದ ಹಬ್ಬುಗೆಯಿಂದ :—

**ದನ್ತಾನಾಂ ಭಾಸ್ಕರೀಣಾಂ ಚ ಘೋರಯುದ್ಧಂ ಪ್ರವರ್ತತೇ ।**
**ನಜಾನೇ ಗಿರಿಜಾಜಾನೇ ! ಕೇಷಾಂ ಭಂಗೋ ಭವಿಷ್ಯತಿ ॥**

ಎಂಬುದಾಗಿ ಕೇಳಿಬರುವ ನುಡಿಯ ಫಲಿತಾಂಶವೆಂತಾದಪುದೋ ಅದನ್ನಾರು ಬಲ್ಲರು ? ಜಗತ್ತಿನಲ್ಲಿ ಮಾನವರ ಬಹಿಃಪ್ರಾಣವೆನಿಸುವ ನಮ್ಮ ಹೊನ್ನು ಬಿಡುವಿಲ್ಲದೆ ಹರಿವ ಹೊಳೆಯಂತೆ ಹರಿದು ಪಶ್ಚಿಮ ಸಮುದ್ರವನ್ನು ಸೇರುತ್ತಿರುವುದು. ಸರ್ವದೇಶಗಳೂ ಆರ್ಥಿಕ ನ್ಯೂನತೆ ಯೆಂಬ ಪಿಡುಗಿನಿಂದುಂಟಾದ ವ್ಯಾವಹಾರಿಕದ ತೊಂದರೆಯಿಂದ ಪರಿಪರಿಯ ಗಂಡಾಂತರಗೆಳಿಗೊಳಪಟ್ಟು ನರಳುತ್ತಿರುವುವು; ಅದರ ಲ್ಲಿಯೂ ಭಾರತೀಯರಾದರೋ ಧಾರ್ಮಿಕದೃಷ್ಟಿಯಿಂದಲೂ, ವ್ಯಾವ ಹಾರಿಕಸ್ಥಿತಿಯಿಂದಲೂ ಅವನತಿಗೀಡಾಗಿರುವುದನ್ನು ಯೋಚಿಸಿದರೆ ತುಪ್ಪವೂ ಇಲ್ಲ. ಎಣ್ಣೆಯೂ ಇಲ್ಲ; ಬರೇ ಧೂಪಾರ್ತಿಯೊಂದೇ ಕೈಯಲ್ಲುಳಿ ಯಿತೆಂಬತಾಗಿರುತ್ತಾರೆ. ಹಿಂದುಸ್ಥಾನದೊಳಗಿನ ಅಶಿಕ್ಷಿತರಿಗೆ ಸಂಬಂಧಪಟ್ಟ ಮಾತು ಹಾಗಿರಲಿ, ಸುಶಿಕ್ಷಿತರೆನ್ನುವವರ ಹಾಡೇ ಅಪ ಸ್ವರವಾಗಿ ಕೇಳಿ ಬರುತ್ತಿರುವುದು. ಅವರ ಹಾಡು ತೆಲುಗು ಸಂಸ್ಕೃತ-ಕನ್ನಡವೆಂಬ ಮೂರು ಬೆರೆಕೆಯ ಪದ್ಯವನ್ನು ಹೋಲುವುದು:—

**ತಣ್ಡುಲಾಯಿ ಗೃಹಮುಂದು ನಸನ್ತಿ**
**ತಿಂಡಿಕೈದಿ ಬಹುಮಂದಿ ವಸನ್ತಿ ।**
**ಕುಂಡಲನ್ನು ಪರಿಶೋಪಿ ಲುಠನ್ತಿ**
**ರಣ್ಡನಾಸುತಲು ಎಲ್ಲ ಹಸನ್ತಿ ॥**

ಮನೆಯಲ್ಲಿ ಅಕ್ಕಿಯೇ ಇಲ್ಲ, ಅಯ್ಯೋ ! ಕೂಳಿಗಾಗಿ ಮನೆಯಲ್ಲಿ ಬಹುಜನರಿರುವರಲ್ಲಾ, ಮನೆಯೊಳಗಿರುವ ಆಲ್ಯುಮಿನಿಯಂ ಭಾಂಡೆ ಗಳು ಬರಿದಾಗಿ ಅತ್ತಿತ್ತಲುರುಳಾಡುತ್ತಿವೆ: ಈ ನನ್ನ ಅವಸ್ಥೆಯನ್ನು ನೋಡಿ ರಂಡೇಮಕ್ಕಳು ನಗುತ್ತಾರೆ; ಏನು ತಾನೇ ಮಾಡಲಿ ?

ಈ ಬಗೆಯ ದೈನ್ಯೋಕ್ತಿಗಳು ಎಲ್ಲರ ಬಾಯಿಂದ ಹೊರಡುವು ದಿಲ್ಲವೆಂದು ಹೇಳಬಹುದಾದರೂ, ಈಗ ಈಗೋಳೇ ಎಲ್ಲ ಕಡೆ ಹೆಚ್ಚುತ್ತ ನಡೆದಿರುವುದೆಂಬ ಸಂಗತಿಯನ್ನು ಅರಿಯದವರಾರೂ ಇಲ್ಲ. ಇನ್ನು ಮುಂದಿನ ಮಾತು ಮುಂದೆ! ಈ ರೀತಿಯಾಗಿ ಸಾರ್ವತ್ರಿಕವಾದ ಅನೇಕವಿಧ ಅನನುಕೂಲತೆಯಿಂದ ಜನರ ಉಪಜೀವನವು ಕೂಡ ಸುಸೂತ್ರವಾಗಿ ಸಾಗದಂತಾಗಿರುವುದು. ಒಬ್ಬನ ಕೌಟುಂಬಿಕಪೋಷ ಣೆಯು ಯಾವ ಬಗೆಯ ಬೊಬ್ಬಾಟವಿಲ್ಲದೆ ಜರುಗಲೆಂದು ಅವನು ಇಡೀ ದಿವಸವೆಲ್ಲ ದುಡಿದರೂ ಹೊಟ್ಟೆತುಂಬ ಅನ್ನವೇ ಸಿಕ್ಕುವುದಿಲ್ಲವೆಂಬ ಕೂಗು ಮತ್ತೆಯೂ ಕೇಳಿ ಬರುವುದು. ಈ ಕಾಲದ ಜನರ ಬಾಳುವೆಯ ಪರಿಯು ಹೀಗಾಗಿರಲು ಅನೇಕ ಕಾರಣಗಳಿರುವವೆಂದು ತಿಳಿದು ಬಂದರೂ ಅವಲ್ಲವೂ ಅಧರ್ಮಾಚರಣೆಯೆಂಬುದೊಂದರೆ ಹೊಟ್ಟೆಯೊಳಡ ಗಿರುವುವು. ಹೀಗೆ ಹೇಳಲ್ಪಡುವ ಈ ನಮ್ಮ ಮಾತು ಒಂದಕ್ಕೊಂದು ಸಂಬಂಧವಿಲ್ಲದುದೆಂದು ಥಟ್ಟನೆ ಯಾರಾದರೂ ನುಡಿಯಬಹುದು. ಆದರೂ, ಅವರು ಆ ನುಡಿಯನ್ನು ಸಹಸಾನಿರಾಕರಿಸಲು ದುಡುಕದೆ ಸಾವಧಾನಮನಸ್ಸಿನಿಂದ ಸ್ವಲ್ಪವಾದರೂ ಆಲೋಚನೆಮಾಡುವುದೊಳ್ಳೆ ಯದು.

'ಅಧರ್ಮಾಚರಣೆ' ಅಂದರೇನು? ಧರ್ಮದ ಕಟ್ಟಳೆಯನ್ನನುಸರಿಸಿ ನಡೆಯದಿರುವುದು. 'ಧರ್ಮವು' ಅಂದರೇನು? ಇದರ ವ್ಯಾಖ್ಯೆಯು ಬಲು ಆಳವಾಗಿದೆ. ಆದರೂ 'ಸ್ವೈರಾಚರಣೆಗೆ ನಿರ್ಬಂಧವನ್ನು ಹಾಕುವುದು' ಎಂಬುದಿಷ್ಟೇ ಅದರ ಗುಟ್ಟು. ಉಣ್ಣು, ತಿರುಗಾಡು, ಕ್ರೀಡಿಸು, ನಿದ್ದೆಮಾಡು ಎಂಬ ಮುಂತಾದುದರ ಬಗ್ಗೆ ಯಾರೂ ಯಾರಿಗೂ ಹೇಳುವುದೇ ಬೇಡ: ಈ ವ್ಯವಹಾರಗಳು ಆ ಆ ಇಂದ್ರಿಯ ಗಳ ನೈಸರ್ಗಿಕ ಧರ್ಮಗಳಾಗಿರುತ್ತವೆ. ಆ ಆ ಇಂದ್ರಿಯಗಳಿಗೆ ಯಾವ ಬಗೆಯ ನಿರ್ಬಂಧವಿಲ್ಲದಿರುವಿಕೆಯೇ ಸ್ವೈರಾಚರಣೆಗೆ ಮೂಲ ಹೇತುವು. ಯಾವದೊಂದೂ ನಿರ್ಬಂಧಕ್ಕೊಳಪಡದ ಸ್ವೈರತನದಿಂದ್ರಿಯಗಳು ಕಡಿ ವಾಣವಿಲ್ಲದ ಕುದುರೆಗಳಂತಿರುವುವು. ಕಡಿವಾಣವಿಲ್ಲದ ಕುದುರೆಗಳು ರಥಕ್ಕೆ ಹೂಡಲ್ಪಟ್ಟುವಾದರೆ ಅವುಗಳಿಂದ ಹೇಗೆ ಅನರ್ಥವು ಸಂಭವಿ ಸುವುದೋ ಹಾಗೇ ಸ್ವಭಾವತಃ ಸ್ವೈರವೃತ್ತಿಯುಳ್ಳ ಇಂದ್ರಿಯಗಳಿಗಾ ದರೂ ಯಾವದೊಂದೂ ನಿರ್ಬಂಧವಿಲ್ಲವಾದರೆ ಅವುಗಳಿಂದಲೂ ಅನರ್ಥ ಪರಂಪರೆಗಳೊದಗುವುವೆಂಬುದು ಅನುಭವಸಿದ್ಧವು. ಅದು ಕಾರಣವೇ

ಕಠೋಪನಿಷತ್ತಿನಲ್ಲಿ (೧-೩) ಇಂದ್ರಿಯಗಳು ಕುದುರೆಗಳಿಗೆ ಹೋಲಿಸಲ್ಪಟ್ಟಿವೆ. ಇಷ್ಟೇ ಅಲ್ಲ ಆ ಉಪನಿಷತ್ತಿನ 'ಆತ್ಮಾನಂ ರಥಿನಂ ವಿದ್ಧಿ' ಎಂಬ ಮೊದಲಾದ ಮಂತ್ರವರ್ಣಗಳಲ್ಲಿ ಆತ್ಮನು, ಶರೀರವು, ಬುದ್ಧಿಯು, ಮನಸ್ಸು, ಇಂದ್ರಿಯಗಳು ಎಂಬಿವು ಅನುಕ್ರಮವಾಗಿ ರಥಾರೂಢನಾದ ಯಜಮಾನನು, ರಥವು, ಸಾರಥಿಯು ಕಡಿವಾಣವು, ಕುದುರೆಗಳು ಎಂಬಿವುಗಳಿಗೆ ಹೋಲಿಸಿ ಬಣ್ಣಿಸಲ್ಪಟ್ಟಿವೆ. ಆ ಉಪನಿಷದ್ವಚನಸಾರವನ್ನೇ ಓರ್ವ ಮಹಾನುಭಾವನು ಹೀಗೆ ಹೇಳುತ್ತಾನೆ :—

**ದೇಹಸ್ಯಂದನ ಏವ ತತ್ರ ತುರಗಾಃ ಪ್ರಾಹೇನ್ದ್ರಿಯಾಣ್ಯೇವಚ**
**ಬುದ್ಧಿಃ ಸಾರಥಿರೇವ ಧಾರಯತಿ ಯಸ್ತೇಷಾಂ ಕಶೀ ರಶ್ಮಯಃ।**
**ಸಂಯುನ್ತ್ತುಂ ಯದಿ ಸಾರಥಿರ್ನತುರಗಾನೇತಾನಯಂ ಶಕ್ನುತೇ**
**ಗರ್ತಾಯಾಂ ನನು ಪಾತಯನ್ತಿ ತುರಗಾ ಮತ್ತಾಃಸಸೂತಂ**
**ರಥಮ್ ॥**

ದೇಹವೆಂಬುದೇ ರಥವು. ಜ್ಞಾನೇಂದ್ರಿಯಗಳೇ ಅದಕ್ಕೆ ಹೂಡಿದ ಕುದುರೆಗಳು, ಆ ಕುದುರೆಗಳನ್ನು ನಡೆಸುವ ಬುದ್ಧಿಯೇ ಸಾರಥಿಯು, ಬುದ್ಧಿರೂಪನಾದ ಆ ಸಾರಥಿಯ ಕೈಯಲ್ಲಿರತಕ್ಕ ಸಾರಾಸಾರಾ ವಿಚಾರಾತ್ಮಕ ಮನೋವೃತ್ತಿಗಳೆಂಬವೇ ಕುದುರೆಗಳನ್ನು ಅತ್ತಿತ್ತ ಹೊರಳಿಸುವ ಕಡಿವಾಣದ ಹಗ್ಗಗಳು; ಈ ಸಾರಥಿಯು ಈ ಕುದುರೆಗಳನ್ನು ತನ್ನಧೀನವಾಗಿಟ್ಟುಕೊಳ್ಳಲು (ಸಂಯಮನಗೊಳಿಸಲು) ಸಮರ್ಥನಾಗದಿದ್ದರೆ, ಕೊಬ್ಬಿದ ಕುದುರೆಗಳು ಸಾರಥಿಯನ್ನೂ ರಥವನ್ನೂ। ಸ್ವೈರವೃತ್ತಿಯಿಂದೆಳದೊಯ್ದು ಆಳವಾದ ತಗ್ಗಿನಲ್ಲಿ ಚಲ್ಲಿಬಿಡುತ್ತವೆ.

ಆದ್ದರಿಂದ, ಇಂದ್ರಿಯಗಳ ಚಾಪಲ್ಯವು ಅನರ್ಥಕ್ಕೆ ಹೇತುವಾಗಿರುವುದು. ಶಿಕ್ಷಣ ದೋಷದಿಂದಲೋ ಸಂಸರ್ಗ ದೋಷದಿಂದಲೋ ಇಂದ್ರಿಯಗಳ ಸ್ವೈರವೃತ್ತಿಗೆ ಮೆಚ್ಚಿದ ಜನರು ದಿನದಿನಕ್ಕೆ ಬಗೆಬಗೆಯ ವಿಷಯೋಪಭೋಗಲಾಲಸೆಯಿಂದ ಆ ಆ ವಿಷಯಗಳ ಪ್ರಾಪ್ತಿಗಾಗಿ ಎಡೆಬಿಡದೆ ಹೆಣಗಾಡುತ್ತಿರುವರು. ಕೇವಲ ವಿಷಯೇಂದ್ರಿಗಳ ಸಂಯೋಗದಿಂದೇ ನಾವು ಕೃತಾರ್ಥರಾಗುವೆವೆಂಬ ನಂಜು ತಲೆಗೇರಿದ ಜನರು ವಿಷಯೋಪಭೋಗವಾಸನೆಯನ್ನು ತೃಪ್ತಿಪಡಿಸುವ ಹಂಬಲದಿಂದ ಹಗಲಿರುಳೆನ್ನದೆ ಎಷ್ಟೋ ಯತ್ನ ಮಾಡುತ್ತಿರುವರಾದರೂ 'ಅಮ್ಮನೂತುದೆಲ್ಲ ಮೊಮ್ಮಗನುಡದಾರವಾಗಲಿಲ್ಲ' ವೆಂಬ ಗಾದೆಯಂತೆ ಅವರ ಮನದ ಹಪಹಪೆಯು ಕಡಿಮೆಯಾಗದಿರುವುದರಿಂದ ಮತ್ತೂ ಮೋರೆಯನ್ನು

ಕಿಪ್ಪಚಿ ನರಳುತ್ತಲೇ ಇರುವರು. ವಿಷಯ ಸುಖದ ಮೋಹವಶಗತರಾದ ಮನುಷ್ಯರಲ್ಲಿ ಸತ್ಪ್ರವೃತ್ತಿಯೇ ಅಭಾವವಾಗಿ ದುಷ್ಪ್ರವೃತಿಯು ಬೆಳೆದು, ನಾಸ್ತಿಕತೆಯೂ ರಾಕ್ಷಸ ಸ್ವಭಾವವೂ ಎಂಬೀ ದುರ್ಗುಣಗಳು ಮನೆಮಾಡುತ್ತವೆ. ಈ ವಿಧವಾದ ದುರ್ಗುಣಗಳೇ ಮನುಷ್ಯನ ಅಧೋಗತಿಗೆ ಕಾರಣವಾಗಿರುವುವು. ಈ ತೆರದ ಮನುಷ್ಯರೇ ಹೆಚ್ಚಿದ ರಾಷ್ಟ್ರವಾದರೂ ರಸಾತಳಕ್ಕಿಳಿಯುವುದು.

'ಸುಧಾರಣೆ' ಅಂದರೆ ಮನುಷ್ಯರ ಸ್ವಾಭಾವಿಕವಾದ ಸ್ವೈರವರ್ತನಕ್ಕೆ ತಕ್ಕ ಅನಕೂಲ್ಯವನ್ನು ಕಲ್ಪಿಸಿಕೊಡುವುದೆಂಬರ್ಥವು ಗ್ರಹಿಸಲ್ಪಡುವುದಾದರೆ, 'ಇದನ್ನು ಮಾಡತಕ್ಕದ್ದು ಇದನ್ನು ಮಾಡಕೂಡದು' ಎಂಬ ಕಾನೂನಿನ (ನಿರ್ಬಂಧದ) ಆವಶ್ಯಕತೆಯೇನು ? ಯಾವುದಕ್ಕೂ ಯಾವ ಬಗೆಯ ನಿರ್ಬಂಧವೇ ಇಲ್ಲ; ಮನಸವೆಳೆಸಿದಂತೆ ಹೊಡಿ ಹೋಗಲಿ ! ಎಂಬ ಮಾತಿನ ದೋಲೆಯೇ ಕೈಯೂರಿ ಜಗತ್ತಿನ ಸರ್ವವ್ಯವಹಾರವೂ ಸರಿಯಾಗಿ ನಡೆಯಲು ಶಕ್ಯವಿರುವುದೇ? ಇಲ್ಲ. ಆದ್ದರಿಂದ ಸಮಾಜಸುಧಾರಣೆಗಾಗಿ ಅಂದರೆ ಸರ್ವಜನರ ಹಿತಕ್ಕಾಗಿ ಸ್ವಭಾವತಃ ಪ್ರಾಪ್ತವಾದ ಸ್ವೈರಾಚರಣೆಗೆ ನಿರ್ಬಂಧವನ್ನು ಹಾಕುವುದೇ 'ಧರ್ಮ'ವೆಂದು ತಿಳಿವುದು ವಿಹಿತವು. ಅದು ಲೌಕಿಕ ಆಧ್ಯಾತ್ಮಿಕ ವಿಷಯಗಳನ್ನನುಲಕ್ಷಿಸಿ ವ್ಯವಹಾರ ಪರಮಾರ್ಥಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟರೂ ಮನುಷ್ಯರಿಗೆ ಆತ್ಮಸಂಯಮಸಗುಣವನ್ನು ಕಲಿಸಿ ಶಾಂತಿಯನ್ನೊದಗಿಸಿಕೊಡುವುದೇ ಆದರ ಮುಖ್ಯವಾದ ಧ್ಯೇಯವು. ಅಂತಪ್ಪ ಧರ್ಮವನ್ನೇ ಧಿಕ್ಕರಿಸುವವರೂ ಹಾಳಾಗಿ ಹೋಗಲೆಂದು ಶಪಿಸುವವರೂ ಸುಧಾರಣೆಯ ಮಾರ್ಗವನ್ನನುಸರಿಸಿ ನಡೆಯುತ್ತಿರುವರೋ ಆ ಮಾರ್ಗಭ್ರಷ್ಟರಾಗಿರುವರೋ ಎಂಬ ಸಾಧಕ ಬಾಧಕ ವಿಚಾರವನ್ನು ತಮ್ಮಲ್ಲಿ ತಾವೇ ಮಾಡಿಕೊಳ್ಳಲು ಯೋಗ್ಯತೆಯಿಲ್ಲದಷ್ಟು ಅಶಿಕ್ಷಿತ ಮತಿಗಳಾಗಿರುವುದಿಲ್ಲವಷ್ಟೇ !

ಈ ವಿಧವಾದ ಸಮಾಜ ಸುಧಾರಣೆಯನ್ನನುಲಕ್ಷಿಸಿಯೇ ಅಯ್ದು ಸಾವಿರ ವರ್ಷಗಳ ಹಿಂದಿನ ಹಿರಿಯರು (ಮ. ಭಾ. ಶಾನ್ತಿ. ೨೯೪-೨೯):—

ಆಹಾರನಿದ್ರಾಭಯಮೈಥುನಂ ಚ
ಸಮಾನಮೇತತ್ಪಶುಭಿರ್ನರಾಣಾಮ್ ।
ಧರ್ಮೋ ಹಿ ತೇಷಾಮಧಿಕೋ ವಿಶೇಷೋ
ಧರ್ಮೇಣ ಹೀನಃ ಪಶುಭಿಃ ಸಮಾನಃ ॥

ಆಹಾರ, ನಿದ್ರೆ, ಅಂಜಿಕೆ, ಮೈಥುನ ಎಂಬೀ ವ್ಯವಹಾರಗಳು ಮನುಷ್ಯರಿಗೂ ಪಶುಗಳಿಗೂ ಸಮವಾಗಿಯೇ ಪ್ರಾಪ್ತವಾಗಿವೆ. ಆದರೆ, ಧರ್ಮವೆಂಬುವೇ (ಅಂದರೆ ಈ ನೈಸರ್ಗಿಕವಾದ ನಡತೆಗಳಿಗೆ ಕಟ್ಟಳೆ ಮಾಡುವುದೇ) ಮನುಷ್ಯರಿಗೂ ಪಶುಗಳಿಗೂ ಇರುವ ಭೇದವು. ಅಂತಪ್ಪ ಧರ್ಮವಿಲ್ಲದವರು (ಸ್ವೈರಮನೋವೃತ್ತಿಗೆ ಮರ್ಯಾದೆಯೇ ಇಲ್ಲದವರು) ಪಶುಗಳೇ ಸರಿ!

ಎಂದುಪದೇಶಿಸಿದ್ದಾರೆ. ಈ ಉಪದೇಶ ವಚನವು ತ್ರಿಕಾಲಾಬಾಧಿತವಾದುದು.

ಇನ್ನು, ಸನಾತನ ಧರ್ಮಾನುಯಾಯಿಗಳಲ್ಲಿಯೇ ಕೆಲವರು :—

ಜಾನಾಮಿ ಧರ್ಮಂ ನಚ ಮೇ ಪ್ರವೃತ್ತಿ
ರ್ಜಾನಾಮ್ಯಧರ್ಮಂ ನಚ ಮೇ ನಿವೃತ್ತಿಃ ।
ಕೇನಾಪಿ ದೇವೇನ ಹೃದಿಸ್ಥಿತೇನ
ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ ॥

"ನಾನು ಧರ್ಮವಾವುದೆಂಬುದನ್ನೇನೋ ಬಲ್ಲೆನು. ಆದರೆ, ಅತ್ತ ಕಡೆ ನನ್ನ ಪ್ರವೃತ್ತಿಯೇ ಆಗಲೊಲ್ಲದು; ಮತ್ತು ಅಧರ್ಮವೆಂಬುದೂ ನನಗೆ ಗೊತ್ತಿದೆ. ಆದರೇನು? ಅದನ್ನು ಬಿಡಬೇಕೆಂಬ ವೃತ್ತಿಯೇ ನನ್ನಲ್ಲಿ ತಲೆದೋರದು; ನನ್ನ ಹೃದಯದಲ್ಲಿ ವಾಸಿಸುವ ದೇವರ ಪ್ರೇರಣೆಯು ಹೇಗಾಗುವುದೋ ಹಾಗೆ ನಾನು ವರ್ತಿಸುತ್ತೇನೆ; ಆದ್ದರಿಂದ ಈ ಅಧರ್ಮಾಚರಣೆಯ ಬಗ್ಗೆ ನಾನು ಹೊಣೆಗಾರನಲ್ಲವಷ್ಟೇ!" ಎಂಬುದಾಗಿ ಧೃತರಾಷ್ಟ್ರನು ನುಡಿದಿರುವುದನ್ನೇ ಮುಂದೆ ಮಾಡಿ ಮಾತಾಡುವ ತರ್ಕಭಕುತರೂ, ಮುಟ್ಠಾಳರೂ, ಭೆಟ್ಟಿಯಾಗುತ್ತಿರುವರು. ಆದರೆ ಹೀಗೆ ಹೇಳುವುದರಲ್ಲೇನೂ ಪುರುಷಾರ್ಥವಿಲ್ಲ. ಮನುಷ್ಯನ ಬುದ್ಧಿಯಲ್ಲಿ ಕರ್ಮಾನುಸಾರವಾಗಿ ವಾಸನೆಗಳು ಮೈದೋರಿದರೂ ಅವುಗಳಲ್ಲಿ ಒಳ್ಳೆಯದಾವುದು ಕೆಟ್ಟದಾವುದೆಂಬುದನ್ನು ವಿಂಗಡಿಸಿ ತಿಳಿದುಕೊಳ್ಳುವಷ್ಟು ಸ್ವಾತಂತ್ರ್ಯವೂ, ಅರಿವೂ ಮನುಷ್ಯನಲ್ಲಿ ಇಲ್ಲವೇ ಇಲ್ಲವೆಂದು ಹೇಳಲಿಕ್ಕೆ ಬರುವಂತಿಲ್ಲ, ಇಷ್ಟೇ ಅಲ್ಲ; ಕೆಟ್ಟವಾಸನೆಯನೊಕ್ಕಲಿಕ್ಕಿ, ಒಳ್ಳೆಯವಾಸನೆಯನ್ನು ಕಾಯ್ದಿಟ್ಟುಕೊಂಡು ತದನುಸಾರವಾಗಿ ಪ್ರಯತ್ನಿಸುವುದು ಮನುಷ್ಯನ ಸ್ವಾಧೀನವಿದೆ. ವಸ್ತುಸ್ಥಿತಿಯು ಹೀಗಿದ್ದರೂ ಈಶ್ವರ ಪ್ರೇರಣೆಯಿಂದೋ, ಪ್ರಾರಬ್ಧ ಕರ್ಮದಿಂದೋ ನಾನು ದುಷ್ಕ

ತ್ಯವನ್ನು ಮಾಡಿದೆನೆಂದು ಹೇಳುವ ಮನುಷ್ಯನನ್ನು ಜನವಂಚಕನೆಂದೂ ದುರ್ಬಲನೆಂದೂ ತಿಳಿಯಬೇಕು.

ಪ್ರಾರಬ್ಧವಾದದಂತೇ ಆಧುನಿಕ ಕಾಲದಲ್ಲಿ ನಿಸರ್ಗವಾದವೆಂಬುದೂ ಮುಂದೆ ಬರತೊಡಗಿದೆ. ಮನುಷ್ಯನು ನೇಚರ (ನಿಸರ್ಗ) ದ ಡಿಂಗರಿಗನು, ಅವನ ಕೈಯಲ್ಲೇನೂ ಇರುವುದಿಲ್ಲ. ಎಲ್ಲ ಸಂಗತಿಯೂ ನಿಸರ್ಗಾನುಸಾರವಾಗಿಯೇ ಘಟಿಸುವುದು. ಸತ್ಪ್ರವೃತ್ತಿಯಾಗಲಿ, ಅಸತ್ಪ್ರವೃತ್ತಿಯಾಗಲಿ ನಿಸರ್ಗ ( ನೇಚರ ) ವೆಂದೇ ತಿಳಿಯತಕ್ಕದ್ದು, ಎಂದು ಪ್ರತಿಪಾದಿಸಲ್ಪಡುವ ನಿಸರ್ಗವಾದವು ಪ್ರಾಚೀನಕಾಲದ ಸ್ವಭಾವವಾದವನ್ನೇ ಹೋಲುತ್ತದೆ. ಈ ವಿಚಾರ ಸರಣಿಯನ್ನೊಪ್ಪಿಕೊಂಬಟ್ಟರೆ. ಮನುಷ್ಯನನ್ನು ಒಂದು ಬಗೆಯ ಯಂತ್ರವೆಂದೇ ತಿಳಿಯಬೇಕಾಗುವುದು. ಈ ಯಂತ್ರವನ್ನು ನಡೆಸುವ ನಿಸರ್ಗವು ಅಂದರೆ ಸ್ವಭಾವವು ಅಥವಾ ನೇಚರವೆಂಬುದರ ಸ್ವರೂಪವೇನು ? ಅದು ಹೇಗಿರುವುದೆಂದು ಕಲ್ಪನೆ ಮಾಡಬೇಕು ? ಅದು ಹೀಗೇ ಇರುವುದೆಂಬ ಕಲ್ಪನೆಯಾದರೂ ಹೊಳೆಯುವುದೇ ? ಇಲ್ಲ. ಬುದ್ಧಿಯುಳ್ಳ ಮಾನವ ಪ್ರಾಣಿಯು ಯಾವ ನಿಸರ್ಗದಿಂದುಟಾದನೋ, ಆ ನಿಸರ್ಗವು ಸ್ವತಃ ಬುದ್ಧಿಯುಳ್ಳದ್ದೇ ಆಗಿರಬೇಕಲ್ಲವೇ ? ಹಾಗಿದ್ದಪಕ್ಷದಲ್ಲಿ, ಇದಕ್ಕೆ ಅಪ್ರತ್ಯಕ್ಷವಾಗಿ ಈಶ್ವರಪಾರತಂತ್ರ್ಯವಾದವೆಂದೇ ಹೆಸರಿಡಬೇಕಲ್ಲವೇ ? ನಿಸರ್ಗವು ಬುದ್ಧಿಶೂನ್ಯವೂ ಅಥವಾ ಜ್ಞಾನಶೂನ್ಯವೂ ಆಗಿರುವುದೆನ್ನುವುದಾದರೆ, ಈ ಮಾನವನ ಬುದ್ಧಿಯು ( ಜ್ಞಾನವು ) ಯಾವುದರಿಂದ ಹುಟ್ಟಿತು ? ಎಂಬೀ ಪ್ರಶ್ನೆಗೆ ಸರಳವಾದ ಉತ್ತರವನ್ನು ಕೊಡಲಾಗುವುದಿಲ್ಲ. ಬುದ್ಧಿಶೂನ್ಯವಾದ ನಿಸರ್ಗದಿಂದ ಬುದ್ಧಿಯುಕ್ತವಾದ ಪ್ರಾಣಿವರ್ಗದುತ್ಪತ್ತಿಯು ಅದೆಂತು ಸಂಭವಿಸುವುದು ? ಚೇತನವರ್ಗದುತ್ಪತ್ತಿಗೆ ಕಾರಣವಾದ ವಸ್ತುವಾದರೂ ಚಿದ್ಘನವಾದುದೇ ಇರಲಿಕ್ಕೆಬೇಕಲ್ಲವೇ ? ಆ ಚಿದ್ಘನ ವಸ್ತುವೇ ನಮಗಭಿಮತವಾದ ದೇವರೆಂದ ಈ ಹಿಂದೆ ನಾವು ಸ್ಪಷ್ಟವಾಗಿ ನಿರ್ಣಯಗೊಳಿಸಿರುವೆವು. ಬುದ್ಧಿಶೂನ್ಯವಾದ ನಿಸರ್ಗವಾದವು ಬುದ್ಧಿವಾದದಿಂದ ತುಲನೆಮಾಡಿ ನೋಡಿದರೆ ಅದೊಂದು ಭಾವನಾಮಯವಾದುದೆಂದೇ ಕಂಡುಬರುವುದು. ವೇದಾಗಮ ಪ್ರಮಾಣವನ್ನನುಸರಿಸಿದ ಯುಕ್ತಿಯುಕ್ತವಾದ ಬುದ್ಧಿವಾದದಿಂದ ನಿರ್ಣಯಿಸಲ್ಪಡುವ ಕಾರ್ಯಕಾರಣಭಾವವಿಚಾರವೆಂಬ ಒರೆಗಲ್ಲಿಗೆ ನಿಸರ್ಗವಾದವನ್ನು ಹಚ್ಚಿ ತಿಕ್ಕಿ ನೋಡಿದರೆ ಅದು ಕಾಲೂರಿ ನಿಲ್ಲಲಾರದು.

ಮನುಷ್ಯನ ಬುದ್ಧಿಯು ಪ್ರವೃತ್ತಿ ಸ್ವಾತಂತ್ರ್ಯದ ವಿಷಯದಲ್ಲಿ ನಿಸರ್ಗವನ್ನು ಸೋಲಿಸುವುದು: ಆಹಾರವನ್ನು ಭುಂಜಿಸುವುದು, ಸಂತತಿಯನ್ನು ಹುಟ್ಟಿಸುವುದು ಮುಂತಾದ ವ್ಯವಹಾರಗಳಲ್ಲಿ ಮನುಷ್ಯನ ಪ್ರವೃತ್ತಿಯೇ ಮನುಷ್ಯತ್ವ ಮೂಲಕವಾಗಿ ಹೊಣೆಯಾಗಿದೆ. ದೇಹದ ಮೇಲೆ ಕೂದಲು ಹುಟ್ಟುವಂತೆ ಸಂತತಿಯು ತನ್ನಷ್ಟಕ್ಕೆ ತಾನೇ ಹುಟ್ಟುವುದಿಲ್ಲ. ಈ ವಿಷಯದ ಪ್ರವೃತ್ತಿಯ ಅವಶ್ಯಕತೆಯುಂಟಲ್ಲವೇ ? ಮನುಷ್ಯನು ಆತ್ಮ ಸಂಯಮನವುಳ್ಳವನಾಗಿ ಈ ಪ್ರವೃತ್ತಿಯನ್ನು ನಿಗ್ರಹಿಸುವನಾದರೆ ನಿಸರ್ಗವು ಏನು ತಾನೇ ಮಾಡಬಲ್ಲದು ? ಇಷ್ಟರಮಟ್ಟಿಗಾದರೂ ಮನುಷ್ಯನ ಸ್ವಾತಂತ್ರ್ಯವನ್ನೊಪ್ಪಿದರೆ ಮಿಕ್ಕವಾದವೆಲ್ಲವೂ ಶಮನವಾಗದಿರದು, ಪರ್ಜನ್ಯವೃಷ್ಟಿಯೂ ಭೂಕಂಪವೂ ಎಂಬೀ ಮುಂತಾದ ವಿಷಯಗಳಾದರೋ ಮನುಷ್ಯನ ಕೈಯಲ್ಲಿರುವುವೆಂದು ಯಾರೂ ಈಗ ಹೇಳುವುದಿಲ್ಲ. ಇದು ಒಳ್ಳೆಯದು, ಅದು ಕೆಟ್ಟದ್ದು ಎಂಬ ತಿಳಿವಳಿಕೆಯು ಮನುಷ್ಯನ ಬುದ್ಧಿಯಲ್ಲಿರುವುದರಿಂದ ಆ ತಿಳಿವಳಿಕೆ ರೂಪವಾದ ವಿವೇಕ ಪೂರ್ವಕವಾಗಿ ಒಳ್ಳೆಯದನ್ನು ಬೇರ್ಪಡಿಸಿ ಅದನ್ನೇ ಪರಿಗ್ರಹಿಸಲು ಪ್ರಯತ್ನಿಸಬೇಕು, ಒಂದು ವೇಳೆ ಕರ್ಮಾನುಸಾರವಾಗಿ ವಾಸನೆಯುಂಟಾಗುವುದೆಂಬ ಮಾತನ್ನೊಪ್ಪಿಸಿಕೊಂಡರೂ ಮನುಷ್ಯನು ತನ್ನಲ್ಲಿರುವ ಸಾರಾಸಾರ ವಿಚಾರವನ್ನುಪಯೋಗಿಸಿಕೊಳ್ಳದೆ ಪ್ರವಾಹದಲ್ಲಿ ತೇಲಿಹೋಗುವ ಕಟ್ಟಿಗೆಯಂತೆ ಕೇವಲ ಅಸ್ವತಂತ್ರನೇ ತಾನೆಂಬುದಾಗಿ ತಿಳಿಯುವುದು ಮರುಳತನವೇ ಸರಿ. ಯೋಗವಾಸಿಷ್ಠದಲ್ಲಿ:—

**ಶುಭಾಶುಭಾಭ್ಯಾಂ ಮಾರ್ಗಾಭ್ಯಾಂ ವಹನ್ತೀವಾಸನಾಸರಿತ್ ।**
**ಪೌರುಷೇಣ ಪ್ರಯತ್ನೇನ ಯೋಜನೀಯಾ ಶುಭೇ ಪಥಿ ॥**

ವಾಸನೆಯ ಪ್ರವಾಹವು ಒಳ್ಳೆಯದು ಕೆಟ್ಟದ್ದು ಎಂಬ ಎರಡೂ ಮಾರ್ಗಗಳಿಂದ ಹರಿಯುತ್ತದೆ. ಮನುಷ್ಯನು ಪೌರುಷಾರ್ಥದ ಪ್ರಯತ್ನದಿಂದ ಈ ವಾಸನೆಯ ಪ್ರವಾಹವನ್ನು ಒಳ್ಳೆಯ ಮಾರ್ಗದಿಂದೇ ಹರಿಯಗೊಡಬೇಕಲ್ಲದೆ ಅದನ್ನು ಕೆಟ್ಟಹಾದಿಯಿಂದ ಹರಿಯಗೊಡಬಾರದು.

ಈ ರೀತಿಯಾಗಿ, ಬೌದ್ಧಿಕದೃಷ್ಟಿಯಿಂದ ವಿಚಾರಿಸಿದರೆ ಒಳ್ಳೆಯ ಕೆಟ್ಟ ಪ್ರವೃತ್ತಿಗಳ ಬಗ್ಗೆ ಎಲ್ಲ ಬಗೆಯಿಂದಲೂ ಮನುಷ್ಯನೇ ಹೊಣೆಗಾರನೆಂಬುದು ಸಿದ್ಧವಾಗುತ್ತದೆ. ಈ ಹೊಣೆಗಾರಿಕೆಯನ್ನು ತಪ್ಪಿಸುವ

ದಕ್ಕಾಗಿ ಪ್ರಾರಬ್ಧವಾದವನ್ನೋ ನಿಸರ್ಗವಾದವನ್ನೋ ಮುಂದೆ ಮಾಡು ವುದನ್ನು ಪೈಗಳ್ಳತನವೆಂದು ಹೇಳಬಹುದು. ಆದ್ದರಿಂದ ತನ್ನ ಉನ್ನತಿ ಅವನತಿಗಳ ಬಗ್ಗೆ ಪ್ರಯತ್ನಿಸುವುದರಲ್ಲಿ ಮನುಷ್ಯನು ಪೂರ್ಣಸ್ವತಂತ್ರ ನಿದ್ದಾನೆ.

ಪ್ರವೃತ್ತಿಸ್ವಾತಂತ್ರ್ಯವನ್ನೊಪ್ಪಿಕೊಂಡು ಮನುಷ್ಯ ಒಳ್ಳೆಯದನ್ನು ಪರಿಗ್ರಹಿಸಿ ಕೆಟ್ಟದನ್ನು ಬಿಟ್ಟರಾಯಿತು, ಎಂಬಿಷ್ಟರಿಂದೇ ಈ ವಿಷಯವು ಮುಗಿಯತಕ್ಕದ್ದಲ್ಲ. ಮತ್ತೇನೆಂದರೆ ಒಳ್ಳೆಯದು ಕೆಟ್ಟದೆಂಬಿವುಗಳನ್ನು ಯಾವ ಪರೆಗಲ್ಲಿನಿಂದ ಗೊತ್ತುವಳಿಮಾಡಬೇಕು ? ಎಂಬ ಪ್ರಶ್ನೆಯೂ ಮುಂದೆ ಬಂದು ನಿಲ್ಲುವುದಾದ್ದರಿಂದ ಅದರ ವ್ಯವಸ್ಥೆಯಾದ ಮೇಲೇ ಮುಗಿಯುವುದು. ಅಂತಿಮ ಸಾಧ್ಯವೇ ಒಳ್ಳೆಯದು ಕೆಟ್ಟದೆಂಬಿವುಗಳನ್ನು ಗೊತ್ತು ಪಡಿಸತಕ್ಕ ಒರೆಗಲ್ಲಾಗಿರುವುದು. ಅಂತಿಮ ಸಾಧ್ಯವು ಅಂದರೆ ಮನುಷ್ಯನ ಅಂತಿಮ ಧ್ಯೆಯವು. ಅದನ್ನನುಲಕ್ಷಿಸಿಯೇ ಸಾಧನೆಯನ್ನು ಕಂಡು ಹಿಡಿಯಬೇಕು. ಮನುಷ್ಯನು ತಾನು ಯಾವ ಊರಿಗೆ ಹೋಗಬೇಕಾಗಿರುವುದೋ ಆ ಊರಿನ ದಾರಿಯನ್ನೇ ಕೇಳುತ್ತಾನೆ. ಇದೇ ಮೇರೆಗೆ ಗ್ರಾಹ್ಯಾಗ್ರಾಹ್ಯ ವಿಚಾರವು ಸಾಧ್ಯವನ್ನವಲಂಬಿಸಿರುವುದು. ಆದ್ದರಿಂದ ಸಾಧ್ಯವು ಒಳ್ಳೆಯದೋ ಕೆಟ್ಟದೋ ? ಮನುಷ್ಯನು ಯಾವ ಧ್ಯೇಯವನ್ನವಲಂಬಿಸಬೇಕು ? ಯಾವುದನ್ನು ದೂರೀಕರಿಸಬೇಕು ? ಅಂದರೆ, ಹೇಯೋಪಾದೇಯಗಳ ಸಾರಾಸಾರ ವಿಚಾರವನ್ನು ಅವಶ್ಯ ವಾಗಿ ಮಾಡಬೇಕು. ಉತ್ತಮ ಧ್ಯೆಯದ ಹೊರತು ಮನುಷ್ಯನಲ್ಲಿ ಸತ್ಪ್ರ ವೃತ್ತಿಯು ಸಂಭವಿಸದು ದೇವರಿದ್ದಾನೆ, ಪುನರ್ಜನ್ಮವುಂಟು, ಮನುಷ್ಯ ನಿಗೆ ತಾನು ಮಾಡಿದ ಶುಭಾಶುಭಕರ್ಮಗಳಿಂದೇ ತನಗೆ ಸುಖ ದುಃಖ ಗಳು ಸಂಭವಿಸುತ್ತವೆ; ಎಂಬ ಮುಂತಾದ ವಿಚಾರವುಳ್ಳ ಮನುಷ್ಯನು ಸತ್ಪಥವನ್ನನುಸರಿಸಿದವನೆಂದೇ ಅರಿಯಲ್ಪಡುತ್ತಾನೆ. ಆದ್ದರಿಂದ, ನಿಜ ಸುಖಶಾಂತಿಯನ್ನು ಪಡೆವುದೇ ಮುಖ್ಯ ಧ್ಯೇಯವಾಗಿವುಳ್ಳ ಮನುಷ್ಯನು ಅದನ್ನು ಸಾಧಿಸಲೋಸುಗ ಅದಕ್ಕೆ ತಕ್ಕ ನಡತೆಯಲ್ಲಿ ತೊಡಗಬೇಕು. ಆ ನಡತೆಯೇ ಕರಣೇಂದ್ರಿಯಂಗಳ ಸ್ವೈರವರ್ತನೆಗೆ ವಿಹಿತವಾದ ನಿರ್ಬಂಧವಾಗಿರುವುದು, ಇದುವೇ ನಮ್ಮ ವೈದಿಕ ಸಿದ್ಧಾಂತದಲ್ಲಿ ಧರ್ಮ ವೆಂದು ಹೇಳಲ್ಪಡುವುದು.

ಈ ಧರ್ಮವು ಬಾಯಿಮಾತಿನಿಂದ ಸಿದ್ಧಿಸದು. ಇದನ್ನು ಮನಃ ಪೂರ್ವಕವಾಗಿ ಆಚರಿಸಿದರೇನೇ ಫಲಿಸುವುದು. ಈ ಧರ್ಮಾಚರಣೆಯ

ಸಂಸ್ಕಾರವೇ ಇಲ್ಲದ ಜನರು ಇದಕ್ಕೆ ಸಂಬಂಧಪಟ್ಟ ವಾಕ್ಯಗಳು ಕಿವಿಗೆ ಬಿದ್ದೊಡನೆಯೇ ಅಥವಾ ಈ ಧರ್ಮವನ್ನನುಷ್ಠಿಸುವವರನ್ನು ಕಂಡೊಡನೆಯೇ ತಮ್ಮ ಮನಸ್ಸಿಗೆ ತೋಚಿದಂತೆ ಆಕ್ಷೇಪಿಸುತ್ತಾರೆ. ಅಷ್ಟು ಮಾತ್ರಕ್ಕೆ ಖಿನ್ನರಾಗದೆಯೂ ಸಿಟ್ಟಾಗದೆಯೂ ಅವರಿಗೆ ಯಥಾಮತಿ ಸಮಾಧಾನವನ್ನು ಹೇಳತಕ್ಕ ಯೋಗ್ಯತೆಯುಳ್ಳವರಾಗಿರುವುದು ತಜ್ಞರೆನಿಸಿಕೊಳ್ಳುವವರಿಗೆ ಭೂಷಣವಾದುದು.

ಮತ್ತು ಕೆಲವರು ಧರ್ಮದಂತಾಚರಿಸುತ್ತಿದ್ದರೂ ಅವರಿಗೆ ಆ ಧರ್ಮಾಚರಣೆಗೆ ತಕ್ಕ ಫಲವು ಸಿಕ್ಕದೇ ವಿಪರೀತ ಫಲಾನುಭವವೇ ಪ್ರಾಪ್ತವಾದರೆ ಅವರ ಧರ್ಮವೃತ್ತಿಯಾದರೂ ಹೊಯ್ದಾಡುತ್ತಿರುವುದರಲ್ಲಿ ಸೋಜಿಗವೇನು ? ಅಂಥ ಸಮಯದಲ್ಲಿ ಅವರ ಧಾರ್ಮಿಕವೃತ್ತಿಯು ಸ್ಥಿರಗೊಳ್ಳುವಂತೆ ಮಾಡುವುದು ಸಾಮಾನ್ಯವಾದ ಕೆಲಸವಲ್ಲ. ಧರ್ಮದ ದೃಶ್ಯಫಲದಿಂದಲೂ ಸೋಪಪತ್ತಿಕವಾದ ವಾಕ್ಯಗಳಿಂದಲೂ ಆ ಕಾರ್ಯವು ಸಾಧಿಸಲ್ಪಡುವುದು. ಪ್ರಾಚೀನ ಕಾಲದಲ್ಲಿ ಅಂತಹ ಕಾರ್ಯವನ್ನು ಸಹಜವಾಗಿಯೇ ಮಾಡತಕ್ಕ ಯೋಗ್ಯತೆಯುಳ್ಳವರು ಅಧಿಕವಾಗಿದ್ದರು. ಆ ಕಾಲಕ್ಕೂ ವರ್ತಮಾನ ಸಮಯಕ್ಕೂ ಇರುವ ಅಂತರವೇನಂದರೆ, ಆ ಕಾಲದಲ್ಲಿದ್ದ ಧರ್ಮಿಷ್ಠರು ಆಕ್ಷೇಪಿಸುವವರ ಸಾಶಂಕವೃತ್ತಿಯನ್ನು ತಮ್ಮ ಅನುಭವಬಲದಿಂದ ಸಮಾಧಾನ ಪಡಿಸುತ್ತಿದ್ದರು. ಅಂತಹ ಅನುಭವಿಗಳಾದ ಧಾರ್ಮಿಕರು ಈ ಕಾಲದಲ್ಲಿ ಬರಬರುತ್ತ ಇಲ್ಲದಂತಾಗಿರುವರು. ಅಂದರೆ ಅಂತಹ ಸ್ವಾನುಭಾವಿಗಳಾದ ಧಾರ್ಮಿಕರು ಈ ಕಾಲದಲ್ಲಿ ಇಲ್ಲವೇ ಇಲ್ಲವೆಂದು ಹೇಳುವುದು ನಮ್ಮ ಅಭಿಪ್ರಾಯವಲ್ಲ ಆದರೆ ಅಂಥಹ ಧರ್ಮನಿಷ್ಠರಾದ ಮಹಾನುಭಾವರು ಈಗಲಾದರೂ ಇರುತ್ತಿದ್ದರೂ ಪ್ರಕಟವಾಗಿಲ್ಲ.

ಪ್ರಾಚೀನ ಕಾಲದಲ್ಲಿ ಧರ್ಮ ವಿಷಯಕವಾದ ಸಾಶಂಕವೃತ್ತಿಯುಳ್ಳವರನ್ನು ಹೇಗೆ ಸಮಾಧಾನ ಪಡಿಸುತ್ತಿದ್ದರೆಂಬ ಬಗ್ಗೆ ಇಲ್ಲಿ ಒಂದು ಉದಾಹರಣೆಯನ್ನು ತೋರಿಸುತ್ತೇವೆ. ಕೌರವರು ಕಪಟದ್ಯೂತದಲ್ಲಿ ಪಾಂಡವರ ಸರ್ವಸ್ವವನ್ನೂ ಹರಣಮಾಡಿ ಅವರನ್ನು ದ್ರೌಪದಿಯೊಡನೆ ಕಾಡಿಗಟ್ಟಿದರು. ಆ ಸಮಯದಲ್ಲಿ ಅವರಿಗೆ ಎಷ್ಟು ಕಷ್ಟವಾಗಿರಬಹುದು, ಮತ್ತು ಧರ್ಮ ವಿಷಯಕವಾಗಿ ಅವರ ಚಿತ್ತವೃತ್ತಿಯು ಹೇಗಾಗಿರಬಹುದೆಂಬುದನ್ನು ಬೇರೆ ಬಣ್ಣಿಸಬೇಕಾಗಿಲ್ಲ. ಒಂದು ಸಮಯದಲ್ಲಿ

ದ್ರೌಪದಿಯೊಡನೆ ಆ ಐವರೂ ಪಾಂಡವರು ವನದಲ್ಲಿ ಸುಖದುಃಖಗಳ ಮಾತು ಗಳನ್ನಾಡುತ್ತ ಕುಳಿತಿರುವಾಗ ದ್ರೌಪದಿಯು ಧರ್ಮದ ಬಗ್ಗೆ ಅತ್ಯಂತ ಸಾಶಂಕವೃತ್ತಿಯುಳ್ಳವಳಾಗಿ, ಈಶ್ವರನನ್ನೂ ಧರ್ಮವನ್ನೂ ಮತ್ತು ಆ ಈಶ್ವರನಲ್ಲಿ ಭಕ್ತಿಯುಳ್ಳವನಾಗಿ ಪ್ರಾಧಾನ್ಯವಾಗಿ ಧರ್ಮವನ್ನೇ ಅನುಷ್ಠಿ ಸುತ್ತಿರುವ ಯುಧಿಷ್ಠಿರನನ್ನೂ ದೋಷಾರೋಪಣೆಯೊಡನೆ ಹೀಯಾಳಿ ಸತೊಡಗಿದಳು. ಆಗ ಅವಳ ಧರ್ಮವಿಷಯಕವಾದ ಸಾಶಂಕವೃತ್ತಿಯನ್ನು ಕುಡು ಯಧಿಷ್ಠಿರನು ಅವಳ ಮೇಲೆ ಸಿಟ್ಟಾಗದೆ ಮತ್ತು ಖಿನ್ನನಾಗದೆ ಬಹಳ ಯುಕ್ತಿಯಿಂದಲೂ ಸ್ವಾನುಭವದ ಬೆಂಬಲದಿಂದಲೂ ಅವಳನ್ನು ಸಮಾಧಾನಪಡಿಸಿ ಧರ್ಮದ ವಿಷಯದಲ್ಲಿ ಸಾಶಂಕವೃತ್ತಿ ಯನ್ನು ಹೀಗೆ ತಳೆಯಬಾರದೆಂದು ಉಪದೇಶ ಮಾಡಿದನು. ಹೇಗಂದರೆ ( ಮ. ಭಾ. ವನ. ೩೧ ) :—

**ಶಿಷ್ಟೈರಾಚರಿತಂ ಧರ್ಮಂ ಕೃಷ್ಣೇ ಮಾಸ್ಮಾತಿ ಶಂಕಿಥಾಃ ।**
**ಪುರಾಣಮೃಷಿಭಿಃ ಪ್ರೋಕ್ತಂ ಸರ್ವಜ್ಞೈಃ ಸರ್ವ ದರ್ಶಿಭಿಃ ॥**
**ಯಸ್ಯ ಪ್ರಸಾದಾತ್ತದ್ಭಕ್ತೋ ಮರ್ತ್ಯೋಗಚ್ಛತ್ಯಮರ್ತ್ಯತಾಮ್ ।**
**ಉತ್ತಮಾಂ ದೇವತಾಂ ಕೃಷ್ಣೇ ಮಾವಮಂಸ್ಥಾಃ ಕಥಂಚನ ॥**

ದ್ರೌಪದಿಯೇ ! ಸರ್ವಜ್ಞರೂ, ಸರ್ವದರ್ಶಿಗಳೂ, ಶಿಷ್ಟರೂ ಆದ ಪುರಾತನ ಮಹರ್ಷಿಗಳಿಂದ ಆಚರಿಸಲ್ಪಟ್ಟ ಅನಾದಿಯಾದ ಧರ್ಮ ವಿಷಯದಲ್ಲಿ ನೀನು ಹೀಗೆ ಅಶ್ರದ್ಧೆಯಿಂದಾಶಂಕಿಸಬೇಡ; ಎಲೌ ಕೃಷ್ಣೇ ! ಕೇಳು. ಯಾವ ಧರ್ಮದ ಪ್ರಸಾರದಿಂದ ಮರ್ತ್ಯನಾಗಿರತಕ್ಕ ಅದರ ಭಕ್ತನು ಅಮರ್ತ್ಯನಾಗುವನೋ ಆ ಧರ್ಮರೂಪವಾದ ಉತ್ತಮ ದೇವ ತೆಯನ್ನು ಹೀಗೆ ನೀನೆಂದಿಗೂ ಜರಿದು ನುಡಿಯದಿರು ಕಂಡ್ಯಾ !

ಧರ್ಮವೇ ಉತ್ತಮ ದೇವತೆಯು ( ಸದ್ಧರ್ಮವು ಈಶ್ವರನ ಸ್ವರೂಪ ಭೂತವಾದುದು. ) ಅದು ಮರ್ತ್ಯನನ್ನು ( ಮಾನವನನ್ನು, ಜೀವನನ್ನು ) ಅಮೃರ್ತ್ಯನನ್ನಾಗಿ ( ಅಮೃತನನ್ನಾಗಿ, ಶಿವನನ್ನಾಗಿ ) ಮಾಡುವುದು. ಆದ್ದರಿಂದ, ಆ ಧರ್ಮರೂಪವಾದ ದೇವತೆಯ ಬಗ್ಗೆ ನೀನು ಅತಿವಾದ ವನ್ನು ಎಂದಿಗೂ ಮಾಡದಿರು; ಧರ್ಮವನ್ನು ಹಿಯಾಳಿಸಿ ನುಡಿಯುವುದು ಪಾಪವೆಂದೇ ತಿಳಿ.

ಈ ಪ್ರಕಾರವಾಗಿ ಯುಧಿಷ್ಠಿರನು ಧರ್ಮವು ನಿಷ್ಫಲವಾದುದಲ್ಲವೆಂದೂ, ಅದು ನಿತ್ಯವಾಗಿ ಅನುರೂಪಫಲಪ್ರದವಾದುದೆಂದೂ, ಸೋಪಪತ್ತಿಕವಾಗಿ

ತ್ರಿಳಿಸಿ ಹೇಳಿದನು: ಅವನು ನುಡಿದುದೇನೆಂದರೆ---- ಎಲೌ ಯಾಜ್ಞಸೇನಿಯೇ ! ಶಿವಭಕ್ತಾಗ್ರಣ್ಯನಾದ ಮಾರ್ಕಂಡೇಯ ಮುನಿಯು ಶಿವಭಕ್ತಿ, ಶಿವಪೂಜೆ, ಶಿವವ್ರತಾದಿ ಧರ್ಮಾಚರಣೆಗಳಿಂದೇ ಚಿರಂಜೀವನಾದನು. ಹಾಗೇ ವ್ಯಾಸ, ವಸಿಷ್ಠ, ಮೈತ್ರೇಯ, ಲೋಮಶ, ಶುಕ ಮೊದಲಾದ ಬೇರೆ ಅನೇಕ ಋಷಿಗಳಾದರೂ ಶಮ, ದಮ, ಶಾಂತಿ ಮುಂತಾದ ಸದ್ಗುಣಮಣಿಗಣಮಂಡಿತರಾಗಿ ಸದ್ಧರ್ಮಾನುಷ್ಠಾನದಿಂದೇ ಶಾಪಾನುಗ್ರಹ ಸಾಮರ್ಥ್ಯವುಳ್ಳವರೂ, ದಿವ್ಯಜ್ಞಾನಸಂಪನ್ನರೂ, ಜೀವನ್ಮುಕ್ತರೂ ಆಗಿರುತ್ತಾರೆ. ಅದು ಕಾರಣವೇ ದೇವತೆಗಳಿಗೂ ಕೂಡ ವಂದ್ಯರಾದ ಈ ಮುನಿಗಳು—

ಏತೇ ಹಿ ಧರ್ಮವೇವಾದೌ ವರ್ಣಯನ್ತಿ ಸದಾನಘೇ |

ಪಾಪವಿಲ್ಲದವಳಾದ ದ್ರೌಪದಿಯೇ ! ಯಾವಾಗಲೂ ಧರ್ಮವನ್ನೇ ವರ್ಣಿಸುತ್ತಿರುವರು, ಧರ್ಮಾಚರಣೆಯ ಪ್ರಭಾವಾತಿಶಯದಿಂದೇ ಸಿದ್ಧರೆನಿಸಿದ ಆ ಮಹಾನುಭಾವರು :— ' ಯಾವನಿಗೆ ತನ್ನ ಕಲ್ಯಾಣವಾಗಬೇಕೆಂಬ ಲವಲವಿಕೆಯಿರುವುದೋ ಅವನು ಧರ್ಮವನ್ನೇ ಅವಶ್ಯವಾಗಿ ಆಚರಿಸಬೇಕು ' ಎಂದು ಹೇಳುತ್ತಾರೆ. ಸದ್ಧರ್ಮಾನುಷ್ಠಾನದಿಂದ ಸ್ವತಃ ಕೃತಾರ್ಥರಾಗಿ ಅನ್ಯರಿಗೂ ಅದೇ ಮಾರ್ಗವನ್ನು ಬೋಧಿಸುತ್ತಿರುವ ಆ ಶಿಷ್ಟರ ವಾಕ್ಯಗಳಲ್ಲಿ ವಿಶ್ವಾಸವನ್ನಿರಿಸದೆ ನಿನ್ನ ಸಂಕುಚಿತ ವೃತ್ತಿಗೇನೆ ದೊಡ್ಡಸ್ತಿಕೆಯನ್ನಿತ್ತು ಪರಮಕಲ್ಯಾಣಕಾರಕವಾದ ಧರ್ಮ ವಿಷಯದಲ್ಲಿ ಹೀಗೆ ನೀನು ಅನುದಾರವಾದುದ್ಗಾರವನ್ನು ಹೊರಡಿಸುವುದುಚಿತವಾದುದೋ ಹೇಗೆಂಬುದನ್ನು ತಿಳಿವಳಿಕೆಯುಳ್ಳವಳಾದ ನೀನೇ ವಿಚಾರ ಮಾಡು.

ಈ ಮೇಲಿನ ವಾಕ್ಯಗಳಲ್ಲಿ ಯುಧಿಷ್ಠಿರನು, ಮಾರ್ಕಂಡೇಯ ವ್ಯಾಸವಸಿಷ್ಠಾದಿ ಮಹಾತ್ಮರ ಉದಾಹರಣೆಯನ್ನು ಕೊಟ್ಟಿರುವನಷ್ಟೇ ! ಆ ಮುನಿಗಳು ಈಗ ನಮಗೆ ಪರೋಕ್ಷರೂಪವಾಗಿರುವರಾದರೂ, ದ್ರೌಪದಿಗೆ ಪರೋಕ್ಷವಾದವರಲ್ಲ; ಆ ಸಾಧ್ವಿಯು ಅರಣ್ಯದಲ್ಲಿ ಅವರ ಸಮೂಹದಲ್ಲಿಯೇ ಕಾಲಹರಣ ಮಾಡಬೇಕಾಗಿದ್ದಿತಾದ್ದರಿಂದ, ಯುಧಿಷ್ಠಿರನ ಈ ಸಮಾಧಾನ ವಚನಗಳಿಂದ ಅವಳ ಹೃದಯವು ಶಾಂತವಾಯಿತೆಂಬಲ್ಲಿ ಆಶ್ಚರ್ಯವೇನು ? ಆದರೆ ಆಧುನಿಕ ಜನರಿಗೆ ಅಂತಪ್ಪ ದಿವ್ಯ ಮುನಿಗಳನ್ನು ಈಗ ನಾವೆಲ್ಲಿ ತೋರಿಸೋಣ ! ಚಿನ್ನಿಧಿಯೊಳು ಕಲ್ಲೋಲದಂತೆ

ಮೈದೋರಿ ಮೆರೆಯೂದವರೂ, ಲೋಕ ವಿಖ್ಯಾತರಾದ ಅಗಸ್ತ್ಯಾದಿ ಮುನಿಗಳಿಗೆ ತತ್ತ್ವೋಪದೇಶವನ್ನು ಮಾಡಿದವರೂ ಆದ ಶ್ರೀ ರೇಣುಕಾದಿ ಮಹರ್ಷಿಗಳನ್ನು ಈಗ ನಾವು ನೆನಹುಮಾತ್ರದಿಂದುಪಾಸಿಸಬೇಕಾಗಿರುವುದಲ್ಲವೇ ?

ಆಧುನಿಕರು 'ಪುರಾಣದೊಳಗಿನ ಈ ರಗಳೆಯನ್ನು ನಮ್ಮೆದುರಿಗೆ ನೀವು ಹೇಳಕೂಡದು, ಅದರಿಂದ ನಮಗೆ ಸಮಾಧಾನವಾಗದು; ಈಗ ನಿಮ್ಮ ಬಳಿಯಲ್ಲಿ ಪ್ರತ್ಯಕ್ಷವಾದ ಉದಾಹರಣೆಗಳೇನಾದರೂ ಇದ್ದರೆ ಅವನ್ನಷ್ಟು ತೋರಿಸಿದರೆ, ಸಾಕು ! ಎಂದು ಬೊಬ್ಬಿರಿಯುವದರಲ್ಲಿ ಅವರದಾದರೂ ದೋಷವೇನಿದೆ ? ಆದ್ದರಿಂದ ಶಂಕಿತರನ್ನು ಸಮಾಧಾನ ಪಡಿಸುವುದಕ್ಕೋಸ್ಕರ ಧಾರ್ಮಿಕರು ತಮ್ಮ ಧಾರ್ಮಿಕ ಬಲವನ್ನು ಬೆಳೆಯಿಸಿ ಧರ್ಮದ ಪ್ರಭಾವವನ್ನು ಪ್ರತ್ಯಕ್ಷಾನುಭವಗೋಚರವಾಗುವಂತೆ ಮಾಡಿಕೊಟ್ಟರೇನೇ ಸಾಶಂಕಜನರು ಧರ್ಮದ ಬಗ್ಗೆ ನಿಶ್ಶಂಕವಾದ ಶ್ರದ್ಧೆಯುಳ್ಳವರಾಗುತ್ತಾರೆ.

ಈಗಿನ ಪರಿಸ್ಥಿತಿಯಾದರೋ ವಿಚಿತ್ರವಾಗಿದೆ. ಒಬ್ಬನಾದರೂ ಸ್ವಧರ್ಮಾನುಷ್ಠಾನಪ್ರಭಾವದಿಂದ ಕೆಲವಾದರೂ ಅಲೌಕಿಕ ಸಾಮರ್ಥ್ಯ ಯುಕ್ತನಾಗಿರುತ್ತಾನೆಂದು ಅವನ ಕಡೆಗೆ ಬೊಟ್ಟು ಮಾಡಿ ತೋರಿಸಲಿಕ್ಕೆ ಬರುವಂತಿದೆಯೇ ? ಅದಕ್ಕೆ ಬದಲಾಗಿ ಅಧರ್ಮಾಚರಣೆಯಿಂದೇ ಲೌಕಿಕ ಪ್ರತಿಷ್ಠೆಯನ್ನು ಹೊಂದಿದ ಜನರು ಹೆಚ್ಚಾಗ ತೊಡಗಿದ್ದಾರೆ. ಅಂಥವರದೇ ಬಲುಬೆಳಕು, ಅವರೇ ಐಹಿಕೋತ್ಕರ್ಷತೆಯನ್ನು ಸಂಪಾದಿಸಿದವರು, ಧಾರ್ಮಿಕರಿಗಿಂತ ಅವರೇ ಸುಖಿಗಳು, ಎಲ್ಲ ಕಡೆ ಅವರಿಗೇ ಮನ್ನಣೆಯು ಹೆಚ್ಚು. ಸರ್ವವ್ಯಾವಹಾರಿಕ ಪ್ರಸಂಗಗಳಲ್ಲಿ ಅವರ ಮಾತಿನ ಕುದುರೆಯೇ ಮುಂದಾಗುವುದು; ಇಂತಹ ಸ್ಥಿತಿಯಲ್ಲಿ ಸಾಧಾರಣ ಜನರ ತಿಳುವಳಿಕೆಯಿಂದ ಧರ್ಮವಿಷಯಕವಾದ ಬೇಧಬುದ್ಧಿ ಯುಂಟಾಗುವಿಕೆಯು ಅಸ್ವಾಭಾವಿಕವಾದುದಲ್ಲ.

ಪಾಂಡವರಲ್ಲಿಯೇ ಯುಧಿಷ್ಠಿರಾರ್ಜುನರಂತೆ ಧರ್ಮನಿಷ್ಠರಲ್ಲದ ಭೀಮ, ದ್ರೌಪದಿ ಮೊದಲಾದವರೇ ಧರ್ಮದ ಬಗ್ಗೆ ಸಂಶಯಾವಿಷ್ಟ ಚಿತ್ತರಾಗಿದ್ದರಲ್ಲವೇ ? ಅವರ ವಿಚಾರಸರಣಿಯು ಹೀಗಿದ್ದಿತು— ನಾವೆಲ್ಲರೂ ಅಧರ್ಮಕ್ಕೆ ಭಯಪಡುವವರೂ, ಧರ್ಮನಿಷ್ಠರೂ, ಆಗಿದ್ದೇವೆ; ನಮ್ಮೊಳಗೆ ಹಿರಿಯನಾದ ಯುಧಿಷ್ಠಿರನಾದರೋ ಕೇವಲ ಧರ್ಮ

ಮೂರ್ತಿಯೇ ಆಗಿರುತ್ತಾನೆ; ಹೀಗಿದ್ದರೂ ನಮ್ಮ ಮೇಲೆ ಅಡಿಗಡಿಗೆ ಸಂಕಟಗಳೇಕೆ ಬರುತ್ತಿರುವುವು ? ಪಾಪಕೃತ್ಯಗಳನ್ನೇ ಹೆಚ್ಚಾಗಿ ಮಾಡುತ್ತಿರುವ ಆ ದುರ್ಯೋಧನಾದಿಗಳಾದರೋ ಐಹಿಕೋತ್ಕರ್ಷದಿಂದ ಕೇವಲ ಸುಖಿಗಳಾಗಿರುವರು; ಇದನ್ನೆಲ್ಲ ಯೋಚಿಸಿದರೆ ಧರ್ಮವು ಸುಖಾವಹವಾದುದಲ್ಲವೆಂದೂ ಅಧರ್ಮವೇ ಸುಖಪ್ರದವಾದುದೆಂದೂ ಅನುಮಾನಿಸಬಾರದೇಕೆ ?

ಆಪಾತತಃ ಈ ಅನುಮಾನವು ನಿರ್ದುಷ್ಟವಾದುದೆಂದರಿಯಲ್ಪಟ್ಟರೂ ಅದು ಕೇವಲ ತರ್ಕಪ್ರಧಾನವಾಗಿರುವುದರಿಂದ ಅಪ್ರತಿಷ್ಠಿತವಾಗಿದೆ. ವೇದಾಗಮಮೂಲಕವಾದ ತರ್ಕವೇ ಪ್ರತಿಷ್ಠಿತವಾದುದೆಂಬ ಸಿದ್ಧಾಂತವಿದೆ. ಕೇವಲ ತರ್ಕವನ್ನೇ ಆಶ್ರಯಿಸಿರುವಾತನಿಗೆ ಯಾವದೊಂದು ಧರ್ಮವಾಗಲಿ ಸಂಪ್ರದಾಯವಾಗಲಿ ಇರುವುದಿಲ್ಲ. ಮತ್ತು ತರ್ಕಮೂಲಕವಾದ ಧರ್ಮವಾದರೂ ಅಸ್ಥಿರವಾದುದೇ. ಆದ್ದರಿಂದ ಧರ್ಮಮಂಡನದಲ್ಲಿ ಆಪ್ತೋಪದೇಶಕ್ಕೆ ಪ್ರಾಮುಖ್ಯತೆಯುಂಟು. ಆಗಮ (ವೇದಶಾಸ್ತ್ರ) ರೂಪ ಪ್ರಮಾಣ ಸಮ್ಮುಖದಲ್ಲಿ ತರ್ಕವು ಹಿಮ್ಮೆಟ್ಟುವುದು. ಅದು ಕಾರಣವೇ ಮನುಸ್ಮೃತಿಯಲ್ಲಿ (೨—೧೧) ಕೇವಲ ತಾರ್ಕಿಕನು ಬಹಿಷ್ಕರಿಸಲ್ಪಟ್ಟಿರುತ್ತಾನೆ. ಹೇಗೆಂದರೆ—

**ಯೋಽವಮನ್ಯೇತ ತೇ ಮೂಲೆ ಹೇತುಶಾಸ್ತ್ರಾಶ್ರಯಾದ್ದ್ವಿಜಃ ।**
**ನ ಸಾಧುಭಿರ್ಬಹಿಷ್ಕಾರ್ಯೋ ನಾಸ್ತಿಕೊ ವೇದನಿಂದಕಃ ॥**

ಇಲ್ಲಿ 'ಹೇತುಶಾಸ್ತ್ರಾಶ್ರಯಾತ್' ಎಂಬ ಪದಕ್ಕೆ 'ತರ್ಕವಾದದಿಂದ' ಎಂಬರ್ಥವಿರುವುದು. ಇನ್ನು ಧರ್ಮ ವಿಷಯದಲ್ಲಿ ತರ್ಕಪ್ರವೇಶಕ್ಕೆ ಅವಕಾಶವಿರುವುದೇನೋ ನಿಜ; ಆದರೆ ಎಂಥ ತರ್ಕದ ಅವಶ್ಯಕತೆಯುಂಟೆಂಬುದೂ ಅದೇ ಸ್ಮೃತಿಯಲ್ಲಿ (೧೨—೧೦೬) ಹೀಗೆ ಹೇಳಲ್ಪಟ್ಟಿದೆ.

**ಆರ್ಷಂ ಧರ್ಮೋಪದೇಶಂಚ ವೇದಶಾಸ್ತ್ರಾವಿರೋಧಿನಾ ।**
**ಯಸ್ತರ್ಕೇಣಾನುಸನ್ಧತ್ತೇ ಸ ಧರ್ಮಂ ವೇದ ನೇತರಃ ॥**

ಇಂತಿರುವ ನುಡಿಗಳಲ್ಲಿ 'ವೇದಶಾಸ್ತ್ರಾವಿರೋಧಿನಾ ತರ್ಕೇಣ' ಎಂಬಲ್ಲಿರುವ 'ಅವಿರೋಧಿ' ಎಂಬ ಪದವು ತರ್ಕಕ್ಕಿಂತಲೂ ಶಾಸ್ತ್ರ ಪ್ರಮಾಣದ ಆಧಿಕ್ಯವನ್ನು ನಿರೂಪಿಸುವುದು.

ಭರ್ತೃಹರಿಯೂ 'ವಾಕ್ಯಪದೀಯ' ಎಂಬ ಗ್ರಂಥದಲ್ಲಿ (೧—೩) ಈ ಮೇಲಿನ ಅಭಿಪ್ರಾಯವನ್ನೇ ಸೂಚಿಸುತ್ತಾನೆ.

**ನ ಚಾಗಮಾದ್ ಋತೆ ಧರ್ಮಸ್ತರ್ಕೇಣ ವ್ಯವತಿಷ್ಠತೇ ।**
**ಋಷೀಣಾಮಪಿ ಯತ್ ಜ್ಞಾನಂ ತದಪ್ಯಾಗಮಪೂರ್ವಕಂ ॥**

ಈ ರೀತಿಯಾಗಿ, ಕೇವಲ ತರ್ಕವು ಧರ್ಮ ನಿರ್ಣಾಯಕ ಪ್ರಮಾಣ ಭೂತವಾದುದಲ್ಲವೆಂಬ ಬಗ್ಗೆ ವೈದಿಕ ವಾಙ್ಮಯದಲ್ಲಿ ಸಮಂಜಸವಾದ ನುಡಿಗಳು ಎಣಿಕೆಯಿಲ್ಲದಷ್ಟಿವೆ. ಶ್ರೀಪತಿ, ಶಂಕರ, ಶ್ರೀಕಂಠಾದ್ಯಾ ಚಾರ್ಯರೂ 'ತರ್ಕಾಪ್ರತಿಷ್ಠಾನಾತ್' (೨—೧—೧೧) ಎಂಬ ಬ್ರಹ್ಮ ಸೂತ್ರ ಭಾಷ್ಯ ಪಂಕ್ತಿಗಳಲ್ಲಿ ವೇದಶಾಸ್ತ್ರ ಪ್ರಮಾಣ ಸಂಮತಿಗೊಳಪಡದ ಶುಷ್ಕತರ್ಕವನ್ನು ನಿರಾಕರಿಸಿದ್ದಾರೆ. ಧರ್ಮಾಚರಣೆಯಿಂದ ಕ್ಲೇಶವು ಸಂಭವಿಸಬಹುದಾದರೂ ಆ ಸಮಯದಲ್ಲಿ ವಿಪರೀತ ಭಾವನೆಯಿಂದ ಮನಸ್ಸಿನಲ್ಲಿ ಅಧರ್ಮವಿಚಾರಕ್ಕಾಸ್ಪದವನ್ನು ಕೊಡಬಾರದು; ವೇದಾಗಮ ವಿಹಿತವಾದ ಧರ್ಮಾನುಷ್ಠಾನ ಪರಾಯಣನಾದ ಪುರುಷನಿಗೆ ಹಣ ಮುಂತಾದುದರ ಕೊರತೆಯಿಂದ ವ್ಯವಹಾರದಲ್ಲಿ ಕಷ್ಟವಾಗುವುದು. ಧರ್ಮದಲ್ಲಿ ಉತ್ತರೋತ್ತರವಾಗಿ ಶ್ರದ್ಧೆಯು ಹೆಚ್ಚಾಗುತ್ತ ನಡೆದಿದ್ದರೂ ಧನಾದಿಬಾಹ್ಯಪದಾರ್ಥಗಳ ಆನುಕೂಲ್ಯವಿಲ್ಲದಂತಾಗಲು ಬಲು ತೊಂದರೆ ಗೀಡಾದ ಸಂಸಾರಿಗಳ ಮನಸ್ಸು ಗಾಳಿಗೊಡ್ಡಿದ ದೀವಿಗೆಯಂತೆ ಹೊಯ್ದಾಡುತ್ತಿರುವುದನ್ನು ನಾವು ಕಣ್ಣಾರೆ ಕಾಣಬಹುದು. ಆದರೆ, ಈ ವಿಷಯದಲ್ಲಿ ಮನುವು ಹೀಗೆ ಸ್ಪಷ್ಟವಾಗಿ ಹೇಳಿದ್ದಾನೆ—

**ನ ಸೀದನ್ನಪಿ ಧರ್ಮೇಣ ಮನೋಽಧರ್ಮೇ ನಿವೇಶಯೇತ್ ।**
**ಅಧಾರ್ಮಿಕಾಣಾಂ ಪಾಪಾನಾಮಾಶು ಪಶ್ಯನ್ವಿಪರ್ಯಯಮ್ ॥**

ಹಣವು ಮುಂತಾದುದು ಕೈಯಲ್ಲಿಲ್ಲದಂತಾಗಲು ಧರ್ಮಾಚರಣೆಗೆ ತೊಂದರೆಯೊದಗುವುದೆಂದರಿತು, ತಾನು ಅಧರ್ಮವನ್ನಾಚರಿಸಲು ಎಂದಿಗೂ ಯೋಚಿಸಬಾರದು. ಏಕೆಂದರೆ, ಅಧರ್ಮಾಚರಣೆಯಿಂದ ಜನರು ಧನಕನಕ ಮೊದಲಾದೈಸಿರಿಯುಳ್ಳವರಾಗಿರುವುದು ಕಂಡು ಬಂದರೂ ಆ ಪಾಪಾತ್ಮರು ಗಳಿಸಿದ ಅನ್ಯಾಯದ ಸಂಪತ್ತು ಶೀಘ್ರವೇ ನಾಶವಾಗುವುದು. ಮತ್ತು ಅವರು ತಾವು ಮಾಡಿದ ಪಾಪಕೃತಿಗೆ ತಕ್ಕ ಫಲವಾದ ಅತಿಶಯ ದುಃಖವನ್ನನುಭೋಗಿಸುವರು. ಈ ಪರಿಣಾಮದ ಕಡೆ ದೃಷ್ಟಿಯನ್ನಿಟ್ಟು ಮನುಷ್ಯನು ಯಥಾಶಕ್ತಿ ಧರ್ಮವನ್ನೇ ಆಚರಿ

ಸಬೇಕಲ್ಲದೆ ಹಣ ಪುಂತಾದ್ಯೈಸಿರಿಯ ಹಂಬಲದಿಂದ ಅಧರ್ಮವೃತ್ತಿಯುಳ್ಳವನಾಗಬಾರದು. ( ಮನು ೪-೧೭೧ )

ವೇದಾಗಮ ಸ್ಮೃತೀತಿಹಾಸಗಳಲ್ಲಿ ಈ ವಿಷಯವೇ ಸವಿಸ್ತರವಾಗಿ ವರ್ಣಿಸಲ್ಪಟ್ಟಿದೆ. ಆದ್ದರಿಂದ ಅದಕ್ಕನುಸರಿಯೇ ಅನುಮಾನಿಸಬೇಕು. ಧರ್ಮವು ಕ್ಲೇಶಕರವಾದುದೆಂದು ಆರಂಭದಲ್ಲಿ ತಿಳಿಯಲ್ಪಟ್ಟರೂ ಅದು ಪರಿಣಾಮದಲ್ಲಿ ಸುಖಾವಹವಾಗಿರುವುದು; ಮತ್ತು ಅಧರ್ಮವು ಆರಂಭದಲ್ಲಿ ಅಲ್ಪ ಸುಖಾವಹವಾದುದೆನಿಸಿದರೂ ಪರಿಣಾಮದಲ್ಲಿ ಬಹು ದುಃಖದಾಯಕವಾಗಿದೆ. ಆದ್ದರಿಂದ ಆಪಾತರಮಣೀಯವಾದ ಅಧರ್ಮವನ್ನು ತ್ಯಜಿಸಿ ಚಿರಸುಖಪ್ರದವಾದ ಧರ್ಮವನ್ನೇ ಸ್ವೀಕರಿಸುವುದುಚಿತವು.

ಐತರೇಯ ಬ್ರಾಹ್ಮಣದಲ್ಲಿ ( ಅ. ೩೩ ) ಇಂದ್ರನು ಹೇಳುತ್ತಾನೆ.----

**ಕಲಿಃ ಶಯಾನೋ ಭವತಿ ಸಂಜಿಹಾನಸ್ತು ದ್ವಾಪರಃ ।**
**ಉತ್ತಿಷ್ಠಂಸ್ತ್ರೇತಾಭವತಿ ಕೃತಂಸಂಪದ್ಯತೇ ಚರಂ ಶ್ಚರೈವೇತಿ ॥**

ನಿದ್ರೆ, ಎಚ್ಚರಿಕೆ, ಎದ್ದು ನಿಲ್ಲುವಿಕೆ, ತಿರುಗಾಡುವಿಕೆ, ಎಂಬಿವೇ ಅನುಕ್ರಮವಾಗಿ ಕಲಿ, ದ್ವಾಪರ, ತ್ರೇತಾ, ಕೃತವೆಂದು ಹೇಳಲ್ಪಡುತ್ತವೆ. ಈ ವಿಚಾರದ ಮೇಲಿಂದ, ಮನುಷ್ಯನ ನಿದ್ರಾದಿ ನಾಲ್ಕು ಅವಸ್ಥೆಗಳು ಕಲಿ ಮೊದಲಾದ ನಾಲ್ಕು ಯುಗಗಳಂತಿವೆ. ಆದ್ದರಿಂದ ಈ ಕಲಿಯುಗದಲ್ಲಿಯೂ ಧಾರ್ಮಿಕರಿಗೆ ಯುಗಪರಿವರ್ತನಗೊಳಿಸಲಿಕ್ಕಾಗದಿದ್ದರೂ ತಮ್ಮ ಆಚರಣೆಯಿಂದೇ ಕೃತಯುಗವನ್ನು ಸಂಪಾದಿಸಬಹುದಲ್ಲವೇ ?

ಈ ಕಲಿಯುಗದಲ್ಲಿಯೇ ನೂರಿನ್ನೂರು ವರ್ಷಗಳ ಹಿಂದೆ ಆಗಿಹೋದ ಸತ್ಪುರುಷರು ಸ್ವಧರ್ಮಾನುಷ್ಠಾನದಿಂದುಂಟಾದ ಸಾಮರ್ಥ್ಯವನ್ನು ತೋರಿಸಿಯೇ ಅನೇಕ ಸ್ವಧರ್ಮೀಯರನ್ನು ಹಾಗಿರಲಿ ವಿಧರ್ಮೀಯರನ್ನು ಕೂಡ ತಮ್ಮ ಧರ್ಮದಲ್ಲಿ ಸದ್ಭಾವನೆಯುಳ್ಳವರನ್ನಾಗಿ ಮಾಡಿದರು. ಸಾರಾಂಶ, ಆತ್ಮತೇಜದಿಂದ ಥಳಥಳಿಸುವ ಸತ್ಪುರುಷರೆಂಬ ರತ್ನಗಳು ಈ ಘೋರವಾದ ಕಲಿಯುಗದಲ್ಲಿಯೂ ಕೂಡ ಇಲ್ಲವೇದೇ ಹೇಳಲಾಗುವುದಿಲ್ಲ; ಮತ್ತು ಮುಂದೆಯಾದರೂ ಯೋಗ್ಯ ಪ್ರಸಂಗದಲ್ಲಿ ಅವರು ಮೈದೋರದಿರಲಾರರು. ಈಗ ಮಾತ್ರ ಅಂಥವರು ಕಾಣಲ್ಪಡದಿರುವುದರಿಂದಲೇ ನಾಸ್ತಿಕರ ನಟನೆಯು ಬೆಳೆಯತೊಡಗಿದೆ.

9

ಆದರೆ, ಯಾರ ಅಸ್ತಿತ್ವದಿಂದೇ ಈ ಪೃಥ್ವಿಯು ಒಂದು ವಿಧವಾದ ನಿಯಂತ್ರಿಗೊಳಪಟ್ಟಿರುವುದೋ ಅಂತಪ್ಪ ಮಾನನೀಯರೂ ಮಹನೀಯರೂ ಪ್ರಾತಃಸ್ಮರಣೀಯರೂ ಆದ ಸ್ವಧರ್ಮನಿಷ್ಠರು ಈಗಲೂ ಬಹು ರತ್ನ ವಸುಂಧರೆಯಲ್ಲಿ ಅಲ್ಲಲ್ಲಿ ವಿರಾಜಿಸುತ್ತಿರುವರು; ಮತ್ತು ತಮ್ಮ ದಿವ್ಯ ಸಾಮರ್ಥ್ಯದಿಂದ ವೇದಾಗಮನಿಂದಕರಾದ ನಾಸ್ತಿಕರನ್ನು ಹತಬಲರನ್ನಾಗಿ ಮಾಡುತ್ತಿರುವರು.

ಮನುಷ್ಯನು ಇಂದು ಆಚರಿಸಿದ ಪಾತಕದ ಫಲವನ್ನು ಕಾಲಾಂತರ ದಲ್ಲಿಯೋ, ಜನ್ಮಾಂತರದಲ್ಲಿಯೋ ಭೋಗಿಸುವನು. 'ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೆ' ಎಂಬಂತೆ, ತೀವ್ರ ತೀವ್ರತರಾದಿ ಶುಭಾಶುಭಕರ್ಮಗಳ ಫಲಭೋಗವು ಈ ಜನ್ಮದಲ್ಲಿಯೇ ಘಟಿಸುವುದೆಂಬ ಸಂಗತಿಯಾದರೂ ಮರೆಯಲ್ಪಡತಕ್ಕದ್ದಲ್ಲ. ದೇವರೇ ! ನಾನು ಈ ಜನ್ಮದಲ್ಲಿ ಯಾವ ಬಗೆಯ ಪಾಪಕೃತ್ಯವನ್ನೂ ಮಾಡಿದವನಲ್ಲ. ಆದರೆ, ನನಗೆ ಈಗ ಇಂತಹ ದುಃಖವನ್ನನುಭವಿಸುವ ಪ್ರಸಂಗವೇಕೆ ಪ್ರಾಪ್ತವಾದುದು ? ಎಂಬುದಾಗಿ ಈಶ್ವರನಿಗೆ ಮೊರೆಯಿಡತಕ್ಕ ಜನರೂ ಕಡಿಮೆಯಿಲ್ಲ. ಈ ದುಃಖಾನುಭವವು ಈಶ್ವರಪ್ರೇರಿತವಾದುದಾದರೂ ತಮ್ಮ ಪುರಾಕೃತಕರ್ಮಫಲವೆಂಬುದು ಅವರ ಲಕ್ಷ್ಯದಲ್ಲಿ ಬಾರದಿರುವುದೇ ಅವರ ಆ ವಿಪರೀತ ತಿಳಿವಳಿಕೆಗೆ ಕಾರಣವಾಗಿರುವುದು. ಆದಾಗ್ಯೂ ಪುರಾತನರು :—

**ನಾಧರ್ಮಶ್ಚರಿತೋ ಲೋಕೇ ಸದ್ಯಃ ಫಲತಿಗೌರಿವ ।**
**ಶನೈರಾವರ್ತಮಾನಸ್ತು ಕರ್ತ್ರುರ್ಮೂಲಾನಿಕೃನ್ತತಿ ॥**

ಆಚರಿಸಲ್ಪಟ್ಟ ಅಧರ್ಮವು ಈ ಲೋಕದಲ್ಲಿ ಗೋವಿನಂತೆ ತತ್ಕಾಲದಲ್ಲಿಯೇ ಫಲಪ್ರದವಾದುದಲ್ಲ. ಆ ಅಧರ್ಮವು ಮೆಲ್ಲಮೆಲ್ಲನೆ ಕರ್ತನಲ್ಲಿ ಪರಿಣತವಾಗುತ್ತ ನಡೆದು, ಅವಕಾಶವು ಸಿಕ್ಕೊಡನೆಯೇ ಅವನನ್ನು ನಿರ್ಮೂಲಗೊಳಿಸುವುದು. ( ಮನು. ೪-೧೭೨ )

ಎಂಬ ಮುಂತಾದ ಅನುಭವಸಿದ್ಧವಾದ ಸಿದ್ಧಾಂತವನ್ನು ಹೇಳಿಟ್ಟಿರುವರು. ಆದ್ದರಿಂದ, ನಾಸ್ತಿಕರಾವ ಆಸುರವೃತ್ತಿಯುಳ್ಳ ಜನರು ಯಾವುದನ್ನು ಮಾಡಿದರೂ, ಹೇಗೆ ಆಚರಿಸಿದರೂ ಕೂಡ ಧಾರ್ಮಿಕರು ಅಂತಪ್ಪ ಪಾತಕರ ಸಂಸರ್ಗದಿಂದ ದೂರಿರುವುದೇ ಲೇಸು.

ಕೇವಲ ವಿಷಯಾಸಕ್ತರೂ ಅಸುರವೃತ್ತಿಯುಳ್ಳವರೂ ಆದ ಜನರನ್ನು ಒಂದು ಬಗೆಯಾದ ಎಚ್ಚರತಪ್ಪಿದ ಸ್ಥಿತಿಯಲ್ಲಿರುವರೆಂದೇ ಹೇಳಲಭ್ಯಂತರ ವಿಲ್ಲ. ಅವರಿಗೇನು ? ಕುಲದ ಉತ್ಕರ್ಷವಾದರೂ ಅಷ್ಟೇ, ಅಪಕರ್ಷ ವಾದರೂ ಅಷ್ಟೇ ! ಆ ಬಗ್ಗೆ ಅವರು ಸುಖದುಃಖಗಳೆರಡನ್ನೂ ಅಭಿಮಾ ನಿಸಿಕೊಳ್ಳುವುದಿಲ್ಲ. ಭರ್ತೃಹರಿಯು ವಿಷಯಲೋಲುಪರಾದ ಆಸುರ ವೃತ್ತಿಯ ಜನರನ್ನು ಹೀಗೆ ಬಣ್ಣಿಸಿದ್ದಾನೆ :—

**ಜಾತಿರ್ಯಾತು ರಸಾತಲಂ ಗುಣಗಣಸ್ತಸ್ಯಾಪ್ಯಧೋಗಚ್ಛತಾಂ**
**ಶೀಲಂ ಶೈಲತಟಾತ್ಪತತ್ವಭಿಜನಃ ಸಂದಹ್ಯತಾಂ ವಹ್ನಿನಾ ।**
**ಶೌರ್ಯೇ ವೈರಿಣಿ ವಜ್ರಮಾಶು ನಿಪತತ್ವರ್ಥೋಽಸ್ತು ನಃ ಕೇವಲಂ**
**ಯೇನೈಕೇನ ವಿನಾ ಗುಣಾಸ್ತೃಣಲವಪ್ರಾಯಾಃ ಸಮಸ್ತಾ ಇಮೇ ॥**

ಜಾತಿಯು ರಸಾತಳಕ್ಕಿಳಿಯಲಿ, ಗುಣಸಮೂಹವಾದರೋ ಅದಕ್ಕೂ ಕೆಳಗೆ ಹೋಗಿಬೀಳಲಿ, ಶೀಲವು ದೊಡ್ಡ ಬೆಟ್ಟದ ಮೇಲಿಂದುರುಳಿಬಿದ್ದು ನಾಶವಾಗಲಿ, ಕುಲವನ್ನು ಅಗ್ನಿಯು ದಹಿಸಲಿ, (ಕುಲಕ್ಕೆ ಬೆಂಕೀ ಹಚ್ಚು) ವೈರಿಯಂತಿರುವ ಈ ಶೌರ್ಯದ ಮೇಲೆ ವಜ್ರವು ಬೀಳಲಿ, ಹೀಗೆ ಸರ್ವವೂ ನಷ್ಟವಾಗಿಹೋಗಲಿ; ಆದರೆ ಯಾವುದರ ಅಪೇಕ್ಷೆಯಿಂದ ಇವೆಲ್ಲವೂ ಕಸದಕಡ್ಡಿಗಳಂತೆ ಕಾಣಲ್ಪಡುವುವೋ ಆ ಧನವೊಂದೇ ನಮಗೆ ಸಿಕ್ಕಿದರೆ ಸಾಕು.

ಈ ಮೇಲೆ ವರ್ಣಿಸಲ್ಪಟ್ಟಂತೆಯೇ ಆಧುನಿಕರಲ್ಲಿ ಕೆಲಜನರ ಸ್ಥಿತಿ ಯಾಗಿರುವುದೆಂದು ಧಾರಾಳವಾಗಿ ಹೇಳಬಹುದು. ಅವರು ಧನಪ್ರಾಪ್ತಿ ಗಾಗಿಯೂ, ವಿಷಯೋಪಭೋಗಕ್ಕಾಗಿಯೂ ಬೇಕಾದುದನ್ನು ಮಾಡಲು ಸಿದ್ಧರಾಗಿರುತ್ತಾರೆ. ಸನ್ಯಾಸಿಗಳೆನಿಸಿಕೊಳ್ಳುವವರು ಕೂಡ ತಮಗೆ ಸಲ್ಲದ ಕಾರ್ಯಗಳಲ್ಲಿ ಹೇಸದೆ ಕೈಹಾಕುತ್ತಿರುವರು. ‘ **ಜೇನುಂ ಕಾಮ ತೇನಾ ಥೀ ಥಾಯ । ಬಿಜೊ ಕರೇತೋ ಗೋಥಾ ಖಾಯ ॥** ’ ಯಾವನಿಗೆ ಯಾವ ಕೆಲಸವು ತಕ್ಕದ್ದೋ ಅದು ಅವನಿಗೇ ಒಪ್ಪುವುದು. ಅದಕ್ಕೆ ಯೋಗ್ಯನಲ್ಲದ ಬೇರೊಬ್ಬನು ಅದನ್ನು ಮಾಡಲೆಳಸಿದರೆ ಜಾರಿ ಬೀಳುವನು ಎಂಬ ಗುರ್ಜರ ನಾಣ್ಣುಡಿಯು ಅಂಥವರನ್ನು ಲಕ್ಷೀ ಕರಿಸಿಯೇ ಪ್ರಸಿದ್ಧವಾಗಿರುವುದು. ಶಾಸ್ತ್ರಜ್ಞರೆನಿಸುವವರಲ್ಲಿಯೂ ಕೆಲವರು ಧನಾಢ್ಯರ ರಂಜನೆಗಾಗಿ ಪ್ರಸಂಗಾನುಸಾರ ಮಿಥ್ಯಾಶಾಸ್ತ್ರವನ್ನಾದರೂ ಹೇಳಲು ಹುದುಗುವುದಿಲ್ಲ. ‘ ಬ್ರಾಹ್ಮಣಸ್ಯತು ದೇಹೋಽಯಂ

ಕ್ಷುದ್ರಕಾಮಾಯ ನೇಷ್ಯತೆ' ಈ ಬ್ರಾಹ್ಮಣ ಜನ್ಮವು ತುಚ್ಛವಾದ ವಿಷಯೋಪಭೋಗದ ಸಲುವಾಗಿಯೇ ಇರುವುದಿಲ್ಲವೆಂಬುವನ್ನು ಅವರು ಮರೆತಿರಬಹುದೇನು ? ಮನುವು :—

'ಅನಭ್ಯಾಸೇನ ವೇದಾನಾಮಾಚಾರಸ್ಯ ಚವರ್ಜನಾತ್ ।
ಆಲಸ್ಯಾದನ್ನದೋಷಾಚ್ಚ ಮೃತ್ಯುರ್ವಿಪ್ರಾಞ್ಜಿಘಾಂಸತಿ ॥

ವೇದಗಳನ್ನು ಅಭ್ಯಾಸ ಮಾಡದಿರುವುದರಿಂದಲೂ, ಧರ್ಮಶಾಸ್ತ್ರ ವಿಹಿತವಾದ ಆಚಾರವನ್ನು ಬಿಡುವುದರಿಂದಲೂ, ಆಲಸ್ಯದಿಂದಲೂ ಅನ್ನ ದೋಷದಿಂದಲೂ ಮೃತ್ಯುವು ಬ್ರಾಹ್ಮಣರನ್ನು ಅಕಾಲದಲ್ಲಿಯೇ ಎಳೆದೊಯ್ಯಲಿಚ್ಛಿಸುವುದು. ( ಮನು. ೫-೪ )

ಎಂಬುದಾಗಿ ನಿರೂಪಿಸಿರುವ ಈ ಮಾತಿನ ಅನುಭವವು ಈಗ ಪ್ರತ್ಯಕ್ಷವಾಗಿ ಕಾಣಬರುವುದೋ ಹೇಗೆ ? ಎಂಬ ವಿಚಾರವು ಹಾಗಿರಲಿ, ಶಾಸ್ತ್ರಜ್ಞರು ಕೂಡ ತಮ್ಮ ಸುಸಂಸ್ಕೃತಬುದ್ಧಿ ಸ್ವಾತಂತ್ರ್ಯವನ್ನೇ ಕಳೆದುಕೊಂಡಿರುವರೊ ಏನೋ ಎಂಬಂತೆ ಕಾಣಬರುವುದರ ಬಗ್ಗೆ ನಮ್ಮ ಮನವು ಮಿಡಕುವುದು. ' ಬುಭುಕ್ಷಿತೈರ್ವ್ಯಾಕರಣಂ ನಭುಜ್ಯತೆ ಪಿಪಾಸಿತೈಃ ಕಾವ್ಯರಸೋ ನಪೀಯತೆ ' ಎಂಬುದನ್ನು ಎಲ್ಲರೂ ಬಲ್ಲರು, ಆದರೆ ಅದಕ್ಕೂ ವಿಶಿಷ್ಟಮರ್ಯಾದೆಯಿಲ್ಲವೇ ? ತಮ್ಮನ್ನು ಗುರುವರ್ಗದವರೆಂದು ಹೇಳಿಕೊಳ್ಳುವವರೇ ಸ್ವಾಧ್ಯಾಯಾಭಾವದಿಂದ ಅಜ್ಞರೂ, ಅನ್ನದೋಷದಿಂದ ತೇಜೋಹೀನರೂ, ಆಲಸ್ಯದಿಂದ ಕರ್ತವ್ಯಶೂನ್ಯರೂ, ಸ್ವಧರ್ಮಾನುಷ್ಠಾನನ್ಯೂನತೆಯಿಂದ ಸತ್ವವಿಲ್ಲದವರೂ, ಆತ್ಮೋನ್ನತಿಯ ವಿಚಾರವಿಲ್ಲದ್ದರಿಂದ ಅಜಿತೇಂದ್ರಿಯರೂ, ಹಣದಾಸೆಯಿಂದೋ ಸ್ವಪ್ರತಿಷ್ಠೆಗಾಗಿಯೋ ತಮ್ಮ ಕುಲ, ಧರ್ಮ, ನೀತಿ ಮರ್ಯಾದೆಗಳನ್ನು ಕೆಡಿಸಿಕೊಂಡು ವೇದಾಗಮಗಳನ್ನು ದುರ್ಲಕ್ಷಿಸಿ ಸುಧಾರಕರೆಂಬವರ ಕಚ್ಚೆಪಿಗಳಾಗಿ ನಟಿಸುವವರೂ, ಯಾರಾದರೇನು ? ತಾವೇ ಉನ್ಮಾರ್ಗಗಾಮಿಗಳಾಗಿರುವವರು ಅನ್ಯರಿಗೆ ಸನ್ಮಾರ್ಗದರ್ಶಕರಾಗುವುದುಂಟೇ ? ಭಾರತೀಯರಲ್ಲಿ ಸರ್ವರೂ ಉನ್ಮಾರ್ಗಗಾಮಿಗಳೇ ಆಗಿರುವುದಿಲ್ಲ. ಎಷ್ಟೋ ಜನರು ತಮ್ಮ ಧರ್ಮ, ವರ್ಣ, ಜಾತಿ, ಕುಲಗಳ ಪಾವಿತ್ರ್ಯದ ಆವಶ್ಯಕತೆಯನ್ನು ಬಯಸುತ್ತಾರೆ: ಅವರ ಈ ಬಯಕೆಗೆ ಅವರ ಹೃದಯದಲ್ಲಿರುವ ಆನುವಂಶಿಕ ಸಂಸಾರವೇ ಹೇತುವಾಗಿರುವುದು. ಅಂತಪ್ಪ ಸಂಸ್ಕಾರದೃಢತೆಗಾಗಿಯೇ ವೇದಾಗಮಾದಿ ಧಾರ್ಮಿಕ ಗ್ರಂಥಗಳ ಅವ

ಲೋಕನೆಯು ಧರ್ಮನಿಷ್ಠರ ಸಂಸರ್ಗವೂ ಸ್ವಧರ್ಮಾಚರಣೆಯಲ್ಲಿ ನಿಷ್ಠೆಯೂ ಅವಶ್ಯವಾದುವು.

ಒಟ್ಟಿನಲ್ಲಿ, ಪ್ರತ್ಯಭಿಜ್ಞಾಮಾಹೇಶ್ವರ ವಂಶೀಯನಾದ ಕ್ಷೇಮೇಂದ್ರನು :—

**ಧರ್ಮಃ ಶರ್ಮ ಪರತ್ರ ಚೇಹ ಚ ನೃಣಾಂ ಧರ್ಮೋಽನ್ಧಕಾರೇ ರವಿಃ ಸರ್ವಾಪತ್ಪ್ರಶಮಕ್ಷಮಃ ಸುಮನಸಾಂ ಧರ್ಮೋ ನಿಧಿರ್ಮೂಲ್ಯವಾನ್।**
**ಧರ್ಮೋ ಬನ್ಧುರಬಾನ್ಧವೇ ಪೃಥುಪಥೇ ಧರ್ಮಃ ಸುಹೃನ್ನಿಶ್ಚಲಃ ಸಂಸಾರೋರುಮರುಸ್ಥಲೇ ಸುರತರುರ್ನಾಸ್ತ್ಯೇವ ಧರ್ಮಾತ್ಪರಃ ॥**

ಧರ್ಮವು ಇಹಾಮುತ್ರಗಳಲ್ಲಿ ಸುಖಪ್ರದವಾದುದು; ಅದುವೇ ಮೋಹಾಂಧಕಾರವನ್ನು ತೊಲಗಿಸುವುದರಲ್ಲಿ ಸೂರ್ಯನಂತಿರುವುದು, ಧರ್ಮವೆಂಬುದು ಸರ್ವಾಪತ್ತುಗಳನ್ನೂ ಹೋಗಲಾಡಿಸುವುದರಲ್ಲಿ ಸಮರ್ಥವಾಗಿದೆ; ಧರ್ಮವೇ ಸಜ್ಜನರ ಅಮೂಲ್ಯವಾದ ನಿಧಿಯು, ಯಾವ ಸ್ಥಳದಲ್ಲಿ ಬಂಧುಬಳಗದವರಿರುವುದಿಲ್ಲವೋ ಅಂತಹ ದೊಡ್ಡ ದಾರಿಯಲ್ಲಿ (ಪರಲೋಕ ಮಾರ್ಗದಲ್ಲಿ) ಆ ಧರ್ಮವೇ ಮಾನವರ ಬಂಧುವಾಗಿರುವುದು; ಅದುವೇ ನಿಜವಾದ ಗೆಳೆಯನೂ, ಸಂಸಾರವೆಂಬ ವಿಶಾಲವಾದ ಮರುಭೂಮಿಯಲ್ಲಿ ಕಲ್ಪವೃಕ್ಷವೂ ಆಗಿರುವುದು. ಆದ್ದರಿಂದ, ಧರ್ಮಕ್ಕಿಂತಲೂ ಶ್ರೇಷ್ಠವಾದುದು ಅನ್ಯದಾವುದೂ ಇಲ್ಲವೆಂದು ತಿಳಿಯತಕ್ಕದ್ದು.

ಎಂಬುದಾಗಿ ಸ್ವಾನುಭವಸಿದ್ಧವಾದುದನ್ನೇ ನಿರೂಪಿಸಿರುವನಾದುದರಿಂದ ಧರ್ಮವೇ "**ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ**" (ಮ. ನಾ. ಉ. ೨-೬) ಎಂಬಂತೆ, ವಿಶ್ವಪ್ರಪಂಚಕ್ಕೆ ಆಧಾರವಾಗಿದೆ, ಅಂತಪ್ಪ ಧರ್ಮಮಾರ್ಗವನ್ನನುಸರಿಸಿ ನಡೆದು ತಮ್ಮ ಅಂತಿಮಧ್ಯೇಯವನ್ನು ಸಾಧಿಸಿಕೊಂಡು ಕೃತಾರ್ಥರಾಗಬೇಕೆಂಬ ಹಂಬಲವುಳ್ಳವರೇ ಮನುಷ್ಯೋತ್ತಮರು. ಅವರೇ ಧರ್ಮದಲ್ಲಿ ಶ್ರದ್ಧೆಯನ್ನು ಬಲಿಸಲು ಬಯಸುವರು. ಈ ಬಯಕೆಯು "**ವೇದೋಽಖಿಲೋ ಧರ್ಮಮೂಲಮ್**" (ಮನು. ೨-೬) "**ವೇದೋ ಧರ್ಮಮೂಲಮ್**" (ಗೌತ ಸೂ. ೧) ಎಂಬ ವಚನಾನುಸಾರವಾಗಿ, ಧರ್ಮದ ಮರ್ಮವನ್ನು ಬೋಧಿಸತಕ್ಕ ವೇದವನ್ನು ಮುಖ್ಯ ಪ್ರಮಾಣವೆಂದು ನಂಬುವುದರಿಂದೇ ಸಿದ್ಧಿಸುವುದಾದ್ದರಿಂದ, ಈಗ ನಾವು 'ವೇದವು' ಅಂದರೇನು ? ಎಂಬ ವಿಷಯವನ್ನಧಿಕರಿಸಿ ವಿವೇಚಿಸಲುದ್ಯುಕ್ತರಾಗುತ್ತೇವೆ.

## ಪ್ರಕೃತ ವಿಷಯಾರಂಭವು.

ಮೊದಲು 'ವೇದ' ಎಂಬ ಶಬ್ದದ ಅರ್ಥವೇನೆಂಬುದನ್ನು ಕಂಡು ಕೊಳ್ಳುವಾ! ವಿದ್-ಜ್ಞಾನೇ' ಎಂಬ ಧಾತುವಿಗೆ 'ಹಲಶ್ಚ' ಎಂಬ ಸೂತ್ರದಿಂದ, 'ಘಞ' ಪ್ರತ್ಯಯವು ಹತ್ತಿ 'ವೇದ' ಎಂಬ ಶಬ್ದವು ಸಿದ್ಧವಾಗುತ್ತದೆ. ಈ ವೇದವೆಂಬುದೇ 'ಶ್ರುತಿ' ಎಂದು ಹೇಳಲ್ಪಡುವುದು. 'ಶ್ರು-ಶ್ರವಣೆ' ಎಂಬ ಧಾತುವಿಗೆ 'ಕ್ತಿನ್' ಪ್ರತ್ಯವು ಹತ್ತಿ 'ಶ್ರುತಿ' ಎಂಬ ಶಬ್ದ ಸಿದ್ಧಿಯಾಗುತ್ತದೆ. ಸೃಷ್ಟಿಯಾರಂಭಮೊದಲಾಗಿ ಈ ಹೊತ್ತಿನ ವರೆಗೆ ಯಾವುದರ ಮೂಲಕವಾಗಿ ಶಾಂಭವಜ್ಞಾನವು ಬ್ರಹ್ಮಾದಿಗಳಿಂದ ಶ್ರವಣಮಾಡಲ್ಪಟ್ಟಿದೋ ಅದು 'ಶ್ರುತಿ' ಯೆನಿಸುವುದು.

ವೈದಿಕಸಾಹಿತ್ಯದಲ್ಲಿ 'ವೇದ;' ಎಂಬುದೊಂದೇ ಶಬ್ದವು ಪ್ರಯೋಗಿ ಸಲ್ಪಡದೆ 'ವೇದಸ್' ಎಂಬ ಶಬ್ದವೂ ನಿರ್ದೇಶಿಸಲ್ಪಟ್ಟಿದೆ. ಇವೆರಡರಲ್ಲಿ 'ವೇದ;' ಎಂಬ ಶಬ್ದವು ಪುಲ್ಲಿಂಗಿಯು. 'ವೇದಸ್' ಎಂಬ ಶಬ್ದವು ನಪುಂಸಕಲಿಂಗಿಯು, ಇವೆರಡೂ ಶಬ್ದಗಳು 'ವಿದ್' ಧಾತುವಿನಿಂದ ನಿಷ್ಪನ್ನಗಳಾಗಿವೆ. ವೇದದ ಬಹುಸ್ಥಾನಗಳಲ್ಲಿ ಸಾಮಾನ್ಯತಃ ಇವೆರಡೂ ಶಬ್ದಗಳ ಪ್ರಯೋಗವು ಕಾಣಬರುವುದು. 'ವಿದ್' ತಿಳಿ. ಅರಿವು, (೨ ನೇ ಗಣ); ಮತ್ತು 'ವಿದ್' ದೊರಕಿಸುವಿಕೆ (೬ ನೇ ಗಣ); ಎಂಬಿವೆರಡು ಬಗೆಯ ಧಾತುಗಳಿಗನುಸರಿಸಿರುವ ಅರ್ಥಗಳಲ್ಲಿ, ವೇದ ಶಬ್ದಾರ್ಥವು ಮೊಟ್ಟಮೊದಲು ಇದುವೆ ಅಭಿಮತವಾಗಿದ್ದಿತೆಂದು ನಿಷ್ಕರ್ಷಿಸಲು ಶಕ್ಯವಿಲ್ಲವಾದರೂ ವೇದದಲ್ಲಿಯೇ ಕೆಲವೆಡೆಯಲ್ಲಿ ವೇದ ಶಬ್ದರ್ಥವು ಜ್ಞಾನವೆಂದೂ, ವೇದಾಧ್ಯಯನವೆಂದೂ, ಬ್ರಹ್ಮಯಜ್ಞವೆಂದೂ ಹಲವು ತೆರನಾಗಿ ಹೇಳಲ್ಪಡುವಂತೆ 'ವೇದಸ್' ಶಬ್ದಾರ್ಥವಾದರೂ ಜ್ಞಾನವು ಅಥವಾ ಧನವು ಎಂದು ನಿರೂಪಿಸಲ್ಪಡುವುದು. ಇದರಿಂದ 'ವೇದಃ' ಮತ್ತು 'ವೇದಸ್' ಎಂಬ ಶಬ್ದಗಳಿಗೆ ನಿಶ್ಚಿತಾರ್ಥವೇ ಇಲ್ಲ ವೆಂದು ಭಾವಿಸಲಾಗದು. ಅವೆರಡೂ ಶಬ್ದಗಳ ಆ ಆ ಅರ್ಥಗಳು ಬೇರೆ ಬೇರೆ ವಾಕ್ಯಗಳಲ್ಲಿ ಸಂದರ್ಭಾನುಸಾರವಾಗಿ ಹೇಳಲ್ಪಟ್ಟರೂ ಒಟ್ಟಿನ ಮೇಲೆ ಬಹು ಸ್ಥಳಗಳಲ್ಲಿ ಜ್ಞಾನವೂ, ಧನವೂ ಎಂಬರ್ಥಗಳಲ್ಲಿಯೇ ಪರ್ಯವಸಾನಾಭಿಪ್ರಾಯವು ಸ್ಫುಟವಾಗಿ ಗೋಚರವಾಗುವುದರಿಂದ ವೇದಾರ್ಥಪ್ರಕಾಶಕರಾದ ಸ್ಕಂದಸ್ವಾಮಿ, ಯಾಸ್ಕ ಮೊದಲಾದವರು ವೇದದ ಬೇರೆ ಬೇರೆ ವಾಕ್ಯಗಳಲ್ಲಿ ಕಂಡುಬರುವ 'ವೇದಃ' ಮತ್ತು 'ವೇದಸ್'

ಎಂಬ ಶಬ್ದಗಳಿಗೆ 'ಉತ್ಕೃಷ್ಟಜ್ಞಾನವು' 'ಐಹಿಕಾಮುಷ್ಮಿಕ ಸುಖಸಾಧನೀ ಭೂತಧನವು' ಎಂಬುದಾಗಿ ಅರ್ಥಗಳನ್ನು ಬರೆದಿದ್ದಾರೆ. ಮೇಲೆ ಹೇಳಿದ ಜ್ಞಾನವು ಅಥವಾ ಧನವು ಎಂಬ ಎರಡು ವಿಧವಾದ ಅರ್ಥಗಳಲ್ಲಿಯಾ ದರೋ ಜ್ಞಾನಾರ್ಥವನ್ನು ಧನಕ್ಕೂ ಧನಾರ್ಥವನ್ನು ಜ್ಞಾನಕ್ಕೂ ರೂಪಕ ದಿಂದ ನಿರ್ದೇಶಿಸಲ್ಪಟ್ಟಿರುವುದೆಂದು ತಿಳಿಯಲು ಬಾಧಕವಿಲ್ಲವಾದುದರಿಂದ ವೇದವೆಂದರೆ ಜ್ಞಾನವು, ಪವಿತ್ರಜ್ಞಾನವು; ಧರ್ಮಸಂಬಂಧಜ್ಞಾನವು; ಅರ್ಥಾತ್ ಶಾಂಭವಜ್ಞಾನರೂಪಧನದಕೋಶ ( ಬೊಕ್ಕಸ ) ವೇ.

ಇನ್ನು 'ವೇದಸ್' ಶಬ್ದದ ಪ್ರಚಾರವಿಲ್ಲದೆ 'ವೇದಃ' ಎಂಬ ಶಬ್ದವೇ ಬಳಕೆಯಲ್ಲಿರಲು ಕಾರಣವೇನಂದರೆ, 'ವೇದಸ್' ಶಬ್ದಾರ್ಥವು ಮೊದಲು ಧನವೆಂದೂ ಬಳಿಕ ಜ್ಞಾನವೆಂದೂ ಅರಿಯಲ್ಪಟ್ಟುದಾಗಿ ಕೆಲವು ಕಾಲಾ ನಂತರದಲ್ಲಿ ವೇದ ಶಬ್ದದ ಅರ್ಥವು ಜ್ಞಾನವೆಂಬುದಾಗಿಯೇ ನಿಶ್ಚಿತವಾಗಿ ಸರ್ವತ್ರ ವಿಶೇಷತಃ ಪ್ರಚುರವಾದ ತರುವಾಯ 'ವೇದಸ್' ಶಬ್ದೋ ಚ್ಚಾರವು ಹಿಂದುಳಿದು 'ವೇದಃ' ಎಂಬ ಹೆಸರೇ ಬಂದಿರಬಹುದೆಂದು ಬಲ್ಲವರ ಅಭಿಪ್ರಾಯವು.

ಶ್ರೀ ರೇಣುಕಮಹರ್ಷಿಯು ( ಸಿ. ೫-೫ )—

**ವೇದಃ ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ ।**
**ವೇದಾನುಸರಣಾದೇಷಾಂ ಪ್ರಾಮಾಣ್ಯಮಿತಿನಿಶ್ಚಿತಮ್ ॥**

ಎಲೈ ಅಗಸ್ತ್ಯಮುನಿಯೇ! ವೇದವು ಅಪೌರುಷೇಯವಾದುದ ರಿಂದ ಅದು ಸ್ವತಃಪ್ರಮಾಣವೆನಿಸುವುದು. ಮುಖ್ಯಪ್ರಮಾಣಭೂತ ವಾದ ಆ ವೇದವನ್ನು ಅನುಸರಿಸಿರುವ ಈ ಸಾಂಖ್ಯಾದಿಸಿದ್ಧಾಂತಗಳಾ ದರೂ ಪ್ರಮಾಣವಾದುವೆಂದು ಶಾಸ್ತ್ರಜ್ಞರ ನಿಶ್ಚಿತಾಭಿಪ್ರಾಯವು. ಎಂದು ಪದೇಶಿಸುವ ಪೂರ್ವಕ ವೇದಪ್ರಾಮಾಣ್ಯಪ್ರಾಮುಖ್ಯತೆಯನ್ನು ಪುರಸ್ಕ ರಿಸಿದ್ದಾನೆ. ಅದುಕಾರಣವೇ ವೇದಕ್ಕೆ ಈಶ್ವರಪ್ರಣೀತತ್ವ ( ಅಪೌರುಷೇ ಯತ್ವ ) ವಿದೆಯೆಂದು ಭಾರತೀಯರ ಬಲವಾದ ಶ್ರದ್ಧೆಯುಂಟು. ಈ ತೆರ ನಾದ ಶ್ರದ್ಧೆಯು ಭಾರತೀಯರಲ್ಲಿ ದೃಢಪಡಲು ಬಹುತರವಾಗಿ ಋಷಿ ಗಳಿಗೆ 'ಮನ್ತ್ರದ್ರಷ್ಟಾರಃ' ಎಂಬ ವಿಶೇಷಣವನ್ನು ಹಚ್ಚುತ್ತಿರುವುದೇ ಮುಖ್ಯಕಾರಣವಾಗಿದೆ.

**ಮನ್ತ್ರದ್ರಷ್ಟಾರೋಹಿ ಋಷಯಃ ।** ಅಂದರೆ, ಋಷಿಗಳು ತಪಃ ಪ್ರಭಾವದಿಂದ ಈಶ್ವರನ ಕೃಪೆಗೆ ಪಾತ್ರರಾಗಿ ತನ್ಮೂಲಕ ಮಂತ್ರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡರು, ಎಂಬರ್ಥವು.

ಅನಾದಿ ಸಂಸಿದ್ಧವಾದ ಪರಾ ಅಪರಾರೂಪವೇದವಿದ್ಯೆ (ಶ್ರೌತವಿದ್ಯೆ) ಯನ್ನು ವಿದ್ಯೇಶ್ವರರೂ, ಬ್ರಹ್ಮಾದಿದೇವತೆಗಳೂ, ಪರಮೇಶ್ವರನಿಂದ ಜ್ಞಾನ' ವೆಂಬ ಪುಟ್ಟೋಲೆಯಲ್ಲಿ ಗಟ್ಟಿಗೊಳಿಸಿರುವವಷ್ಟೇ ! ಮತ್ತು, ಶ್ವೇತಾಶ್ವತರೋಪನಿಷತ್ತಿನಲ್ಲಿ ( ಅ. ೬- ಮ. ೧೮ )—

**ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ||**
**ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ||**

ಎಂದಿರುವ ವಚನಾರ್ಥವನ್ನು ವ್ಯಾಸಮುನಿಯು ಸೂತಸಂಹಿತೆ ಯಲ್ಲಿ (೫ ೧).

**ಬ್ರಹ್ಮಾಣಂ, ಮುನಯಃ! ಪೂರ್ವಂ ಸೃಷ್ಟ್ವಾ ತಸ್ಮೈ ಮಹೇಶ್ವರಃ|**
**ದತ್ತವಾನಖಿಲಾನ್ ವೇದಾನಾತ್ಮ ನ್ಯೇವಸ್ಥಿತಾನಿಮಾನ್ ||**

ಎಂಬುದಾಗಿ ನಿರೂಪಿಸಿದ್ದಾನೆ. ಇದರ ಭಾವವನ್ನು ವ್ಯಾಖ್ಯಾನ ಕಾರನಾದ ಮಾಧವಚಾರ್ಯನು—

**ಸ್ವಯಮೇವ ಲೀಲಯಾ ಸಕಲ ವೇದಗ್ರಹಣ ಸಮರ್ಥಂ ಬ್ರಹ್ಮಾಣಂ ನಿರ್ಮಾಯ ಸ್ವಾತ್ಮನಿ ನಿತ್ಯಮವಸ್ಥಿತಾ ಏವ ವೇದಾ ಸ್ತಸ್ಮೈದತ್ತಾಃ । ನಚ ನಿತ್ಯಸಿದ್ಧವೇದಸಮರ್ಪಣೆ ಶಿವಸ್ಯೋಪಾ ಧ್ಯಾಯತುಲ್ಯತಾ । ಉಪಾಧ್ಯಾಯೋ ಹಿ ಸ್ವಯಮನ್ಯಸ್ಮಾಲ್ಲಬ್ಧ್ವಾ ಶಿಷ್ಯಾನಧ್ಯಾಪಯತಿ । ಶಿವಸ್ತುನೈವಮನ್ಯತೋಽಧೀತೆ, ಸ್ವಾತ್ಮನಿ ನಿತ್ಯಮವಸ್ಥಿತಾ ನಾಮೇವ ತೇಷಾಂ ಬ್ರಹ್ಮದ್ವಾರಾ ಸಂಪ್ರದಾಯಂ ಪ್ರವರ್ತಯತಿ ||**

ಅಂದರೆ, ಮಹೇಶ್ವರನು ತಾನೇ ಲೀಲೆಯಿಂದ ಸಕಲ ವೇದಗಳನ್ನು ಗ್ರಹಿಸಲು ಶಕ್ತನಾದ ಬ್ರಹ್ಮನನ್ನು ಹುಟ್ಟಿಸಿ ತನ್ನಲ್ಲಿ ನಿತ್ಯ ಸಿದ್ಧ ಗಳಾದ ವೇದಗಳನ್ನು ಅವನಿಗೆ ಕರುಣಿಸಿದನು. ಹೀಗೆ ವೇದಗಳನ್ನು ಪದೇಶಿಸುವಲ್ಲಿ ಶಿವನಿಗೆ ಉಪಾಧ್ಯಾಯ (ಶಿಕ್ಷಕ) ನ ಸಾದೃಶ್ಯವು ಸಲ್ಲದು. ಉಪಾಧ್ಯಾಯನು ತಾನು ಅನ್ಯರಿಂದ ಸಂಪಾದಿಸಿದ ವಿದ್ಯೆಯನ್ನು ಶಿಷ್ಯರಿಗೆ ಕಲಿಸುತ್ತಾನೆ. ಶಿವನಾದರೋ ಪರರಿಂದ ಬೋಧಿಸಲ್ಪಟ್ಟವನಲ್ಲವಾದುದ ರಿಂದ ತನ್ನಲ್ಲಿ ಯಾವಾಗಲೂ ಸ್ವತಃ ಸಿದ್ಧಗಳಾದ ವೇದಗಳ ಸಂಪ್ರದಾಯವನ್ನು ಜಗತ್ತಿನಲ್ಲಿ ಬ್ರಹ್ಮನ ಮುಖದಿಂದ ಪ್ರಚುರಗೊಳಿಸಿ

ದ್ದಾನೆ. ಎಂದುಲ್ಲೇಖಿಸಿರುವನು. ಸಿದ್ಧಾನ್ತಶಿಖಾಮಣಿಕಾರನಾದರೂ ಇದೇ ಅಭಿಪ್ರಾಯವನ್ನು ಸೂಚಿಸಿದ್ದಾನೆ ( ೨-೧೫ ) ವೇದಪ್ರವರ್ತಕರು ಅನೇಕ ರಿರುವರಾದ್ದರಿಂದ ಅವರವರ ಸಂಪ್ರದಾಯವಾದರೂ ಬೇರೆ ಬೇರೆಯಾಗಿ ಹಬ್ಬಿದೆ. ಉದಾಹರಣಾರ್ಥವಾಗಿ—

**ಬ್ರಹ್ಮಣಂ ಸಕಲಾನ್ ವೇದಾನ್ ವಸಿಷ್ಠಃಪ್ರಾಪ್ತವಾನ್ಋಷಿಃ ।**
**ತಸ್ಮಾಚ್ಛಕ್ತಿಸ್ತತೋ ಧೀಮಾನ್ ಪರಾಶರಮಹಾಮುನಿಃ ॥**
**ಪರಾಶರಾನ್ಮಹಾಬುದ್ಧಿರ್ವೇದವ್ಯಾಸಮಹಾಮುನಿಃ ।**

ಬ್ರಹ್ಮನಿಂದ ವಸಿಷ್ಠನು ಸಕಲ ವೇದಗಳನ್ನು ಪಡೆದನು, ಆ ವಸಿಷ್ಠ ನಿಂದ ಶಕ್ತಿಮುನಿಯೂ, ಶಕ್ತಿಯಿಂದ ಬುದ್ಧಿಶಾಲಿಯಾದ ಪರಾಶರನೂ, ಪರಾಶರನಿಂದ ವ್ಯಾಸನೂ ಹೀಗೆ ಮಂತ್ರದ್ರಷ್ಟರ ಪಾರಂಪರ್ಯವಿ ರುವುದು.

ಜಗತ್ತಿನ ಉತ್ಪತ್ತಿಯೊಡನೆ ವೇದದ ಉತ್ಪತ್ತಿಯು ಆಯಿತೆಂಬ ಬಗ್ಗೆ ಅಥರ್ವವೇದ (೧೦-೭-೧೪) ದಲ್ಲಿ ಪರಮೇಶ್ವರನನ್ನು ಸ್ತಂಭರೂಪ ದಿಂದ ಬಣ್ಣಿಸಿ ಸಕಲ ಭುವನಭವನಾರಂಭ ಮೂಲವೇ ಆದುವೆಂದು ಹೇಳಿ ಅದರಿಂದೇ ವೇದಗಳುತ್ಪತ್ತಿಯೆಂದೂ ವಿವರಿಸಲ್ಪಟ್ಟಿದೆ. ಸ್ತಂಭ ರೂಪನಾದ ಮಹಾದೇವನ ಮಹಿಮೆಯನ್ನು ಪುಷ್ಪದಂತಾಚಾರ್ಯನು—

**ತವಾತ್ಮಾನಂ ಯತ್ನಾದ್ಯದುಪರಿ ವಿರಿಂಚೋ ಹರಿರಧಃ ।**
**ಪರಿಚ್ಛೇತ್ತುಂ ಯಾತಾವನಲಮನಲಸ್ತಂಭವಪುಷಃ ॥**

ಎಂದು ಕೊಂಡಾಡಿದ್ದಾನೆ. ಈ ವಾಕ್ಯದ ರಹಸ್ಯಾರ್ಥವನ್ನು ಮಹಿಮ್ನ ಸ್ತೋತ್ರಕ್ಕೆ ನಾವು ಬರೆದ ಕನ್ನಡಟೀಕೆಯಲ್ಲಿ ಓದುಗರುಕಂಡುಕೊಳ್ಳ ಬಹುದು. ನಿಷ್ಕಲ ಪರಮಾತ್ಮನೇ ನೀರುಗಟ್ಟಿಕೊಂಡು ಆಣೆಕಲ್ಲಾದಂತೆ ಸ್ತಂಭ ( ಕಂಬ ) ರೂಪದಿಂದ ತೋರಿದುದು ಅವನ ಅಗಾಧವಾದ ಮೈಮೆಗೆ ಅಸದಳವಲ್ಲ. ಈ ಮಹಾದೇವನನ್ನೇ ಉಪಾಸಕರು ತಮ್ಮ ಬೇರೆ ಬೇರೆ ಭಾವನೆಗಳಿಂದ ಪರಬ್ರಹ್ಮ, ಶಿವ, ಲಿಂಗ, ಸ್ಥಲ, ಜ್ಯೋತಿ. ಪಶುಪತಿ ಮುಂತಾದ ಬಗೆಬಗೆಯ ಅನ್ವರ್ಥನಾಮಗಳೊಡನೆ ಬಣ್ಣಿಸು ತ್ತಿರುವರು.

ಆಶ್ವಲಾಯನಪ್ರಣೀತ ಧರ್ಮಶಾಸ್ತ್ರದ ೭ನೇ ಅಧ್ಯಾಯದಲ್ಲಿ—

**ಸಿಸೃಕ್ಷುರೇಕ ಏವಾಗ್ರೇ ಸಮಾಸೀನಃ ಶಿವಃಸ್ವಯಮ್ ।**
**ದೃಷ್ಟ್ವಾ ಗುಣಮಯೀಂ ಮಾಯಾಂ ಸೂಕ್ಷ್ಮರೂಪಾಮುಪಾ**
**ಕರೋತ್ ॥**
**ತಯಾ ತದಾತ್ಮಕಂ ವಿಷ್ಣುಂ ಸೃಷ್ಟ್ವಾ ಪಾಲಂ ದಿವೌಕಸಾಮ್ ।**

ಎಂದು ಶಿವನಿಂದ ವಿಷ್ಣುವು ಸೃಜಿಸಲ್ಪಟ್ಟನೆಂಬುದನ್ನು ಹೇಳಿದ ಬಳಿಕ ಯಜ್ಞೋಪವೀತವು ಹುಟ್ಟಿದ ಬಗೆಯನ್ನು ನಿರೂಪಿಸಿ, ತದ್ಭಾಗ ವಿಶೇಷಾಶ್ರಿತ ದೇವತಾವಿಭಾಗ-ಸಮಯದಲ್ಲಿ — '**ತಾವಲ್ಲೋಕಾಸ್ತ್ರಯೋ ವೇದಾಸ್ತ್ರಯೋ ದೇವಾಸ್ತ್ರಯೋಽಗ್ನಯಃ । ಶಿವಸೃಷ್ಟಾಃ**—।' ಎಂದು ಹೇಳಲ್ಪಟ್ಟ ವಾಕ್ಯದಲ್ಲಿ 'ಶಿವನಿಂದ ವೇದಗಳು ಹುಟ್ಟಿದವು' ಎಂಬಭಿಪ್ರಾಯವು ಸ್ಪಷ್ಟವಿರುವುದು.

ಯೋಗಶಾಸ್ತ್ರಪ್ರವರ್ತಕನಾದ ಪತಂಜಲಮುನಿಯು---- '**ಸಪೂರ್ವೇಷಾಮಪಿಗುರುಃ ಕಾಲೇನಾನವಚ್ಛೇದಾತ್**' (೧-೨೬) ಆ ಪರಮೇಶ್ವರನು ಕಾಲದಿಂದ ಅವಚ್ಛೇದ ಶೂನ್ಯನು. ಏಕೆಂದರೆ ಅನಾದಿಯಾಗಿದ್ದಾನೆ ಆದ್ದರಿಂದ ಮೊದಲಿಗರಿಗಾದರೂ ಗುರುವಾಗಿರುವನು; ಎಂದು ಸೂತ್ರಿಸಿದ್ದಾನೆ. ಆದರ ತಾತ್ಪರ್ಯವನ್ನು ವೃತ್ತಿಕಾರನಾದ ಭೋಜದೇವನು— '**ಆದ್ಯಾನಾಂಬ್ರಹ್ಮಾದೀನಾಮಪಿ ಸ ಗುರುರುಪದೇಷ್ಟಾ। ಯತಃಸಃಕಾಲೇನ ನಾವಚ್ಛಿದ್ಯತೇ, ಅನಾದಿತ್ವಾತ್ । ತೇಷಾಂ ಪುನರಾದಿಮತ್ತ್ವಾದಸ್ತಿ ಕಾಲೇನಾವಚ್ಛೇದಃ**' । ಎಂಬುದಾಗಿ ಸ್ಪಷ್ಟಗೊಳಿಸಿದ್ದಾನೆ. ಇದೇ ಅಭಿಪ್ರಾಯವು ವಾಯುವೀಯಸಂಹಿತೆಯ ಉತ್ತರ ಭಾಗ (ಅ. ೭) ದಲ್ಲಿ—

**ಪ್ರತಿಸರ್ಗಂ ಪ್ರಸೂತಾನಾಂ ಬ್ರಹ್ಮಣಾಂ ಶಾಸ್ತ್ರವಿಸ್ತರಮ್ ।**
**ಉಪದೇಷ್ಟಾ ಸಏವಾದೌ ಕಾಲಾವಚ್ಛೇದವರ್ತಿನಾಮ್ ॥೧೪॥**
**ಕಾಲಾವಚ್ಛೇದಯುಕ್ತಾನಾಂ ಗುರೂಣಾಮಪ್ಯಸೌಗುರುಃ ।**
**ಸರ್ವೇಷಾಮೇವ ಸರ್ವೇಶಃ ಕಾಲಾವಚ್ಛೇದ ವರ್ಜಿತಃ ॥೧೯॥**

ಎಂದು ನಿರೂಪಿಸಲ್ಪಟ್ಟಿದೆ. ಇತ್ಯಾದಿ ಪ್ರಮಾಣಗಳನ್ನನುಲಕ್ಷಿಸಿಯೇ ಅಪ್ಪಯ್ಯದೀಕ್ಷಿತರು ಶಿವತತ್ತ್ವವಿವೇಕದಲ್ಲಿ—

**ಶ್ರೀಕಾನ್ತದ್ರುಹಿಣೋಪಮನ್ಯು ತಪನಸ್ಕನ್ದೇನ್ದ್ರನನ್ದ್ಯಾದಯಃ**
**ಪ್ರಾಚೀನಾ ಗುರವೋಽಪಿ ಯಸ್ಯ ಕರುಣಾಲೇಶಾದ್ಗತಾ ಗೌರವಮ್ ।**
**ತಂ ಸರ್ವಾದಿಗುರುಂ ಪುನೋಽಜ್ಞವಪುಷಂ ಮನ್ದಸ್ಮಿತಾಲಂಕೃತಂ**
**ಚಿನ್ಮುದ್ರಾಕೃತಮುದ್ರಪಾಣಿನಲಿನಂ ಚಿತ್ತೇ ಶಿವಂ ಕುರ್ಮಹೇ ॥**

ಎಂಬ ಮೊದಲನೆಯ ಪದ್ಯದಿಂದ ವಿಷ್ಣು, ಬ್ರಹ್ಮ, ಉಪಮನ್ಯು ಸೂರ್ಯ, ಸ್ಕಂದ, ಇಂದ್ರ ನಂದಿ ಮೊದಲಾದ ಪ್ರಾಚೀನ ಗುರುಗಳಿಗಾದರೂ ಶಿವನು ಗುರುವಾಗಿರುವನೆಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ.

ಗೌತಮಮುನಿಯು ಈಶ್ವರನ್ನು ಅಂಗೀಕರಿಸುತ್ತಾನೆ. ಈಶ್ವರನಿಲ್ಲವೆಂಬ ನಾಸ್ತಿಕರ ಅಭಿಪ್ರಾಯವನ್ನು ಯುಕ್ತಿಯುಕ್ತವಾದ ವಚನಗಳಿಂದ ಖಂಡಿಸುವಲ್ಲಿ ಮುಂದಾಳಾಗಿರುವನು. ವೇದವು ಅಂದರೆ, ಒಂದು ಬಗೆಯ ರಗಳೆಯೇ ಸರಿ! ಅದರಲ್ಲಿರುವ ವಿಷಯಗಳು ಒಂದಕ್ಕೊಂದು ವಿಸಂಗತವಾಗಿರುವುವು; ಎಂಬ ಮೊದಲಾದ ವೇದದ ಬಗ್ಗೆ ಪರವಾದಿಗಳಿಂದಾರೋಪಿಸಲ್ಪಡುವ ದೋಷಗಳನ್ನು ಆ ಅಕ್ಷಪಾದನು ಚೆನ್ನಾಗಿ ನಿರಸಗೊಳಿಸುವಪೂರ್ವಕವಾಗಿ ವೇದಪ್ರಾಮಾಣ್ಯವನ್ನು ನೆಲೆಗೊಳಿಸಿದ್ದಾನೆ. ಮತ್ತು ವೇದವು ಪ್ರಮಾಣಭೂತವಾದುದರಿಂದ ಅದನ್ನು ಎಲ್ಲರೂ ಒಪ್ಪಲೇಬೇಕು; ಏಕೆಂದರೆ ಈಶ್ವರನು ಸರ್ವವಿಧದಿಂದಲೂ ಪರಮಾಪ್ತನಾದುದರಿಂದ ಅವನಿಂದುಪದಿಷ್ಟವಾದುದೂ ಕಪಟಚ್ಛಲಾದಿದೋಷ ರಹಿತರಾದ ವಿಷ್ಣು-ಬ್ರಹ್ಮ-ಸ್ಕಂದೋಪಮನ್ಯುನಂದ್ಯಾದಿ ಪ್ರಾಚೀನ ಗುರುಗಳಿಂದ ಪರಿಗ್ರಹಿಸಲ್ಪಟ್ಟುದೂ ಆದ ವೇದವನ್ನು ಪ್ರಮಾಣವೆಂದೇ ನಂಬಬೇಕು. ದೃಷ್ಟಾರ್ಥಫಲಕವಾದ ಮಂತ್ರಭಾಗದಲ್ಲಿಯೂ ಆಯುರ್ವೇದದಲ್ಲಿಯೂ ಪ್ರಾಮಾಣ್ಯಬುದ್ಧಿಯಿರುವಂತೆ ದೃಷ್ಟಾದೃಷ್ಟಫಲಬೋಧಕವಾದ ಶ್ರುತಿಯನ್ನು ಪರಮಪ್ರಮಾಣವೆಂದೊಪ್ಪಬೇಕೆಂಬ ವಾಕ್ಯಮೂಲಕ ( ನ್ಯಾ. ದ. ೨-೧-೬೭ ) ವೇದವು ಈಶ್ವರೋಪದಿಷ್ಟವೆಂಬರ್ಥವನ್ನು ಸೂಚಿಸಿದ್ದಾನೆ.

ಕಣಾದಮುನಿಯು ( ವೈ. ದ. ೧-೧-೩ )— ವೇದದಲ್ಲಿ ಧರ್ಮದ ಬಗ್ಗೆ ( ಕಾರ್ಯಾಕಾರ್ಯವ್ಯವಸ್ಥಿತಿಯಬಗ್ಗೆ ) ವಿವೇಚನೆಯಿರುವುದರಿಂದಲೂ ಅದು ಈಶ್ವರೋಕ್ತವಾದುದರಿಂದಲೂ ಪ್ರಮಾಣಭೂತವಾಗಿರುವುದೆಂದು ಹೇಳುವಪೂರ್ವಕ ಶಬ್ದಪ್ರಾಮಾಣ್ಯವನ್ನು ಪುರಸ್ಕರಿಸಿದ್ದಾನೆ.

ಜೈಮಿನಿಯ ಮತವು ನಾಸ್ತಿಕವಾದವನ್ನೇ ಪುರಸ್ಕರಿಸುವುದೆಂದು ತೋರಿಬರುವುದು. ಆದರೆ ಪೂರ್ವಮೀಮಾಂಸಾಶಾಸ್ತ್ರ ಪ್ರವರ್ತಕರಲ್ಲಿ ಮುಂದಾಳುಗಳಾದ ಕುಮಾರಿಲಭಟ್ಟರ ಹೇಳುವಿಕೆಯು ಈ ಅಭಿಪ್ರಾಯಕ್ಕೆ ಭಿನ್ನವಾಗಿರುವುದು. ಅವರು ವಾರ್ತಿಕದಲ್ಲಿ—

**ಪ್ರಾಯೇಣೈವಹಿ ಮೀಮಾಂಸಾ ಲೋಕೇ ಲೋಕಾಯತೀಕೃತಾ ।**
**ತಾಮಾಸ್ತಿಕ್ಯಪಥೇ ಕರ್ತುಮಯಂ ಯತ್ನಃ ಕೃತೋ ಮಯಾ ॥**

ಎಂಬ ವಾಕ್ಯದಿಂದ ಪೂರ್ವಮೀಮಾಂಸಾಮತವು ಆಸ್ತಿಕ್ಯಸ್ವರೂಪ ವಾದುದೆಂದು ನಿರೂಪಿಸುವ ಪೂರ್ವಕವಾಗಿ ವೇದವು ನಿತ್ಯವಾದುದೆಂಬಭಿ ಪ್ರಾಯವನ್ನೂ ಸಿದ್ಧಗೊಳಿಸಿದ್ದಾರೆ.

ಬ್ರಹ್ಮ ಸೂತ್ರವು— **"ಶಾಸ್ತ್ರಯೋನಿತ್ವಾತ್"** (೧-೧-೩) ಪರಮೇಶ್ವರನು ವೇದಗಳೆಂಬ ಶಾಸ್ತ್ರಗಳ ಉಗಮಸ್ಥಾನನಾಗಿದ್ದಾನೆ. ಎಂದು ಸೂಚಿಸುವುದು. ಸರ್ವಜ್ಞಗುಣಗಳಿಂದ ಕೂಡಿದ ವೈದಿಕವಾಙ್ಮಯವು ಸರ್ವಜ್ಞನಿಂದೇ ಉದಯಿಸಿರಬೇಕಲ್ಲವೇ ? **" ಸರ್ವಜ್ಞತಾ ನಾಸ್ತಿ ಶಿವಂ ವಿನಾ ಕ್ವಚಿತ್ "** ಎಂಬಂತೆ ಋಗ್ವೇದಾದಿ ಲಕ್ಷಣಗಳಿಂದಕೂಡಿದುದೂ ಸರ್ವಜ್ಞಗುಣಸಂಪನ್ನವೂ ಆದ ವೇದರೂಪಶಾಸ್ತ್ರದ ಉತ್ಪತ್ತಿಯು ಪರಮೇಶ್ವರನಿಂದೇ ಆಗಿರುವುದೆಂಬರ್ಥವು ಈ ಮೇಲಿನಸೂತ್ರದಲ್ಲಿ ಗ್ರಥಿತವಾಗಿದೆ.

ಈಶ್ವರಕೃಪೆಗೆ ಪಾತ್ರರಾದ ಆ ಆ ಶಾಸ್ತ್ರಪ್ರವರ್ತಕರು ಸ್ವತಂತ್ರವಾದ ಒಂದೊಂದು ಶಾಸ್ತ್ರವನ್ನು ರಚಿಸಿದವರೆಂತಲೂ ಸರ್ವಜ್ಞರೆಂತಲೂ ಸುಪ್ರಸಿದ್ಧರಾದುದು ಸೋಜಿಗವಲ್ಲ. ಪಾಣಿನಿ ಮೊದಲಾದವರಿಂದ ವ್ಯಾಕರಣ ಮುಂತಾದ ಶಾಸ್ತ್ರಗಳು ರಚಿಸಲ್ಪಟ್ಟಿರುವುವೆಂದು ಹೇಳುವರಲ್ಲವೇ ? ಆ ಆ ಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟ ಜ್ಞಾನಕ್ಕಿಂತಲೂ ಅವರಲ್ಲಿ ಜ್ಞಾನವು ಅಧಿಕವಾಗಿದ್ದಿತೆಂಬುದು ನಿರ್ವಿವಾದಸಂಗತಿಯು. ಹೀಗಿರುತ್ತಿರಲಾಗಿ, ಶಾಕಲ - ಬಾಷ್ಕಲ - ತೈತ್ತಿರೀಯ ವಾಜಸನೇಯ ಮುಂತಾದ ಅನೇಕ ಶಾಖಾಭೇದಗಳಿಂದ ವಿಭಕ್ತವೂ, ದೇವ-ತಿರ್ಯಕ್-ಮನುಷ್ಯ-ವರ್ಣ-ಆಶ್ರಮ ಮೊದಲಾದ ವಿಭಾಗಗಳಿಗೆ ಕಾರಣವೂ, ಎಲ್ಲ ಬಗೆಯ ಜ್ಞಾನಗಳಿಗೆ ತವರುಮನೆಯಾಗಿಯೂ ಇರುವ ಋಗಾದಿವೇದ ಸಂಜ್ಞಕಶಾಸ್ತ್ರವು ಮಹದ್ಭೂತವೆಂಬ ಪರಶಿವನಿಂದ ನಿಶ್ವಾಸದ ಹಾಗೆ

( ಉಸಿರಾಡಿಸುವಿಕೆಯಂತೆ ) ಅಪ್ರಯತ್ನವಾಗಿ ಆವಿರ್ಭವಿಸಿರುವುದರಿಂದ, ಆ ಮಹದ್ಭೂತದಲ್ಲಿ ನಿರತಿಶಯಸರ್ವಜ್ಞತ್ವವೂ ಸರ್ವಶಕ್ತಿಮತ್ವವೂ ಉಂಟೆನ್ನುವ ಬಗ್ಗೆ ಮತ್ತೆ ಹೆಚ್ಚಿಗೆ ಹೇಳಬೇಕಾದುದೇನಿದೆ ?

ಪರಮೇಶ್ವರನು ತನ್ನಲ್ಲಿ ನಿತ್ಯಸಿದ್ಧವಾದ ವೇದವನ್ನು ತಾನೇ ಹೊರಗೆಡಹಿದನೆನ್ನುವುದಕ್ಕಿಂತಲೂ ಹಿಂದಿನ ಕಾಲದಲ್ಲಿದ್ದ ಕೆಲವು ಮನುಷ್ಯರೇ ವೇದವನ್ನು ರಚಿಸಿದರು, ಎಂದು ಹೇಳಲು ದೋಷವೇನು ? ಎಂದು ಶಂಕಿಸುವ ಜಾಣರು ಮೊದಲು ಆ ಮನುಷ್ಯರು ನಮ್ಮ ಹಾಗೇ ಅವಿದ್ಯೆ-ಅಸ್ಮಿತೆ-ರಾಗ-ದ್ವೇಷ-ಅಭಿನಿವೇಶಾದಿ ಅಂಗ ಗುಣವಿಶಿಷ್ಟರಿದ್ದರೋ? ಅವರಲ್ಲಿ ನಮಗಿಂತ ಏನಾದರೂ ಹೆಚ್ಚುಗಾರಿಕೆ ಇತ್ತೋ ? ಎಂಬುದನ್ನು ಸಮಾಧಾನಚಿತ್ತದಿಂದ ವಿಚಾರಿಸಬೇಕು. ಮಾಯಿಕಗುಣಗಳಿಂದ ಆವೃತವಾದ ( ಅಶುದ್ಧ ) ಚಿತ್ತವುಳ್ಳ ನಮ್ಮಂಥ ಮನುಷ್ಯರು ಅಂತಹ ( ದಿವ್ಯಜ್ಞಾನರೂಪ ) ವೇದವನ್ನು ರಚಿಸಲು ಶಕ್ಯವೇ ? ಸ್ಮೃತಿಯು:–

**ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ ।**
**ಏನಂ ವಿದನ್ತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥**

ಎಂದು ಸಾರುವುದರಿಂದ, ಪ್ರತ್ಯಕ್ಷದಿಂದಾಗಲಿ, ಅನುಮತಿಯಿಂದಾಗಲಿ ಯಾವ ಉಪಾಯವು ಅರಿಯಲ್ಪಡದೋ ಅಂತಪ್ಪ ಉಪಾಯವನ್ನು ವೇದದಿಂದ ತಿಳಿದುಕೊಳ್ಳುತ್ತಾರೆ. ಅದು ಕಾರಣವೇ ವೇದಕ್ಕೆ ವೇದವೆಂಬ ಹೆಸರು ಉಂಟಾಗಿದೆ.

ಸರ್ವಜ್ಞಾನಮಯ ವೇದವನ್ನು ರಚಿಸಿದ ಆ ಹಳಬರು ನಮ್ಮ ಹಾಗೆ ಸಾಮಾನ್ಯಜನರಲ್ಲ, ಅವರಿಗೆ ಸರ್ವಜ್ಞತ್ವವಿತ್ತು ಎನ್ನುವುದಾದರೆ, ಅದು ಅವರಲ್ಲಿ ಸಾಹಜಿಕವೋ ಶಿವಪ್ರಸನ್ನತೆಯಿಂದ ಲಬ್ಧವಾದುದೋ ಹೇಳು ? ಈಶ್ವರಪ್ರಸಾದೈಕಲಬ್ಧವೆಂದರೆ, ಈಶ್ವರನಿಂದ ಅನುಗೃಹೀತರಾದ ಆ ಹಳಬರಲ್ಲಿ ಮೈದೋರಿದ ದಿವ್ಯಜ್ಞಾನ ( ವೇದ ) ವು ಪರಂಪರಾಗತವಾದುದೆಂದೇ ಒಪ್ಪಿದಂತಾಯಿತು. ಯಾವುದಕ್ಕೆ ಸಂಬಂಧಿಸಿದ ವಿಷಯವಾಗಲಿ ಮನೋಗತವಾದುದೇ ಪರಿವಿಡಿಯಿಂದ ವೃತ್ತಿದ್ವಾರಾ ಇಂದ್ರಿಯಗಳ ಮೂಲಕ ಹೊರಹೊಮ್ಮುವುದು. ಅಂತರ್ಮುಖರಾಗಿ ಒಳಗಿರುವ ಅಂತರ್ಯಾಮಿಯನ್ನು ಕಂಡವರ ಚಿತ್ತದಲ್ಲಿ ಅಂತ

ರ್ಯಾಮಿಯಗುಣಗಳು ಸ್ಫುರಿಸುವುದು ಸಾಹಜಿಕವು. ಅಚ್ಚಬಣ್ಣದಲ್ಲಿ ಅದ್ದಿದ ಹಸನಾದ ಬಟ್ಟೆಯಂತೆ ಅಂತರ್ಯಾಮಿಯಲ್ಲಿ ಮುಳಿಗಿದ್ದ ಶುದ್ಧಾಂತಃಕರಣದಲ್ಲಿ ಆ ಅಂತರ್ಯಾಮಿಯ ಧರ್ಮವು ಪ್ರಾದೋರಿ ಲೋಕಾನುಗ್ರಹಾರ್ಥವಾಗಿ ಹೊರಹೊಮ್ಮುವುದು. ಚಂದ್ರ ಚಂದ್ರಿಕಾ ನ್ಯಾಯದಂತೆ ಪರಶಿವನಲ್ಲಿ ಅವಿನಾಭೂತವಾಗಿರುವ ಜ್ಞಾನಶಕ್ತಿಯಾದರೂ ಅನಾದಿಸಂಸಿದ್ಧವಾದುದು. ಪರಶಿವನೆಂಬ ಸೂರ್ಯನ ಜ್ಞಾನಶಕ್ತಿಯ ವಿಕಾಶರೂಪಕಿರಣಗಳೇ ಪ್ರಾಚೀನರ ನಿರ್ಮಲಾಂತಃಕರಣವೆಂಬ 'ಪ್ರಭಾದರ್ಶ' ದಲ್ಲಿ ಮಾರ್ಪೊಳೆದುದೇ ಜಗತ್ತೆಂಬ ಭಿತ್ತಿಯ ಮೇಲೆ ಪಸರಿಸಿತು ಒಳಮನೆಯೊಳು ಹರಡಿದ ಬೆಂಗದಿರನ ಬೆಳಕು ಕನ್ನಡಿಯಿಂದೇ ಒದಗಿತೆಂದು ಔಪಚಾರಿಕವಾಗಿ ನುಡಿವಪರಿಯು ದೇವರನ್ನು ಮಾಜೀ ಹಳಬರೇ ಪಳೆವಾತಿನ ಕಬ್ಬಿಗರೆಂದುಲಿವುದೂ ಹಾಗೇ ಇರುತ್ತದೆ.

ಮನುಷ್ಯರಲ್ಲಿ ಸ್ವಾಭಾವಿಕಜ್ಞಾನವಿದೆ. ಅದಿಲ್ಲದಿದ್ದರೆ ವೇದಗಳ ಶಬ್ದಾರ್ಥಜ್ಞಾನವಾದರೂ ಆಗಲಾರದು. ಈ ಸ್ವಾಭಾವಿಕಜ್ಞಾನವನ್ನೇ ಮನುಷ್ಯರು ತಮ್ಮ ಪ್ರಯತ್ನದಿಂದ ಬೆಳಿಸಿಕೊಂಡು ಈಗಿನ ಗ್ರಂಥಸಂಗ್ರಹ ವನ್ನು ಮಾಡಿಕೊಂಡಿದ್ದಾರೆ; ಅದಕ್ಕೆ ದಿವ್ಯಜ್ಞಾನ (ವೇದ) ದ ಅವಶ್ಯಕತೆ ಯಿಲ್ಲವಾದುದರಿಂದ ವೇದವು ಈಶ್ವರಪ್ರಣೀತವಾದುದೆಂದೂ ಹೇಳಬೇಕಾ ದುದಿಲ್ಲ; ಎನ್ನುವುದಾದರೆ, ದೇವರು ಕಟ್ಟಡವಿಯಲ್ಲಿರತಕ್ಕ ಜನರಿಗಾ ದರೂ ಸ್ವಾಭಾವಿಕಜ್ಞಾನವನ್ನು ಕೊಟ್ಟಿರುವನು. ಆ ಕಾಡುಜನರಾಗಲಿ ನಾವಾಗಲಿ ಶಿಕ್ಷಣಸಂಸ್ಕಾರವಿಲ್ಲದೇ ವಿದ್ವಾಂಸರಾಗದಿರಲು ಕಾರಣವೇನು ? ಇದರಿಂದೆ ನೈಸರ್ಗಿಕಜ್ಞಾನದಿಂದೇ ನಿರ್ವಾಹವಾಗುವಂತಿಲ್ಲವೆಂಬುದು ಸ್ಪಷ್ಟವಾಗುವುದು. ಈಗ ನಾವು ಗ್ರಂಥವನ್ನು ರಚಿಸುವುದು ಮೊದಲಿನ ವಿದ್ವಾಂಸರ ಗ್ರಂಥಗಳ ಅಭ್ಯಾಸದ ತರುವಾಯವೇ ಅಲ್ಲವೇ ? ಆದ್ದರಿಂದ, ಈಶ್ವರೀಯಜ್ಞಾನವು ಸೃಷ್ಟಿಯ ಆರಂಭದಲ್ಲಿ ಅವಶ್ಯವಿರಲೇಬೇಕು. ಸೃಷ್ಟಿಯಾರಂಭದಲ್ಲಿ ಇಂಥವನೊಬ್ಬನು ರಚಿಸಿ ದುದೆಂಬ ಯಾವುದೊಂದು ಗ್ರಂಥವಾಗಲಿ ಅವರ ಪಠನಪಾಠನ ವ್ಯವ ಸ್ಥೆಯಾಗಲಿ ಇದಿಲ್ಲ, ಅಂತಹ ಸಮಯದಲ್ಲಿ, ಪರಮೇಶ್ವರನ *ಉಪದೇ ಶವೇ ಇಲ್ಲದ ಪಕ್ಷದಲ್ಲಿ ಮುಂದಿನಜ್ಞಾನ ಪರಂಪರೆಯು ಅಥವಾ ಗ್ರಂಥ ರಚನೆಯು ಆದೆಂತು ಸಮನಿಸುವುದು ? ಏಕೆಂದರೆ, ಸ್ವಾಭಾವಿಕ ಜ್ಞಾನದಿಂದೇ ಸರ್ವಜ್ಞಾನವೂ ಸಂಭವಿಸದು. ಮತ್ತು ನೈಮಿತ್ತಿಕ (ಶಿಕ್ಷಣದ)

* ಆ ಉಪದೇಶವು ಸಂಕಲ್ಪ ಮಾತ್ರ ಸಿದ್ಧವು.

ಜ್ಞಾನವನ್ನು ದೊರಕಿಸಲು ಬೇರೆ ಸಾಧನವೇ ಇಲ್ಲ; ಅದುಕಾರಣವೇ ಮೊತ್ತಮೊದಲು ಶಾಂಭವಜ್ಞಾನದ ಆವಶ್ಯಕತೆಯುಂಟು. ಈ ನಮ್ಮ ಅಭಿಪ್ರಾಯಕ್ಕೆ ಕೃಷ್ಣದ್ವೈಪಾಯನ ಮುನಿಯ (ಮಹಾಭಾ. ಶಾ. ೨೩೩-೧೪)—

**ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ।**
**ಆದೌ ವೇದಮಯೀ ದಿವ್ಯಾ ಯತಃ ಸರ್ವಾಃ ಪ್ರವೃತ್ತಯಃ**

ಎಂಬ ನುಡಿಯು ಆಸರವಾಗಿರುವುದು.

ಇನ್ನು, ಕಾಠಕ - ಕೌಥುಮ - ತೈತ್ತಿರೀಯಕ - ಪೈಪ್ಪಲಾದಕ - ಮೌಹುಲ ಮುಂತಾದ ಹೆಸರುಗಳಿಂದ ವೇದದ ಕೆಲವು ಭಾಗಗಳಿರುವುವಷ್ಟೆ! ಆ ಹೆಸರುಗಳು ಆ ಆ ಪುರುಷರ ಹೆಸರುಗಳ ಸಂಬಂಧ ಮೂಲಕವಾಗಿಯೇ ಪ್ರಸಿದ್ಧವಾಗಿರಬಹುದು. ಏಕೆಂದರೆ, ಕಾಠಕಾದಿನಾಮಗಳಲ್ಲಿ ಯಾವ ತದ್ಧಿತ ಪ್ರತ್ಯಯಜೋಡಣೆಯಿದೆಯೋ ಅದು ಪಾಣಿನಿಯ "ತೇನಪ್ರೋಕ್ತಮ್" (೪-೩-೧೦೧) ಎಂಬೀಸೂತ್ರದಿಂದ ಸಿದ್ಧಿಸುವುದು; ಇದರಿಂದ '**ಪಾಣಿನಿನಾಪ್ರೋಕ್ತಂ ಪಾಣಿನೀಯಮ್**'—**ವ್ಯಾಸೇನ ಪ್ರೋಕ್ತಂ ವೈಯಾಸಿಕಂ ಭಾರತಮ್**" ಎಂಬ ಮೊದಲಾದ ಸ್ಥಳಗಳಲ್ಲಿ ಹೇಗೆ ಪೌರುಷೇಯತ್ವವು ಪ್ರತೀತಿಯಾಗುವುದೋ ಅದೇ ಮೇರೆಗೆ ಕಾಠಕ, ಕೌಥುಮ ಮೊದಲಾದೆಡೆಗಳಲ್ಲಿಯೂ "**ತೇನಪ್ರೋಕ್ತಮ್**" ಎಂಬ ಸೂತ್ರಾನುಸಾರವಾಗಿ ಉಂಟಾದ ತದ್ಧಿತ ಪ್ರತ್ಯಯಮೂಲಕ ಕಾಠಕ, ಕೌಥುಮಾದಿ ವೇದಶಾಖೆಗಳಾದರೂ ಪೌರುಷೇಯ (ಪುರುಷ ಕೃತ) ಗಳೇ ಇರಬಹುದೆಂದು ಹೇಳಲು ಅಡ್ಡಿಯೇನು ? ಎಂಬ ಸಂಶಯದ ನಿರಸನವು ಹೀಗಿದೆ. ವೇದದ ಬೇರೆ ಬೇರೆ ಶಾಖೆಗಳಿಗಿರುವ ಕಾಠಕ, ಕೌಥುಮಾದಿ ಹೆಸರುಗಳಿಂದ ಆ ಆ ಶಾಖೆಗಳ ಕರ್ತರ ಬೋಧವಾಗುವುದಿಲ್ಲ. ಮತ್ತೇನಂದರೆ, ಆ ಆ ಶಾಖೆಯ ಅಧ್ಯಯನದ ಸಂಪ್ರದಾಯವನ್ನು ಆ ಆ ಋಷಿಯು ವಿಶೇಷರೀತಿಯಿಂದ ಪ್ರವರ್ತನೆಗೊಳಿಸಿದುದರಿಂದ ಅವರವರ ಹೆಸರುಗಳು ಆ ಆ ಶಾಖೆಗಳಿಗೆ ಕೊಡಲ್ಪಟ್ಟಿವೆ. ಆದ್ದರಿಂದ ಕಾಠಕ ಮೊದಲಾದ ಶಾಖೆಗಳನ್ನು ಕಠ ಮೊದಲಾದವರು ಹೊಸದಾಗಿ ರಚಿಸಿ, ಆ ಆ ವೇದಭಾಗಗಳನ್ನೇ ನಿರ್ಮಾಣ ಮಾಡಿದರೆಂದು ಹೇಳುವುದು ಸಮಂಜಸವಾದುದಲ್ಲ. ಕೆಲ ವಿಶಿಷ್ಟ ಋಷಿಗಳಿಂದ ಅಧ್ಯಯನದ ಕೆಲವಿಶಿಷ್ಟಸಂಪ್ರದಾಯಗಳು ಪ್ರಚಾರದಲ್ಲಿದ್ದು

ದರ ಬಗ್ಗೆ ಉಲ್ಲೇಖಗಳಾದರೂ ಕಾಣುಬರುತ್ತವೆ. ಹೇಗೆಂದರೆ :— ‘ ವೈಶಂಪಾಯನಃ ಸರ್ವಶಾಖಾಧ್ಯಾಯೀ ’— ‘ ಕಠಃ ಪುನರಿಮಾಂ ಕೇವಲಾಂ ಶಾಖಾಮಧ್ಯಾಪಯಾಂಬಭೂವೇತಿ ’ ಎಂಬ ಈ ಸ್ಮೃತಿ ವಚನದಲ್ಲಿ ಹೇಳಲ್ಪಟ್ಟಿರುವ ಮೇರೆಗೆ ಕಠನು ಈ ಶಾಖೆಯ ಅಧ್ಯಯನ ವನ್ನು ವಿಶೇಷರೀತಿಯಿಂದ ಮಾಡಿಸುದರ ಮೂಲಕವಾಗಿ ಇದಕ್ಕೆ ‘ ಕಾಠಕ ’ ವೆಂಬ ಈ ಸಾಧಾರಣವಿಶೇಷಣವನ್ನು ಹಚ್ಚುವುದು ವಾಡಿಕೆ ಯಾಗಿದೆ.

ವೇದದಲ್ಲಿ ವ್ಯಾಕ್ಯಗಳಾದರೂ ವಾಲ್ಮೀಕಿ-ವ್ಯಾಸ-ಕಾಳಿದಾಸ ಮೊದ ಲಾದವರ ವಾಕ್ಯಗಳಂತೇ ಇವೆ. ವಾಲ್ಮೀಕಿ ಮೊದಲಾದವರ ವಾಕ್ಯಗಳು ಪೌರುಷೇಯಗಳಾಗಿರುವಂತೆ, ವೇದವಾಕ್ಯಗಳಾದರೂ ಪೌರುಷೇಯಗಳೆನಿಸಿ ಕೊಳ್ಳಲ್ಪಡುಬಹುದಲ್ಲವೇ ? ಎಂಬ ಆಕ್ಷೇಪದ ಸಮಾಧಾನವು ಹೇಗಂದರೆ— ವಾಲ್ಮೀಕಿ, ವ್ಯಾಸ ಮುಂತಾದ ಪುರುಷರು ರಾಮಾಯಣ ಭಾರತಾದಿ ಗ್ರಂಥಕರ್ತೃಗಳೆಂಬ ಸಂಗತಿಯು. ಆ ಆ ಗ್ರಂಥನಿರ್ಮಾಣ ಸಮಯದಲ್ಲಿದ್ದ ಜನರಿಂದ ಪ್ರತ್ಯಕ್ಷ ಅರಿಯಲ್ಪಟ್ಟುದಾಗಿ ತತ್ಕಾಲಾನಂತರ ದಲ್ಲಿಯೂ ಬಿಡುವಿಲ್ಲದ ಪಾರಂಪರ್ಯವಿಡಿದು ಈ ವರೆಗೆ ಸರ್ವತ್ರವಿದಿತ ವಾಗಿರುವಂತೆ, ಒಬ್ಬಾನೊಬ್ಬ ಪುರುಷನು ವೇದವನ್ನು ರಚಿಸಿದನೆಂಬುದು ಪ್ರಸಿದ್ಧವಿಲ್ಲ.

ವೇದಪ್ರವರ್ತಕರಾದ ಋಷಿಗಳ ವಚನಗಳು ಈಶ್ವರಪ್ರೇರಿತಗಳೆನಿ ಸುವಲ್ಲಿ, ಕಾಳಿದಾಸಾದಿಗಳ ವಾಕ್ಯಗಳಾದರೂ ಈಶ್ವರಪ್ರೇರಿತಗಳೇ ಎಂದು ಶಂಕಿಸುವವರಿಗೆ ನಾವು ಹೇಳುವುದೇನಂದರೆ, ವಸ್ತುತಃ ಎಲ್ಲವೂ ಈಶ್ವರ ಪ್ರೇರಿತವೇ ಎಂಬುದರ ಅರಿವು ನಮಗೂ ಇರುವುದು. ಆದರೆ ವಿಶ್ವ ಪ್ರಪಂಚವು ಪ್ರಕೃತಿಯ ವಿಕೃತಿಯೆಂಬ ತಿಳಿವಳಿಕೆಯುಳ್ಳ ನೀವಾದರೂ ಕೆಲವು ಕಾರ್ಯವರ್ಗದಲ್ಲಿ ಕೇವಲ ಪುರುಷಬುದ್ಧಿಕೃತಸಂಬಂಧವೇ ಇರುವುದೆಂಬ ಸಂಗತಿಯನ್ನು ಒಪ್ಪೇಬೇಕಲ್ಲವೇ ? ಹಾಗಲ್ಲದ ಪಕ್ಷದಲ್ಲಿ ಕೇವಲ ಈಶ್ವರ ಪ್ರೇರಣೆಯ ಸಾಕ್ಷಾತ್ಸಂಬಂಧವುಳ್ಳ ವಾಕ್ಯಗಳಿಗೂ ಪುರುಷ ಬುದ್ಧಿರಚಿತ ವಾಕ್ಯಗಳಿಗೂ ತಾರತಮ್ಯವೇ ಇಲ್ಲವೇನು ? ಈ ವಿಷಯದಲ್ಲಿ ನಾವು ಎರಡು ಮಾತುಗಳನ್ನು ಹೆಚ್ಚು ಹೇಳುತ್ತೇವೆ. ಪ್ರತಿಭಾಶಕ್ತಿ ಸಂಪನ್ನನೂ, ವ್ಯುತ್ಪತ್ತಿಯುಳ್ಳವನೂ ಕವಿಯೆನಿಸುವನು. ಪ್ರತಿಭೆಯ ಲಕ್ಷಣವನ್ನಾದರೋ ಸಾಹಿತ್ಯಕಾರರು ಬಹು ವಿಧವಾಗಿ ಬಣ್ಣಿಸಿದ್ದಾರೆ. ಭಟ್ಟತೌತನು :—

**ಪ್ರಜ್ಞಾ ನವನವೋನ್ಮೇಷಶಾಲಿನೀ ಪ್ರತಿಭಾ ಮತಾ ।**
**ತದನು ಪ್ರಾಣನಾ ಜೀವದ್ವರ್ಣನಾ ನಿಪುಣಃ ಕವಿ ॥**

ಎಂದು ಕಾವ್ಯಕೌತುಕದಲ್ಲಿ ಹೇಳಿದ್ದಾನೆ. ಕಾವ್ಯಾಲಂಕಾರ ಸೂತ್ರ ಕಾರನಾದ ವಾಮನನು— "**ಕವಿತ್ವಬೀಜಂ ಪ್ರತಿ ಭಾನಮ್**" ಎಂದು ಪ್ರತಿಭೆಯ ಲಕ್ಷಣವನ್ನು ತೋರಿಸಿ— '**ಕವಿತ್ವಬೀಜಂ ಜನ್ಮಾಂತರಗತ ಸಂಸ್ಕಾರವಿಶೇಷಃ ಕಶ್ಚಿತ್ । ಯಸ್ಮಾದ್ವಿನಾ ಕಾವ್ಯಂ ನ ನಿಷ್ಪದ್ಯತೇ, ನಿಷ್ಪನ್ನಂ ವಾಹಾಸಾಯತನಂ ಸ್ಯಾತ್ ॥**' ಎಂಬುದಾಗಿ ವೃತಿಯಲ್ಲಿ (೧—೩—೧೬) ಅದರ ಸ್ಪಷ್ಟೀಕರಣವನ್ನು ಮಾಡುತ್ತಾನೆ, ಪ್ರತಿಭೆ ಅಂದರೆ ಪೂರ್ವಜನ್ಮದ ವಿಶಿಷ್ಟಸಂಸ್ಕಾರವು. ಈ ಸಂಸ್ಕಾರಮೂಲಕವಲ್ಲದ ಕಾವ್ಯನಿರ್ಮಾಣವು ಹಾಸ್ಯಕ್ಕೆ ಗುರಿಯಾಗುವುದು. ರುದ್ರಟನಾದರೂ ಇದನ್ನೇ ಅನುವಾದ ಮಾಡುವವನಾಗಿ (೧-೧೫-೧೬)—

**ಮನಸಿ ಸದಾ ಸುಸಮಾಧಿನಿ ವಿಸ್ಫುರಣಮನೇಕಧಾ ಭಿಧೇ ಯಸ್ಯ ।**
**ಅಕ್ಲಿಷ್ಟಾನಿ ಪದಾನಿಚ ವಿಭಾನ್ತಿ ಯಸ್ಯಾಮಸೌ ಶಕ್ತಿಃ ॥**
**ಪ್ರತಿಭೇತ್ಯಪರೈರುದಿತಾ, ।**

ಎಂದು ಪ್ರತಿಭಾಶಕ್ತಿಯ ಲಕ್ಷಣವನ್ನು ಸೂಚಿಸಿದ್ದಾನೆ. ಅಂದರೆ ಮನಸ್ಸನ್ನು ಸ್ಥಿರಗೊಳಿಸಿ ವರ್ಣಿಸ್ಪಡತಕ್ಕ ವಿಷಯವನ್ನು ಅನೇಕ ಪ್ರಕಾರವಾದ ಸುಲಭ ಶಬ್ದಗಳಿಂದ ಬಣ್ಣಿಸಲು ಸಾಧನವಾದ ಸ್ಫುರಣವೇ ಪ್ರತಿಭಾಶಕ್ತಿಯು. ರುದ್ರಟನ ಅಭಿಪ್ರಾಯಾನುಸಾರವಾಗಿ ಪ್ರತಿಭೆಯು ಸ್ವಾಭಾವಿಕವೂ ಇರಬಹುದು, ಇಲ್ಲವೆ ಪರಿಶ್ರಮಪೂರ್ವಕವಾಗಿ ಸಂಪಾದಿಸಿದುದೂ ಇರಬಹುದು; ಯಾವುದಕ್ಕಾದರೂ ಪೂರ್ವಜನ್ಮದ ವಿಶೇಷ ಸಂಸ್ಕಾರಾನುಗಾಮಿತ್ವವು ತಪ್ಪದೆಂಬ ಸಂಗತಿಯನ್ನು ನಾವು ಈ ಮೇಲೆ ಭಟ್ಟತೌತನ ನುಡಿಯಿಂದ ಸಿದ್ಧಗೊಳಿಸಿದ್ದೇವೆ. ಆದರೆ ಅವೆರಡರಲ್ಲಿ ಸ್ವಾಭಾವಿಕ ಪ್ರತಿಭೆಯೇ ಶ್ರೇಷ್ಠವಾದುದು.

ಇನ್ನು, ಪ್ರತಿಭೆಯೊಂದರಿಂದಲೇ ಸಾಗದು; ವ್ಯುತ್ಪತ್ತಿಯೂ ಕಾವ್ಯ ಹೇತುವಾಗಿರುವುದರಿಂದ ಕವಿಗೆ ಪ್ರತಿಭಾಶಕ್ತಿಯು ಸ್ವಾಭಾವಿಕವಾಗಿದ್ದರೂ ಪರಿಶ್ರಮ ಸಾಧ್ಯವಾದ ವ್ಯುತ್ಪತ್ತಿಯ ಆವಶ್ಯಕತೆಯೂ ಉಂಟು; ಅನೇಕ ಶಾಸ್ತ್ರಗಳ ಪರಿಶೀಲನೆಯು ವ್ಯುತ್ಪತ್ತಿಯೆನಿಸುವುದು. ಕವಿಗೆ ಇದೊಂದು ವಿಷಯವು ವರ್ಣಿಸಲಿಕ್ಕೆ ಬಾರದೆನ್ನುವಹಾಗಿಲ್ಲ ಅಂದರೆ ಯಾವುದಾದರೊಂದು ಶಾಸ್ತ್ರದ ಜ್ಞಾನವು ವಿಶಿಷ್ಟಮರ್ಯಾದೆಯವರೆಗಾದರೂ

ಅವಶ್ಯವಿರಲೇಬೇಕೆಂಬುದನ್ನು ಬೇರೆ ಹೇಳಬೇಕಿಲ್ಲ; ನಾಟಕದಲ್ಲಿ ಯಾವ ಯಾವ ವಿಷಯಗಳ ಅಂತರ್ಭಾವವಿರುವುದೆಂಬುದನ್ನು ಪ್ರತಿಪಾದಿಸುವಲ್ಲಿ ನಾಟ್ಯಶಾಸ್ತ್ರಕಾರನು ( ೧೯-೧೧೭ )----

ನ ತದ್ಜ್ಞಾನಂ ನ ತಚ್ಛಿಲ್ಪಂ ನ ಸಾ ವಿದ್ಯಾ ನ ಸಾ ಕಲಾ ।
ನ ತತ್ಕರ್ಮ ನ ವಾ ಯೋಗೋ ನಾಟಕೇ ಯನ್ನ ದೃಶ್ಯತೇ ॥

ಎಂದು ಹೇಳುತ್ತಾನೆ: ಅಂದರೆ ನಾಟಕದಲ್ಲಿ ಇಂತಹದೊಂದು ವಿಷಯವು ಬರುವುದಿಲ್ಲವೆಂತಲ್ಲ, ಎಷ್ಟು ಹೆಚ್ಚು ವಿಷಯಗಳ ಜ್ಞಾನ ವಿರುವುದೋ ವ್ಯುತ್ಪತ್ತಿಯೂ ಅಷ್ಟು ಹೆಚ್ಚಾಗುವುದು, ಅದರ ಪ್ರಮಾಣ ವನ್ನನುಸರಿಸಿ ಕಾವ್ಯನಿರ್ಮಾಣಕರ್ತೃತ್ವ ಪಾತ್ರತೆಯಾದರೂ ಅಧಿಕವಾಗುವುದು. ಇದೇ ವಿಷಯವನ್ನು ರುದ್ರಟನೂ ( ೧-೮ ) ಹೇಳುತ್ತಾನೆ.

ಛಂದೋ ವ್ಯಾಕರಣಕಲಾ, ಲೋಕಸ್ಥಿತಿ ಪದ
ಪದಾರ್ಥವಿಜ್ಞಾನಾತ್ ।
ಯುಕ್ತಾಯುಕ್ತವಿವೇಕೋ ವ್ಯುತ್ಪತ್ತಿರಿಯಂ ಸಮಾಸೇನ ॥

ವಾಗ್ಭಟಾಲಂಕಾರದಲ್ಲಿಯೂ ವ್ಯುತ್ಪತ್ತಿಯ ವ್ಯಾಖ್ಯೆಯು ಹೀಗೇ ಇದೆ ( ೧-೫ )—

ಶಬ್ದ ಧರ್ಮಾರ್ಥಕಾಮಾದಿ ಶಾಸ್ತ್ರೇಷ್ವಾಮ್ನಾಯ ಪೂರ್ವಿಕಾ ।
ಪ್ರತಿಪತ್ತಿರಸಾಮಾನ್ಯಾ ವ್ಯುತ್ಪತ್ತಿರಭಿಧೀಯತೆ ॥

ವ್ಯಾಕರಣ, ಧರ್ಮಶಾಸ್ತ್ರ, ಶಬ್ದಕೋಶ, ಗಜಪರೀಕ್ಷೆ, ಅಶ್ವಪರೀಕ್ಷೆ, ರತ್ನಪರೀಕ್ಷೆ, ಧರ್ಮಶಾಸ್ತ್ರ, ಷಡಂಗಸಹಿತವಾದ ವೇದಗಳನ್ನೂ ಆಗಮ ಗಳನ್ನೂ ಅಧ್ಯಯನಮಾಡಿ ಅವುಗಳ ರಹಸ್ಯಾರ್ಥವನ್ನು ಚೆನ್ನಾಗಿ ಅರಿತುಕೊಳ್ಳುವುದೇ ವ್ಯುತ್ಪತ್ತಿಯು. ಈ ರೀತಿಯಾಗಿ, ಪ್ರತಿಭಾಶಕ್ತಿಗಾದರೂ ವ್ಯುತ್ಪತ್ತಿಯ ಸಹಾಯವು ಬೇಕು. ಅವೆರಡೂ ಉಳ್ಳವನೇ ಉತ್ತಮ ಕವಿಯೆನಿಸುವನು.

ಇನ್ನು ಪ್ರಕೃತಪ್ರಸಂಗದ ಕಡೆ ದೃಷ್ಟಿಯನ್ನು ಹೊರಳಿಸುವಾ! ಕಾವ್ಯರಚನೆಯ ಆದಿಸ್ವರೂಪವು ಈಶ್ವರೀಯ ಜ್ಞಾನಮಯವಾದ ವೇದ ದಿಂದೇ ಪ್ರಕಟವಾಗಿರುವುದು. ಹೇಗೆಂದರೆ— ಋಗ್ವೇದವು ಪ್ರಾಮುಖ್ಯ ವಾಗಿ ಧರ್ಮಬೋಧಕವಾದುದೆನಿಸಿಕೊಳ್ಳುವುದು. ಆ ಮೇರೆಗೆ ಅದರಲ್ಲಿ

ಬಹಳ ಕನಿಕರದಿಂದ ಮಾಡಲ್ಪಟ್ಟ ದೇವತೆಗಳ ಪ್ರಾರ್ಥನೆಗಳೇ ವಿಶೇಷ ವಾಗಿವೆ. ಆದರೂ ಅದರಲ್ಲಿಯು ಸಹ ಯಥಾರ್ಥವಾಗಿ ಕಾವ್ಯಗಳೆಂದು ಹೇಳಲಿಕ್ಕೆ ಬರುವಂಥ ಎಷ್ಟೋ ಭಾಗಗಳು ಕಂಡು ಬರುತ್ತವೆ. ಋಗ್ವೇದದೊಳಗಣ ಅನೇಕ ಸೂಕ್ತಗಳ ಹಾಗೂ ವಿಶೇಷತಃ ಉಷಾದೇವಿಯ ಸೂಕ್ತದಲ್ಲಿ ಸರಸಕಾವ್ಯದ ಎಷ್ಟೋ ಉದಾಹರಣೆಗಳನ್ನು ತೋರಿಸ ಬಹುದು. ೧ನೆಯ ಮಂಡಲದ ೧೨೪ನೆಯ ಸೂಕ್ತವನ್ನು ನೋಡಿರಿ, !

**ಅಭ್ರಾತೇವ ಪುಂಸಏತಿ ಪ್ರತೀಚೀಗರ್ತಾರುಗಿವ**
**ಸನಯೇಧನಾನಾಮ್ ।**
**ಜಾಯೇವ ಪತ್ಯ ಉಶತೀ ಸುವಾಸಾ ಉಷಾ ಹಸ್ರೇವ**
**ನೀರಿಣೀತೇ ಅಪ್ಸಃ ॥**

ಎಂದು ಆ ಸೂಕ್ತದ ೭ನೆಯ ಮಂತ್ರವಿದೆ. ಧನಪ್ರಾಪ್ತಿಗಾಗಿ ನ್ಯಾಯಾಸ್ಥಾನದ ಸೋಪಾನಗಳನ್ನೇರುತ್ತಿರುವ ಭ್ರಾತೃಹೀನಳಾದ ಸ್ತ್ರೀ ಯಂತೆಯೂ, ಸುಂದರವಾದ ವಸ್ತ್ರವನ್ನುಟ್ಟುಕೊಂಡು ಗಂಡನೆದುರಿಗೆ ಬರುವ ಕಾಮಿನಿಯಂತೆಯೂ, ನಗೆಮೊಗದ ಚದುರೆಯಂತೆಯೂ ಆ ಉಷೆಯು ತನ್ನ ಸ್ವರೂಪವನ್ನು ಪ್ರಕಟಿಸುತ್ತಿರುವಳು. ಎಂಬ ಆಶಯದ ವರ್ಣನೆಯುಳ್ಳ ಈ ಮಂತ್ರದಲ್ಲಿ ನಮ್ಮ ಗ್ರಹಿಕೆಯಂತೆ ಮೂರು ಉಪಮೆ ಗಳಿವೆ. ಅವುಗಳಲ್ಲಿ ಕಡೆಯ ಎರಡಾದರೋ ಯಾವ ದೇಶದಲ್ಲಿಯ ಯಾವ ಕಾವ್ಯದಲ್ಲಾದರೂ ಜೋಡಿಸಲು ಯೋಗ್ಯವಾಗಿವೆ. ಅದೇ ಮಂಡಲದ ೧೬೪ನಯ ಸೂಕ್ತದಲ್ಲಿಯ ಎಷ್ಟೋ ಮಂತ್ರಗಳನ್ನು ನೋಡಿರಿ. ಅವುಗಳಲ್ಲಿ—

**ದ್ವಾಸುಪರ್ಣಾ ಸಯುುಜಾ ಸಖಾಯಾ ಸಮಾನಂ ವೃಕ್ಷಂ**
**ಪರಿಷಸ್ವಜಾತೇ ।**
**ತಯೋರೇಕಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನನ್ಯೋಽಭಿ ಚಾಕಶೀತಿ ॥**

ಎಂಬ ೨೦ನೆಯ ಮಂತ್ರವು ಜೀವನನ್ನೂ ಶಿವನನ್ನೂ ಎರಡು ಹಕ್ಕಿಗಳ ಉಪಮೆಯೊಡನೆ ಬಣ್ಣಿಸುವುದು. ಜಗನ್ನಾಥನು ಈ ಮಂತ್ರ ವನ್ನು ರಸಗಂಗಾಧರವೆಂಬ ಗ್ರಂಥದಲ್ಲಿ ಅತಿಯೋಕ್ತಿಕಿಯ ವೈದಿಕೋ ದಾಹರಣೆಯೆಂದು ಉಲ್ಲೇಖಿಸಿದ್ದಾನೆ. ಜೋಡಿಯಿಂದಿರುವ ಒಬ್ಬರಿಗೊಬ್ಬರು ಗೆಳೆಯರಾದ ಎರಡು ಹಕ್ಕಿಗಳು ಒಂದೇ ( ಅರಳಿಯ ) ಗಿಡವನ್ನಾ

ಶ್ರಯಿಸಿರುತ್ತವೆ. ಅವುಗಳಲ್ಲಿ ಒಂದು ಆ ಗಿಡದ ಇನಿವಣ್ಣನ್ನು ತಿನ್ನುವುದು. ಎರಡನೆಯದಾದರೋ ಏನೊಂದನ್ನೂ ತಿನ್ನದೆ ತಟಸ್ಥವಾಗಿ ನೋಡು ತ್ತಿರುವುದು; ಎಂಬುದಾಗಿ ಆ ವರ್ಣನೆಯ ಆಶಯದಲ್ಲಿರುವ ಕಲ್ಪನೆಯು ಬಹು ಸರಸವಾಗಿದೆ. ಮತ್ತು ಅಲಂಕಾರ ಶಾಸ್ತ್ರದಲ್ಲಿ ಹೇಳಲ್ಪಡುವ ರೂಪಕಾತಿಶಯೋಕ್ತಿಯೆಂಬ ಅಲಂಕಾರವು ಅದರಲ್ಲಿ ಸಾಧಿಸಲ್ಪಟ್ಟಿದೆ. ಇದೇ ಸೂಕ್ತದಲ್ಲಿಯ ೧೧ ನೆಯ ಮಂತ್ರವು—

**ದ್ವಾದಶಾರಂ ನಹಿ ತಜ್ಜರಾಯ ವರ್ವರ್ತಿ ಚಕ್ರಂ**
**ಪರಿದ್ಯಾಮೃತಸ್ಯ ।**
**ಆಪುತ್ರಾ ಅಗ್ನೇ ಮಿಥುನಾಸೋಅತ್ರ ಸಪ್ತ ಶತಾನಿ**
**ವಿಂಶತಿಶ್ಚ ತಸ್ಥುಃ ॥**

ಎಂದಿರುವುದು. ಇದರಲ್ಲಿ ಸಂವತ್ಸರವು ಋತುವಿನ ಚಕ್ರವೆಂದು ಕಲ್ಪಿಸಿ ವರ್ಣಿಸಲ್ಪಟ್ಟಿದೆ. ಸಾಮಾನ್ಯಚಕ್ರಕ್ಕಿಂತಲೂ ಈ ಚಕ್ರವು ವಿಲ ಕ್ಷಣವಾದುದೆಂದು ಬಣ್ಣಿಸಲ್ಪಟ್ಟಿರುವುದರಿಂದ ಇಲ್ಲಿ ವ್ಯತಿರೇಕಾಲಂಕಾರವು ಸೂಚಿತವಾಗಿದೆ. ಮತ್ತು, (ಋ. ೧-೧೬೪-೨೧)—(೬-೫೫-೫) ಇತ್ಯಾದಿ ಮಂತ್ರಗಳಲ್ಲಿ ಶ್ಲೇಷವನ್ನು ಸಾಧಿಸುವ ಪ್ರಯತ್ನವಿದ್ದುದಾಗಿ ಕಂಡು ಬರುವುದು. ( ಋ. ೬-೭೫-೧೪; ೬-೭೫-೧೭ )—(ತೈ. ಸಂ—೪-೬-೬-೧; ತೈ. ಬ್ರಾ. ೨-೪-೪-೯ )—( ವಾಜ. ಸಂ—೨೦-೨೦) ಇತ್ಯಾದಿ ಸ್ಥಳಗಳಲ್ಲಿ ಬಹುಮನೋಹರಗಳಾದ ಉಪಮೆಗಳಿವೆ. ಈ ಪ್ರಕಾರವಾಗಿ ವೇದ ಸಂಹಿತೆಗಳಲ್ಲಿ ಹೇಗೆ ಸರಸವಾದ ಕಾವ್ಯದ ಉದಾಹರಣೆಗಳು ದೃಗ್ಗೋ ಚರವಾಗುತ್ತಿವೆಯೋ, ಹಾಗೇ ಬ್ರಹ್ಮಜ್ಞಾನ ವಿವೇಚಕಗಳಾದ ಉಪ ನಿಷತ್ತುಗಳಲ್ಲಿಯೂ ಇರುವುವು. ಮುಂಡ ಕೋಪನಿಷತ್ತಿನ— '**ಧನುರ್ಗೃ ಹೀತ್ವೌಪನಿಷದಮ್**' ( ೨-೨-೩ ) ಎಂಬ ಮಂತ್ರದಲ್ಲಿ ಬ್ರಹ್ಮಸಾಧನೋ ಪಾಯವು ಸುಂದರವಾದ ರೂಪಕದಿಂದ ತೋರಿಸಲ್ಪಟ್ಟಿದೆ. ಕಠೋಪ ನಿಷತ್ತಿನ— '**ಆತ್ಮಾನಂ ರಥಿನಂ ವಿದ್ಧಿ**' (೧-೩-೩) ಎಂಬ ಮೊದಲಾದ ಮಂತ್ರಗಳಲ್ಲಿಯೂ ರೂಪಕಾಲಂಕಾರವು ಪೋಣಿಸಲ್ಪಟ್ಟಿರುವುದು.

ಹಾಗೂ, ( ಋ. ಸಂ—೧೦-೧೦೮; ೩-೩೩; ೧-೧೬೫; ೧-೧೭೦; ೧-೧೭೯; ೪-೧೮; ೪-೪೨; ೭-೩೩; ೧೦-೨೮; ೧೦-೫೧; ೧೦-೫೩; ೧೦-೮೬; ೧೦-೯೫; ಎಂಬಿಷ್ಟು ಸ್ಥಳಗಳಲ್ಲಿ ಸಂವಾದಗಳಿವೆ. ಈ ವೈದಿಕ ಸಂವಾದ ಗಳೆಂದರೆ ಮುಂದೆ ಸಂಸ್ಕೃತವಾಙ್ಮಯದಲ್ಲಿ ವಿಕಾಸವನ್ನು ಹೊಂದಿದ

ನಾಟಕಗಳ ಆದಿಸ್ವರೂಪವೇ ಎಂದು ಧಾರಳವಾಗಿ ಹೇಳಬಹುದು. ಮತ್ತು (ತೈ. ಸಂ—೭-೫-೯-೩; ತೈ. ಬ್ರಾ ೧-೨-೬೬) ಇವುಗಳಲ್ಲಿ ವಿಧಿಸಲ್ಪಡುವ ಮಹಾವ್ರತವೆಂಬ ಯಜ್ಞದಲ್ಲಿ ಬ್ರಾಹ್ಮಣರೂ ಶೂದ್ರರೂ ವಿನೋದರೂಪವಾದ ಕಾಳಗ ಮಾಡುವುದರ ವರ್ಣನೆಯುಂಟು. ಇದರಲ್ಲಿಯೂ ಮುಂದಿನ ನಾಟಕವಿಕಾಸದ ಬೀಜಗಳಿವೆ. ಯಜ್ಞದಲ್ಲಿ 'ಬ್ರಹ್ಮೋದ್ಯ' ಎಂಬ ಕೂಟ ಪ್ರಶ್ನೆಗಳು ಮಾಡಲ್ಪಡುತ್ತವೆ; ಅವು (ತೈ. ಸಂ.— ೭-೪-೧೮)— '**ಕಿಂ ಸ್ವಿದ್ಧಿಮಸ್ಯ ಭೇಷಜಂ ಕಿಂ ಸ್ವಿದಾವಪನಂಮಹತ್** ' ಎಂಬಲ್ಲಿಯೂ (ವಾ. ಸಂ.—೨೩; ತೈ. ತೈ. ಬ್ರಾ. ೩-೯-೫) ಎಂಬಲ್ಲಿಯೂ ಇವೆ. ಅವು ಮುಂದಿನ ಪ್ರಹೇಲಿಕಾದಿಗಳಿಗೆ ಬೀಜರೂಪಗಳಾಗಿವೆ.

ಸಾರಾಂಶ' ಸೃಷ್ಟಿಯಾರಂಭಕಾಲೀನರಾದ ಮಹರ್ಷಿಗಳ ನಿರ್ಮಲವಾದ ಹೃದಯದಲ್ಲಿ ಪರಶಿವಪ್ರೇರಿತವಾದ ಜ್ಞಾನಮಯ ಶಾಬ್ದಿಕಸ್ಫುರಣವು ಮೊದಲಿನದಾದುದರಿಂದ ಅದುವೇ ಮುಂದಿನ ಸರ್ವ ವಾಙ್ಮಯ ವಿಕಾಸಕ್ಕೆ ಬೀಜಭೂತವಾಗಿರುವುದು. ಕಾಲಿದಾಸಾದಿಗಳ ಹೃದಯದಲ್ಲಿ ಸ್ಫುರಿಸಿದ ಪ್ರತಿಭೆಯಾದರೋ ಪರಂಪರಾಗತವಾದ ಜ್ಞಾನವೇ ಆಧಾರವಾಗಿ ಉಳ್ಳದ್ದೂ ಸಂಸ್ಕಾರ ಪೂರ್ವಕವೂ ಆದುದರಿಂದ, ಅದು ಈಶ್ವರ ಪ್ರೇರಿತಮಾತ್ರವಾದುದಲ್ಲ; ಆದುಕಾರಣವೇ ಆದ್ಯರಾದ ಮಹರ್ಷಿಗಳ ವಾಕ್ಯಗಳು ಅಪೌರುಷೇಯಗಳೆಂದೂ ಕಾಳಿದಾಸಾದಿಗಳ ವಚನಗಳು ಪೌರುಷೇಯಗಳೆಂದೂ ನಾವು ಒತ್ತಿ ಹೇಳುತ್ತೇವೆ. ಪ್ರಾಮುಖ್ಯವಾಗಿ ಕಾಲಿದಾಸನ, '**ವಾಗರ್ಥಾವಿವ ಸಂಪೃಕ್ತೌ** ' ಎಂಬ ನಮಸ್ಕ್ರಿಯಾತ್ಮಕ ಮಂಗಲವಚನ ಸ್ಫೂರ್ತಿಯು—

**ಶಬ್ದಜಾತಮಶೇಷಂತು ಧತ್ತೇ ಶರ್ವಸ್ಯ ವಲ್ಲಭಾ।**
**ಅರ್ಥಸ್ವರೂಪಮಖಿಲಂ ಧತ್ತೇ ಮುಗ್ಧೇಂದು ಶೇಖರಃ॥**

ಎಂಬುದಾಗಿ ಶಿವಪುರಾಣ (ವಾ. ಸಂ.) ವರ್ಣಿತವಾದ ಶಬ್ದಾರ್ಥಗಳ ಅವಿನಾಭೂತ ಸಂಬಂಧಾತ್ಮಕ ಶಿವಶಕ್ತಿಸ್ವರೂಪವನ್ನನುಸಂಧಾನ ಮಾಡುವ ಪೂರ್ವಕ ಈ ಮಹಾಕವಿಯು ಶೈವಾಗಮದೀಕ್ಷಿತನೆಂಬ ಭಾವವನ್ನು ವ್ಯಕ್ತಪಡಿಸಿರುವುದು, ಹೀಗೆ ವೇದಾಗಮರೂಪ ಶಿವಶಾಸ್ತ್ರಾನುಕರಣಶೀಲರಾದ ಕಾಲಿದಾಸಾದಿ ಕವಿ ಪ್ರಣೀತ ಗ್ರಂಥಗಳು ಈಶ್ವರ

ಪ್ರೇರಿತಗಳೆನಿಸಿದರೂ ಅಪೌರುಷೇಯಗಳೆಂದು ಸಿದ್ಧವಾಗುವುದಿಲ್ಲ. ಹಾಗೂ ಅಪೌರುಷೇಯಗಳಾದ ವೇದಗಳಂತೆ ಅವು ನಿತ್ಯವಾದುವೂ ಅಲ್ಲ.

ವೇದಗಳು ಶಬ್ದಮಯಗಳಾದ್ದರಿಂದ, ಅವುಗಳಿಗೆ ನಿತ್ಯತ್ವವು ಸಿದ್ಧಿಸದು; ಯಾಕೆಂದರೆ ಶಬ್ದವು ಕಾರ್ಯರೂಪವಾದುದರಿಂದ ಕೊಡದಂತೆ ಅನಿತ್ಯವಾಗಿದೆ. ಕೊಡವು ಹೇಗೆ ಉತ್ಪನ್ನವಾಗಿ ನಾಶವಾಗುವುದೋ ಹಾಗೆ ಶಬ್ದವಾದರೂ ಹುಟ್ಟಿದ ತರುವಾಯ ಅಳಿವುದು; ಆದ್ದರಿಂದ ಶಬ್ದವು ಅನಿತ್ಯವಾಗಿರುವಮೂಲಕ ಶಬ್ದಮಯವಾದ ವೇದಗಳೂ ಅನಿತ್ಯವಾಗಿವೆ ? ಎಂಬ ಈ ಕೋಟಿಕ್ರಮವು ಸರಿಯಾದುದಲ್ಲ; ಶಬ್ದವು ನಿತ್ಯರೂಪವಾದುದೂ ಕಾರ್ಯರೂಪವಾದುದೂ ಎಂದು ಎರಡು ವಿಧವಾಗಿದೆ. ಪರಮಾತ್ಮನ ಜ್ಞಾನದೊಡನಿರುವ ಶಬ್ದಾರ್ಥಗಳ ಸಂಬಂಧವು ನಿತ್ಯವಾದುದು. ವ್ಯವಹಾರದಲ್ಲಿರತಕ್ಕ ಶಬ್ದಗಳು ಕಾರ್ಯರೂಪಗಳಾದ್ದರಿಂದ ಅನಿತ್ಯವಾದುವು. ಪರಶಿವನ ಜ್ಞಾನಕ್ರಿಯೆಗಳು ನಿತ್ಯವಾದುವು. ಯಾಕಂದರೆ— ಅವನಲ್ಲಿ ಅವೆರಡೂ ಅವಿನಾಭಾವರೂಪಸಂಬಂಧದಿಂದಿರುತ್ತವೆ. ವೇದಗಳಾದರೋ ಪರಮೇಶ್ವರನ ಜ್ಞಾನರೂಪಗಳಾದ್ದರಿಂದ ಅವು ನಿತ್ಯವಾಗಿರಲೇಬೇಕು; ಎಂದೂ ಅವುಗಳಿಗೆ ಅನಿತ್ಯತ್ವವು ಘಟಿಸದು.

ಪ್ರಳಯಸಮಯದಲ್ಲಿ ಜಗತ್ತೆಲ್ಲಾ ಪ್ರಕೃತಿಯಲ್ಲಿ ಅಡಗುವುದು. ಆಗ ಈ ದೃಶ್ಯಮಾನ ಸ್ಥೂಲವಸ್ತುಗಳಲ್ಲಿ ಯಾವುದೂ ಉಳಿಯುವುದಿಲ್ಲ. ಅಂತಹ ಕಾಲದಲ್ಲಿ ಪಠನಪಾಠನ ವ್ಯವಹಾರವಾಗಲಿ ಪುಸ್ತಕಗಳಾಗಲಿ ಏನೊಂದೂ ಇಲ್ಲದಿರುವಾಗ ವೇದಗಳುಳಿಯುವ ಬಗೆ ಹೇಗೆ ಆದ್ದರಿಂದ ವೇದಗಳು ನಿತ್ಯವಾದುವುಗಳಲ್ಲ ? ಎಂದಾಕ್ಷೇಪಿಸುವುದು ಮನುಷ್ಯರ ವ್ಯವಹಾರವನ್ನೂ ಪುಸ್ತಕಗಳನ್ನೂ ಅನುಲಕ್ಷಿಸಿರುವುದು ಸರಿಯೇ, ಆದರೆ ನಾವು ಜ್ಞಾನಮಯಗಳಾದ ವೇದಗಳು ನಿತ್ಯವೆಂದೇ ಹೇಳುತ್ತೇವೆ. ಓಲೆಗಳ ಮೇಲೆ ಬರೆದ ಬರಹವು ಅಳುಕಿ ಹೋಗಬಹುದು. ತಿಳಿವು ಅಳಿವುದೇ ? ಪಠನಪಾಠನ ಪರಂಪರೆಯಡಗಿದರೂ ಜ್ಞಾನವು ಲೋಪವಾಗಬಲ್ಲುದೇ ? ಜ್ಞಾನಮಯವೇದಗಳು ಈಶ್ವರರಲ್ಲಿ ಸದೈವ ವಿದ್ಯಮಾನಗಳಾಗಿರುತ್ತವೆ. ಪರಮಾತ್ಮನ ಜ್ಞಾನವು ನಿತ್ಯವೂ ಅವ್ಯಭಿಚಾರಿಯೂ ಆದುದಷ್ಟೇ !

ಇನ್ನು 'ವೇದಗಳು ನಿತ್ಯವಾದುವು' ಎಂಬ ಮಾತು ಯಾರಿಗೆ ಒಪ್ಪಿಗೆಯಿಲ್ಲವೋ ಅಂತಹ ವಾದಿಗಳು ಪೂರ್ವದಲ್ಲಿಯೂ ಇದ್ದರು. ಈಗಲೂ

ಇರುತ್ತಾರೆ. ಮುಂದಾದರೂ ಇರುವವರೇ. ಏಕೆಂದರೆ ಸೂಕ್ಷ್ಮಬುದ್ಧಿಗೇ ಸೂಕ್ಷ್ಮಾರ್ಥಜ್ಞಾನವಾಗುವುದೇ ಹೊರತು ಸ್ಥೂಲಬುದ್ಧಿಗಾಗದು. ಬುದ್ಧಿಯು ಸೂಕ್ಷ್ಮವಾಗುವುದಕ್ಕೆ ಶಾಸ್ತ್ರಸಂಸ್ಕಾರವೂ ವಿಹಿತಸದಾಚಾರವೂ ಎಂಬಿವುಗಳ ಅವಶ್ಯಕತೆಯುಂಟು. 'ವೇದವು ನಿತ್ಯವಾದುದು' ಎಂಬುದರ ಅರ್ಥವು ಸೂಕ್ಷ್ಮತರವಾಗಿದೆ. ಅದು ಲೌಕಿಕ ಪಂಡಿತರಿಗಾದರೂ ಒಮ್ಮೆಗೇ ಗೊತ್ತಾಗುವುದಿಲ್ಲ: ಪ್ರತ್ಯಕ್ಷ ಪ್ರಮಾಣದಿಂದ ಸ್ಥೂಲಪದಾರ್ಥಗಳು ಕಾಣಲ್ಪಡುತ್ತವೆ, ಸೂಕ್ಷ್ಮವೂ ವಿಪ್ರಕೃಷ್ಟವೂ (ದೂರವಿರುವುದೂ) ವ್ಯವಹಿತವೂ ಆದ ಪದಾರ್ಥವು ಇಂದ್ರಿಯಗಳಿಗೆ ವಿಷಯ (ಗೋಚರ) ವಾಗುವುದಿಲ್ಲ. ಈ ಬಗ್ಗೆ ಸಾಂಖ್ಯರ ಅಭಿಪ್ರಾಯವನ್ನು ವಿವೇಚನೆಯ ನೆರವಿಗಾಗಿ ನಾವಿಲ್ಲಿ ತೋರಿಸುತ್ತೇವೆ. ಪ್ರಕೃತಿಯು, ಮಹತ್ತು ಮೊದಲಾದ ಸೂಕ್ಷ್ಮತರ ಪದಾರ್ಥಗಳಲ್ಲಿ ಪ್ರತ್ಯಕ್ಷಪ್ರಮಾಣದ ವೃತ್ತಿಯು ಸಂಭವಿಸದಿರಲು ಯಾವ ಯಾವ ಕಾರಣಗಳಿರುವುವೆಂಬುದನ್ನು ನಿರ್ದೇಶಿಸುವ ಅಪೇಕ್ಷೆಯಿಂದ ಸಾಂಖ್ಯಕಾರಿಕಾಕಾರನಾದ ಈಶ್ವರ ಕೃಷ್ಣನು ನುಡಿವುದೇನೆಂದರೆ—

**ಅತಿದೂರಾತ್ಸಾಮೀಪ್ಯಾದಿನ್ದ್ರಿಯ ಘಾತಾನ್ಮನೋಽನವಸ್ಥಾನಾತ್ ।**
**ಸೌಕ್ಷ್ಮ್ಯಾದ್ವ್ಯವಧಾನಾದಭಿಭವಾತ್ಸಮಾನಾಭಿಹಾರಾಚ್ಚ ॥೭॥**

(೧) ಆಕಾಶದಲ್ಲಿ ಬಹಳ ಮೇಲಕ್ಕೆ ಹಾರಿಹೋದ ಹಕ್ಕಿಯು ಕಣ್ಣಿಗೆ ಕಾಣಿಸದಿರಲು, ಅತಿದೂರತ್ವವೇ ಕಾರಣವಾಗಿದೆ; ಹಾಗೂ ಆ ಹಕ್ಕಿಯು ಶರೀರದ ಅಲ್ಪತ್ವವೂ ಅದರ ಅತಿದೂರತ್ವದ ಸಹಕಾರಿ ಕಾರಣವಾಗಿರುವುದು, ಏಕೆಂದರೆ— ವಸ್ತುವಿನ ಕೇವಲ 'ದೂರತ್ವ' ವೇ ಪ್ರತ್ಯಕ್ಷಪ್ರಮಾಣದ ಅಪ್ರವೃತ್ತಿಗೆ ನಿಮಿತ್ತವೆನ್ನುವುದಾದರೆ ಅತಿದೂರದಲ್ಲಿರುವ ಸೂರ್ಯ, ಧ್ರುವನಕ್ಷತ್ರ ಮುಂತಾದ ಪದಾರ್ಥಗಳು ಕಾಣಲ್ಪಡುತ್ತಿರಲಿಲ್ಲವಾದುದರಿಂದ ಅಲ್ಪಪರಿಮಾಣವುಳ್ಳವಸ್ತುವು ಅತಿದೂರದಲ್ಲಿರುವುದಾದರೆ ಅದರ ಪ್ರತ್ಯಕ್ಷಜ್ಞಾನವಾಗುವುದಿಲ್ಲವೆಂದರಿಯಬೇಕು.

(೨) ಕಣ್ಣಿಗೆ ಹಚ್ಚಿದ ಕಾಡಿಗೆಯು ಅಥವಾ ಕಣ್ಣಿನಲ್ಲಿ ಸೇರಿದ ಕರ್ಪೂರಾದಿಗಳ ಕಣವು ಮುಂತಾದುದು ಅತಿಸಾಮೀಪ್ಯಮೂಲಕ ಕಣ್ಣಿಗೆ ಕಾಣಿಸುವುದಿಲ್ಲ.

(೩) ಇಂದ್ರಿಯ ಗೋಲಕದ ಉಪಘಾತವಾದರೂ ವಸ್ತುವಿನ ಪ್ರತ್ಯಕ್ಷಜ್ಞಾನ (ಇಂದ್ರಿಯಗೋಚರ) ವಾಗುವುದಿಲ್ಲ. ಉಪಘಾತವೆಂದರೆ,

ಪ್ರಾಯಶಃ ನಾಶವೆಂದೇ ತಿಳಿಯಲು ಅಡ್ಡಿಯಿಲ್ಲ; ಕಣ್ಣು, ಕಿವಿ, ಮೂಗು ಮೊದಲಾದ ಇಂದ್ರಿಯಗೋಲಕಗಳಲ್ಲಿ ವಿಕಾರವುಂಟಾಗುವುದರಿಂದ ಏನೂ ಕಾಣಲ್ಪಡುವುದಿಲ್ಲ. ತುಸುವಾದರೂ ಕೇಳಿಬರುವುದಿಲ್ಲ, ವಾಸನೆಯು ತಗಲುವುದಿಲ್ಲವೆಂದು ಹೇಳುವ ಸಂಗತಿಯು ಪ್ರಸಿದ್ಧವಾಗಿದೆ.

(೪) ಮನವು ಅನವಸ್ಥಿತವಿದ್ದಾಗಲೂ ಪ್ರತ್ಯಕ್ಷಪ್ರಮಾಣ ಪ್ರವೃತ್ತಿಯು ಘಟಿಸದು; ಹೇಗೆಂದರೆ ಮನಸ್ಸು ಚಿಂತನಾದಿಗಳಲ್ಲಿ ಬೆರೆದಿರಲು ಕಿವಿಗಳು ಮುಚ್ಚಲ್ಪಡದಿದ್ದಾಗ್ಯೂ ಸಮೀಪದ ಶಬ್ದವು ಸಹ ಕೇಳಿಬರುವುದಿಲ್ಲ. ಇದರಿಂದ ಮನವು ಒಂದು ಇಂದ್ರಿಯದೊಡನೆ ಸಂಯುಕ್ತವಾಗಿರಲು ಮತ್ತೊಂದಿಂದ್ರಿಯದ ವಿಷಯಗ್ರಹಣವೆಂಬ ಕಾರ್ಯವು ಸಂಭವಿಸದೆಂಬುದೂ ಸಿದ್ಧವಾಗುವುದು. ಈ ಬಗ್ಗೆ **'ಅನ್ಯತ್ರಮನಾ ಅಭೂವಂ ನಾಶ್ರೌಷಮ್ । ಅನ್ಯತ್ರಮನಾ ಅಭೂವಂ ನಾಪಶ್ಯಮ್ ।'**— ನನ್ನ ಮನಸ್ಸು ಬೇರೊಂದು ವಿಷಯದೊಳಾಸಕ್ತವಾಗಿದ್ದುದರಿಂದ ನಾನದನ್ನು ಕೇಳಲಿಲ್ಲ, ನೋಡಲಿಲ್ಲವೆಂಬ ಶ್ರುತಿವಚನವೂ ಇದೇ ಮಾತನ್ನು ಹೇಳುವುದು.

(೫) ಪ್ರತ್ಯಕ್ಷಪ್ರಮಾಣದ ಅಪ್ರವೃತ್ತಿಗೆ ಸೂಕ್ಷ್ಮತ್ವವೆಂಬುದೂ ಕಾರಣವಾಗಿದೆ. **'ಇಂದ್ರಿಯಾಯೋಗ್ಯತ್ವಂ ಸೂಕ್ಷ್ಮತ್ವಂ'** । ಯಾವ ಪದಾರ್ಥವು ಇಂದ್ರಿಯಗಳಿಗೆ ವಿಷಯವಾಗಲು ಯೋಗ್ಯವಾದುದಲ್ಲವೋ ಅದು ಸೂಕ್ಷ್ಮವೆನಿಸುವುದು. ಇಂತಹ ಸೂಕ್ಷ್ಮಪದಾರ್ಥಗಳಲ್ಲಿ ಪ್ರತ್ಯಕ್ಷದ ಪ್ರವೃತ್ತಿಯಾಗಲು ಶಕ್ಯವಿಲ್ಲ.

(೬) 'ವ್ಯವಧಾನ' ವೆಂಬುದು ಪ್ರತ್ಯಕ್ಷದ ಪ್ರವೃತ್ತಿಗೆ ಪ್ರತಿಬಂಧಕವಾಗಿದೆ. ವ್ಯವಧಾನವೆಂದರೆ, ಅಡ್ಡಿಯು; ಗೋಡೆ, ಪರದೆ, ಗಿಡ, ಗುಡ್ಡ ಮೊದಲಾದುವು ನಡುವಿರುವಣವು: ನಡುವೆ ಗೋಡೆಯಿರಲು ಅದರ ಮುಂದಿನ ಒಡವೆ ತೋರದು. ಆದ್ದರಿಂದ ಗೋಡೆಯು ವ್ಯವಧಾನವೆನಿಸುವುದು; ಹೀಗೆ ಪರದೆ ( ಜವನಿಕೆ ) ಯು, ಗಿಡವು ಮುಂತಾದವುಗಳಿಗೂ ವ್ಯವಧಾನತ್ವವಿದೆ; ಈ ವ್ಯವಧಾನವು ಪ್ರತ್ಯಕ್ಷಜ್ಞಾನವನ್ನು ಪ್ರತಿಬಂಧಿಸು ( ಅಡ್ಡಿಮಾಡು ) ವುದು.

(೭) 'ಅಭಿಭವ' ವೆಂಬುದೂ ಪ್ರತ್ಯಕ್ಷಪ್ರತಿಬಂಧಕವು. ಬಲವಾದ ಸಜಾತೀಯ ಪದಾರ್ಥದ ಸಂಬಂಧವಾಗುವಿಕೆಯು ಅಭಿಭವವೆನಿಸುವುದು; ಹೇಗೆಂದರೆ, ಸೂರ್ಯಪ್ರಕಾಶ ಸಂಬಂಧಮೂಲಕ ಚಂದ್ರಪ್ರಭೆಯು ಕಾಣಿಸುವುದಿಲ್ಲ; ನಕ್ಷತ್ರಗಳೂ ತೋರುವುದಿಲ್ಲ.

(೮) 'ಸಮಾನಾಭಿಹಾರ' ವು ಸಮಾನಗುಣಗಳಿಂದ ಕೂಡಿದ ಪದಾರ್ಥಗಳ ಬೆರಿಕೆಯು; ಎಮ್ಮೆಯ ಹಾಲಿನೊಡನೆ ಬೆರೆವ ಹಸುವಿನ (ಆಕಳದ) ಹಾಲು ಬೇರೆಯಾಗಿ ಅರಿಯಲುಬಾರದು.

(೯) 'ಅನುದ್ಭವ' ವೆಂದರೆ, ಭವಿಷ್ಯತ್ಕಾರ್ಯಗಳು ಸೂಕ್ಷ್ಮರೂಪ ದಿಂದ ಉಪಾದಾನ ಕಾರಣದಲ್ಲಿರುವವು; ಮುಂದೊದಗುವ ಕಾರ್ಯ ರೂಪವಾದ ಕೊಡವು ಮೊದಲು ಮಣ್ಣೆಂಬುಪಾದಾನದಲ್ಲಿ 'ಅನುದ್ಭವ' ವಾಗಿರುವುದು.

ಈ ರೀತಿಯಾಗಿ, ಸಾಂಖ್ಯರು ಪ್ರತ್ಯಕ್ಷಪ್ರಮಾಣದ ಅಪ್ರವೃತ್ತಿಯ ಒಂಬತ್ತು ಕಾರಣಗಳನ್ನು ಹೇಳುವರು; ಅವುಗಳಲ್ಲಿ ಅನೇಕ ಕಾರಣಗಳು ಸರ್ವವಾದಿಗಳಿಗೂ ಸಂಮತವಾಗುವಹಾಗಿವೆ. ಪ್ರಕೃತದಲ್ಲಿ, ವೇದದ ನಿತ್ಯತ್ವವೆನ್ನುವುದಾದರೂ ಸೂಕ್ಷ್ಮತರವಾದರ್ಥವನ್ನೊಳಗೊಂಡಿದೆ. ಹೀಗೆ ಅದು ಸೂಕ್ಷ್ಮಕ್ಕಿಂತಲೂ, ಸೂಕ್ಷ್ಮತರವಾಗಿರುವ ಕಾರಣದಿಂದೇ ನಾವು ಅದನ್ನು ಸೂಕ್ಷ್ಮತರವೆಂದು ಪ್ರತಿಪಾದಿಸುತ್ತೇವೆ.

ಸೂಕ್ಷ್ಮವೂ, ದೂರವೂ, ನಡುವೆಯೂ, ಅತಿಸಮೀಪವೂ ಇರುವ ಪದಾರ್ಥವು ಅನುಮಾನದಿಂದಾದರೂ ವಿಷಯವಾಗಬಹುದು; ಆದರೆ ವೇದನಿತ್ಯತ್ವದ ಅರ್ಥವಾದರೋ ಪ್ರಾಧಾನ್ಯವಾಗಿ ಅನುಮಾನಕ್ಕಾದರೂ ವಿಷಯವಾಗಲಾರದು. ಒಂದಾನೊಂದು ವಸ್ತುವು ಸಾಕ್ಷಾತ್ತಾಗಿ ಇಂದ್ರಿಯ ಗಳಿಗೆ ವಿಷಯ (ಗೋಚರ) ವಾಗದಿದ್ದರೂ ಲಿಂಗದಿಂದ (ಹೇತುವಿನಿಂದ) ಅದರ ಜ್ಞಾನವು ಸಂಭವಿಸುವುದು. ಹೇಗೆಂದರೆ, ಹೊಗೆಯಿಂದ ಬೆಂಕಿಯು ಅರಿಯಲ್ಪಡುವುದು. ಮಳೆಯಿಲ್ಲದೆ ಹೊಳೆ ಪೂರವು ಬಂದಿರು ವುದನ್ನು ಕಂಡು ಮೇಲ್ಗಡೆ ಮಳೆಯಾಗಿರಬಹುದೆಂಬ ಊಹೆಯಾದರೂ ಆವಶ್ಯಕತೆಯುಂಟು. ಆದರೆ 'ವೇದವು ನಿತ್ಯವಾದುದು' ಎಂಬರ್ಥವು ಅನುಮಾನದಿಂದಾದರೂ ಸಿದ್ಧಿಸದು. ಏಕೆಂದರೆ, ಅನುಮಾನಕ್ಕೆ ಆವಶ್ಯ ವಿರಬೇಕಾದ ವ್ಯಾಪ್ತಿ (ಸಾಹಚರ್ಯನಿಯಮ) ಜ್ಞಾನಾದಿ ಸಾಮಾಗ್ರಿ ಗಳು ಅಲ್ಲಿರುವುದಿಲ್ಲ. ಹಾಗೂ ಪ್ರತ್ಯಕ್ಷಪ್ರಮಾಣಕ್ಕಿಂತ ಅನುಮಾನ ಪ್ರಮಾಣವು ದುರ್ಬಲವಾದುದಷ್ಟೇ! ಪ್ರತ್ಯಕ್ಷಾನುಮಾನಪ್ರಮಾಣಗಳೆರಡೂ ಲೌಕಿಕಗಳಾದ್ದರಿಂದ ಲೋಕವ್ಯವಹಾರಕ್ಕುಪಯೋಗವಾದವುಗಳೂ ದೃಷ್ಟ ವಿಷಯಕಗಳೂ ಆಗಿವೆ. ಶ್ರುತಿಯೆಂಬ ಮೂರನೆಯ ಶಬ್ದಪ್ರಮಾ ಣವು, ಪ್ರಾಮುಖ್ಯವಾಗಿ ಅದೃಷ್ಟಾರ್ಥಗೋಚರದಲ್ಲಿ ಪ್ರಮಾಣವಾಗಿದೆ.

ಆದ್ದರಿಂದ, ವೇದವು ನಿತ್ಯವಾದುದೆಂಬ ವಿಷಯವು ಪ್ರತ್ಯಕ್ಷಾನುಮಾನ ಪ್ರಮಾಣಗಳಿಂದ ತಿಳಿಯಲ್ಪಡದಾದಕಾರಣ ಸೂಕ್ಷ್ಮತರವಾಗಿದೆ.

ಆ ಮಹೇಶ್ವರನು ಸೃಷ್ಟಿಯಾರಂಭದಲ್ಲಿ ಸರ್ವಭೂತಗಳ ನಾಮ ರೂಪಗಳನ್ನೂ, ಕರ್ಮದ ಪ್ರವೃತ್ತಿಯನ್ನೂ ವೇದಶಬ್ದಗಳಿಂದೇ ನಿರ್ಮಿಸಿದನು. ಇದೇ ಅರ್ಥವನ್ನು ಮನುಸ್ಮೃತಿಯಲ್ಲಿಯೂ ಕಾಣಬಹುದು. (೧-೨೧)—

**ಸರ್ವೇಷಾಂ ತು ನಾಮಾನಿ ಕರ್ಮಾಣಿಚ ಪೃಥಕ್ ಪೃಥಕ್ ।**
**ವೇದಶಬ್ದೇಭ್ಯ ಏವಾದೌ ಪೃಥಕ್ ಸಂಸ್ಥಾಶ್ಚನಿರ್ಮಮೇ ॥**

ಆ ಮಹೇಶ್ವರನು ಸರ್ವ ವಸ್ತುಗಳ ನಾಮಗಳನ್ನೂ ಕರ್ಮಗಳನ್ನೂ ಲೌಕಿಕ ಸಂಸ್ಥೆಯನ್ನೂ ಬೇರೆ ಬೇರೆಯಾಗಿ ನಿರ್ಮಿಸಿದನು. ಮಹೇಶ್ವರನು ವೇದಶಬ್ದಗಳಿಂದ ಸರ್ವಸೃಷ್ಟಿಯನ್ನು ನಿರ್ಮಿಸಿದನು ಎಂದು ಹೇಳಲ್ಪಡುವ ಮೇಲಿನ ಅಭಿಪ್ರಾಯವನ್ನು ಇನ್ನಿಷ್ಟು ಹೆಚ್ಚಾಗಿ ಅರಿತುಕೊಳ್ಳಬೇಕಾದರೆ ಅದಕ್ಕೆ ಬೀಜಭೂತವಾದ ಶೈವಾಗಮಾರ್ಗವನ್ನು ಶರಣುಹೊಕ್ಕರೇನೇ ನಮ್ಮ ಬಯಕೆಯು ಕೈಗೂಡುವುದು.

ಪ್ರಮಾತೃ, ಪ್ರಮಾಣ, ಪ್ರಮೇಯರೂಪವಾದ ವಿಶ್ವಪ್ರಪಂಚವು ಷಡಧ್ವಮಯವಾಗಿರುವುದು. ವರ್ಣ, ಪದ, ಮಂತ್ರ, ಕಲಾ, ತತ್ತ್ವ, ಭುವನವೆಂಬಿವೇ ಆರಧ್ವಗಳು; ಇವುಗಳಲ್ಲಿ ಮೊದಲಿನವು ಮೂರು ವಾಚಕ (ಶಬ್ದ) ರೂಪವಾದುವೂ, ಉಳಿದ ಮುಂದಿನ ಮೂರು ವಾಚ್ಯ (ಅರ್ಥ) ರೂಪವಾದವೂ ಎಂದು ವಿವೇಕವು. ಪರಶಿವನು ಶಕ್ತಿಯುಕ್ತನು, ಆದ್ದರಿಂದ ಆ ಶಿವನು ತಾನು ಅರ್ಥರೂಪನೂ ಅವನ ಸ್ವಾತ್ಮೀಯಶಕ್ತಿಯು ಶಬ್ದರೂಪವೂ ಆಗಿರುವುದರ ಭಾವವನ್ನು ಹಿಂದೆ ನಾವು 'ಶಬ್ದಜಾತಮಶೇಷಂ ತು' ಎಂಬ ಶಿವಪುರಾಣವಾಕ್ಯವನ್ನು ಉಲ್ಲೇಖಿಸುವ ಪೂರ್ವಕವಾಗಿ ಸ್ಪಷ್ಟೀಕರಿಸಿದ್ದೇವೆ. ಈಗಾದರೂ ಶಬ್ದಾರ್ಥರೂಪವಾದ ವಿಶ್ವಪ್ರಪಂಚವು ಆ ಶಿವಶಕ್ತಿವಿಲಾಸವೆಂದೇ ಹೇಳುತ್ತೇವೆ. ಆ ಮಹೇಶ್ವರನಲ್ಲಿ ಸ್ವಾತ್ಮೀಯ ಶಕ್ತಿಯ ಈಷಚ್ಚಲನೆಯುಂಟಾಗುವಿಕೆಯೇ 'ನಾದ'ವೆನಿಸಿತು, ಅಂದರೆ ಸೃಷ್ಟಿಮೂಲಾರಂಭದಲ್ಲಿ ಚಿಚ್ಛಕ್ತಿಯಸ್ಫುರಣದಿಂದ ಶುದ್ಧಮಾಯೆಗೆ (ಪರಬಿಂದುವಿಗೆ) ಕಾರ್ಯೋನ್ಮುಖತೆಯ ಚಲನೆಯುಂಟಾದುದೇ 'ನಾದ'ವು; ಈ 'ನಾದ'ವೇ ಶಬ್ದತತ್ತ್ವಕ್ಕೆ ಮೂಲಭೂತವಾಗಿದೆ. ನಾದಕಾರಿಕೆಯಲ್ಲಿ ಶ್ರೀರಾಮಕಂಠಾಚಾರ್ಯರು—

**ಸ ಮಹಾಮಾಯಾಜನ್ಯೋ ನಾದಃ ಪರಮಾರ್ಥವಾಚಕೋ ಭವತಿ ।**
**ಯೇನ ಸ್ಥೂಲಂ ಶಬ್ದಂ ಮನ್ತ್ರಂ ತನ್ತ್ರಾತ್ಮಕಂ ಭವೇದ್ವ್ಯಾಪಿ ॥**

ಎಂದು ನಿರೂಪಿಸುವುದರಿಂದ, ಶಿವತತ್ತ್ವದಲ್ಲಿ ತತ್ಸ್ವರೂಪಭೂತವೇ ಆದ ಶಿವಬೋಧರೂಪ ವಿಮಲಜ್ಞಾನವು ಮೊತ್ತಮೊದಲು ನಾದರೂಪದಿಂದ ಸೂಕ್ಷ್ಮವಾಗಿ ಆವಿರ್ಭವಿಸಿದುದಾಗಿ, ಅದುವೇ ಮುಂದೆ ಸ್ಥೂಲ ಶಬ್ದರೂಪವನ್ನು ಹೊಂದಿ ಮಂತ್ರ (ವೇದ) ತನ್ತ್ರ (ಸಿದ್ಧಾನ್ತ) ವಾಙ್ಮಯ ರೂಪವಾಗಿ ಪಸರಿಸಿತೆಂದು ಸಿದ್ಧವಾಗುವುದು. ಧರೆ ಮೊದಲಾಗಿ ಮೂಲಬಿಂದುವೇ ಕಡೆಯಾದ ಸರ್ವತತ್ತ್ವಗಳಿಗೂ ಪರಶಿವನು ಮೂಲಭೂತನಾದ್ದರಿಂದ ಅವನಿಗೆ ' ಶಿವತತ್ತ್ವ' ವೆಂಬ ಸಂಜ್ಞೆಯುಂಟಾಗಿದೆ. ಒಂದೆಯಾದ ಈ ಶಿವತತ್ತ್ವವು ನಿಷ್ಕಲ ( ಅವ್ಯಕ್ತ ) ವಾಗಿದೆ. ಇದರ ( ಶಿವತತ್ತ್ವದ ) ವ್ಯಕ್ತತೆಯೇ 'ಸಕಲ' ವೆಂದು ಹೇಳಿಸಿಕೊಳ್ಳಲ್ಪಡುವುದು. ಇದುವೇ ಈಶ್ವರತತ್ತ್ವವು; ಇದನ್ನೇ ಮಹೇಶ್ವರನೆಂದು ಕೊಂಡಾಡುವರು. ಈ ಮಹೇಶ್ವರನ ನಿಷ್ಕಲಸ್ವರೂಪವನ್ನೇ 'ಸ್ವಯಂಭು' ಮುಂತಾದ ಸಬ್ದಗಳಿಂದ ಶ್ರುತಿಸ್ಮೃತೀತಿಹಾಸಪುರಾಣಗಳು ಬಣ್ಣಿಸುತ್ತವೆ. ಆದ್ದರಿಂದ ಈ ಮಹೇಶ್ವರನೇ ವೇದಶಬ್ದಗಳಿಂದ ಸರ್ವಪ್ರಪಂಚವನ್ನು ನಿರ್ಮಿಸಿದನೆಂದು ಹೇಳುವುದು ನಿರವದ್ಯವಾದುದು. ಹಾಗೂ ಪರಶಿವನ ವಿಮಲಜ್ಞಾನವೇ ಕ್ರಮವಾಗಿ ಸ್ಥೂಲಶಬ್ದರೂಪವನ್ನು ಧರಿಸಿದ ಶ್ರುತಿಗೆ ನಿತ್ಯತ್ವವು ನಿಷ್ಪ್ರತ್ಯೂಹವಾಗಿದೆ. ಈ ವಿಷಯದಲ್ಲಿ ಶೈವಾಗಮರಹಸ್ಯಜ್ಞರು ಏನುಸುರುವರೋ ಅದನ್ನಷ್ಟು ನೋಡಿ ಮುಂದೆ ಸಾಗುವಾ ! ಈಶಾನ ಶಿವಾಚಾರ್ಯರು ' ಪದ್ಧತಿ ' ಯ ಕ್ರಿಯಾಪದದ ಪ್ರಥಮಪಟಲದಲ್ಲಿ ಹೀಗೆ ಹೇಳುತ್ತಾರೆ.

**ಸ ಶಿವಃ ಸ್ವಮುಖೋದ್ಭೂತೈರಾಗಮೈಸ್ತು ಪರಾಪರೈಃ ।**
**ಅನುಗೃಹ್ಣಾತಿ ಹಿ ಜಗದ್ಭೋಗಮೋಕ್ಷಪ್ರಸಿದ್ಧಯೇ ॥ ೪೩ ॥**

ಆ ಶಿವನು ಜಗತ್ತಿನಲ್ಲಿಯ ಜೀವರಿಗೆ ಭೋಗ ಮೋಕ್ಷಗಳು ಸಿದ್ಧಿಸುವುದಕ್ಕೋಸ್ಕರ ತನ್ನ ಮುಖಗಳಿಂದ ಪರಅಪರ ಆಗಮ ( ಶ್ರುತಿ ) ಗಳನ್ನು ಹುಟ್ಟಿಸುವವನಾಗಿ ಸರ್ವರನ್ನು ಅನುಗ್ರಹಿಸುತ್ತಾನೆ. ಮತ್ತು—

**ಅನಾದಿಃ ಸ ಶಿವೋ ಮುಖ್ಯೋ ಯಥಾಽನ್ಯೇಭ್ಯೋ ವಿಲಕ್ಷಣಃ ।**
**ತಥಾ ತದ್ವದನೋದೀರ್ಣಾ ವಾಚೋಽನ್ಯೇಭ್ಯೋ ವಿಲಕ್ಷಣಾಃ ॥**

**ಶಿವಾಗಮಾಶ್ಚ ವೇದಾಶ್ಚ ನಿತ್ಯಾ ಏವ ಪ್ರಮಾಣತಃ ।**
**ನಿತ್ಯಾಃ ಶಿವಾಗಮಾ ವೇದೈಃ ಶಿವೇಸಾದಾವಭೇದತಃ ॥**
**ನಿತ್ಯಸ್ಥಿತಾಸ್ತ್ವಭಿವ್ಯಕ್ತಾಸ್ತಸ್ಮಿಂಸ್ತೇಽಸಾದಯೋಽಯತಃ ॥**

ಅನಾದಿಯಾದ ಆ ಶಿವನು ಹೇಗೆ ಅನ್ಯರಿಗಿಂತ ವಿಲಕ್ಷಣನಾಗಿರುವನೋ, ಹಾಗೇ ಅವನ (ಆ ಶಿವನ) ಮುಖಗಳಿಂದುದಯಿಸಿದ ವಾಕ್ಯಗಳಾದರೂ ಅನ್ಯರ ವಾಕ್ಯಗಳಿಗಿಂತ ವಿಲಕ್ಷಣವಾದುವು; ಆದುದರಿಂದ ಶಿವನ ವಚನಗಳೆನಿಸುವ ಶಿವಾಗಮಗಳೂ ವೇದಗಳೂ ನಿತ್ಯವಾದುವೂ ಪ್ರಮಾಣಭೂತಗಳೂ ಆಗಿವೆ. ಏಕೆಂದರೆ, ಶಿವನು ಅನಾದಿ ಸಂಸಿದ್ಧನೂ, ನಿತ್ಯನೂ ಆಗಿದ್ದಾನೆ. ಅವನಲ್ಲಿ ಅಭೇದರೂಪದಿಂದ ಶಿವಾಗಮಗಳು ವೇದಗಳೊಂದಿಗೆ ಅನಾದಿನಿತ್ಯಸಿದ್ಧಗಳಾಗಿರತಕ್ಕುವು. ಹೀಗೆ ಅನಾದಿಯೂ, ನಿತ್ಯನೂ ಆದ ಶಿವನಿಂದ ಅಭಿವ್ಯಕ್ತಗಳಾದ ಆಗಮಗಳೂ ವೇದಗಳೂ ನಿತ್ಯಪ್ರಮಾಣಗಳಾಗಿವೆ.

ಈ ಮೇಲಿನ ವಿಚಾರಸರಣಿಯನ್ನೇ ಸಮರ್ಥಿಸುವ ವಿಚಾರ ಸೂತ್ರದ ಶೈಲಿಯನ್ನೂ ನಾವಿಲ್ಲಿ ತೋರಿಸಿರುತ್ತೇವೆ. ಬಾದರಾಯಣ ಮುನಿಯು — **'ಶಬ್ದ ಇತಿಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್'** (ಬ್ರ. ಸೂ. ೧-೩-೧೮). ಎಂದು ಸೂತ್ರಿಸಿದ್ದಾನೆ. ಈ ಸೂತ್ರದಲ್ಲಿ ಪರಬ್ರಹ್ಮಾಭಿಧಪರಶಿವನು ವೇದ (ನಾದದ ಪರಿಣಾಮ ರೂಪವಾದ ಶಬ್ದತತ್ತ್ವ) ಪೂರ್ವಕವಾಗಿಯೇ ವಿಶ್ವಪ್ರಪಂಚವನ್ನು ನಿರ್ಮಿಸುವನೆಂದು ಹೇಳಲ್ಪಟ್ಟಿದೆ. ಇದರ ತಾತ್ಪರ್ಯವೇನೆಂದರೆ, ಇಂದ್ರ, ವಸು, ರುದ್ರ ಮೊದಲಾದ ದೇವತೆಗಳಿಗೆ ಬೇರೆ ಬೇರೆ ಶರೀರಗಳಿರುವುವಾದ್ದರಿಂದ ಆ ಎಲ್ಲ ದೇವತೆಗಳೂ ಶರೀರಾದಿಗಳುಳ್ಳವರೆಂದು ಪೂರ್ವ ಸೂತ್ರದಿಂದ ಹೇಳಲ್ಪಡಲು ಈ ವಿಷಯವಾಗಿ ವಾದಿಯು ಆಕ್ಷೇಪಿಸುತ್ತಾನೆ; ಹೇಗೆಂದರೆ, ಇಂದ್ರಾದಿದೇವತೆಗಳೂ ಶರೀರವುಳ್ಳವರೇ ಎನ್ನುವದಾದರೆ ದೇವಾದಿವಾಚಕಗಳಾದ ಶಬ್ದಗಳಲ್ಲಿ ವಿರೋಧವು ಘಟಿಸುವುದು; ಏಕೆಂದರೆ, ಅನಾದಿಯಾದ ಶಬ್ದವು ಅನಾದಿಯಾದ ಅರ್ಥದೊಡನೆ ನಿತ್ಯಸಂಬಂಧವಿರುವುದನೊಪ್ಪಿ ವೇದವು ತನ್ನರ್ಥದಲ್ಲಿ ಎರಡನೆಯ ಪ್ರಮಾಣದ ಅಪೇಕ್ಷೆಮಾಡುವುದಿಲ್ಲವಾದಕಾರಣ ಅದರಲ್ಲಿ ನಿರಪೇಕ್ಷಪ್ರಾಮಾಣ್ಯವು ಸಿದ್ಧಿಸುವುದೆಂದು ಪೂರ್ವಮೀಮಾಂಸೆಯಲ್ಲಿ ಪ್ರತಿಪಾದಿಸಲ್ಪಟ್ಟಿದೆ. ನೀವಾದರೋ ಈಗ ಇಂದ್ರಾದಿಶಬ್ದಗಳಿಗೆ 'ಅನಿತ್ಯ ಶರೀರವ್ಯಕ್ತಿಗಳು' ಎಂಬರ್ಥವನ್ನಂಗೀಕರಿಸುವಿರಿ, ಈ ನಿಮ್ಮ ನುಡಿಯಿಂದ

ಶಬ್ದಾರ್ಥಗಳ ಸಂಬಂಧವೂ ಅನಿತ್ಯವೆನಿಸುವುದಲ್ಲವೆ ? ಶಬ್ದವು ನಿತ್ಯ ವಾಗಿರುವಂತೆ ಅವರ ಅರ್ಥವಾದರೂ ನಿತ್ಯವಾಗಿರುವುದಾದರೆ, ಅವೆರಡರ ಸಂಬಂಧವೂ ನಿತ್ಯವಾದುದೆಂದೊಪ್ಪಬಹುದು ಮೀಮಾಂಸಕರಾದರೋ ನಿತ್ಯವಾದರ್ಥದೊಡನೆ ನಿತ್ಯವಾದ ಶಬ್ದದ ನಿತ್ಯಸಂಬಂಧವನ್ನಂಗೀಕ ರಿಸಿಯೇ ಅವರ ನಿರಪೇಕ್ಷಪ್ರಾಮಾಣ್ಯವನ್ನು ಹೇಳುತ್ತಾರೆ. ಆದರೆ, ಈ ನಿಮ್ಮ ಹೇಳುವಿಕೆಯ ಮೇರೆಗೆ ಇಂದ್ರಾದಿ ಶಬ್ದಗಳ ಸಂಬಂಧವು ಸಶರೀರವ್ಯಕ್ತಿಗಳೊಡನಿರುವುದೆಂದು ತಿಳಿದುಬರುವುದು; ಶರೀರಗಳಾದರೋ ಹುಟ್ಟತಕ್ಕವುಗಳು, ನೀವು ಹುಟ್ಟುವ ದೇಹವ್ಯಕ್ತಿಗಳನ್ನು ಪ್ರತ್ಯಕ್ಷ ಪ್ರಮಾಣದಿಂದರಿತೇ ' ಈ ಶರೀರಕ್ಕೆ ಹರದತ್ತನೆನ್ನಬೇಕು ' ' ಇವನಿಗೆ ಧನದಮಿತ್ರನೆನ್ನಬೇಕು ' ಎಂಬ ಸಂಕೇತಮಾಡುವಿರಿ, ಅಂದರೆ ಆ ಆ ವ್ಯಕ್ತಿಗಳು ಹುಟ್ಟಿದ ಬಳಿಕ ಆ ಆ ಹೆಸರಿಡುವಿರಷ್ಟೇ ! ಹೀಗೆ ಆ ಆ ಶಬ್ದಗಳಿಗೆ ಬೇರೊಂದು ಪ್ರಮಾಣದ ಹಂಗಿರುವುದು ಕಂಡು ಬರುತ್ತದೆ. ಇದರಿಂದ ಇಂದ್ರಾದಿಗಳಿಗೂ ಶರೀರವಿರುವುದೆನ್ನುವಲ್ಲಿ ಅವರ ಹೆಸರಾದರೂ ಅವರವರ ಶರೀರೋತ್ಪತ್ತಿಯ ತರುವಾಯವೇ ಸಂಭವಿ ಸುವುದೆಂಬುದು ಸ್ಪಷ್ಟವಾಗುವುದಾದ್ದರಿಂದ ಇಂದ್ರಾದಿ ದೇವತೆಗಳು ಸಶರೀರ ಗಳೆಂದೊಪ್ಪಿದರೆ ಆ ಇಂದ್ರಾದಿ ಶಬ್ದಗಳಲ್ಲಿ ಹೇಗೆ ವಿರೋಧವಾ ಗುವುದು ?

ಎಂಬ ಪೂರ್ವಪಕ್ಷವು ' **ಶಬ್ದ ಇತಿಚೇತ್** ' ಎನ್ನುವ ಸೂತ್ರಾ ವಯವದಿಂದ ಸಂಭವಿಸಲು, ಸಿದ್ಧಾಂತಿಯಾದ ಬಾದರಾಯಣಮುನಿಯು ' **ನಾತಃಪ್ರಭವಾತ್** ' ಎಂಬ ಮೊದಲಾದ ಸೂತ್ರಾವಯವದಿಂದ ಹೀಗೆ ಸಿದ್ಧಾಂತವನ್ನು ಪ್ರತಿಪಾದಿಸುತ್ತಾನೆ— ' **ಅತಃಪ್ರಭವಾತ್** ' ಅಂದರೆ ವೈದಿಕಶಬ್ದಗಳಿಂದೇ ದೇವತೆಗಳು ಮೊದಲಾಗಿ ಸರ್ವಜಗತ್ತೂ ಉತ್ಪತ್ತಿ ಯಾಗಿರುವುದರಿಂದ ಶಬ್ದಗಳಲ್ಲಿ ವಿರೋಧವಾಗದು. ( ಶಬ್ದಾರ್ಥಗಳ ನಿತ್ಯಸಂಬಂಧವು ಬಾಧಿಸಲ್ಪಡದು ) ವಸು, ರುದ್ರ, ಆದಿತ್ಯ, ವಿಶ್ವದೇವ ಮೊದಲಾದ ದೇವತೆಗಳು ಹುಟ್ಟತಕ್ಕವರಾದ್ದರಿಂದ ಅವರು ಅನಿತ್ಯರೆನಿಸು ವರೆಂದೂ, ಆ ವಸುರುದ್ರಾದಿದೇವತೆಗಳು ( ಅರ್ಥಗಳು ) ಅನಿತ್ಯವಾಗಲು ಅವರ ಹೆಸರಿನ ಶಬ್ದಗಳಾದರೂ ಅನಿತ್ಯವೇ ಎಂದಂಗೀಕರಿಸಬೇಕಾ ಗುವುದೆಂದೂ ನಿನ್ನ ಹೇಳುವಿಕೆಯಲ್ಲವೇ ! ಕೇಳು, ವಸು ಮೊದ ಲಾದ ಶಬ್ದಗಳು ಆಕೃತಿ ( ಜಾತಿ ) ವಾಚಕಗಳಾಗಿರುವುದರಿಂದ ಅವು ವಸುರುದ್ರಾದಿವ್ಯಕ್ತಿಗಳ ಹೇತುವೆನಿಸಿ ಮೊದಲೇ ಸಿದ್ಧವಾಗಿರುತ್ತವೆ.

ಆದ್ದರಿಂದ ಆ ಶಬ್ದಗಳಿಗೆ ಅನಿತ್ಯತ್ವವಿರುವುದಿಲ್ಲ. ಮನುಷ್ಯ, ಪಶು ಮೊದಲಾದ ಶಬ್ದಗಳು ಜಾತಿವಾಚಕಗಳಾಗಿವೆ. ವ್ಯಕ್ತಿವಾಚಕಗಳಲ್ಲ; ಅದುಕಾರಣವೇ ಆ ಶಬ್ದಗಳು ಈಗಿರುವ ಮತ್ತು ಮುಂದೆ ಹುಟ್ಟುವ ಮನುಷ್ಯ ಪಶು ಮೊದಲಾದ ಪ್ರಾಣಿಗಳುತ್ಪತ್ತಿಗಿಂತ ಮೊದಲೇ ಸಿದ್ಧ ವಾಗಿರುವಂತೆ ಅವುಗಳರ್ಥವಾದರೂ ಹೇಗೆ ಇರುತ್ತವೆಯೋ ಹಾಗೆ ಸೃಷ್ಟಿಯಾರಂಭದಲ್ಲಿ ವಸುರುದ್ರಾದಿ ದೇವತೆಗಳ ವ್ಯಕ್ತಿಗಳು ಹುಟ್ಟುವುದ ಕ್ಕಿಂತ ಮುಂಚೇ ಆ ದೇವತೆಗಳ ಜಾತಿವಾಚಕ ಶಬ್ದಗಳೂ ಅವುಗಳ ಬೇರೆ ಬೇರೆ ಅರ್ಥಗಳೂ ಇದ್ದೇ ಇರುತ್ತವೆ. ಏಕೆಂದರೆ, ಶಬ್ದವು ಅರ್ಥ ವಿಲ್ಲದೆ ಹೇಗೆ ಇರಲಾರದೋ ಹಾಗೆ ಅರ್ಥವು ಶಬ್ದವಿಲ್ಲದೆ ಇರಲಾರದು ಎಂಬ ನಿಯಮವಿದೆ. ಈ ಸೃಷ್ಟಿಯು ಸಾದಿಯಾಗಿದ್ದರೆ ಮೊದಲು ಅರ್ಥವು ತರುವಾಯ ಶಬ್ದವು, ಎಂದು ಹೇಳಬಹುದಾಗಿತ್ತು; ಆದರೆ ಸೃಷ್ಟಿಯು ಸಾದಿಯಲ್ಲ. ಅನಾದಿಯು. ಕಾರಣವಿಲ್ಲದೆ, ಕಾರ್ಯವು ಘಟಿಸದಷ್ಟೇ ! ಸೃಷ್ಟಿಯು ಕಾರ್ಯವಾದುದರಿಂದ ಅದರಕಾರಣವು ಮೊದಲೇ ಇರಬೇಕಾಗುವುದು. ಈ ವಿಶ್ವಪ್ರಪಂಚಕಾರ್ಯವು '**ಶಿವಶಕ್ತಿ ವಿಲಾಸ**' ವಲ್ಲವೇ ? ಚಂದ್ರಚಂದ್ರಿಕೆಗಳಂತಿರುವ ಶಿವಶಕ್ತಿಗಳ ಸ್ವರೂಪ ಭೂತಗಳಾದ ಶಬ್ದಾರ್ಥಗಳು ಅನಾದಿಸಿದ್ಧವಾದ್ದರಿಂದ ಅವುಗಳ ನಿತ್ಯ ಸಂಬಂಧಕ್ಕೆ ಚ್ಯುತಿಯಿಲ್ಲ.

ಇನ್ನು, 'ಹರದತ್ತ' ನೆಂಬಾತನು ಹುಟ್ಟಿದಬಳಿಕ ಅವನ ಹೆಸರು ಬುದ್ಧಿಕಲ್ಪಿತವಾದುದರಿಂದ 'ಹರದತ್ತ' ನೆಂಬ ಶಬ್ದವು 'ಹರದತ್ತ'ನು ಎಂಬರ್ಥದೊಡನೆ ಸಂಬಂಧವಾಗುವಂತೆ, ವಸುರುದ್ರಾದಿ ಅರ್ಥಗಳು (ವ್ಯಕ್ತಿಗಳು) ಹುಟ್ಟಿದನಂತರ ಆ ಆ ಹೆಸರುಗಳು ಕಲ್ಪಿಸಲ್ಪಟ್ಟವುಗಳಾಗಿ ಆ ಶಬ್ದಾರ್ಥಗಳ ಸಂಬಂಧವಾಗುತ್ತಿರುವ ಪಕ್ಷದಲ್ಲಿ ಅದು ಪುರುಷಬುದ್ಧಿ ಕಲ್ಪಿತವೆನ್ನಬಹುದಾಗಿದ್ದಿತು, ಹಾಗೂ ಪುರುಷನ ಬುದ್ಧಿಯು ಅನ್ಯ ಪ್ರಮಾಣಾಧೀನವಾದುದು (ಪ್ರತ್ಯಕ್ಷಾದಿಪ್ರಮಾಣಾಂತರಾಪೇಕ್ಷೆಯುಳ್ಳುದು) ಎಂಬೀದೋಷಮೂಲಕ ವೇದದ ನಿರಪೇಕ್ಷಪ್ರಾಮಾಣ್ಯಕ್ಕೆ ಹಾನಿಯೊದ ಗುತ್ತಿತ್ತು; ಆದರೆ, ಈ ನ್ಯಾಯವು ಆದಿಸೃಷ್ಟಿಗೆ ಸಂಬಂಧಪಡುವುದಿಲ್ಲ. ಈ ಮೇಲೆ ನಿರ್ದೇಶಿಸಿದಂತೆ ವಸ್ವಾದಿಶಬ್ದಗಳು ವ್ಯಕ್ತಿವಾಚಕಗಳಾಗಿರದೆ ಜಾತಿವಾಚಕಗಳಾಗಿವೆ, ಪರಶಿವನು ವೇದಶಬ್ದದಿಂದ (ನಾದವೆಂಬ ಅಪರಪರ್ಯಾಯನಾಮವುಳ್ಳ ಶಬ್ದತತ್ತ್ವದಿಂದ) ವಿಶ್ವಪ್ರಪಂಚವನ್ನು ಹುಟ್ಟಿ ಸಿದನು. ಹಾಗೂ, ಅನಾದಿಪರಂಪರಾ ಪ್ರವಾಹರೂಪವಾದ ಈ ಜಗ

ತ್ತನ್ನು ಮಹೇಶ್ವರನ '**ಧಾತಾ ಯಥಾ ಪೂರ್ವಮಕಲ್ಪಯತ್**' ಎಂಬ ಪ್ರಮಾಣಾನುಸಾರವಾಗಿ ಪೂರ್ವಕಲ್ಪದಲ್ಲಿದ್ದ ಪದಾರ್ಥಗಳಂತೆ ಈ ಕಲ್ಪದಾರಂಭದಲ್ಲಿಯೂ ಆ ಆ ಪದಾರ್ಥಗಳನ್ನು ಹುಟ್ಟಿಸುವನಾದ್ದ ರಿಂದ ವೇದವು ನಿತ್ಯವಾಗಿದೆ.

ಇನ್ನು ಶಬ್ದಪ್ರಮಾಣವು ಶಬ್ದದ ಅರ್ಥದ ಮಟ್ಟಿಗೇ ಪ್ರಮಾಣ ವೆನಿಸುವುದು ಪ್ರತ್ಯಕ್ಷಾನುಮಾನಗಳೆಂಬ ಈ ಎರಡು ಪ್ರಮಾಣಗಳ ಸಹಾಯವಿಲ್ಲದೆ ಅದಕ್ಕೆ ಸತ್ಯಾಸತ್ಯಗಳ ನಿರ್ಣಯಸಾಮರ್ಥ್ಯವಿಲ್ಲದುದ ರಿಂದ ನಿರಪೇಕ್ಷಪ್ರಮಾಣವೆನಿಸುವ ವೇದವೆಂಬ ಶಬ್ದಪ್ರಮಾಣದಮೇಲೆ ಹೆಚ್ಚು ಕೈಯೂರಿನಡೆವುದು ನಮಗೆ ಮಾತ್ರಸರಿದೋರದೆಂದು ನಾವು ಖಂಡಿತವಾಗಿ ಹೇಳುತ್ತೇವೆ' ಎಂದಾಕ್ಷೇಪಿಸುವ ಚದುರಚೆನ್ನಿಗರಿಗೊಂದೆರಡು ಚೆಲುವನುಡಿಗಳನ್ನು ಹೇಳುವಾ !

ಪ್ರಮಾಣವೆಂದರೇನು ?— **ಅಜ್ಞಾತಾರ್ಥಜ್ಞಾಪಕತ್ವಂ ಪ್ರಮಾ ಣತ್ವಮ್'** ಎಂದು ಪ್ರಮಾಣದ ಲಕ್ಷಣವಿದೆ: ತಿಳಿಯಲ್ಪಡದ ವಿಷಯ ವನ್ನು ತಿಳುಹಿಸಿಕೊಡುವುದು, ಎಂದು ಈ ವಾಕ್ಯದರ್ಥವು. ಪ್ರತ್ಯಕ್ಷವೂ ಅನುಮಾನವೂ ಎಂಬಿವೆರಡರ ಸಹಾಯದಿಂದೇ ಶಬ್ದಪ್ರಮಾಣವು ಸತ್ಯಾಸತ್ಯಗಳನ್ನು ನಿರ್ಣಯಿಸುವಲ್ಲಿ ಸಮರ್ಥವಾಗುವುದಾದರೆ ಮೂರನೆಯ ಪ್ರಮಾಣದ ಆವಶ್ಯಕತೆಯೇ ಇಲ್ಲ; ಬೌದ್ಧರಾದರೂ ನಿಮ್ಮ ಹಾಗೆ ಪ್ರತ್ಯಾಕ್ಷಾನುಮಾನಗಳೆಂಬ ಎರಡೇ ಪ್ರಮಾಣಗಳನ್ನೊಪ್ಪುತ್ತಾರೆ. ಅವರು ಸ್ವತಂತ್ರವಾದ ವೈದಿಕಪ್ರಮಾಣವನ್ನು ಮನ್ನಿಸುವುದಿಲ್ಲ, ಈ ಸಂಗತಿ ಯನ್ನು ಅವರು ಸ್ಪಷ್ಟವಾಗಿಯೇ ಹೇಳುತ್ತಾರೆ; ನೀವು ಮಾತ್ರ ಶಬ್ದಪ್ರಮಾಣವು ಸ್ವತಂತ್ರವಾದುದಲ್ಲವೆಂದೂ ಅದು ಪ್ರತ್ಯಕ್ಷಾನುಮಾನ ಗಳ ಬೆಂಬಲದಿಂದ ಪ್ರಮಾಣವೆನಿಸುವುದೆಂದೂ ಹೇಳುವಿರಿ; ಈ ನಿಮ್ಮ ಹೇಳುವಿಕೆಯಲ್ಲಿಯೂ ಬೌದ್ಧರ ನುಡಿಯಲ್ಲಿಯೂ ವ್ಯತ್ಯಾಸವೇನೂ ಕಂಡು ಬರುವುದಿಲ್ಲ, ಅಥವಾ ಈ ನಿಮ್ಮ ಆಕ್ಷೇಪದ ವಚನಗಳು ನವಮತ ಸಂಪ್ರದಾಯವನ್ನನುಸರಿಸಿಯೇ ಇದ್ದರೂ ಇರಬಹುದು; ಹೇಗೇ ಇರಲಿ !

ಶಬ್ದಪ್ರಮಾಣವು ಅನ್ಯಪ್ರಮಾಣದ ಬೆಂಬಲವುಳ್ಳದ್ದೆನ್ನುವ ಪಕ್ಷದಲ್ಲಿ ಅದು ಸ್ವತಃ ಪ್ರಮಾಣವಾಗಲಾರದು. ಒಬ್ಬಾನೊಬ್ಬ ಮುದುಕನು ಒಂದು ಚಿಕ್ಕಮಗುವಿಗೆ 'ಕುದುರೆಯು ಓಡುತ್ತದೆ' ಎಂದು ಹೇಳಲು, ಆ ಹಸುಳನು 'ಮುತ್ತಾ ! ನೀನು ಅದು ಹೇಗೆ ಹೇಳುತ್ತೀಯೇ ?' ಎಂದು ಕೇಳಿದಾಕ್ಷಣವೇ, ಆ ಮುತ್ತ (ಅಜ್ಜ) ನು ಓಡುತ್ತಿರುವ ಕುದುರೆಯ

ಕಡೆ ಬೊಟ್ಟು ಮಾಡಿ 'ಆಕ್ಕೋ ನೋಡಿದಿಯಾ ?' ಎಂದು ತೋರಿಸಲು ಅದರಿಂದ ಆ ಹುಡುಗನಿಗೆ ಪ್ರತ್ಯಾಕ್ಷಾನುಭವವಾಗುವುದು. ಆದರೆ, "ಸ್ವರ್ಗಕಾಮೋಯಜೇತ" ನಸಪುನರಾವರ್ತತೇ" ಸ್ಥಾಣುಮನ್ಯೇ ನು ಸಂಯನ್ತಿ ಯಥಾಕರ್ಮ ಯಥಾಶ್ರುತಮ್' 'ಧ್ರುವಂಜನ್ಮ ಮೃತಸ್ಯ ಚ' ಎಂಬೀ ಮೊದಲಾದ ವಾಕ್ಯಗಳು ನಿಜವಾದುವೇ ಎಂಬುದು ಹೇಗೆ ? ಎಂದು ಯಾವನಾದರೊಬ್ಬ ಹಿರಿಯನೇ ವಿಚಾರಿಸಿದರೆ ಆ ಶ್ರುತಿ ಸ್ಮೃತಿವಾಕ್ಯಗಳು ಪ್ರಮಾಣಭೂತವಾದುವೆಂಬುದನ್ನು ಅವನಿಗೆ ನಿಶ್ಚಯಮಾಡಿಕೊಡುವುದಕ್ಕೆ ವೈದಿಕರು ಪ್ರತ್ಯಕ್ಷಾನುಮಾನಗಳಲ್ಲಿ ಯಾವುದನ್ನು ಸಹಾಯಕ್ಕಾಗಿ ತೆಗೆದುಕೊಳ್ಳಬೇಕು? ಅವೆರಡೂ ಪ್ರಮಾಣಗಳ ಹಂಗಿನವಲ್ಲದ ಆ ವೈದಿಕವಾಕ್ಯಗಳಿಗೆ ಅಪ್ರಮಾಣವೆನ್ನಬೇಕೋ ? ಅವಕ್ಕೆ ಇತರ ಪ್ರಮಾಣಗಳ ಸಹಾಯವಿಲ್ಲದ್ದರಿಂದ ಅಪ್ರಮಾಣಗಳೇ ಎಂದು ಹೇಳುವುದಾದರೆ "ಶಬ್ದವು ಮೂರನೆಯ ಪ್ರಮಾಣವು" ಎಂದು ಹೇಳುವುದರಲ್ಲಿ ಏನರ್ಥವಿದೆ ?

ಯಾವ ವಾಕ್ಯವು ಅನ್ಯಪ್ರಮಾಣನಿರಪೇಕ್ಷವಾದುದೋ ಅದು ನಿಯಮವಾಗಿ ಸ್ವತಃಪ್ರಮಾಣವೇ ಆಗಿರುವುದು. ವೇದವು ಸ್ವತಃ ಪ್ರಮಾಣವಾಗಿರುವುದಾದಕಾರಣವೇ ಅದು ಅನ್ಯಪ್ರಮಾಣಸಾಪೇಕ್ಷವೆನಿಸಿಕೊಳ್ಳುವುದಿಲ್ಲ; ಈ ವಿಷಯದಲ್ಲಿ ವೈದಿಕಸಾಂಪ್ರದಾಯಿಕರ ಪರಭಾಷೆಯೆಂತಿರುವುದೆಂಬುದನ್ನೂ ಜಿಜ್ಞಾಸಾಬುದ್ಧಿಯುಳ್ಳವರು ಪರಾಮರ್ಶಿಸಬೇಕು. ಸಾಯಣಾಚಾರ್ಯನು ಕೃಷ್ಣಯಜುರ್ವೇದೀಯ ತೈತ್ತಿರೀಯ ಸಂಹಿತೆಯ ಭಾಷ್ಯಾರಂಭದಲ್ಲಿ ವೇದದ ಲಕ್ಷಣವನ್ನು ಹೀಗೆ ಉಲ್ಲೇಖಿಸಿದ್ದಾನೆ— '**ಇಷ್ಟಪ್ರಾಪ್ತ್ಯನಿಷ್ಟಪರಿಹಾರಯೋರಲೌಕಿಕಮುಪಾಯಂ ಯೋ ಗ್ರನ್ಥೋ ವೇದಯತಿ ಸ ವೇದಃ**' ಯಾವ ಗ್ರಂಥವು ಇಷ್ಟವಾದ ಸುಖದ ಪ್ರಾಪ್ತಿಗೂ ಅನಿಷ್ಟವಾದ ದುಃಖದ ಪರಿಹಾರಕ್ಕೂ ಅಲೌಕಿಕೋಪಾಯವನ್ನು ತಿಳುಹಿಸಿಕೊಡುವುದೋ ಅದುವೇ ವೇದವು. ಪ್ರಾಣಿಗಳಿಗೆ ಯಾವಾಗಲೂ ಸುಖವೇ ಇಷ್ಟವು. ದುಃಖವು ಅನಿಷ್ಟವಾಗಿರುವುದರಿಂದ, ತಮಗಿಷ್ಟವಾದ ಸುಖವು ಲಭಿಸಬೇಕೆಂದೂ ಅನಿಷ್ಟವಾದ ದುಃಖದ ಪರಿಹಾರವಾಗಬೇಕೆಂದೂ ಸರ್ವಪ್ರಾಣಿಗಳಿಚ್ಛೆಯಿರುವುದು ಸ್ವಾಭಾವಿಕವು. 'ವೇದವು ಸುಖದ ಪ್ರಾಪ್ತಿಗೂ ದುಃಖದ ನಿವೃತ್ತಿಗೂ ಅಲೌಕಿಕೋಪಾಯಜ್ಞಾನವನ್ನುಂಟುಮಾಡಿಕೊಡುವುದು.' ಎಂಬ ಲಕ್ಷಣ ಬೋಧಕವಾಕ್ಯದಲ್ಲಿರುವ ಅಲೌಕಿಕಪದದಿಂದ ಲೌಕಿಕೋಪಾಯಗಳು

ವ್ಯಾವೃತ್ತಿಗೊಳಿಸಲ್ಪಟ್ಟಿವೆ. ವನಿತೆ, ಗಂಧ, ಪೂಮಾಲೆ ಮೊದಲಾದುವು ಇಲ್ಲವೆ ಅನುಕೂಲಗಳಾದ ಶಬ್ದಾದಿ ವಿಷಯಗಳು ಸುಖಸಾಧನವಾದು ವೆಂಬುದು ಅನುಭವಸಿದ್ಧವಾಗಿರುವಂತೆ ಔಷಧಸೇವನೆ ಮೊದಲಾದುದು ರೋಗಜನ್ಯವಾದ ಅನಿಷ್ಟದುಃಖದ ನಿವೃತ್ತಿಗುಪಾಯವೆಂಬುದೂ ಪ್ರತ್ಯಕ್ಷ ಪ್ರಮಾಣದಿಂದರಿಯಲ್ಪಡುವುದು. ಮತ್ತು, ಅನ್ಯರ ಅನುಭವದ ಮೇಲಿಂದ ತನಗಾದರೂ ಆ ಆ ಉಪಾಯಗಳಿಂದ ಸುಖದ ಪ್ರಾಪ್ತಿಯೂ ದುಃಖದ ನಿವೃತ್ತಿಯೂ ಆಗಬಹುದೆಂಬ ಅನುಮಾನವೂ ಸಂಭವಿಸುವುದು; ಹಾಗೂ ಆ ಅನುಮಿತಿಜ್ಞಾನದಿಂದ ಮನುಷ್ಯನು ಆ ಆ ಉಪಾಯಗಳ ನ್ನಾಶ್ರಯಿಸುತ್ತಿರುವುದೂ ಪ್ರಸಿದ್ಧವಿದೆ. ಇದೇ ಮೇರೆಗೆ ಉತ್ತರ (ಮುಂದಿನ) ಜನ್ಮದ ಸುಖಾದಿಗಳ ಉಪಾಯವನ್ನಾದರೂ ಅನುಮಾನದಿಂದರಿಯ ಬಹುದು; ಆದ್ದರಿಂದ ವೇದವೆಂಬ ಅಲೌಕಿಕೋಪಾಯಭೋಧಕಗ್ರಂಥದ ಹಂಗು ನಮಗೇಕೆ ? ಎಂದು ಶಂಕಿಸಲಾಗದು. ಏಕೆಂದರೆ, ಪ್ರತ್ಯ ಕ್ಷಾನುಮಾನಗಳೆಂಬಿವೆರಡೂ ಲೌಕಿಕಪ್ರಮಾಣಗಳು. ಲೌಕಿಕೋಪಾಯ ಗಳಿಂದ ಲೌಕಿಕಗಳಾದ ಇಷ್ಟಪ್ರಾಪ್ತ್ಯನಿಷ್ಟಪರಿಹಾರಗಳು ಸಂಭವಿಸು ವುವು. ಲೌಕಿಕೋಪಾಯವು ಈ ಜನ್ಮದಲ್ಲಿಯೇ ಉಪಯೋಗವಾಗುವುದೇ ವಿನಾ ಮುಂದಿನ ಜನ್ಮಕ್ಕುಪಯೋಗವಾಗಲಾರದು. ಮತ್ತು, ಅನು ಮಾನದಿಂದ ಮುಂದಿನ ಜನ್ಮದ ಸುಖಾದಿಗಳ ಉಪಾಯಜ್ಞಾನವಾಗು ವುದಾದರೂ ಸಾಮಾನ್ಯವೇ ಅಲ್ಲದೆ ವಿಶೇಷೋಪಾಯಜ್ಞಾನವು ಅನು ಮಾನದಿಂದಾಗಲಾರದು. ಜ್ಯೋತಿಷ್ಟೋಮಾದಿಯಾಗವು ಉತ್ತರ ಜನ್ಮ ದಲ್ಲಿ ಇಷ್ಟವಾದ ಸ್ವರ್ಗವೆಂಬ ಸುಖಕ್ಕೆ ಕಾರಣವಾಗಿರುವುದೆಂದೂ ಕಲಂಜಭಕ್ಷಣವು (ನಂಜುವೆರೆದ ಕಣೆಯಿಂದ ಕೊಲ್ಲಲ್ಪಟ್ಟ ಜಿಂಕೆಯ ಅಗಡುತಿಂಬುದು) ಮೊದಲಾದ ಅಕಾರ್ಯಗಳನ್ನು ಬಿಡುವುದು ಮುಂದಿನ ಜನ್ಮದ ಅನಿಷ್ಟ ಪರಿಹಾರಕ್ಕೆ ಹೇತುವಾಗಿರುವುದೆಂದೂ ಜ್ಞಾನವಾಗಬೇ ಕಾದರೆ ವೇದವನ್ನುಳಿದು ಬೇರೆ ಸಾವಿರ ಅನುಮಾನಗಳಿಂದ ತಾರ್ಕಿಕ ಶಿರೋಮಣಿಗಾದರೂ ಶಕ್ಯವಿಲ್ಲ. ಆದ್ದರಿಂದ 'ಇಷ್ಟಪ್ರಾಪ್ತ್ಯನಿಷ್ಟಪರಿಹಾ ರಗಳಿಗೆ ಅಲೌಕಿಕೋಪಾಯವನ್ನು ಬೋಧಿಸುವ ಗ್ರಂಥವೇ ವೇದವು' ಎಂದು ಹೇಳಲ್ಪಟ್ಟ ವೇದಲಕ್ಷಣವು ನಿರ್ದುಷ್ಟವಾಗಿದೆ.

ಇದೇ ಅಭಿಪ್ರಾಯದ ತಿರುಳನ್ನು ಇನ್ನಿಷ್ಟು ತೆರೆದಿಡುವಾ! 'ಅಜ್ಞಾ ತವಾದ ಅರ್ಥ (ವಿಷಯ) ದಿರವನ್ನು ಸರಿಯಾಗಿ ತಿಳುಹಿಸಿಕೊಡುವುದು; ಎಂದು ಪ್ರಮಾಣದ ಸಾಮಾನ್ಯ ಲಕ್ಷಣವು. ಪ್ರತ್ಯಕ್ಷಪ್ರಮಾಣವು ಅಂದರೆ

ಪ್ರತ್ಯಕ್ಷಜ್ಞಾನಕರಣವು, ಕಣ್ಣು ಮೊದಲಾದ ಇಂದ್ರಿಯಗಳ ಮತ್ತು ಅವು ಗಳಿಗೆ ವಿಷಯವಾದ ಕೊಡ ಮೊದಲಾದ ಪದಾರ್ಥಗಳ ಸಂಯೋಗಾದಿಕದಿಂದುಂಟಾಗುವ ಜ್ಞಾನವು, ಪ್ರತ್ಯಕ್ಷಜಾನವೆನಿಸುವುದು; ಪ್ರತ್ಯಕ್ಷ ಜ್ಞಾನಕ್ಕೆ (ಪ್ರತ್ಯಕ್ಷಪ್ರಮೆಗೆ) ಕರಣ (ಸಾಧನ) ವಾದ ಚಕ್ಷುರಾದಿಕವು ಪ್ರತ್ಯಕ್ಷಪ್ರಮಾಣವು. ಅನುಮಾನಾದಿ ಅನ್ಯಪ್ರಮಾಣಗಳಾದರೂ ಅಜ್ಞಾತಾರ್ಥಬೋಧಕಗಳಾದ್ದರಿಂದ ಅವುಗಳಿಗೂ ಪ್ರಮಾಣಗಳೆನ್ನುತ್ತಾರೆ. ಬೇರೆ ಬೇರೆ ಶಾಸ್ತ್ರಕಾರರು ಬೇರೆ ಬೇರೆ ಪ್ರಮಾಣಗಳನ್ನು ಅಂಗೀಕರಿಸುತ್ತಾರೆ. ಈಗ ಅವುಗಳ ವಿಚಾರದ ಕಡೆಮನೋವೃತ್ತಿಯನ್ನು ಹರಿಯಗೊಡದೆ ವೇದಪ್ರಾಮಾಣ್ಯವೆಂತಿರುವುದೆಂಬುದನ್ನು ಮಾತ್ರ ಹೇಳಬೇಕಾಗಿದೆ,

ಸರ್ವ ಪ್ರಮಾಣಗಳಲ್ಲಿ ಪ್ರತ್ಯಕ್ಷ, ಅನುಮಾನ. ಶಬ್ದವೆಂಬ ಈ ಮೂರು ಪ್ರಮಾಣಗಳೇ ಮುಖ್ಯವಾದುವು. ಅವುಗಳಲ್ಲಿ ಮೊದಲಿನವೆರಡು ಕೇವಲ ಲೌಕಿಕಗಳು, ಅಂದರೆ ಲೋಕವ್ಯವಹಾರದ ಮೇಲಿಂದ ಸಿದ್ಧವಾದವು, ಇಲ್ಲಿ 'ಲೋಕ' ವೆಂಬ ಶಬ್ದವು ಪ್ರಾಣಿವಾಚಕವಾಗಿರುವುದರಿಂದ ಪ್ರತ್ಯಕ್ಷಾನುಮಾನಗಳೆಂಬೆರಡು ಪ್ರಮಾಣಗಳೂ ಪ್ರಾಣಿಗಳ ವ್ಯವಹಾರದಿಂದೇ ಸಿದ್ಧಿಸುತ್ತವೆ. ಮನುಷ್ಯೇತರ (ಪಶುಪಕ್ಷ್ಯಾದಿ) ಪ್ರಾಣಿಗಳೂ ತಮ್ಮ ಚಕ್ಷುರಾದಿ ಇಂದ್ರಿಯಗಳಿಂದ ಇಷ್ಟಾನಿಷ್ಟವಸ್ತುಗಳನ್ನು ತಿಳಿದುಕೊಳ್ಳುವುವು, ಇಷ್ಟೇ ಅಲ್ಲ; ಇಷ್ಟವಸ್ತುವಿನಕಡೆ ಪ್ರವೃತ್ತಿಯೂ ಅನಿಷ್ಟವಸ್ತುವಿನ ಕಡೆ ನಿವೃತ್ತಿಯೂ ಅವುಗಳಲ್ಲಿ ಕಂಡುಬರುವುದು. ಹಾಗೂ, ಅವುಗಳಿಗೆ ಇಷ್ಟಾನಿಷ್ಟ ವಸ್ತುಗಳ ಜ್ಞಾನವು ಕೇವಲ ಇಂದ್ರಿಯಗಳಿಂದೇ ಆಗುವುದಿಲ್ಲ; ಆ ಪಶ್ವಾದಿಗಳು ಹೊರಗಿನ ಕಾರಣಗಳಿಂದ (ಬಾಹ್ಯಸೂಚಕ ಚಿಹ್ನಗಳಿಂದ) ಲೂ ಇಷ್ಟಾನಿಷ್ಟ ವಸ್ತುಗಳನ್ನರಿತುಕೊಳ್ಳುತ್ತವೆ. ಯಾವನಾದರೊಬ್ಬನು ತನ್ನ ಕೈಯಲ್ಲಿ ಒಂದು ಬಗೆಯ ತಿನ್ನಲ್ಪಡತಕ್ಕ ಪದಾರ್ಥವನ್ನು ಹಿಡಿದುಕೊಂಡು ಸೌಮ್ಯಶಬ್ದಗಳಿಂದ ಕರೆಯುತ್ತಾನೆಂಬುದನ್ನು ನೋಡಿದೊಡನೇ ಆಕಳು, ನಾಯಿ, ಬೆಕ್ಕು, ಸಾಕಿದ ಗಿಳಿ, ಪಾರಿವಾಳ ಮುಂತಾದ ಪ್ರಾಣಿಗಳು ಆ ಮನುಷ್ಯನ ಬಳಿಗೆ ಬರುವುವು; ಆದರೆ ಬೇರೊಬ್ಬನು ಕೈಯಲ್ಲಿ ಕೋಲನ್ನು ತೆಗೆದುಕೊಂಡು ಕಣ್ಣು ಕಿಸಿದು ಗಟ್ಟಿಯಾಗಿ ಕೆಟ್ಟ ದನಿಯಿಂದರಚುತ್ತ ತಮ್ಮೆದುರಿಗೆ ಬರುತ್ತಿರುವುದನ್ನು ಕಂಡು ಇವನು ನಮ್ಮನ್ನು ಹೊಡೆಯಲಿಕ್ಕೆ ಬರುವನೆಂದೂಹಿಸಿ ಆ ಸ್ಥಳದಿಂದ ಓಡಿಹೋಗುವುವು. ಇದರಿಂದ

ಮನುಷ್ಯರಂತೆ ಪಶುಪಕ್ಷ್ಯಾದಿ ಪ್ರಾಣಿಗಳಿಗಾದರೂ ಪ್ರತ್ಯಕ್ಷಜ್ಞಾನವಿರುವಂತೆ ಅನುಮಿತಿಜ್ಞಾನವಾದರೂ ಇರುವುದೆಂಬ ಸಂಗತಿಯು ಸಿದ್ಧಿಸುವುದು.

ಯಾವ ಜ್ಞಾನವಾದರೂ ಪ್ರಾಣಿಗಳ ಬುದ್ಧಿತತ್ತ್ವವನ್ನವಲಂಬಿಸಿರುವುದು. ಯಾವನ ಬುದ್ಧಿಯು ಎಷ್ಟು ಶುದ್ಧವೂ ಸುಸಂಸ್ಕೃತವೂ ಆಗಿರುವುದೋ ಅಷ್ಟು ಅವನಿಗೆ ಅಧಿಕಸ್ಪಷ್ಟವೂ ನಿರ್ದುಷ್ಟವೂ ಆದ ಜ್ಞಾನವಾಗುವುದು. ಯಾವನ ಬುದ್ಧಿಯು ಎಷ್ಟು ಅಶುದ್ಧವೂ ಅಸಂಸ್ಕೃತವೂ ಇರುವುದೋ ಅವನ ಜ್ಞಾನವಾದರೂ ಅಷ್ಟೇ ಅಸ್ಪಷ್ಟವೂ, ಅಸ್ಪಷ್ಟತರವೂ, ಅಸ್ಪಷ್ಟತಮವೂ ಇರುವುದೆಂಬ ವಿಷಯದಲ್ಲಿ ಸಂದೇಹವೇ ಇಲ್ಲ. ಅದುಕಾರಣವೇ ಸರ್ವಮನುಷ್ಯರ ಜ್ಞಾನವಾದರೂ ಒಂದೇ ಬಗೆಯಾಗಿರುವುದಿಲ್ಲ. ಅವುಗಳಲ್ಲಿ ಕೆಲವರ ಬುದ್ಧಿಯು ತೀವ್ರವಾಗಿಯೂ ಕೆಲವರ ಬುದ್ಧಿಯು ತೀವ್ರತರವಾಗಿಯೂ, ಕೆಲವರ ಬುದ್ಧಿಯು ತೀವ್ರತಮವಾಗಿಯೂ ಇರುತ್ತವೆ. ಮತ್ತು, ಇದಕ್ಕೆ ವಿಪರೀತವಾಗಿಯೂ ಬೇರೆ ಬೇರೆ ಜನರ ಬುದ್ಧಿಗಳೂ ಮಂದವೂ ಮಂದತರವೂ ಮಂದತಮವೂ ಆಗಿರುವುದನ್ನು ನಾವು ನೋಡುತ್ತೇವೆ, ಅದರ ಕಾರಣವೂ ನಿಶ್ಚಿತವಾಗಿರುವುನು. ಸಾತ್ವಿಕ, ರಾಜಸ, ತಾಮಸರೂಪ ಆಹಾರವಿಹಾರಗಳಿಂದಲೂ ಕರ್ಮೋಪಾಸನಾದಿಗಳಿಂದಲೂ ಬುದ್ಧಿತತ್ತ್ವವು ಶುದ್ಧವೂ, ಮಲಿನ ಮಲಿನತರಾದಿ ವೃತ್ತಿಯುಳ್ಳದ್ದೂ ಆಗುತ್ತದೆ. ಪುಣ್ಯಾಚರಣೆಯುಳ್ಳವರಿಗೆ ಅವರು ಪುಣ್ಯಕರ್ಮಾನುಸಾರವಾಗಿ ಪದಾರ್ಥಗಳ ಯಥಾರ್ಥಜ್ಞಾನವೂ ಪೂರ್ವದಲ್ಲಿ ಅನುಭವಿಸಲ್ಪಟ್ಟ ಪದಾರ್ಥಗಳ ಯಥಾರ್ಥ ಸ್ಮರಣವೂ ಮತ್ತು ಪಾಪಾಚರಣೆಯುಳ್ಳವರಿಗೆ ಅವರ ಪಾಪಕರ್ಮಾನುಸಾರವಾಗಿ ಪದಾರ್ಥಗಳ ವಿಪರೀತಜ್ಞಾನವೂ ಸ್ಮರಣವಾಗದಿರುವಿಕೆಯೂ ಇಲ್ಲವೆ ವಿಪರೀತಸ್ಮರಣವೂ ಎಂಬೀ ಪರಿಣಾಮಗಳು ಸರ್ವಾಂತರ್ಯಾಮಿಯಾದ ಪರಶಿವನ ಪ್ರೇರಣೆಯಿಂದೊದಗುವವೆಂಬರ್ಥವು ಭಗವಂತನಿಂದ ( ಗೀ. ೧೫ ) ಬೋಧಿಸಲ್ಪಟ್ಟಿದೆ. ಸರ್ವ ಪ್ರಾಣಿಗಳ ಬುದ್ಧಿಯೂ ಸ್ಥೂಲರೂಪವಾದ ಪ್ರತ್ಯಕ್ಷಜ್ಞಾನದಲ್ಲಿ ಸಮರ್ಥನಿವಾಗಿದೆ. ಕೆಲವು ಪಶುಪಕ್ಷ್ಯಾದಿಪ್ರಾಣಿಗಳಿಗೆ ಸೂಕ್ಷ್ಮವಾದ ಅನುಮಿತಿಜ್ಞಾನದಲ್ಲಿಯೂ ಸಮರ್ಥವಾದ ಬುದ್ಧಿಯಿರುವುದು ಕಂಡುಬರುತ್ತದೆ; ಆದರೆ ಸೂಕ್ಷ್ಮವೂ ಸೂಕ್ಷ್ಮತರವೂ ಮೊದಲಾದ ಪ್ರತ್ಯಕ್ಷಜ್ಞಾನಗಳನ್ನೂ ಅನುಮಿತಿಜ್ಞಾನಗಳನ್ನೂ ಮಾಡಿಕೊಳ್ಳುವಷ್ಟು ಸಮರ್ಥವಾದ ಬುದ್ಧಿಯು ಮಾತ್ರ ಮನುಷ್ಯನ

ಹೊರತಾಗಿ ಬೇರೆ ಯಾವ ಪ್ರಾಣಿಗಳಲ್ಲಿಯೂ ತೋರಿಬರುವುದಿಲ್ಲ. ಮನುಷ್ಯರಲ್ಲಿಯೂ ಅದರ ಪ್ರಮಾಣವು ಒಂದೇ ಬಗೆಯಾಗಿರದೆ ನ್ಯೂನಾಧಿಕರೂಪದಿಂದ ಹಲವು ತೆರನಾಗಿರುವುದು, ಇದಕ್ಕೆ ಕಾರಣವು ಅವರವರ ಪುರಾಕೃತಪುಣ್ಯಪಾಪಗಳೇ ಎಂದೂಹಿಸಲ್ಪಡುವುದು. ಮನುಷ್ಯರ ನ್ಯೂನಾಧಿಕವಾದ ಬುದ್ಧಿ ಸಾಮರ್ಥ್ಯದಲ್ಲಿಯೂ ಸಾತ್ವಿಕ, ರಾಜಸ, ತಾಮಸವೆಂಬ ಮೂರು ತೆರನಾಗಿರುವಿಕೆಯು ಭಗವದ್ಗೀತೆಯ ೧೪-೧೬-೧೭-೧೮ ಎಂಬೀ ಅಧ್ಯಾಯುಗಳಲ್ಲಿ ಬೇರೆ ಬೇರೆ ಬಗೆಯಿಂದ ಬಣ್ಣಿಸಲ್ಪಟ್ಟಿದೆ.

ಈ ರೀತಿಯಾಗಿ, ಪ್ರತ್ಯಕ್ಷಾನುಮಾನಗಳೆಂಬೆರಡು ಪ್ರಮಾಣಗಳೂ ಸಾಧಾರಣವಾಗಿ ಸರ್ವಪ್ರಾಣಿಗಳಲ್ಲಿ ಕಂಡುಬರುವುದರಿಂದ ಇವು ಶುದ್ಧ ಲೌಕಿಕ (ವ್ಯಾವಹಾರಿಕ) ಗಳೆನಿಸುತ್ತವೆ. ಶಬ್ದವೆಂಬ ಮೂರನೆಯ ಪ್ರಮಾಣವಾದರೋ ಹಾಗಲ್ಲ; ಅದು ಲೌಕಿಕವೂ, ಅಲೌಕಿಕವೂ ಎಂದು ಉಭಯವಿಧವಾಗಿದೆ. ಏಕೆಂದರೆ ಶಬ್ದಪ್ರಮಾಣದಿಂದ ಲೌಕಿಕಾಲೌಕಿಕಗಳೆಂಬ ಎರಡು ವ್ಯವಹಾರಗಳೂ ಆಗುತ್ತವೆ. ಚಾರ್ವಾಕ, ಬೌದ್ಧಾದಿ ಕೆಲವು ವಾದಿಗಳು ಶಬ್ದವನ್ನು ಪ್ರಮಾಣವೆಂದು ಮನ್ನಿಸುವುದಿಲ್ಲ. ಕೆಲವರು ಲೌಕಿಕ ಆಪ್ತರ (ಯಥಾರ್ಥವನ್ನು ನುಡಿವವರ) ಶಬ್ದವನ್ನು ಪ್ರಮಾಣವೆನ್ನುತ್ತಾರೆ. ಆದರೆ, ಅಲೌಕಿಕ (ವೇದವೆಂಬ) ಶಬ್ದವನ್ನು ಪ್ರಮಾಣವೆಂದು ಗ್ರಹಿಸುವುದಿಲ್ಲ. ಆದರೂ, ಶಬ್ದವೆಂಬ ಮೂರನೆಯ ಪ್ರಮಾಣವನ್ನಂಗೀಕರಿಸದೆ ಮನುಷ್ಯನ ವ್ಯವಹಾರವೇ ಸಾಗುವಂತಿಲ್ಲ. ಎಲ್ಲಿ ಪ್ರತ್ಯಕ್ಷಾನುಮಾನಗಳ ಪ್ರವೃತ್ತಿಗವಕಾಶವಿಲ್ಲವೋ ಅಲ್ಲಿ ಶಬ್ದದಿಂದೇ ವ್ಯವಹಾರವು ಜರುಗುವುದು. ಈಗಲಾದರೋ ಇಪ್ಪತ್ತನೆಯ ಶತಮಾನವಷ್ಟೇ! ಕಾರ್ಡು, ಪಾಕೇಟು, ವರ್ತಮಾನಪತ್ರ, ಟೇಲಿಗ್ರಾಮ್, ರೇಡಿಯೊ ಎಂಬೀರೂಪವಾದ ಶಬ್ದಜಾತದಿಂದೇ ಮನುಷ್ಯರ ಎಷ್ಟೋ ವ್ಯವಹಾರಗಳು ನಡೆದಿರುತ್ತವೆ. ಆದ್ದರಿಂದ, ಲೌಕಿಕಶಬ್ದವನ್ನಾದರೂ ಪ್ರಮಾಣವೆಂದೊಪ್ಪದ ಚಾರ್ವಾಕಾದಿ ಕೆಲವರಿರುತ್ತಿದ್ದರೂ ಈ ನವಯುಗದಲ್ಲಿ ಲೌಕಿಕಶಬ್ದವನ್ನು ಪ್ರಮಾಣವೆಂದು ಮನ್ನಿಸದ ಮಾನವನು ಎಲ್ಲಿಯಾದರೂ ಹುಡುಕಿದರೆ ಸಿಕ್ಕಬಹುದೇನು? ಈ ಸುಶಿಕ್ಷಣಕಾಲದಲ್ಲಿ ವೇದವೆಂಬ ಅಪೌರುಷೇಯ ಶಬ್ದರಾಶಿಯನ್ನು ಸಹ ಪ್ರಮಾಣವೆಂದು ಮನ್ನಿಸದಿರುವ ಮಾನವ ವರ್ಗವೂ ಬಹಳ ದೊಡ್ಡದಾಗಿದೆ.

ಈ ಹಿಂದೆ ನಾವು ಅಜ್ಞಾತಾರ್ಥಬೋಧಕತ್ವವು ಪ್ರಮಾಣದ ಸಾಮಾನ್ಯವಾದ ಲಕ್ಷಣವೆಂದು ಹೇಳಿದ್ದೇವೆ. ಆ ಲಕ್ಷಣವು ಪ್ರತ್ಯಕ್ಷಾನುಮಾನಗಳಲ್ಲಿರುವಂತೆ ಲೌಕಿಕಶಬ್ದಪ್ರಮಾಣದಲ್ಲಿಯೂ ಇರುವುದು. ಈ ಪ್ರಮಾಣದ ಬಗ್ಗೆ ಲಕ್ಷದಲ್ಲಿಡಬೇಕಾದ ಒಂದು ನಿಯಮವಿದೆ, ಅದನ್ನು ನಾವಿಲ್ಲಿ ತೋರಿಸುತ್ತೇವೆ, ಎಲ್ಲಿ ಪ್ರತ್ಯಕ್ಷಪ್ರಮಾಣದ ಪ್ರವೃತ್ತಿಯಾಗದೋ ಆ ವಿಷಯದಲ್ಲಿ ಲಿಂಗ ( ಹೇತು ) ಮೂಲಕ ಅನುಮಾನವು ಪ್ರವೃತ್ತಿಸುವುದು. ಎಲ್ಲಿ ಪ್ರತ್ಯೈಕ್ಷಾನುಮಾನಗಳೆರಡೂ ಪ್ರವೃತ್ತಿಸಲಾರವೋ ಅಲ್ಲಿ ಶಬ್ದಪ್ರವೃತ್ತಿಯುಂಟು. ಈ ಸೃಷ್ಟಿಯಲ್ಲಿರುವ ಸ್ಥೂಲವೂ, ಸಾವಯವವೂ ರೂಪಾದಿಗಳಿಂದ ಕೂಡಿದವೂ ಆದ ಪದಾರ್ಥಗಳಲ್ಲಿ ಪ್ರತ್ಯಕ್ಷವಿಷಯದ ಯೋಗ್ಯತೆಯಿರುವುದು. ಕೆಲವು ಸೂಕ್ಷ್ಮವೂ, ಅಸನ್ನಿಕೃಷ್ಟವೂ ( ದೂರವಿರುವ ಪದಾರ್ಥವೂ ) ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲ. ಅಂದರೆ, ಕಣ್ಣು ಮೊದಲಾದ ಇಂದ್ರಿಯಗಳಿಗೆ ಅವುಗಳ ಜ್ಞಾನವಾಗುವುದಿಲ್ಲ. ಆದರೆ, ಅವು ಕೆಲವು ಬಾಹ್ಯಸೂಚಕಚಿಹ್ನಗಳಿಂದರಿಯಲ್ಪಡುತ್ತವೆ. ದೂರದಲ್ಲಿ ಕಂಡುಬರುವ ಹೊಗೆಯನ್ನು ನೋಡಿದಾಗ ಅಲ್ಲಿರತಕ್ಕ ಕಾಣಲ್ಪಡದ ಬೆಂಕಿಯ ಅನುಮಿತಿಜ್ಞಾನವಾಗುವುದು. ಆ ಆ ಗೋಲಕಗಳಲ್ಲಿರುವ ನೇತ್ರಾದಿ ಇಂದ್ರಿಯಗಳು ನಮಗೆ ಪ್ರತ್ಯಕ್ಷವಾಗಿ ಗೋಚರವಾಗುವುದಿಲ್ಲವಾದರೂ ರೂಪ, ಶಬ್ದ ಮೊದಲಾದ ವಿಷಯಗಳ ಜ್ಞಾನವಾಗುವ ಮೂಲಕ ಅವುಗಳ ಇರುವಿಕೆಯು ಸಿದ್ಧಿಸುವುದು.

ಹಿಮಾಲಯದಲ್ಲಿ ಸಂಭವಿಸಿದ ಯಾವುದಾದರೊಂದು ಸಂಗತಿಯು ದೂರದಲ್ಲಿರುವ ನಮಗೆ ಪ್ರತ್ಯಕ್ಷವಾಗಿ ಕಾಣಿಸಲು ಶಕ್ಯವಿಲ್ಲ. ಬಹು ದೂರವಾಗಿರುವುದರಿಂದ ಬಾಹ್ಯಸೂಚಕವಾದ ಯಾವ ಚಿಹ್ನವೂ ಪ್ರತೀತಿಯಾಗುವುದಿಲ್ಲ. ಆದರೆ ಆ ವಿಷಯಕವಾದ ಸರ್ವ ವೃತ್ತಾಂತವೂ ನಮಗೆ ಆಪ್ತ ವಾಕ್ಯಗಳ ಮೂಲಕ ತಿಳಿದು ಬರುವುದು. ಧಾರವಾಡದಲ್ಲಿ ಸಂಭವಿಸಿದ ಯಾವುದಾದರೊಂದು ಸೋಜಿಗದ ಸುದ್ದಿಯು ವಿಜಾಪುರದಲ್ಲಿರುವ ನಮಗೆ ಮರುದಿವಸ ವರ್ತಮಾನಪತ್ರದಿಂದ ಗೊತ್ತಾಗುವುದು. ಅಥವಾ ರೇಡಿಯೋ ಸಾಧನೆಯಿಂದ ಕ್ಷಣಮಾತ್ರದಲ್ಲಿಯೇ ತಿಳಿಯಲ್ಪಡಬಹುದು. ಈ ಸರಣಿಯನ್ನನುಸರಿಸಿ ಯೋಚಿಸಿದರೆ ಆಪ್ತನ ( ಅಂದರೆ ವಿಶ್ವಸನೀಯವೂ ಯಥಾರ್ಥವೂ ಆದುದನ್ನೇ ನುಡಿವ ಪ್ರಾಮಾಣಿಕ ಮನುಷ್ಯನ ) ಮಾತಿನಿಂದಲೂ ನಮಗೆ ಅಜ್ಞಾತವಾದ ವಿಷಯದ ನಿಜವಾದ ಜ್ಞಾನವಾಗುವುದರಲ್ಲಿ ಯಾವ ಸಂದೇಹವೂ ಇಲ್ಲವೆಂದು

ಧಾರಳವಾಗಿ ಹೇಳಬಹು. ಆದ್ದರಿಂದ, ಪ್ರತ್ಯಕ್ಷಾನುಮಾನಗಳೆಂಬೆ ರಡು ಪ್ರಮಾಣಗಳಿಂದಲೂ ಅರಿಯಲ್ಪಡಲಾರದ ವಿಷಯವು ಶಬ್ದ ಮೂಲಕವಾಗಿಯೇ ಸಮನಿಸುವುದೆಂಬ ಮಾತನ್ನು ಶಬ್ದ ಪ್ರಮಾಣದ ವಿಷಯದಲ್ಲಿ ಮೂಗು ಮುರಿವ ಮುಂದಾಳುಗಳಾದರೂ ಒಪ್ಪಲೇಬೇ ಕಾಗುವುದು.

ಇದೇ ನ್ಯಾಯವು ಅಲೌಕಿಕ ಶಬ್ದಕ್ಕಾದರೂ ಸಂಬಂಧಿಸುವುದು. ಪ್ರತ್ಯಕ್ಷಾನುಮಾನಗಳಿಂದಲೂ ಲೌಕಿಕ ಶಬ್ದ ಪ್ರಮಾಣಗಳಿಂದಲೂ ಸಿದ್ಧಿ ಸದ ಅತೀಂದ್ರಿಯ ವಿಷಯದ ಜ್ಞಾನವು ಅಲೌಕಿಕ ಶಬ್ದಮೂಲಕವಾಗಿ ಸಿದ್ಧಿಸುವುದು. ಕಳೆದು ಹೋದ ಜನ್ಮವು, ಮುಂದೊದಗುವ ಜನ್ಮವು, ಈ ಜನ್ಮವೆತ್ತಿದುದರ ಕಾರಣವು ಪರಲೋಕಕ್ಕೆ ಸಾಧನವು ಶಿವತ್ವಾಭಿ ವ್ಯಕ್ತತೆಯಗುಟ್ಟು, ಸ್ವಸ್ವರೂಪಾವಸ್ಥಿತಿಯಮೆಟ್ಟು, ವಿಶ್ವಪ್ರಪಂಚೋತ್ಪ ತ್ತಿಯ ಪರಿಯು ಅದರ ಕಾರಣವು ಎಂಬೀ ಮೊದಲಾದುದೆಲ್ಲವೂ ಅತೀಂದ್ರಿಯ ವಿಷಯಗಳಾದುದರಿಂದ ಅವುಗಳ ಜ್ಞಾನವು ಯಾವುದ ರಿಂದಾಗುವುದೋ ಅದುವೇ ಶೃತಿಯು, ( ವೇದವು ) ಹೀಗೆ ಶೃತಿಯು ಮನುಷ್ಯರ ಬುದ್ಧಿಗೆ ನಿಲುಕದ ಈ ಮೇಲೆ ಹೇಳಿದ ಅತೀಂದ್ರಿಯ ವಿಷಯಗಳನ್ನು ಸರಿಯಾಗಿ ತಿಳಿಸಿಕೊಡುವುದರಿಂದ ಅದರ ಪ್ರಾಮಾ ಣ್ಯವು ಸ್ವತಃ ಸಿದ್ಧವಾಗಿರುವುದು. ಪ್ರತ್ಯಕ್ಷಾನುಮಾನಗಳೂ ಲೌಕಿಕ ಶಬ್ದಗಳೂ ಎಂಬಿವುಗಳ ಪ್ರಾಮಾಣ್ಯವು ಸ್ವತಃ ಸಿದ್ಧವಲ್ಲ, ಪರತಃ ಸಿದ್ಧ ವಾದುದು; ಹೇಗೆಂದರೆ, ಚಂದ್ರನು ಒಬ್ಬನೇ ಇರುವನಲ್ಲವೇ ? ಆದರೆ ಯಾವನೋ ಒಬ್ಬನಿಗೆ ಎರಡಾಗಿ ಕಾಣಿಸುವನು; ಹಾಗೆ ತೋರುವುದು ಪ್ರತ್ಯಕ್ಷಪ್ರಮಾಣದಿಂದೇ ಅಲ್ಲವೇ ? ಪ್ರತ್ಯಾಕ್ಷಾನುನುಭವ ವಿರುದ್ಧವಾಗಿ ಚಂದಪ್ಪಗಳಿಬ್ಬರೆನ್ನುವುದು ಪ್ರತ್ಯಕ್ಷ ಪ್ರಮಾಣದಿಂದ ಅದು ಹೇಗೆ ತಾನೇ ಸಂಭವಿಸುವುದು ? ಆದರೆ ಉಳಿದ ಎಲ್ಲ ಜನರಿಗೂ ಚಂದ್ರನು ಒಬ್ಬನೇ ಕಾಣಿಸುತ್ತಾನೆ. ಆದಬಳಿಕ ಇಬ್ಬರು ಚಂದ್ರರನ್ನು ಕಾಣುವಾತನ ಪ್ರತ್ಯಕ್ಷಜ್ಞಾನವು ಪ್ರಮಾಣವೆನಿಸುವುದೇ ? ಮತ್ತೊರ್ವನು ಮುಜ್ಜಂಜೆ ಯಲ್ಲಿ ಮೋಟಮರವನ್ನು ಕಂಡು ಇವನೊಬ್ಬ ಮನುಷ್ಯನಿಲ್ಲಿನಿಂತಿರು ವನೆಂದು ತಿಳಿವನು. ಆದರೆ, ಯಾವನಿಗೆ ಮೋಟಮರವು ಕಾಣುತ್ತಿ ರುವುದೋ ಅವನಿಗೆ ಮನುಷ್ಯನು ತೋರುವುದಿಲ್ಲ; ಆದುದರಿಂದ, ಒಬ್ಬ ಚಂದ್ರನನ್ನು ಇಬ್ಬರೆಂದು ನೋಡುವಾತನ ಪ್ರತ್ಯಕ್ಷಜ್ಞಾನವೂ ಮೋಟ ಮರವನ್ನು ಮನುಷ್ಯನೆಂದು ತಿಳಿಯುವವನ ಪ್ರತ್ಯಕ್ಷಜ್ಞಾನವೂ ಯಥಾರ್ಥ

ವಲ್ಲ. ಔಷಧೋಪಚಾರಾದಿಗಳಿಂದ ನೇತ್ರದೊಳಗಿನ ತಿಮಿರಾದಿ ದೋಷವು ನಿವೃತ್ತಿಯಾಗಲು ಇಬ್ಬರು ಚಂದ್ರರನ್ನು ನೋಡುವಾತನಿಗಾದರೂ ಚಂದ್ರ ನೊಬ್ಬನೇ ಇದ್ದಾನೆಂದು ನಿಶ್ಚಯವಾಗುವುದು. ಮೋಟಮರದ ಬಳಿಗೆ ಹೋಗಿ ಅದನ್ನು ಕೈಮುಟ್ಟಿ ನೋಡಿದೊಡನೇ ಮೊದಲು ಮನುಷ್ಯ ನೆಂದು ತಿಳಿದವನಿಗಾದರೂ ಇದು ಕೊರಡೆಂಬ ನಿಶ್ಚಯವಾಗುವುದು. ಹೀಗೆ, ಪ್ರತ್ಯಕ್ಷಜ್ಞಾನದ ಪ್ರಾಮಾಣ್ಯವು ವಿಷಯದ ಸತ್ಯತೆಯನ್ನೂ, ಸಾಧನದ ನಿರ್ದೋಷತೆಯನ್ನೂ ಅವಲಂಬಿಸಿರುವುದಾದ್ದರಿಂದ ಅದಕ್ಕೆ ಸ್ವತಃ ಪ್ರಾಮಾಣ್ಯವಿಲ್ಲ. ಇದೇ ಮೇರೆಗೆ ಅನುಮಾನಪ್ರಮಾಣವಾದರೂ ಸದೋಷ ನಿರ್ದೋಷಗಳೆಂಬಕಾರಣಗಳಿಂದ ಅಯಥಾರ್ಥವೂ, ಯಥಾ ರ್ಥವೂ ಎಂಬ ಉಭಯವಿಧ ಜ್ಞಾನಗಳಿಗೆ ಹೇತುವಾಗಿರುವುದರಿಂದ ಅದ ರಲ್ಲಿಯೂ ಸ್ವತಃ ಪ್ರಾಮಾಣ್ಯವು ಸಿದ್ಧಿಸುವುದಿಲ್ಲ, ಹಾಗೂ ಲೌಕಿಕ ಶಬ್ದಪ್ರಮಾಣದಲ್ಲಿಯೂ ದ್ವೈವಿಧ್ಯವಿದೆ; ಶಬ್ದವು ಪುರುಷಾಧೀನವಾಗಿ ರುವುದರಿಂದ ಸರ್ವರೂ ಆಪ್ತರೇ ಆಗಿರುವರೆಂಬ ನಿಯಮವಿರುವುದಿಲ್ಲ. ಪರೋಪದೇಶಕುಶಲರೆಂದು ಹೆಸರುವಾಸಿಗಳಾದ ವಾಗ್ಮಿಗಳಲ್ಲಿಯೂ ಅಜ್ಞಾನ, ದುರಾಗ್ರಹ, ವಿಪ್ರಲಂಭ, ವಿಪರೀತಜ್ಞಾನ, ಸ್ವಾರ್ಥವೇ ಮುಂತಾದ ದೋಷಗಳು ಸಂಭವಿಸುವುದರಿಂದ ಅವರ ವಚನನಿಚಯ ವನ್ನು ಸರ್ವಥಾ ಸರ್ವದಾ ಪ್ರಮಾಣವೆಂದೊಪ್ಪಲಾಗುವುದಿಲ್ಲ. ಅದು ಕಾರಣವೇ, ತಾರ್ಕಿಕಾದಿಗಳು **'ಆಪ್ತವಾಕ್ಯಂ ಪ್ರಮಾಣಮ್'— 'ಆಪ್ತಸ್ತು ಯಥಾರ್ಥವಕ್ತಾ'**. ಆಪ್ತನ ವಾಕ್ಯವು ಪ್ರಮಾಣವು, ಯಥಾರ್ಥವಾದುದುದನ್ನು ನುಡಿವಾತನೇ ಆಪ್ತನು; ಎಂದು ಹೇಳುವವ ರಾಗಿ ಶಬ್ದಪ್ರಮಾಣವೆಂದರೆ ಯಾವುದೆಂಬುದನ್ನು ಸ್ಪಷ್ಟವಾಗಿ ಪ್ರತಿಪಾದಿ ಸಿದ್ದಾರೆ. ಆದ್ದರಿಂದ ಲೌಕಿಕಶಬ್ದಗಳೆಲ್ಲವೂ ಪ್ರಮಾಣವೆನಿಸವು.

ಅದೃಷ್ಟಾರ್ಥಗಳನ್ನರಿವಲ್ಲಿ ಪ್ರಮಾಣವಾದ ಶ್ರುತಿಯು ಯಾವ ನೊಬ್ಬ ಮನುಷ್ಯನಿಂದ ರಚಿತವಾದುದಲ್ಲ. ಮನುಷ್ಯರಿಗೆ ಅತೀಂದ್ರಿಯ ಜ್ಞಾನವಿರದು. ಮನುಷ್ಯರ ಜ್ಞಾನಸಾಧನೆಗಳು ಮರ್ಯಾದಿತವಾದುವು. ಅವು ಇದ್ದಷ್ಟಾದರೂ ಸರ್ವದಾ ನಿರ್ದೋಷವಾದುವೇ ಎಂದು ನಿಶ್ಚಿತ ವಾಗಿ ಹೇಳಲಾಗುವುದಿಲ್ಲ. ಸರ್ವಜ್ಞರಲ್ಲದ ಮನುಷ್ಯರ ಜ್ಞಾನದಲ್ಲಿ ಭ್ರಾಂತಿ ಮೂಲತ್ವವು ಸಂಭವಿಸುವ ಮೂಲಕ ಅವರ ಶಬ್ದಗಳಿಗಾದರೂ ಯಥಾ ರ್ಥವಾದ ಶಬ್ದರೂಪ ಮೂಲಪ್ರಮಾಣದ ಅಪೇಕ್ಷೆಯಿರುವುದರಿಂದ ಲೌಕಿಕ ಶಬ್ದಪ್ರಮಾಣವಾದರೂ ಪರತಃ ಪ್ರಮಾಣವೆನಿಸುವುದು. ಆದರೆ ವೇದವು

ನಿತ್ಯವಾದುದರಿಂದ ಅದರಲ್ಲಿ ವಕ್ತೃವಿನ ದೋಷವು ಸಂಭವಿಸದು. ಆದ್ದರಿಂದ ಅದು ಸ್ವತಃ ಪ್ರಮಾಣವಾಗಿರುವುದು; ಪ್ರಕೃತ ಪ್ರಸಂಗವನ್ನು ನಾವು ಈಗ ಮುಕ್ತಾಯಗೊಳಿಸುವೆವು. ಪರಾಶರಸ್ಮೃತಿಯ ವ್ಯಾಖ್ಯಾನದಲ್ಲಿ--- '**ಗ್ರನ್ಥಾಸ್ತಾವದ್ದ್ವಿವಿಧಾಃ ಸ್ವತಃಪ್ರಮಾಣಾಃ ಪರತಃಪ್ರಮಾಣಾಶ್ಚ । ಅಪೌರುಷೇಯಾಣಾಮತಏವ ಸ್ವತಃಪ್ರಮಾಣಾನಾಂ ವೇದಾನಾಂ ನಪ್ರಮಾಣಾನ್ತರ ಸಾಪೇಕ್ಷತ್ವಮ್ । ಕುತಃ ಅನ್ಯಾನಪೇಕ್ಷತ್ವಾತ್ । ತದಿತರಾಣಾಂ ಪೌರುಷೇಯಾಣಾಮತಏವ ಪರತಃ ಪ್ರಮಾಣಾನಾಂ ಸ್ಮೃತಿಪುರಾಣಾದೀನಾಂ ಮೂಲಪ್ರಮಾಣಸಾಪೇಕ್ಷತ್ವಮ್ ।**' ಎಂದಿರುವುದರ ತಾತ್ಪರ್ಯವು ಸಂಕ್ಷಿಪ್ತವಾಗಿ ಹೀಗಿದೆ. ಸ್ವತಃಪ್ರಮಾಣರೂಪವಾದುವೂ ಪರತಃ ಪ್ರಮಾಣವಾದುವೂ ಎಂದು ಗ್ರಂಥಗಳು ದ್ವಿವಿಧವಾಗಿವೆ. ಅಪೌರುಷೇಯಗಳಾದ್ದರಿಂದ ಸ್ವತಃಪ್ರಮಾಣಗಳಾಗಿರುವ ವೇದಗಳಿಗೆ ಅನ್ಯ ಪ್ರಮಾಣಗಳ ಅಪೇಕ್ಷೆಯಿರುವುದಿಲ್ಲ; ಏಕೆಂದರೆ, ಅವುಗಳಿಗೆ ಬೇರೆ ಪ್ರಮಾಣಗಳ ನೆರವು ಬೇಕಾಗಿಲ್ಲ ಅವುಗಳಿಗಿಂತ ಬೇರೆಯಾದುವೂ ಪೌರುಷೇಯಗಳೂ ಅನುಕಾರಣವೇ ಇತರ ಪ್ರಮಾಣಗಳ ಹಂಗುಳ್ಳವುಗಳೂ ಆದ ಸ್ಮೃತಿಪುರಾಣಾದಿ ಗ್ರಂಥಗಳಿಗೆ ಮೂಲಪ್ರಮಾಣದ ( ಶ್ರುತಿಯ ) ಅಪೇಕ್ಷೆಯುಂಟು.

'ಯಾವ ಆದೇಶಶ್ರವಣದಿಂದ ಅಶ್ರುತವು ಶ್ರುತವಾದುದೂ, ಅತರ್ಕಿತವು ತರ್ಕಿತವಾದುದೂ, ಅವಿಜ್ಞಾತವು ವಿಜ್ಞಾತವಾದುದೂ ಆಗುವುದೋ ಆ ಜ್ಞಾನವೇ ಸರ್ವಜ್ಞಗುಣಾನ್ವಿತವು' ಎಂಬ ಛಾಂದೋಗ್ಯೋಪನಿಷದ್ವಚನಾನುಸಾರವಾಗಿ ಶಾಂಭವಜ್ಞಾನವು ( ಶ್ರೌತವಿದ್ಯೆಯು ) ಈಶ್ವರೋಪದಿಷ್ಟವಾದುದರಿಂದ ಸಮಾಮ್ನಾಯವೆನಿಸಿ ವಿದ್ಯೇಶ್ವರ ಮೊದಲಾದವರಿಂದ ಈ ವರೆಗೆ ಪರಂಪರೆಯಿಂದ ಬಂದುದಾಗಿದೆ. ಶಾರದಾತಿಲಕದೊಳು ಮೊದಲನೆಯ ಪಟಲದ ವ್ಯಾಖ್ಯಾನದಲ್ಲಿ ಉದ್ಧೃತವಾದ— '**ಮಹೇಶ್ವರಮುಖದ್ಜ್ಞಾತ್ವಾಗುರುರ್ಯಸ್ತಪಸಾ ಮನ್ತ್ರಂ ಸಂಸಾಧಯತಿ ಶುದ್ಧಾತ್ಮಾ ಪೂರ್ವಂ ಸಋಷಿಃ**' ಎಂಬ ಗೌತಮವಾಕ್ಯಾನುಸಾರವಾಗಿಯೂ ಸೃಷ್ಟಿಯಾರಂಭದಲ್ಲಿ ಮಹೇಶ್ವರನಿಂದನುಗ್ರಹೀತರಾದ ಶುದ್ಧಾತ್ಮರಾದ ಮಾಹೇಶ್ವರರೇ ಋಷಿಗಳು; ಕೀಟಭ್ರಮರನ್ಯಾಯದಂತೆ ಪರಶಿವಾನುಸಂಧಾನ ಬಲದಿಂದ ತತ್ಸ್ವರೂಪವೇ ತಾವಾದ ಆಶಾಂಭವಜ್ಞಾನಸಂಪನ್ನರು ಆ ಪರಶಿವನಿಗನ್ಯರೇ ? ಆ ದಿವ್ಯಜ್ಞಾನಿಗಳ ವೃತ್ತಿಯು ಅಂತರ್ಮುಖವಾಗಿರುವುದರಿಂದ ಅದು ಪರಶಿವಾಕಾರದ ಹೊರತು ಅನ್ಯಾ

ಕಾರವನ್ನು ಸಹಿಸದು. ಪರಶಿವನ ತಾದಾತ್ಮ್ಯಾವಸ್ಥೆಯಲ್ಲಿರುವ ಆ ಶುದ್ಧಾತ್ಮರಲ್ಲುಂಟಾದ ದಿವ್ಯಜ್ಞಾನದ ಸ್ಫುರಣವೇ ವೇದವು. ಭೌತಿಕ ವಿದ್ಯಾ ನಿಷ್ಣಾತರು ಆ ದಿವ್ಯ ಜ್ಞಾನಿಗಳನ್ನು ಹೋಲಬಲ್ಲರೇ ? ಈಗಣ ಭೌತಿಕವಿದ್ಯೆಯು ವಿಶೇಷತಃ ಸ್ವೇಚ್ಛಾ ವಿಹಾರವೇ ಧ್ಯೇಯವಾಗಿ ಉಳ್ಳದ್ದಾಗಿರುವುದರಿಂದ ವೈಷಯಿಕ ಸುಖದ ವಾಸನೆಯೆಂಬ ಬಾಯಾರಿಕೆಯನ್ನು ಹೆಚ್ಚಿಸುವುದಾಗಿದೆ. ಅಧ್ಯಾತ್ಮವಿದ್ಯೆಯಾದರೋ ಅದನ್ನು ಪರಿಹರಿಸಲು ಮುಖ್ಯೋಪಾಯವಾಗಿದೆ. ಭೌತಿಕಜ್ಞಾನವು ಕೇವಲ ನಿರುಪಯೋಗವಾದುದೇ ಎಂದು ನಮ್ಮ ಅಭಿಪ್ರಾಯವಲ್ಲ; ಆದರೆ ಅದರಿಂದ ವ್ಯಾವಹಾರಿಕ ಪ್ರಯೋಜನವೇ ಅಧಿಕವಾಗಿರುವುದು. ಭೌತಿಕ ವಸ್ತುಗಳ ಪ್ರಕೃತಿಯು ಪರಿಣಾಮರೂಪಗಳಾದುದರಿಂದ ಅನಿಯತತ್ವ ಧರ್ಮವೇ ಅವುಗಳ ಹುಟ್ಟುಗುಣವು. ಇಂಥವುಗಳ ಜ್ಞಾನವಾದರೂ ಇಂದಿಲ್ಲ ಮುಂದೆ ಪೂರ್ಣಾವಸ್ಥೆಯನ್ನು ಹೊಂದಿ ತನ್ಮೂಲಕ ನಮಗೆ ಶಾಶ್ವತವಾದ ಆನಂದವು ದೊರಕಬಹುದೆಂಬ ಭರವಸೆಯಾದರೂ ಬಾಯಾರಿ ಬಸುವಳಿದ ಪಸುಳನು ಬಿಸಿಲ್ಗುದುರೆಯನ್ನು ನೆಚ್ಚಿದಪರಿಯೇ ಸರಿ ! ಅಂಗಕರಣೇಂದ್ರಿಯ ವಿಷಯಂಗಳನ್ನೆಲ್ಲ ಉರಿಕಪ್ಪುರದಂತೆ ಲಿಂಗಮಯಗಳನ್ನಾಗಿ ಮಾಡಿ, ಲಿಂಗ (ಬ್ರಹ್ಮ) ವೇ ಉಳಿಮೆಯಾಗಿ ಮೆರೆವ ಮುಕ್ತಾತ್ಮರಾದ ಆ ಮಹರ್ಷಿಗಳನ್ನು ವಿಷಯಾರಣ್ಯದಲ್ಲಿ ವಿಹರಿಸುವ ತಮ್ಮ ಹಾಗೇ ಅಂದರೆ ಪಾಶಬದ್ಧರಾದ ಪಶು ( ಜೀವಿ ) ಗಳಂತೆ ಭಾವಿಸಿ ಅವರಾದರೂ ಸೃಜ್ಯಕೋಟಿಯಲ್ಲಿ ಪರಿಗಣಿಸಲ್ಪಡುವುದರಿಂದ ನಮ್ಮ ಹಾಗೇ ಮನುಷ್ಯರೇ ಅಲ್ಲವೋ ? ಎಂದು ಗಳಹುವವರ ಮೈಯೆಲ್ಲವೂ ಬಲವಾಗಿ ಬೀಸುವ ಪಡುವಣಗಾಳಿಯ ಸೋಂಕಿನಿಂದ ಮರಗಟ್ಟಿರಬಹುದೆಂದೂ ಹಿಸುವುದು ಪ್ರಾಮಾದಿಕವೆನಿಸಲ್ಖರದಷ್ಟೆ !

ಭಗವದ್ಗೀತೆಯ ಎರಡನೆಯ ಅಧ್ಯಾಯದಲ್ಲಿ ವೇದಗಳ ನ್ಯೂನತೆಯನ್ನು ಸೂಚಿಸತಕ್ಕ ಕೆಲವು ವಾಕ್ಯಗಳಿವೆ. ಅವು ಯಾವುವೆಂದರೆ— **' ವೇದವಾದರತಾಃ ಪಾರ್ಥ ನಾನ್ಯದಸ್ತೀತಿವಾದಿನಃ ।' ತ್ರೈಗುಣ್ಯ ವಿಷಯಾ ವೇದಾನಿಸ್ತ್ರೈಗುಣ್ಯೋ ಭವಾರ್ಜುನ ' ' ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ '** ಎಂಬ ಮುಂತಾದ ವಾಕ್ಯಗಳು ವೇದಗಳನ್ನು ಹೀಯಾಳಿಸುವುದುಂಟೋ ? ಅಥವಾ ಆ ಗೀತಾ ವಚನಗಳೇ ಅಪ್ರಮಾಣವಾದುವೋ ? ಎಂದರೆ, ಆ ಗೀತಾವಾಕ್ಯಗಳು ವೇದಗಳಲ್ಲಿ ನಿಕೃಷ್ಟತೆಯನ್ನಾರೋಪಿಸಲು ಪ್ರವರ್ತಿಸಿದವಲ್ಲ; ಮತ್ತು

ಗೀತೆಯು ಸ್ಮೃತಿಯೆನಿಸಿಕೊಳ್ಳಲ್ಪಡುವುದರಿಂದ ಅದರ ವಚನಗಳಿಂದ ವೇದಗಳಿಗೆ ನಿಕೃಷ್ಟತ್ವವಾದರೂ ಸಂಭವಿಸದು. 'ನಹಿ ನಿನ್ದಾ ನಿನ್ದ್ಯಂ ನಿನ್ದಿತುಂ ಪ್ರವರ್ತತೇ ಕಿಂತು ವಿಧೇಯಂ ಸ್ತೋತುಮ್' ಎಂಬೀ ಮೀಮಾಂಸೆಯ ನ್ಯಾಯಾನುಸಾರವಾಗಿ ಪ್ರಮಾಣಗ್ರಂಥಗಳಲ್ಲಿ ಆಪಾತತಃ ಪ್ರತೀತಿಯಾಗುವ ನಿಂದೆಯಾದರೋ ಮುಖ್ಯವಾಗಿ ತಿರಸ್ಕಾರೋದ್ದೇಶವಾಗಿರುವುದಿಲ್ಲ; ವಿಹಿತವಾದುದನ್ನೇ ವಿರುದ್ಧವಾದ ಲಕ್ಷಣದಿಂದ ಸ್ತುತಿಸುವುದೇ ನಿಂದೆಯ ಹೊಟ್ಟೆಯೊಳಗಿನ ತಿರುಳು. ಹೇಗೆಂದರೆ, ಯಾವನೋ ಒಬ್ಬನು ಕೇವಲ ವೇದಾಧ್ಯಯನದಲ್ಲಿಯೇ ತೊಡಗಿರುವುದು ಕಾಣಬಂದರೆ, ಆ ದ್ವಿಜನನ್ನು ಕುರಿತು — ಏನಯ್ಯಾ ! ನೀನು ಕೇವಲ ವೇದಪಠನಾಸಕ್ತನಾಗಿದ್ದೀಯೇ, ಆದ್ದರಿಂದ ನೀನು ಕೇವಲ ಸ್ತಂಭನು; ನೀನೊಬ್ಬ ಭಾರವಾಹಕನೇ ಸರಿ ! ಎಂದು ಮೊದಲಾಗಿ ನುಡಿವುದು ನಿಂದೆಯೆನಿಸಿದರೂ, ಅದರ ತಾತ್ಪರ್ಯವಾದರೋ ವೇದಾಧ್ಯಯನಾನಂತರ (ವೇದಾಕ್ಷರ ಗ್ರಹಣಾನಂತರ) ದಲ್ಲಿ ಶಾಸ್ತ್ರಾಧ್ಯಯನ, ಧರ್ಮಜಿಜ್ಞಾಸಾದಿಗಳನ್ನು ಅವಶ್ಯವಾಗಿ ಮಾಡಬೇಕೆಂಬ ವಿಹಿತಾರ್ಥವನ್ನನುಸರಿಸಿಯೇ ಇರುವುದು. ಹಾಗೇ ಗೀತೆಯೊಳಗಿನ ಪೂರ್ವೋಕ್ತ ವಚನಗಳಲ್ಲಿ ವೇದಗಳ ನಿಂದೆಯುಂಟೆಂದು ಭಾಸವಾಗುವುದಾದರೂ, ಆ ವಾಕ್ಯಗಳ ತಾತ್ಪರ್ಯವು ಹಾಗಿಲ್ಲ; ಮತ್ತೇನಂದರೆ — ಅಧ್ಯಾತ್ಮಜ್ಞಾನದ ದೃಷ್ಟಿಯಿಂದ (ನಿವೃತ್ತಿಧರ್ಮಾಚರಣಾಪೇಕ್ಷೆಯಿಂದ) ಕರ್ಮಕಾಂಡಾತ್ಮಕ ವೇದಭಾಗವು ಅಲ್ಪಫಲಪ್ರದವಾದುದರಿಂದ ಅದರಿಂದ ಅಸ್ವಾರಸ್ಯವನ್ನು ತೋರಿಸುವ ಅಭಿಪ್ರಾಯದಿಂದೇ ಆ ನಿಂದೆಯು ಮುಂದುವರಿದಿದೆ.

ಮತ್ತು ಗೀತೆಯಾದರೂ ಸ್ವಾತಂತ್ರ್ಯದಿಂದ ಹಾಗೆ ನಿಂದಿಸತಕ್ಕದ್ದಲ್ಲ, ಮೂಲಶ್ರುತಿವಚನವನ್ನನುಸರಿಸಿಯೇ ಆ ನಿಂದೆಯನ್ನು ವ್ಯಕ್ತಪಡಿಸಿರುವುದು. ಆ ಗೀತೆಯು ಆಗಮೋಪನಿಷತ್ತುಗಳ ಪುನರುಕ್ತಿರೂಪವಾದುದೆಂಬುದನ್ನು ಸಚೇತನರೆಲ್ಲರೂ ಬಲ್ಲರು. ಆಗಮೋಪನಿಷದ್ಗೀತಾದಿ ಗ್ರಂಥಗಳಲ್ಲಿ ಕಾಣಬರುವ ಕರ್ಮಕಾಂಡಾತ್ಮಕ ವೇದಭಾಗದೊಳು ಅರುಚಿಯನ್ನು ವ್ಯಕ್ತಪಡಿಸತಕ್ಕ ವಾಕ್ಯಗಳಾದರೂ ಕರ್ಮಾಧಿಕಾರಿಗಳಾದ ಜೀವರು ಆ ಕರ್ಮಗಳನ್ನೇ ಅನುಷ್ಠಿಸಕೂಡದೆಂಬ ವಿವಕ್ಷಿತಾರ್ಥವುಳ್ಳವುಗಳಲ್ಲ, ಮತ್ತು ಪ್ರತ್ಯಭಿಜ್ಞಾ ಮಾಹೇಶ್ವರರಲ್ಲಿ ಮುಖಂಡನಾದ ಅಭಿನವಗುಪ್ತಾಚಾರ್ಯನು ಗೀತಾರ್ಥಸಂಗ್ರಹವೆಂಬ ವ್ಯಾಖ್ಯಾನದಲ್ಲಿ— 'ವೇದಾಸ್ತ್ರೈಗುಣ್ಯೇನ ಕಾರಣೇನ ವಿಶೇಷೇಣ ಚಿನ್ವನ್ತಿ ಬಧ್ನನ್ತೀತಿ ಬನ್ಧಕಾಃ ।

ಯಸ್ಮಾತ್ಸುಖ ದುಃಖಮೋಹಬುದ್ಧ್ಯಾ ಕರ್ಮಾಣಿ ವೈದಿಕಾದಿ ಕ್ರಿಯಮಾಣಾನಿ ಬನ್ಧಕಾನಿ, ಅತಸ್ತ್ರೈಗುಣ್ಯಂ ಕಾಮರೂಪಂ ತ್ಯಾಜ್ಯಮ್ । ಯದಿತು ವೇದ ದೂಷಣಪರಮೇದಂ ತದಭವಿಷ್ಯತ್, ಪ್ರಕೃತಂ ಯುದ್ಧಕರಣಂ ವ್ಯಘಟಿಷ್ಯತ; ವೇದಾದನ್ಯಸ್ಯ ಸ್ವಧರ್ಮನಿಷ್ಠಾಯಕತ್ವಾಭಾವತ್ । ಯೇಷಾಂತು ಫಲಾಭಿಲಾಷೋ ವಿಗಲಿತಸ್ತೇಷಾಂ ನ ವೇದಾಬನ್ಧಕಾಃ, ಯತೋ ವೇದಾಃ ಪರಂ ತೇಷಾ ಸಮ್ಯಗ್ಜ್ಞಾನೋಪಯೋಗಿನಃ । ' (ಗೀ. ೨-೪೫) ಎಂಬುದಾಗಿ ನಿರೂಪಿಸಿರುವುದರ ಭಾವವು ಸಹೃದಯಭಾವಗ್ರಾಹ್ಯವಾಗಿರುವುದಲ್ಲವೇ ? ಮತ್ತು—

ಕಿಂ ವೇದೈಃ ಸ್ಮೃತಿಭಿಂ ಪುರಾಣಪಠನೈಃ ಶಾಸ್ತ್ರೈರ್ಮಹಾವಿಸ್ತರೈಃ
ಸ್ವರ್ಗಗ್ರಾಮಕುಟೀನಿವಾಸಫಲದೈಃ ಕರ್ಮಕ್ರಿಯಾವಿಭ್ರಮೈಃ ।
ಮುಕ್ತ್ವೈಕಂ ಭವದುಃಖಭಾರರಚನಾವಿಧ್ವಂಸಕಾಲಾನಲಂ
ಸ್ವಾತ್ಮಾನಂದಪದಪ್ರವೇಶಕಲನಂ ಶೇಷೈರ್ವಣಿಗ್ವೃತ್ತಿಭಿಃ ॥

ಈ ವಿಧವಾದ ವಾಕ್ಯಗಳು ವೇದಾಗಮಗಳ ಉತ್ತರಭಾಗದಲ್ಲಿ ಬಿತ್ತರಿಸಲ್ಪಡುವ ಉತ್ತಮವಾದ ಬ್ರಹ್ಮಾತ್ಮೈಕ್ಯಶಬ್ದಿತ ಲಿಂಗಾಂಗ ಸಾಮರಸ್ಯಜ್ಞಾನಾನಂದೈಶ್ವರ್ಯ ಪ್ರಾಶಸ್ತ್ಯಪರವಾದುವೇ; ವೇದಾಗಮಶಾಸ್ತ್ರ ನಿಂದಾತ್ಮಕಗಳಲ್ಲವಾದುದರಿಂದ, ವೇದಪ್ರಮಾಣವು ಸರ್ವಾದರಣೀಯವಾದುದೆಂದೇ ತಿಳಿಯತಕ್ಕದ್ದು.

ಈ ಮೇರೆಗೆ, ಪ್ರಮಾಣಯುಕ್ತಿದೃಷ್ಟಾಂತಸ್ವಾನುಭವಗಳಿಂದ ಪರಿಶೀಲಿಸಿದರೆ, ಪ್ರಾಚೀನಮಹರ್ಷಿಗಳಾದರೂ ವೇದವನ್ನು ಪರಂಪರೆಯಿಂದ ಹೇಳುತ್ತ ಬಂದವರಲ್ಲದೆ ಅದನ್ನು ರಚಿಸಿದವರಲ್ಲ. ಅದುಕಾರಣ, ಪರಮೇಶ್ವರನಲ್ಲಿ ನಿತ್ಯಸಿದ್ಧವಾದ ಜ್ಞಾನಶಕ್ತಿಯ ವಿಕಾಸಭೂತವಾದ ವೇದವಾದರೂ ನಿತ್ಯವಾದುದೇ ಎಂಬಭಿಪ್ರಾಯವನ್ನು ಬಾದರಾಯಣ ಮುನಿಯು— **ಅತಏವಚ ನಿತ್ಯತ್ವಮ್** ' (೧-೩-೨೯) ಎಂದು ಸೂತ್ರಿಸಿದ್ದಾನೆ. ವೇದಶಬ್ದದಿಂದೇ ಜಗದುತ್ಪತ್ತಿಯಾಗಿರುವುದರಿಂದ ವೇದವು ನಿತ್ಯವಾಗಿದೆ; ಎಂದು ಸೂತ್ರಾರ್ಥವು. ಸಾಯಣಾಚಾರ್ಯರು ಋಗ್ವೇದ ಭಾಷ್ಯಭೂಮಿಕೆಯಲ್ಲಿ ನಿರೂಪಿಸಿರುವ ವೇದಪ್ರಾಮಾಣ್ಯ ವಿಷಯಕವಾದ ವಿಚಾರ ಸರಣಿಯೂ ಬಹ್ವಂಶದಿಂದ ಮನನೀಯವಾಗಿದೆ.

ಅಂತಪ್ಪ ಶುದ್ಧವಿದ್ಯಾತತ್ತ್ವರೂಪವೂ, ಅನಾದಿಸಿದ್ಧವೂ, ಚತುರ್ವಿಧ ಪುರುಷಾರ್ಥಬೋಧಕವೂ, ಸ್ವತಃ ಪ್ರಮಾಣಭೂತವೂ ಆದ ' **ವೇದ** '

ವೆಂಬುದರ ಲಕ್ಷಣವು ಈ ವರೆಗೆ ನಿರೂಪಿಸಲ್ಪಟ್ಟಿತು: ಇನ್ನು ಮುಂದೆ ಆ ವೇದದ ಆಂತರಂಗಿಕ ಸ್ವರೂಪವನ್ನು ಕಂಡುಕೊಳ್ಳಲು ತೊಡಗುವಾ.

ಶ್ರೌತಸೂತ್ರಕಾರರು— '**ಮನ್ತ್ರ ಬ್ರಾಹ್ಮಣಯೋರ್ವೇದನಾಮ ಧೇಯಮ್.**' (ಹಿರಣ್ಯ. ಶ್ರೌ. ೧—೧) ಎಂದು ಸೂಚಿಸುವ ಮೇರೆಗೆ ವೇದವು. ಸಂಹಿತೆ ಬ್ರಾಹ್ಮಣಗಳೆಂಬ ಎರಡು ಭಾಗವುಳ್ಳದ್ದಾಗಿದೆ. ಬ್ರಾಹ್ಮಣದೊಳಗಣ ಕೊನೆಯ ಕೆಲವು ಭಾಗಗಳು ಆರಣ್ಯಕಗಳೆಂತಲೂ ಉಪನಿಷತ್ತುಗಳೆಂತಲೂ ಹೇಳಿಸಿಕೊಳ್ಳಲ್ಪಡುತ್ತವೆ. ಅದು ಕಾರಣವೇ ಆರಣ್ಯಕಗಳ ಹಾಗೂ ಉಪನಿಷತ್ತುಗಳ ಹೊರತಾಗಿ ಉಳಿದ ಭಾಗವೆಲ್ಲವೂ ಬ್ರಾಹ್ಮಣವೆಂಬ ಸಂಜ್ಞೆಯನ್ನು ತಳೆದಿರುವುದು. ಈ ವಿಧವಾದ ವೇದವಾಙ್ಮಯ ಭಾಗಗಳಲ್ಲಿ ಮೊದಲನೆಯ ಭಾಗವು ಸಂಹಿತೆಯು. ಇಂತಹ ಸಂಹಿತೆಗಳಾದರೋ ಪೂರ್ವದಲ್ಲಿ ಬಹುಳವಾಗಿದ್ದಿರಬಹುದೆಂದು ಊಹೆಯಾಗುವುದು. ಈಗಲಾದರೋ ಋಗ್ಯಜುಃಸಾಮಾಥರ್ವಗಳೆಂಬ ಈ ನಾಲ್ಕೇ ವೇದಗಳು ಸರ್ವತ್ರಪ್ರಸಿದ್ಧಗಳಾಗಿರುವುದರಿಂದ ಪ್ರತಿಯೊಂದು ವೇದದ ಒಂದೊಂದು ಸಂಹಿತೆಯ ಮೇರೆಗೆ ನಾಲ್ಕು ಸಂಹಿತೆಗಳಿರುತ್ತವೆ.

ಸಂಹಿತಾ ಎಂಬುದರ ಅರ್ಥವನ್ನು ಯಾಸ್ಕಾಚಾರ್ಯನು— '**ಪರಃಸನ್ನಿಕರ್ಷಃಸಂಹಿತಾ**' (ನಿರು. ಅ. ೧, ಖಂ-೧೭, ಸೂ. ೪) ಉತ್ಕೃಷ್ಟವಾದ ಸಂಬಂಧವು ಸಂಹಿತೆಯು ಎಂದು ಹೇಳಿರುವನಲ್ಲದೆ. ಸಂಹಿತೆಯ ಲಕ್ಷಣವನ್ನು ಬೋಧಿಸತಕ್ಕ '**ಪದಪ್ರಕೃತಿಃಸಂಹಿತಾ**' (ಋ. ಪ್ರಾತಿಶಾ. ಪ. ೨; ಸೂ. ೧) ಪದಗಳ ಪ್ರಕೃತಿ (ವಿಕಾರ) ಭೂತವಾದುದು ಸಂಹಿತೆಯು; ಎಂಬ ಶೌನಕಮುನಿಯು ವಾಕ್ಯವನ್ನಾದರೂ ಅಂಗೀಕರಿಸಿರುವನು. '**ಸಂಹಿತಾ**' ಎಂಬ ಶಬ್ದದ ಅರ್ಥವನ್ನು ವೈಯಾಕರಣರು ಸ್ವಲ್ಪ ಭಿನ್ನವಾಗಿ ಯೋಜಿಸುವರು. ಪಾಣಿನಿಯು (೧-೪-೧೦೯) ಅಕ್ಷರಗಳ ಇಲ್ಲವೆ ಶಬ್ದಗಳ ಏಕಪ್ರಾಣರೂಪ ಸಂಯೋಗಕ್ಕೆ ಸಂಹಿತೆಯೆಂಬ ಸಂಜ್ಞೆಯನ್ನು ಸೂಚಿಸಿದ್ದಾನೆ. ಪ್ರಕೃತದಲ್ಲಿ ವಿವಕ್ಷಿತವಾರ ಸಂಹಿತೆ ಶಬ್ದಾರ್ಥವನ್ನು ನಾವೀಗ ತೋರಿಸುತ್ತೇವೆ. ಒಂದೇ ವಿಷಯಕ್ಕೆ ಸಂಬಂಧಿಸಿದ ಸರ್ವಪ್ರಕಾರದ ವಾಙ್ಮಯವನ್ನು ಒತ್ತಟ್ಟಿಗೆ (ಒಂದು ಕಡೆ) ಕೂಡಿಸಿ ದೊಡ್ಡ ಗ್ರಂಥವನ್ನಾಗಿ ಮಾಡಲ್ಪಟ್ಟುದಕ್ಕೆ 'ಸಂಹಿತಾ' ಎನ್ನುವರು. ಪ್ರತಿಯೊಂದು ಶಾಖೆಯ ಇಂತಹ ಸಂಹಿತಾ ಗ್ರಂಥಗಳು ಪ್ರಸಿದ್ಧವಾಗಿವೆ, **ಶಾಕಲ ಸಂಹಿತೆ, ಬಾಷ್ಕಲ ಸಂಹಿತೆ,**

**ತೈತ್ತಿರೀಯ ಸಂಹಿತೆ, ರೌದ್ರೀ ಸಂಹಿತೆ, ವಾಜಸನೇಯಿ ಸಂಹಿತೆ, ಮೈತ್ರಾಯಣೀ ಸಂಹಿತೆ, ಕಾಠಕ ಸಂಹಿತೆ, ಸಾಮವೇದ ಸಂಹಿತೆ, ಅಥರ್ವವೇದ ಸಂಹಿತೆ** ಎಂಬೀ ಮೊದಲಾದ ಸಂಹಿತಾ ಗ್ರಂಥಗಳು ಉಪಲಬ್ಧವಾಗಿವೆ. ಈ ವಿಧವಾದ ಸಂಹಿತೆಗಳಿಗೆ ಶಾಖೆಗಳ ಇಲ್ಲವೆ ಅವುಗಳ ಸಂಗ್ರಾಹಕರ ಹೆಸರುಗಳಿಡಲ್ಪಟ್ಟಿರುತ್ತವೆ. ತಾಂತ್ರಿಕೀಶ್ರುತಿ ಯೆಂದು ಪ್ರಸಿದ್ಧವಾಗಿರುವ ಶೈವಾಗಮವಾಙ್ಮಯವಾದರೂ ಕಾಮಿಕ, ಪಾರಮೇಶ್ವರ ಮೊದಲಾದ ಹೆಸರುಗಳಿಂದ ಬೇರೆ ಬೇರೆ ಸಂಹಿತಾ ರೂಪವಾಗಿರುವುದು. ಈ ವೈದಿಕ ತಾಂತ್ರಿಕವಾಙ್ಮಯವನ್ನನುಸರಿಸಿರುವ ದೊಡ್ಡ ದೊಡ್ಡ ಪುರಾಣಗ್ರಂಥಗಳಿಗಾದರೂ ಸಂಹಿತೆಗಳೆನ್ನುವ ಪದ್ಧತಿ ಯುಂಟು. ಆದ್ದರಿಂದ ಸ್ಕಾಂದ, ಶೈವ, ಲೈಂಗ್ಯಾದಿಪುರಾಣಗಳಿಗೂ ಮಹಾಭಾರತವೆಂಬ ಇತಿಹಾಸಕ್ಕೂ ಸಂಹಿತೆಗಳೆಂದು ಹೇಳುವ ಪರಿ ಪಾಠವಿದೆ.

ಇದರಿಂದ ಮೊದಲು ವೇದದ ಪದಪಾಠವಿದ್ದಿತೆಂದೂ. ಬಳಿಕ ಸಂಧಿನಿಯಮಾನುಸಾರವಾಗಿ ಶಬ್ದಗಳ ಸಂಧಿರಚನೆಯಾಗಿ ಸಂಹಿತಾ ಪಾಠವಾದುದೆಂದೂ ತಿಳಿದುಬರುತ್ತದೆ. ಸಂಹಿತೆಗಳು ಛಂದೋಬದ್ಧಗ ಳಾಗಿರುತ್ತವೆ. ಪರಿಕಿಸಿದರೆ ಪ್ರಾಚೀನತಮ ಆರ್ಯಋಷಿಗಳ ಕಾವ್ಯ ಮಯ ಸಹಜೋದ್ಗಾರಗಳು ಋಕ್ಸಂಹಿತೆಯಲ್ಲಿಯೇ ಕಂಡುಬರುತ್ತವೆ. ಆರ್ಯವಂಶೀಯರಾದ ಪ್ರಾಚೀನ ಮನುಷ್ಯರ ಆಚಾರ, ವಿಚಾರ, ಆಹಾರ, ವಿಹಾರ ಮತ್ತು ಆ ಕಾಲದಪರಿಸ್ಥಿತಿ ಮುಂತಾದುದಕ್ಕೆ ಸಂಬಂಧಿ ಸಿದ ಜ್ಞಾನವು ನಮಗೆ ಋಗ್ವೇದದಲ್ಲಿ ಚೆನ್ನಾಗಿ ದೊರೆಯುವುದು.

ಪಾಠಪ್ರಣಾಲಿಕೆಯ ಭೇದಮೂಲಕ ಸಂಹಿತೆಯು ಎರಡು ವಿಧ ವಾಗಿ ಪಠಿಸಲ್ಪಡುವುದು. ಮೊದಲನೆಯ ಪದ್ಧತಿಗೆ ನಿರ್ಭುಜವೆಂದೂ ಎರಡನೆಯದಕ್ಕೆ ಪ್ರತೃಣವೆಂದೂ ಹೇಳುತ್ತಾರೆ. ಅವುಗಳಲ್ಲಿ ಮೂಲದ ಅವಿಕಲಪಾಠವುಳ್ಳುದೇ ನಿರ್ಭುಜಸಂಹಿತೆಯು. ಹೇಗೆಂದರೆ, **ಅಗ್ನಿ ಮೀಳೆ ಪುರೋಹಿತಮ್** ' ಎಂಬುದರ ಪಾಠವು. ' **ಅಗ್ನಿಮೀಳೆ ಪುರೋಹಿತಂ** ' ಎಂದಿರುವುದು. ಆದರೆ ಮೂಲವು ವಿಕೃತರೂಪದಿಂದ ಪಠಿಸಲ್ಪಡುವುದಾದರೆ ಅದು ಪ್ರತೃಣಸಂಹಿತೆಯೆನಿಸುವುದು. ಈ ಪ್ರತೃಣ ಸಂಹಿತೆಯಲ್ಲಿ ಪದಸಂಹಿತೆ, ಕ್ರಮಸಂಹಿತೆ ಮೊದಲಾದ ಭೇದಗಳಿವೆ. ಸಂಧಿ ವಿರಾಮಾದಿಗಳಿ ವಿಚಾರಕ್ಕಾಸ್ಪದವಾದುದು ಪದಸಂಹಿತೆಯು. ಹೇಗೆಂದರೆ ಋಕ್ಸಂಹಿತೆಯ ' **ಅಗ್ನಿಮೀಳೆ ಪುರೋಹಿತಂ ಯಜ್ಞಸ್ಯ**

ದೇವಮೃತ್ವಿಜಮ್' ಎಂಬ ಪ್ರಥಮಮಂತ್ರವು ಪದಪಾಠದಲ್ಲಿ— 'ಅಗ್ನಿಮ್, ಈಲೆ, ಪುರಃ, ಹಿತಮ್, ಯಜ್ಞಸ್ಯ, ದೇವಮ್, ಋತ್ವಿಜಮ್ ಎಂದು ಪಠಿಸಲ್ಪಡುವುದು. ಆದರೆ ಕ್ರಮಸಂಹಿತೆಯ ಪಾಠವು ಸ್ವಲ್ಪವಿಚಿತ್ರವಾಗಿದೆ— 'ಅಗ್ನಿಂ ಈಲೆ ಪುರೋಹಿತಂ, ಪುರೋಹಿತಂ ಯಜ್ಞಸ್ಯ, ಯಜ್ಞಸ್ಯದೇವಂ, ದೇವಂ ಋತ್ವಿಜಮ್ ಜಟಾಪಾಠವು ಇದಕ್ಕೂ ವಿಚಿತ್ರವಾಗಿದೆ— 'ಅಗ್ನಿಂ ಈಲೆ, ಈಲೆ ಅಗ್ನಿಂ, ಅಗ್ನಿಂ ಈಲೆ; ಈಲೆ ಪುರೋಹಿತಂ, ಪುರೋಹಿತಂ ಈಲೆ, ಈಲೆ ಪುರೋಹಿತಂ; ಪುರೋಹಿತಂ ಯಜ್ಞಸ್ಯ; ಯಜ್ಞಸ್ಯ ಪುರೋಹಿತಂ, ಪುರೋಹಿತಂ ಯಜ್ಞಸ್ಯ; ಯಜ್ಞಸ್ಯ ದೇವಂ, ದೇವಂ ಯಜ್ಞಸ್ಯ, ಯಜ್ಞಸ್ಯ ದೇವಂ; ದೇವಂ ಋತ್ವಿಜಂ, ಋತ್ವಿಜಂ ದೇವಂ, ದೇವಂ ಋತ್ವಿಜಂ; ಘನಪಾಠವಾದರೋ ಬಹು ಘನವಾಗಿದೆ— 'ಅಗ್ನಿಂ ಈಲೆ ಈಲೆ ಅಗ್ನಿಂ ಅಗ್ನಿಂ ಈಲೆ ಪುರೋಹಿತಂ ಪುರೋಹಿತಂ ಈಲೆ ಅಗ್ನಿಂ ಅಗ್ನಿಂ ಈಲೆ ಪುರೋಹಿತಂ, ಈಲೆ ಪುರೋಹಿತಂ ಪುರೋಹಿತಂ ಈಲೆ ಈಲೆ ಪುರೋಹಿತಂ ಯಜ್ಞಸ್ಯ ಯಜ್ಞಸ್ಯ ಪುರೋಹಿತಂ ಈಲೆ ಈಲೆ ಪುರೋಹಿತಂ ಯಜ್ಞಸ್ಯ ಪುರೋಹಿತಂ ಯಜ್ಞಸ್ಯ ಯಜ್ಞಸ್ಯ ಪುರೋಹಿತಂ ಪುರೋಹಿತಂ ಯಜ್ಞಸ್ಯ ದೇವಂ ದೇವಂ ಯಜ್ಞಸ್ಯ ಪುರೋಹಿತಂ ಪುರೋಹಿತಂ ಯಜ್ಞಸ್ಯ ದೇವಂ ಯಜ್ಞಸ್ಯ ದೇವಂ ದೇವಂ ಯಜ್ಞಸ್ಯ ಯಜ್ಞಸ್ಯ ದೇವಂ ಋತ್ವಿಜಂ ಋತ್ವಿಜಂ ದೇವಂ ಯಜ್ಞಸ್ಯ ಯಜ್ಞಸ್ಯ ದೇವಂ ಋತ್ವಿಜಮ್' ಎಂದಿರುವ ಈ ಆಮ್ರೇಡನವು, ಮೂಲಪಾಠವು ಯಾರಿಂದಲೂ ಬೇರೊಂದು ಅಕ್ಷರವೂ ಸಹ ಪ್ರಕ್ಷಿಪ್ತವಾಗದಂತೆ ಸದೈವ ಸುದ್ಧವಾಗಿರಬೇಕೆಂಬ ಸದುದ್ದೇಶದಮೂಲಕವಾಗಿರುವುದು. ಈ ವಿಧವಾದ ಪಾಠಕ್ರಮಗಳಲ್ಲಿ ಮಾಲಾ, ಶಿಖಾ, ಲೇಖಾ, ಧ್ವಜ, ದಂಡ, ರಥವೆಂಬುದಾಗಿ ಇನ್ನೂ ಕೆಲವಿವೆ. ಬರಹದ ಹಬ್ಬುಗೆಗೆ ಭಯಪಟ್ಟು ನಾವಿಲ್ಲಿ ಅವುಗಳನ್ನು ಉಲ್ಲೇಖಿಸದಿರುವೆವು. ಜಿಜ್ಞಾಸಾಬುದ್ಧಿಯುಳ್ಳವರು ವಿಕೃತವಲ್ಲೀ ಮೊದಲಾದ ಗ್ರಂಥಗಳಿಂದರಿತುಕೊಳ್ಳಬಹುದು.

ಈಶ್ವರನಿಂದುಪದಿಷ್ಟವಾದ ವೇದವು ಮೊದಲು ಒಂದೇ ಇದ್ದಿತೆಂದೂ ಅದು ಮುಂದೆ ಬ್ರಹ್ಮನ ನಾಲ್ಕು ಮುಖಗಳಿಂದ ನಾಲ್ಕು ಭಾಗಗಳಾಗಿ ಪ್ರಕಟವಾಯಿತೆಂದೂ ಕೆಲವು ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಮತ್ತು, ಬ್ರಹ್ಮನು ಸ್ವಾಯಂಭುಮನ್ವಂತರದಲ್ಲಿ ಮನುವನ್ನು

ಕುರಿತು ಚತುಷ್ಪಾದಾತ್ಮಕವಾದ ಒಂದೇ ವೇದವನ್ನು ನಾಲ್ಕು ವಿಭಾಗಗಳನ್ನಾಗಿ ಮಾಡೆಂದು ಆಜ್ಞಾಪಿಸಿದನೆಂಬ ಸಂಗತಿಯು ವಾಯುಪುರಾಣದಲ್ಲಿ ( ಅ. ೬೦; ೨—೮ ) ಪ್ರತಿಪಾದಿಸಲ್ಪಟ್ಟಿದೆ. ವೈವಸ್ವತಮನ್ವಂತರದಲ್ಲಿ ವ್ಯಾಸನು ಮತ್ತೆ ವೇದವನ್ನು ವಿಭಾಗಗೊಳಿಸಿದನೆಂಬರ್ಥಬೋಧಕವಾಕ್ಯಗಳು ಭಾರತ, ಭಾಗವತಗ್ರಂಥಗಳಲ್ಲಿವೆ. ಭಾಗವತದಲ್ಲಾದರೋ ಈ ಬಗ್ಗೆ (೧, ೪; ೧೨, ೬;) ವಿಸ್ತಾರವಾಗಿ ಹೇಳಲ್ಪಟ್ಟಿದೆ. ಮಹೀಧರನು ವಾಜಸನೇಯಿ ( ಶುಕ್ಲಯಜುಃ ) ಸಂಹಿತೆಯ ಭಾಷ್ಯಾರಂಭದಲ್ಲಿ— ' **ತತ್ರಾದೌ ಬ್ರಹ್ಮಪರಂಪರಯಾ ಪ್ರಾಪ್ತಂ ವೇದಂ ವೇದವ್ಯಾಸೋ ಮನ್ದಮತೀನ್ ಮನುಷ್ಯಾನ್ವಿಚಿನ್ತ್ಯ ತತ್ಕೃಪಯಾ ಚತುರ್ಧಾ ವ್ಯಸ್ಯ ಋಗ್ಯಜುಃ ಸಾಮಾಥರ್ವಾಖ್ಯಾಂಶ್ಚತುರೋ ವೇದಾನ್ ಪೈಲವೈಶಮ್ಪಾಯನ-ಜೈಮಿನಿ-ಸುಮನ್ತುಭ್ಯಃ ಕ್ರಮಾದುಪದಿದೇಶ** ' ವೇದವ್ಯಾಸನು ಕಾಲಕ್ರಮೇಣ ಜನರು ಮಂದಮತಿಗಳಾಗುತ್ತಿರುವದನ್ನವಲೋಕಿಸಿ, ಬ್ರಹ್ಮಪರಂಪರೆಯಿಂದ ಬಂದ ವೇದವನ್ನು ಆ ಬ್ರಹ್ಮನ ಪ್ರೇರಣೆಯಿಂದೇ ಋಕ್, ಯಜುಸ್ಸು, ಸಾಮ, ಅಥರ್ವವೆಂಬ ಸಂಜ್ಞೆಯುಳ್ಳ ನಾಲ್ಕು ವಿಭಾಗಗಳನ್ನಾಗಿ ಮಾಡಿ, ಅವನ್ನು ಅನುಕ್ರಮವಾಗಿ ಪೈಲ, ವೈಶಂಪಾಯನ, ಜೈಮಿನಿ, ಸುಮನ್ತು ಎಂಬ ಈ ನಾಲ್ಕು ಜನ ಶಿಷ್ಯರಿಗೆ ಉಪದೇಶಿಸಿದನು; ಎಂದು ಹೇಳಿರುವನು. ಹೀಗೆ, ವೇದವನ್ನು ವಿಭಾಗಗೊಳಿಸಿದುದರಿಂದೇ ಕೃಷ್ಣದ್ವೈಪಾಯನಮುನಿಗೆ ' ವೇದವ್ಯಾಸ ' ನೆಂಬ ಹೆಸರುಂಟಾಯಿತು. ಆ ವೇದವ್ಯಾಸನು ಪ್ರಾಚೀನಸಂಹಿತೆಗಳನ್ನೇ ಸುವ್ಯವಸ್ಥಿತವಾಗಿ ಸಂಕಲನಮಾಡಿ ತನ್ನ ನಾಲ್ಕು ಮಂದಿ ಶಿಷ್ಯರಿಗೆ ಬೋಧಿಸಲು, ಮುಂದೆ ಋಕ್ಸಂಹಿತೆಯ ಪ್ರವರ್ತಕನಾದ ಪೈಲನಿಗೆ ಇಬ್ಬರು ಶಿಷ್ಯರಾಗಿ ಆ ವೇದವನ್ನು ಗ್ರಹಿಸಿದರು; ಈ ಶಿಷ್ಯಪರಂಪರೆಯಲ್ಲಿ ಬಾಷ್ಕಲ, ಶಾಕಲರೆಂಬಿಬ್ಬರು ಶಿಷ್ಯರು ಆ ವೇದವನ್ನು ಹೆಚ್ಚಾಗಿ ಹಬ್ಬಿಸಿದರು. ವೈಶಂಪಾಯನನು ವೇದವ್ಯಾಸನಿಂದ ತನಗುಪದಿಷ್ಟವಾದ ಯಜುಃಸಂಹಿತೆಯನ್ನು ತನ್ನ ಅನೇಕ ಶಿಷ್ಯರಿಗೆ ಕಲಿಸಿದನು. ಅವರಲ್ಲಿ ಯಜ್ಞವಲ್ಕ್ಯನೆಂಬವನೂ ಶಿಷ್ಯನಾಗಿದ್ದನು; ಇವನಿಗೂ ವೈಶಂಪಾಯನಿಗೂ ಕಾರಣಾಂತರದಿಂದ ಪರಸ್ಪರ ವೈಮನಸ್ಯವುಂಟಾಗಲು ಯಾಜ್ಞವಲ್ಕ್ಯನು ತಾನುಗ್ರಹಿಸಿದ ವೇದವನ್ನು ಕಾರಿ ಹೊರಚಲ್ಲಿದನು; ಆದನ್ನು ವೈಶಂಪಾಯನನ ಬೇರೆ ಶಿಷ್ಯರು ತಿತ್ತಿರಿಪಕ್ಷಿಗಳ ರೂಪದಿಂದ ಗ್ರಹಿಸಿದರು. ಅಂದಿನಿಂದ ಆ ಶಿಷ್ಯರಿಗೆ

'ತೈತ್ತಿರೀಯ' ರೆಂಬಭಿಧಾನವುಂಟಾಯಿತು. ವೈಶಂಪಾಯನಗೋಸ್ಕರ ಕೆಲವು ಶಿಷ್ಯರು ವ್ರತಾಚರಣೆಗಳನ್ನು ಮಾಡತೊಡಗಿದ್ದರಿಂದ ಅವರಿಗೆ ಚರಕಾಧ್ವರ್ಯುಗಳೆಂಬ ನಾಮವುಂಟಾಯಿತು. ಯಾಜ್ಞವಲ್ಕ್ಯನು ಸೂರ್ಯನನ್ನು ಆರಾಧಿಸಿ ಎರಡನೆಯ ಯಜುಃಸಂಹಿತೆಯನ್ನು ದೊರಕಿಸಿದನು. ಅದುವೇ ಶುಕ್ಲಯಜುರ್ವೇದವೆಂದೂ, ವಾಜಸನೇಯಿಸಂಹಿತೆಯೆಂದೂ ಪ್ರಸಿದ್ಧವಾಗಿದೆ. ಜೈಮಿನಿಯು ವ್ಯಾಸನಿಂದ ಪಡೆದ ಸಾಮವೇದವನ್ನು ತನ್ನ ಮಕ್ಕಳಿಗೂ ಶಿಷ್ಯರಿಗೂ ಕಲಿಸಿದನು; ಇವನ ಶಿಷ್ಯಪರಂಪರೆಯಲ್ಲಿ ಪೌಷ್ಯಂಜಿ ಮೊದಲಾದವರು ಪ್ರಸಿದ್ಧಿಗೆ ಬಂದರು. ಸುಮಂತನು ತನ್ನ ಅಥರ್ವವೇದವನ್ನು ಕಬಂಧನಿಗುಪದೇಶಿಸಿದನು; ಅವನು ತನ್ನ ಇಬ್ಬರು ಶಿಷ್ಯರಿಗೆ ಆ ವೇದವನ್ನು ಬೋಧಿಸಿದನು. ಅವರಿಬ್ಬರಲ್ಲಿ ವೇದದರ್ಶನೆಂಬಾತನಿಗೆ ನಾಲ್ಕು ಮಂದಿಯೂ ಪಥ್ಯನೆಂಬುವವನಿಗೆ ಮೂರುಮಂದಿಯೂ ಶಿಷ್ಯರಾದರು.

**ಋಗ್ವೇದವು :—**

**ಋಕ್** ಎಂಬ ಶಬ್ದದಿಂದ 'ಕಾಂತಿಯು' ಮೊದಲಾದ ಅರ್ಥಗಳು ಅರಿಯಲ್ಪಡುವುವು. ಯಾಸ್ಕನು ಮುಂತಾದವರು 'ಅರ್ಚಯನ್ತಿ ಅನಯಾ ಇತಿ ಋಕ್' ಎಂದು ಹೇಳುವ ಮೇರೆಗೆ ಪ್ರಕೃತದಲ್ಲಿ ದೇವತೆಗಳ ಸ್ತೋತ್ರರೂಪವಾದ ಮಂತ್ರಕ್ಕೆ '**ಋಕ್**' ಎಂಬ ಸಂಜ್ಞೆಯುಂಟು. ಅದುಕಾರಣವೇ, ಋಕ್ಕುಗಳು ಅಂದರೆ ಸ್ತುತಿಗಳು ಎಂಬುದಾಗಿ ಹೇಳುವುದು ಬಳಕೆಯಲ್ಲಿದೆ. ಋಗ್ವೇದಕ್ಕೆ ಕಾತ್ಯಾಯನಪ್ರಣೀತ ಸರ್ವಾನುಕ್ರಮಣಿಯೂ, ಶೌನಕಪ್ರಣೀತ ಅನುವಾಕಾನುಕ್ರಮಣಿಯೂ ಇರುವುವು. ಅವುಗಳಿಗೆ ವೃತ್ತಿರೂಪ ಟೀಕೆಗಳೂ ಇವೆ; ಆ ಟೀಕೆಗಳ ಕೊನೆಯಲ್ಲಿ ಟೀಕಾಕಾರನು ತನ್ನ ಹೆಸರನ್ನು ಷಡ್ಗುರು ಶಿಷ್ಯನೆಂದು ತಿಳಿಸುವನು. ಆತನ ಆರು ಮಂದಿ ಗುರುಗಳು (೧) ವಿನಾಯಕ, (೨) ತ್ರಿಶೂಲಾಂಕ, (೩) ಗೋವಿಂದ, (೪) ಸೂರ್ಯ, (೫) ವ್ಯಾಸ, (೬) **ಶಿವಯೋಗಿ** ಎಂಬುದಾಗಿ ಹೇಳಲ್ಪಡುವರು. ಆ ಸರ್ವಾನುಕ್ರಮಣಿಯ ವೃತ್ತಿಯಲ್ಲಿ '**ಋಗಂಶಬಾಹುಲ್ಯಾದೃಗ್ವೇದಃ**' ಎಂದು ಹೇಳಲ್ಪಡುವ ಮೇರೆಗೆ, ಮೊದಲನೆಯ ಸಂಹಿತೆಯ ಮಂತ್ರಗಳಲ್ಲಿ ದೇವತಾಸ್ತೋತ್ರರೂಪವಾದುವೇ ವಿಶೇಷವಾಗಿರುವುದರಿಂದ 'ಋಗಂಶವೇ ಅಧಿಕವಾಗುಳ್ಳದ್ದು 'ಋಗ್ವೇದ' ವೆನಿಸುವುದು.

ಈ ಋಗ್ವೇದ ಶಾಖೆಗಳ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಚರಣವ್ಯೂಹದಲ್ಲಿ ಋಗ್ವೇದ ಶಾಖೆಗಳು ೫; ಯಜುರ್ವೇದ ಶಾಖೆಗಳು ೮೬; ಸಾಮವೇದ ಶಾಖೆಗಳು ೧೦೦೦; ಅಥರ್ವವೇದ ಶಾಖೆಗಳು ೯; ಎಂದು ಹೇಳಲ್ಪಟ್ಟಿವೆ. ಶೌನಕೀಯ ಋಕ್ಪ್ರಾತಿಶಾಖ್ಯದಲ್ಲಿ— ಶಾಕಲ, ಬಾಷ್ಕಲ, ಆಶ್ವಲಾಯನ, ಸಾಂಖ್ಯಾಯನ, ಮಾಂಡೂಕವೆಂಬಿವು ಮುಖ್ಯ ಶಾಖೆಗಳೆಂದೂ ಐತರೇಯ, ಕೌಷೀತಕಿ, ಶೈಶಿರ, ಪೈಂಗಾದಿಗಳು ಉಪಶಾಖೆಗಳೆಂದೂ ಪ್ರತಿಪಾದಿಸಲ್ಪಟ್ಟಿದೆ. ಪಾತಂಜಲಮಹಾಭಾಷ್ಯದಲ್ಲಿ, ಶಬ್ದಪ್ರಯೋಗದ ವಿಸ್ತಾರವನ್ನು ತೋರಿಸುವುದಕ್ಕಾಗಿ— **'ಚತ್ವಾರೋ, ವೇದಾಃ ಸಾಙ್ಗಾಃ ಸರಹಸ್ಯಾಬಹುಧಾ ಭಿನ್ನಾಃ, ಏಕವಿಂಶತಿಧಾ ಬಾಹ್ವೃಚ್ಯಂ । ಏಕಶತಮಧ್ವರ್ಯುಶಾಖಾಃ । ಸಹಸ್ರವರ್ತ್ಮಾಸಾಮವೇದಃ । ನವಧಾಽಥರ್ವಣೋ ವೇದಃ"।** ಋಗ್ವೇದ ಶಾಖೆಗಳು ೨೧, ಯಜುರ್ವೇದ ಶಾಖೆಗಳು ೧೦೦, ಸಾಮವೇದ ಶಾಖೆಗಳು ೧೦೦೦, ಅಥರ್ವವೇದ ಶಾಖೆಗಳು ೯; ಎಂದು ನಿರ್ದೇಶಮಾಡಲ್ಪಟ್ಟಿದೆ. ಈ ಮಹಾಭಾಷ್ಯವಚನಾನುಸಾರವಾಗಿ ವೈದಿಕ ಶಾಖೆಗಳ ಸಂಖ್ಯೆಯು ಒಂದು ಸಾವಿರದ ಮೇಲೆ ಒಂದುನೂರು ಮೂವತ್ತು (೨೧+೧೦೦+೧೦೦೦+೯=೧೧೩೦) ಆಗುವುದು. ಆದರೆ ಇಷ್ಟೆಲ್ಲ ಶಾಖೆಗಳು ಈಗೆಲ್ಲಿವೆ ? ಕಾಲಪ್ರವಾಹದಲ್ಲಿ ಅಡಗಿವೆ! ಅಧ್ಯಯನ ಸಂಪ್ರದಾಯ ಪ್ರವರ್ತಕರಾದ ಶಾಕಲಾದ್ಯಾಚಾರ್ಯರ ಪ್ರವಚನ ಭೇದವು ಶಾಖಾಭೇದ ವ್ಯವಹಾರಕಾರಣವಾಗಿರುವುದರಿಂದ—

**ಶಾಂಖಾಶ್ವಲಾಯನೌ ಚೈವ ಮಾಂಡೂಕೋಬಾಷ್ಕಲಸ್ತಥಾ ।**
**ಬಹ್ವೃಚಾ ಋಷಯಃ ಸರ್ವೇ ಪಂಚೈತೇ ಏಕವೇದಿನಃ ॥**

ಎಂಬ ವಾಕ್ಯವು ಪ್ರಚಾರದಲ್ಲಿರುವುದು. ಆದರೆ ಈಗ ಋಗ್ವೇದದ ಶಾಕಲ ಶಾಖೆಯ ಶಾಕಲ ಸಂಹಿತೆಯೊಂದೇ ಸರ್ವತ್ರ ಪ್ರಸಿದ್ಧವಾಗಿದೆ. ಈಚೆಗೆ ಬಾಷ್ಕಲ ಸಂಹಿತೆಯೂ ಉಪಲಬ್ಧವಿರುವುದೆಂಬ ಸುವಾರ್ತೆಯು ಕೇಳಿಕೆಯಲ್ಲಿದೆ. ಎಷ್ಟು ಶಾಖೆಗಳೋ ಅಷ್ಟೇ ಸಂಹಿತೆಗಳೂ ಬ್ರಾಹ್ಮಣ ಅರಣ್ಯಕಗಳೂ ಉಪನಿಷತ್ತುಗಳೂ, ಶ್ರೌತಸೂತ್ರಗಳೂ ಗೃಹ್ಯಸೂತ್ರಗಳೂ, ಇರಬೇಕೆಂದು ಸಿದ್ಧಾಂತವು. ಆ ಆ ಶಾಖಾನುಯಾಯಿಗಳು ತಮ್ಮ ತಮ್ಮ ಸಂಹಿತೆಗಳನ್ನು ಅಧ್ಯಯನಮಾಡಿ ತಮ್ಮ ವಿಶಿಷ್ಟ ಶ್ರೌತ ಸೂತ್ರದಿಂದ ಶ್ರೌತಕಾರ್ಯವನ್ನೂ ಗೃಹ್ಯಸೂತ್ರದಿಂದ ಗೃಹ್ಯಸಂಸ್ಕಾರಗಳನ್ನೂ

ಸೇರವೇರಿಸಬೇಕಾದುದು ನ್ಯಾಯವು. ಚರಣವ್ಯೂಹಾದಿ ಗ್ರಂಥಗಳಲ್ಲಿ ಬ್ರಾಹ್ಮಣರ ಶಾಖೆಗಳೂ ಸೂತ್ರಗಳೂ ಇನ್ನೂರಕ್ಕಿಂತ ಹೆಚ್ಚಾಗಿರುವುದಾಗಿ ಹೇಳಿದೆ. ಆದರೆ ಅವುಗಳ ಪ್ರತಿಯೊಂದು ಶಾಖೆಯೂ ಸೂತ್ರಗ್ರಂಥವೂ ಉಪಲಬ್ಧವಿಲ್ಲವಾದರೂ ಕೆಲಕೆಲವು ಶಾಖೆಗಳ ಅನುಯಾಯಿಗಳು ಈಗಲೂ ದೃಷ್ಟಿಗೋಚರವಾಗುತ್ತಿರುವರು. ಯಾವ ಯಾವ ಕಾಲದಲ್ಲಿ ಯಾವ ಯಾವ ದೇಶದಲ್ಲಿ ಯಾವ ಯಾವ ಶಾಖೆಗಳೂ ಸೂತ್ರಗಳೂ ಪ್ರಚಾರದಲ್ಲಿದ್ದವೆಂಬುದರ ಸರಿಯಾಗಿ ತಿಳಿವಳಿಕೆಯಾಗಬೇಕಾದರೆ ವೈದಿಕ ವಾಙ್ಮಯೇತಿಹಾಸದ ಸಾಹಾಯ್ಯವು ಅವಶ್ಯವಾದುದು.

ಭಗವದ್ಗೀತೆಯಲ್ಲಿ (೧೦-೨೬) ನಾರದನು 'ದೇವರ್ಷಿ' ಎಂದು ಉಲ್ಲೇಖಿಸಲ್ಪಟ್ಟಿದ್ದಾನೆ. ಸಾಮವೇದಕ್ಕೆ ಸಂಬಂಧಿಸಿದ ಛಾಂದೋಗ್ಯೋಪನಿಷತ್ತಿನ ಏಳನೆಯ ಅಧ್ಯಾಯದಲ್ಲಿ ಸನತ್ಕುಮಾರ ನಾರದರ ಸಂವಾದವಿದೆ. ಸನತ್ಕುಮಾರನು ನಾರದನಿಗೆ ಬ್ರಹ್ಮೋಪದೇಶವನ್ನು ಮಾಡಿರುವನು. ಸನತ್ಕುಮಾರ ಋಷಿಯು ಪುರಾಣಗ್ರಂಥಗಳಲ್ಲಿಯಾದರೋ ಪ್ರಸಿದ್ಧನಾಗಿರುವನು. ಆದರೆ ವೈದಿಕ ವಾಙ್ಮಯದಲ್ಲಿಯು ಸಹ ಅವನ ಹೆಸರು ಕಂಡು ಬರುವುದು. ಮತ್ತು, ಆ ಸನತ್ಕುಮಾರಋಷಿಗೆ ಸ್ಕಂದ (ಕುಮಾರ) ನೆಂಬ ಹೆಸರೂ ಇದ್ದಿತೆಂಬುದು ಮೇಲೆ ನಿರ್ದಿಷ್ಟವಾದ ಉಪನಿಷತ್ತಿನ ಏಳನೆಯ ಅಧ್ಯಾಯದ '**ತಂ ಸ್ಕಂದಮಿತ್ಯಾಚಕ್ಷತೆ**' ಎಂಬ ಸಮಾಪ್ತಿವಾಕ್ಯದಿಂದ ಅರಿಯಲ್ಪಡುವುದು. ಹೀಗೆ ವೇದ ಕಾಲೀನರಾದ ಕೆಲವು ಋಷಿಗಳಿಗೆ ಎರಡೆರಡು ಹೆಸರುಗಳಿದ್ದುದನ್ನು ನಾವು ವೈದಿಕಸಾಹಿತ್ಯದಲ್ಲಿ ವಿಶೇಷವಾಗಿ ಕಂಡುಕೊಳ್ಳಬಹುದು. ಎರಡು ಹೆಸರುಗಳಲ್ಲಿ ಒಂದು ವ್ಯಕ್ತಿನಾಮವೂ ಮತ್ತೊಂದು ವಂಶನಾಮವೂ ಆಗಿರುವವು ಈ ಮೇರೆಗೆ ದೇವರ್ಷಿಯಾದ ಸನತ್ಕುಮಾರನಿಗಾದರೂ ಎರಡು ಹೆಸರುಗಳು ಪ್ರಸಿದ್ಧವಾಗಿದ್ದವು. ಅವುಗಳಲ್ಲಿ ಸನತ್ಕುಮಾರನೆಂಬ ಹೆಸರು ವ್ಯಕ್ತಿ ವಾಚಕವೂ 'ಸ್ಕಂದ' ನೆಂಬಭಿಧಾನವು ವಂಶವಾಚಕವೂ ಆಗಿದ್ದುದರಿಂದಲೇ ಈ ಮೇಲೆ ಹೇಳಲ್ಪಟ್ಟಿರುವಂತೆ ವೈದಿಕವಾಙ್ಮಯದಲ್ಲಿ ಸನತ್ಕುಮಾರನು '**ಸ್ಕಂದ**' ನೆಂಬ ವಿದ್ಯಾವಂಶನಾಮದಿಂದಲೂ ವರ್ಣಿಸಲ್ಪಡುವನು.

'**ಸಂಖ್ಯಾ ವಂಶ್ಯೇನ**' (೨-೧-೧೯) ಎಂಬ ಪಾಣಿನಿಯಸೂತ್ರದಲ್ಲಿರುವ ವಂಶ ಶಬ್ದದ ವ್ಯಾಖ್ಯೆಯನ್ನು ಮಾಡುವಾಗ ವಿದ್ವಾಂಸರು

**' ವಂಶೋದ್ದಿಷ್ಠಾ ವಿದ್ಯಯಾ ಜನ್ಮನಾಚ '** ಎಂದು ಬರೆದು ವಿದ್ಯಾ ವಂಶವನ್ನೊಪ್ಪಿರುವರು. ಈಗಲೂ ವೈದಿಕರೆನಿಸುವವರಲ್ಲಿಯಾದರೋ ಅನೇಕ ವಿಹಿತಾಚಾರಪ್ರಸಂಗಗಳಲ್ಲಿ ಇಂತಹ ಗೋತ್ರದವನೂ ಇಂತಹ ದೊಂದು ಶಾಖೆಯ ಹಾಗೂ ಸೂತ್ರದ ಅಧ್ಯಯನ ಮಾಡತಕ್ಕವನೂ ಎಂದು ನಿರ್ದೇಶಿಸಲ್ಪಡುವುದು ವಿದ್ಯಾವಂಶದ ಮತ್ತು ಜನ್ಮವಂಶದ ಗಮನಕವಾಗಿದೆ. ಈ ವಿಚಾರಸರಣಿಯಿಂದ ಯೋಚಿಸಿದರೆ. ಸನತ್ಕುಮಾರನಿಗೆ ' ಸ್ಕಂದ ' ನೆಂಬ ಹೆಸರು ವಿದ್ಯಾವಂಶವನ್ನನುಲಕ್ಷಿಸಿರುವುದೆಂದು ಹೇಳಲಭ್ಯಂತರವಿಲ್ಲ.

ಪ್ರಾಚೀನಗುರುಗಳೆನಿಸುವ ಸ್ಕಂದ, ನಂದಿ, ಭೃಂಗಿ ಮೊದಲಾದವರು ಸನತ್ಕುಮಾರಾದಿ ದೇವರ್ಷಿಗಳಿಗೆ ಬ್ರಹ್ಮವಿದ್ಯೋಪದೇಶಕರಾಗಿರುವರೆಂಬ ಸಂಗತಿಯಾವರೋ ವೈದಿಕವಾಙ್ಮಯದಲ್ಲಿಯೂ ಪುರಾಣಗ್ರಂಥಗಳಲ್ಲಿಯೂ ಪ್ರಸಿದ್ಧವಾಗಿರುವುದು. ದೇವರ್ಷಿಗಳಿಗೆ ಹಿರಿಯರಾದ ಆ ಸ್ಕಂದ, ನಂದಿ, ಭೃಂಗಿ ಮೊದಲಾದವರು ಆ ಆ ವೇದಶಾಖೆಗಳ ಪ್ರವರ್ತಕರಿದ್ದರೆಂದೂ ತಿಳಿದುಬರುತ್ತದೆ; ಅದು ಕಾರಣವೇ ಅವರ ಶಿಷ್ಯರೆನಿಸುವ ಬೇರೆ ಬೇರೆ ಶಾಖಾ ಪ್ರವರ್ತಕರಾದ ಸನತ್ಕುಮಾರಾದಿಗಳು ಮಂತ್ರದ್ರಷ್ಟರೆನಿಸಿಕೊಳ್ಳುತ್ತಾರೆ. ಈ ಮಾತಿನ ಸತ್ಯತೆಯು ಛಾಂದೋಗ್ಯದಲ್ಲಿ ಅದು ಪ್ರವಚನಕಾರನು ಉಲ್ಲೇಖಿಸಿರುವ ಪ್ರಾಚೀನ ಮಂತ್ರಗಳನ್ನು ಪರಾಮರ್ಶಿಸಿದರೆ ಮನವರಿಕೆಯಾಗದಿರದು.

ವೇದಸಂಹಿತಿಗಳ ಪ್ರಚಾರಕಾಲದಲ್ಲಿಯೇ ಅಧ್ಯಾತ್ಮವಿದ್ಯೆಯ ಪ್ರವರ್ತಕರಾದ ಆತ್ಮಯಾಜಿಗಳ ( ಅಪ್ರಾಕೃತ ಬ್ರಾಹ್ಮಣವರ್ಗೀಯರ ) ಸಂಪ್ರದಾಯವು ಪ್ರಸಿದ್ಧವಾಗಿದ್ದುದರಿಂದೇ ಯಾಜ್ಞಿಕ ವರ್ಗದ ಬ್ರಾಹ್ಮಣರನ್ನು ಎಚ್ಚರಿಸತಕ್ಕ ಆತ್ಮಯಾಜಿಗಳ. ಆ ಆ ಶಾಖೆಗಳು ಯಜ್ಞಸಂಸ್ಥೆಯ ಪ್ರಗತಿಕಾಲದಲ್ಲಿಯೇ ಪಸರಿಸಿದ್ದವು. ಆ ಆ ಶಾಖಾ ಪ್ರವರ್ತಕರ ಹೆಸರುಗಳು ಸಂಹಿತೆಗಳಲ್ಲಿಯೇ ಪರಮದೇವತಾವಾಚಕಶಬ್ದಗಳಿಂದ ಕೂಡಾದಲ್ಪಟ್ಟಿರುವುದನ್ನು ಕಾಣಬಹುದು. ಕಾಠಕಸಂಹಿತೆಯಲ್ಲಿಯೂ ( ೧೭-೧೧ ) ಮೈತ್ರಾಯಣೀಸಂಹಿತೆಯಲ್ಲಿಯೂ ( ೨-೯-೧ ) **' ತತ್ಪುರುಷಾಯ ವಿದ್ಮಹೇ ಕಾರ್ತಿಕೇಯಾಯ ಧೀಮಹಿ ತನ್ನಃ ಸ್ಕಂದಃ ಪ್ರಚೋದಯಾತ್ '** ಎಂಬುದಾಗಿರುವುದು. ಸೋಮಶಂಭು ಶಿವಾಚಾರ್ಯರು **' ಪದ್ಧತಿ '** ಯಲ್ಲಿ, ವೇದಪಾರಾಯಣವಿಧಿ ನಿರೂಪಣಾವಸರದೊಳು

'ಸ್ಕಂದಸೂಕ್ತಂ ತಥೈವಚ' ಎಂದು ನಿರೂಪಿಸಿರುವುದರಿಂದಲೂ ಸ್ಕಂದೋಪನಿಷತ್ತು ಉಪಲಬ್ಧವಿರುವುದರಿಂದಲೂ ಸ್ಕಂದನಂದ್ಯಾದಿ ಪ್ರಾಚೀನ ಗುರುಗಳು ವೇದಶಾಖಾಪ್ರವರ್ತಕರೆಂಬುದು ನಿರ್ವಿವಾದಸಿದ್ಧವು. ಮತ್ತು, ಸೂತಸಂಹಿತೆಯಲ್ಲಿ (೩-೧)—

ಆತ್ಮವಿದ್ಯಾರತಃ ಶ್ರೀಮಾನ್ ಶ್ವೇತಾಶ್ವತರಪುತ್ರಕಃ ।
ಶ್ವೇತಾಶ್ವತರ ಶಾಖಾಯಾಃ ಶ್ರದ್ಧಯೈವ ಪ್ರವರ್ತಕಃ ॥೨೩॥
ಶತರುದ್ರಸಮಾಖ್ಯಶ್ಚ ಶತರುದ್ರೀಯ ಭಕ್ತಿಮಾನ್ ।
ಪಂಚಪ್ರಸ್ಥಾನಹೇತುಜ್ಞಃ ಶ್ರೀಮತ್ಪಂಚಾಕ್ಷರ ಪ್ರಿಯಃ ॥೨೪॥
ಶಿವಸಂಕಲ್ಪಭಕ್ತಶ್ಚ ಶಿವಸೂಕ್ತಪ್ರವರ್ತಕಃ
ಲಿಂಗಸೂಕ್ತಪ್ರಿಯಃ ಕೈವಲ್ಯೋಪನಿಷತ್ಪ್ರವರ್ತಕಃ ॥೨೫॥

ಎಂದು ನಿರೂಪಿಸಲ್ಪಟ್ಟಿರುವ ವಾಕ್ಯಗಳಲ್ಲಿ ಕಂಡುಬರುವ ಬೇರೆ ಬೇರೆ ಸೂಕ್ತಗಳ ಹಾಗೂ ಉಪನಿಷತ್ತುಗಳ ಪ್ರವರ್ತಕರಾದರೂ, ಆ ಸ್ಕಂದ ನಂದ್ಯಾದಿ ಪ್ರಾಚೀನಗುರುಗಳ ಶಾಖಾನುವರ್ತಿಗಳೇ ಆಗಿದ್ದಾರೆ.

ಆ ಪ್ರಾಚೀನಗುರುಗಳ ವಂಶಪರಂಪರೆಯಾದರೂ ಭರತಖಂಡ ದಲ್ಲಿ ಮೊದಲಿನಿಂದಲೂ ಬಿಡುವಿಲ್ಲದೆ ಪಸರಿಸಿದುದರ ಉದಾಹರಣೆ ಗಳಾದರೂ ಇವೆ. ೧೩ನೆಯ ಶತಮಾನದಲ್ಲಿದ್ದ ಸೋಮನಾಥನು ಸುಪ್ರ ಸಿದ್ಧನಾದ ವೇಮನಾರಾಧ್ಯವಂಶೀಯನು. ಇವನು ತನ್ನಿಂದ ರಚಿಸ ಲ್ಪಟ್ಟ 'ಅನುಭವಸಾರ' ವೆಂಬ ತೆನುಗುಗ್ರಂಥದಲ್ಲಿ—

ಭೃಂಗಿರಿಟಿಗೋತ್ರುಡನು ಗುರು ।
ಲಿಂಗ ತನೂಜುಂಡ ಶಿವಕುಲೀನುಡು ದುರ್ವ್ಯಾ ॥
ಸಂಗ ವಿವರ್ಜಿತ ಚರಿತುಡು ।
ಜಂಗಮಲಿಂಗ ಪ್ರಸಾದ ಸತ್ಪ್ರಾಣುಂಡನ್ ॥

ಎಂಬ ಕಂದಪದ್ಯದಿಂದ ತಾನು ಭೃಂಗಿಗೋತ್ರದವನೆಂದೂ ಗುರುಲಿಂಗ ತನುಜ (ಪುತ್ರ) ನೆಂದೂ ಸೂಚಿಸಿದ್ದಾನೆ.

ಈ ವಿಧವಾದ ವಿಚಾರಗಳಿಗುಪಯುಕ್ತಗಳಾದ ಸಂಗತಿಗಳನ್ನು ಇದಕ್ಕೂ ಹೆಚ್ಚಾಗಿ ಅರಿತುಕೊಳ್ಳಬೇಕಾದರೆ, ಅವುಗಳಿಗೆ ಸಂಬಂಧ ಪಟ್ಟ ವೈದಿಕ ವಾಙ್ಮಯವನ್ನೂ ಪ್ರಾಚೀನೇತಿಹಾಸ ಬೋಧಕಗ್ರಂಥ ಗಳನ್ನೂ ಪ್ರಯತ್ನಪೂರ್ವಕ ಸಂಶೋಧಿಸಬೇಕು.

ಸಂಸ್ಕೃತಪುಸ್ತಕಗಳ ಬೃಹತ್ಸೂಚಿಯನ್ನು ನೋಡುವುದರಿಂದ ತಿಳಿದು ಬರುವುದೇನಂದರೆ, ಜರ್ಮನಿಯ ಬರ್ಲಿನ್ ಲಾಯಬ್ರರಿಯೊಂದರಲ್ಲಿಯೇ ನಾಲ್ವತ್ತು ಸಾವಿರ ಹಸ್ತಲಿಖಿತ ಸಂಸ್ಕೃತ ಪುಸ್ತಕಗಳೂ ಮತ್ತು ಲಂಡನ್ನಿನ ಇಂಡಿಯಾ ಹೌಸ ಪುಸ್ತಕಾಲಯದಲ್ಲಿ ಮೂವತ್ತು ಸಾವಿರ ಪುಸ್ತಕಗಳೂ ಇರುತ್ತವಂತೆ! ಸದ್ಧರ್ಮಾಭಿಮಾನಿಗಳಾದ ಲಕ್ಷಾಧೀಶರು ಅತ್ತಕಡೆ ಒಂದು ಸಾರೆ ಲಕ್ಷಗೊಟ್ಟರೆ ಬೇಕಾದಷ್ಟು ಅನುಕೂಲತೆಯುಂಟಾಗಬಹುದಲ್ಲವೇ ?

ಪ್ರಕೃತವನುಸರಿಸುವಾ! ಈ ಮೇಲೆ ಹೇಳಿದಂತೆ, ತಾವು ಹೇಳುವುದೊಂದು ಶಾಖೆ, ಪಠಿಸುವುದೊಂದು ಬೇರೆ ಸಂಹಿತೆ, ಅನ್ಯರ ಬ್ರಾಹ್ಮಣವನ್ನು ತಮ್ಮದೆಂದೂ ತಮ್ಮ ಶಾಖೆಗೆ ಸಂಬಂಧಿಸದ ಶ್ರೌತ ಸೂತ್ರವನ್ನೂ ಗೃಹ್ಯಸೂತ್ರವನ್ನೂ ತಮ್ಮವೆಂದು ಹೇಳುವುದೂ ಮೊದಲಾದ ವಿಷಮಾವಸ್ಥೆಯು ಈಗ ಅಲ್ಲಲ್ಲಿ ಕಂಡು ಬರುತ್ತಿರುವುದಕ್ಕೆ ಈ ಕಾಲದಲ್ಲಿ ಪ್ರಾಚೀನ ವೈದಿಕಸಾಹಿತ್ಯವು ಹೆಚ್ಚಾಗಿ ಉಪಲಬ್ಧವಿಲ್ಲದುದೇ ಕಾರಣವು. ಈ ಕಾರಣದಿಂದೇ ಆಶ್ವಲಾಯನರು ತಮ್ಮ ಸಂಹಿತೆಯಿಲ್ಲದುದರಿಂದ ಶಾಕಲಶಾಖೆಯ ಶಾಕಲಸಂಹಿತೆಯನ್ನೇ ತಮ್ಮ ಸಂಹಿತೆಯೆಂದು ಪಠಿಸುತ್ತಾರೆ. ಈ ಶಾಖಾವಲಂಬಿಗಳು ಮಹಾರಾಷ್ಟ್ರದಲ್ಲಿಯೂ ಕರ್ನಾಟಕದಲ್ಲಿಯೂ ವಿಶೇಷವಾಗಿದ್ದಾರೆ. ಆಶ್ವಲಾಯನ ಶಾಖೆಯ ಆಶ್ವಲಾಯನ ಶ್ರೌತಸೂತ್ರವೂ ಗೃಹ್ಯಸೂತ್ರವೂ ಉಪಲಬ್ಧವಿರುವುದರಿಂದ ಅವುಗಳನ್ನು ಮುಂದಿಟ್ಟುಕೊಂಡು ತಮ್ಮ ಶ್ರೌತ ಸ್ಮಾರ್ತಕರ್ಮಗಳನ್ನು ಅನುಷ್ಠಿಸುತ್ತಾರೆ. ಮತ್ತು, ಅವರಿಗೆ ಬ್ರಾಹ್ಮಣ ಗ್ರಂಥಗಳೂ ಇಲ್ಲ, ಐತರೇಯ ಶಾಖೆಗಳ ಬ್ರಾಹ್ಮಣಾರಣ್ಯಕೋಪನಿಷತ್ತುಗಳನ್ನೇ ಅವರು (ಆಶ್ವಲಾಯನ ಶಾಖಿಗಳು) ಮನ್ನಿಸುತ್ತಾರೆ. ಒಟ್ಟಿನಲ್ಲಿ, ಆಶ್ವಲಾಯನ ಶಾಖಿಗಳ ಬಳಿಯಲ್ಲಿ ಈಗ ಅವರ ನಿಜವಾದ ಸ್ವತ್ತು ಶ್ರೌತ ಗೃಹ್ಯಸೂತ್ರಗಳೆರಡೇ. ಇರಲಿ. ಈಗ ಆಶ್ವಲಾಯನ ಶಾಖೆಯವರಿಗೆ ಸಂಬಂಧಪಟ್ಟ ವೈದಿಕ ಗ್ರಂಥಗಳ ಹೆಸರನ್ನು ನಾವಿಲ್ಲಿ ತೋರಿಸುತ್ತೇವೆ—

| | |
|---|---|
| ಶಾಕಲಸಂಹಿತಾ | ( ಶಾಕಲ ಶಾಖಾ ) |
| ಐತರೇಯ ಬ್ರಾಹ್ಮಣ<br>ಐತರೇಯ ಆರಣ್ಯಕ<br>ಐತರೇಯ ಉಪನಿಷದ್ | ಐತರೇಯ ಶಾಖಾ. |
| ಆಶ್ವಲಾಯನ ಶ್ರೌತಸೂತ್ರ<br>ಆಶ್ವಲಾಯನ ಗೃಹ್ಯಸೂತ್ರ | ಆಶ್ವಲಾಯನ ಶಾಖಾ. |

ಈ ರೀತಿಯಾಗಿ, ಋಗ್ವೇದಸಂಹಿತೆಯು ಬೇರೆ ಬೇರೆ ಶಾಖೆಗಳಲ್ಲಿ 'ಶಾಕಲ' ವೆಂಬ ಒಂದೇ ಶಾಖೆಯು ಈಗ ಸರ್ವತ್ರ ಪ್ರಚಾರದಲ್ಲಿರುವು ದರಿಂದ 'ಋಗ್ವೇದವು' ಅಂದರೆ ಶಾಕಲ ಪಾಠವೆಂದೇ ಅರಿಯಲ್ಪಡುವುದು. ಈ ವೇದದಲ್ಲಿ ಒಟ್ಟಿಗೆ ೧೦೫೮೦ ಮಂತ್ರಗಳಿವೆ. ಈ ಮಂತ್ರಗಳ ವಿಭಾ ಗವು ಎರಡು ತೆರನಾಗಿ ಮಾಡಲ್ಪಟ್ಟಿದೆ. ಹೇಗೆಂದರೆ, ಒಬ್ಬ ಋಷಿಯೇ ಒಂದು ದೇವತೆಯನ್ನಾಗಲಿ ಒಂದಕ್ಕಿಂತ ಹೆಚ್ಚು ದೇವತೆಗಳನ್ನಾಗಲಿ ಯಾವ ಯಾವ ಮಂತ್ರದಲ್ಲಿ ಸ್ತುತಿಸಿರುವನೋ ಆ ಮಂತ್ರದ ಸಮು ದಾಯಕ್ಕೆ 'ಸೂಕ್ತ' ವೆಂಬ ಸಂಜ್ಞೆ. ಈಗ ಸರ್ವತ್ರ ಪಠಿಸಲ್ಪಡುವ ಶಾಕಲಪಾಠಾನುಸಾರವಾಗಿ ಋಗ್ವೇದಸೂಕ್ತಗಳ ಸಂಖ್ಯೆಯು ೧೦೧೭ ಉಂಟು. ಎಂಟನೆಯ ಮಂಡಲದಲ್ಲಿ ಖಿಲಾಂಶಗಳೆಂದು ತಿಳಿದುಬರುವ ೧೧ ವಾಲಖಿಲ್ಯ ಸೂಕ್ತಗಳನ್ನೂ ಕೂಡಿಸಿದರೆ ೧೦೨೮ ಸೂಕ್ತಗಳಾಗು ವುವು. ಸೂಕ್ತದಲ್ಲಿ ಸಾಧಾರಣವಾಗಿ ಮಂತ್ರಗಳ ಸಂಖ್ಯೆಯು ೯-೧೦ ಉಂಟು. ಆದರೆ ಕೆಲವು ಸೂಕ್ತಗಳಲ್ಲಿ ಮೂರು ಮಂತ್ರಗಳೂ ಬೇರೆ ಕೆಲವು ಸೂಕ್ತಗಳಲ್ಲಿ ४-೫ ಮಂತ್ರಗಳೂ ಕಾಣಬರುವುವು. ಬೃಹದ್ದೇವ ತೆಯಲ್ಲಿ - ಋಷಿಸೂಕ್ತ, ದೇವತಾಸೂಕ್ತ, ಛಂದಃಸೂಕ್ತ; ಎಂಬ ಮೂರು ವಿಧ ಸೂಕ್ತಗಳ ಲಕ್ಷಣವು ಪ್ರತಿಪಾದಿಸಲ್ಪಟ್ಟಿದೆ. ಅವುಗಳಲ್ಲಿ,

ಋಷಿಸೂಕ್ತವು — 'ಇನ್ದ್ರಂ ವಿಶ್ವಾ ಅವೀವೃಧನ್' ಎಂಬುದರ ಮೊದಲಿರುವ ವಿಂಶತಿವರ್ಗಸಮಾಪ್ತಿಯವರೆಗೂ ಏಕ ಋಷಿಸೂಕ್ತವು. ಆ ಸರ್ವಋಕ್ಕುಗಳೂ ಮಧುಚ್ಛಂದನಿಂದ ಸಾಕ್ಷಾತ್ಕರಿಸಿಕೊಳ್ಳಲ್ಪಟ್ಟಿವೆ. 'ಇಂದ್ರಂ ವಿಶ್ವಾ ಅವೀವೃಧನ್' ಎಂಬ ಅಷ್ಟಕವು ಎರಡನೆಯ ಋಷಿ ಸೂಕ್ತವು. ಆ ಋಕ್ಕುಗಳ ದ್ರಷ್ಟನು ಮಧುಚ್ಛಂದನ ಮಗನಾದ ಜೇತೃವು.

ದೇವತಾಸೂಕ್ತವು— 'ಅಗ್ನಿಮೀಳೆ ಪುರೋಹಿತಂ' ಇತ್ಯಾದಿ ೯ ಋಕ್ಕುಗಳುಳ್ಳ ಮೊದಲಿನ ದೇವತಾಸೂಕ್ತವು ಅಗ್ನಿದೇವತಾಕವಾದುದು. 'ವಾಯವಾಯಾಹಿ ದರ್ಶನೇನೇತಿ" ಎಂಬ ೯ ಋಚೆಗಳುಳ್ಳ ಎರಡನೆಯ ದೇವತಾ ಸೂಕ್ತವು, ವಾಯುದೇವತಾಕವಾದುದು.

ಛಂದಃಸೂಕ್ತವು— 'ಅಗ್ನಿಮೀಳೆ' ಎಂದಾರಂಭಿಸಿ ೧೮ ವರ್ಣ ಪರ್ಯಂತವಾದುದು. 'ಗಾಯನ್ತಿ ತ್ವಾ ಗಾಯತ್ರೀಣ' ಎಂಬುದರ ಮೊದಲಿರುವ ಗಾಯತ್ರೀಛಂದೋಬದ್ಧವಾದ ಮೊದಲಿನ ಛಂದಃಸೂಕ್ತವು. ಉಳಿದವುಗಳ ಉದಾಹರಣೆಗಳನ್ನೂ ಅರಿತುಕೊಳ್ಳತಕ್ಕದ್ದು.

ಈ ಮೂರು ವಿಧವಾದ ಸೂಕ್ತಗಳು ಕರ್ಮಗಳಲ್ಲಿ ವಿನಿಯೋಗಿಸಲ್ಪಡುವ ರೀತಿಯು ಬ್ರಾಹ್ಮಣಗ್ರಂಥಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದು. ಐತರೇಯ ಬ್ರಾಹ್ಮಣದ ೫-೬ ನೆಯ ಪಂಚಿಕೆಗಳನ್ನು ನೋಡಿದರೆ ಗೊತ್ತಾಗುವುದು.

ಕೆಲವು ಸೂಕ್ತಗಳ ಒಂದು ಗುಂಪಿಗೆ '**ಅನುವಾಕ**' ವೆಂಬ ಸಂಜ್ಞೆ. ಇಂತಹ ಅನುವಾಕಗಳು ಋಗ್ವೇದದಲ್ಲಿ ಒಟ್ಟಿಗೆ ೮೫ ಇವೆ. ಕೆಲವು ಅನುವಾಕಗಳು ಕೂಡಿದುದಕ್ಕೆ 'ಮಣ್ಡಲ' ವೆನ್ನುವರು. ಇಂತಹ ಮಣ್ಡಲಗಳು ೧೦ ಇರುವುವು. ಋಙ್ಮಂತ್ರಗಳ ಮಣ್ಡಲ, ಅನುವಾಕ, ಸೂಕ್ತ ಎಂಬ ಈ ತರದ ವರ್ಗೀಕರಣವು ಬಹಳ ಪ್ರಾಚೀನವಾದುದೆಂದು ತಿಳಿಯಲ್ಪಡುವುದು.

ಋಕ್ಸಂಹಿತೆಯನ್ನು ಮತ್ತೊಂದು ವಿಧವಾಗಿ ವಿಂಗಡಿಸಿರುವುದು ಹೇಗೆಂದರೆ, ಮಂತ್ರಸಂಖ್ಯೆಯು ೧೦೫೮೦ ಎಂದು ಮೇಲೆ ಹೇಳಲ್ಪಟ್ಟಿರುವುದಷ್ಟೇ ! ಕೆಲವು ಮಂತ್ರಗಳು ಕೂಡಿದ ಒಂದು ಗುಂಪಿಗೆ 'ವರ್ಗ' ವೆನ್ನುವರು. ಇಂತಹ ವರ್ಗಗಳು ಒಟ್ಟಿಗೆ ೨೦೦೬ ಇರುವುವು. ಕೆಲವು ವರ್ಗಗಳು ( ಪ್ರಾಯಶಃ ೩೩ ) ಕೂಡಿದ ಗುಂಪಿಗೆ 'ಅಧ್ಯಾಯ' ವೆಂಬ ಸಂಜ್ಞೆ. ಇಂತಹ ಅಧ್ಯಾಯಗಳು ಒಟ್ಟಿಗೆ ೬೪ ಇವೆ. ಅವುಗಳ ಪ್ರತಿಯೊಂದು ಎಂಟು ಅಧ್ಯಾಯ ಸಮುದಾಯವು 'ಅಷ್ಟಕ' ವೆನಿಸುವುದು. ಇಂತಹ ಅಷ್ಟಕಗಳು ಋಗ್ವೇದದಲ್ಲಿ ೮ ಇವೆ. ಹೀಗೆ ವಿಂಗಡಿಸುವ ಬಗೆಯು ಮೇಲೆ ಹೇಳಿದುದರಂತೆ ಹಳೆಯದಲ್ಲ. ವರ್ಗವಿಭಾಗವೂ, ಅಧ್ಯಾಯವಿಭಾಗವೂ ಅಧ್ಯಾಪಕರ ಸಂಪ್ರದಾಯಕ್ರಮಾಗತವಾದುವೆಂದೇ ಹೇಳಬಹುದು. ವಾಚಕರ ಸೌಲಭ್ಯಕ್ಕಾಗಿ ಆ ಎರಡೂ ವರ್ಗೀಕರಣಗಳನ್ನು ಮತ್ತೆ ಇಲ್ಲಿ ಸ್ಫುಟವಾಗಿ ಬರೆದು ತೋರಿಸುವೆವು.

**ಋಕ್ಸಂಹಿತೆ**— ಮಣ್ಡಲಗಳು ೧೦; ಅನುವಾಕಗಳು ೮೫; ಸೂಕ್ತಗಳು ೧೦೨೮; ಮಂತ್ರಗಳು ೧೦೫೮೦.

| | | | | | |
|---|---|---|---|---|---|
| ಮೊದಲನೆಯ | ಮಂಡಲದಲ್ಲಿ | ೨೪ | ಅನುವಾಕಗಳು, | ೧೯೧ | ಸೂಕ್ತಗಳು. |
| ಎರಡನೆಯ | ,, | ೪ | ,, | ೪೩ | ,, |
| ಮೂರನೆಯ | ,, | ೫ | ,, | ೬೨ | ,, |
| ನಾಲ್ಕನೆಯ | ,, | ೫ | ,, | ೫೮ | ,, |
| ಐದನೆಯ | ,, | ೬ | ,, | ೮೭ | ,, |
| ಆರನೆಯ | ,, | ೬ | ,, | ೭೫ | ,, |

| | | | | | |
|---|---|---|---|---|---|
| ಏಳನೆಯ | ,, | ೬ | ,, | ೧೦೪ | ,, |
| ಎಂಟನೆಯ | ,, | ೧೦ | ,, | ೯೨ (ಮತ್ತು ವಾಲಖಿಲ್ಯ ಸೂಕ್ತಗಳು) | |
| ಒಂಭತ್ತನೆಯ | ,, | ೭ | ,, | ೧೧೪ | ,, |
| ಹತ್ತನೆಯ | ,, | ೧೨ | ,, | ೧೯೧ | ,, |

ಋಗ್ವೇದದಲ್ಲಿ ಒಟ್ಟಿಗೆ ೧೫೩೮೨೬ ಪದಗಳೂ, ೪೩೨೦೦೦ ಅಕ್ಷರಗಳೂ ಇವೆ. ಮಂತ್ರಗಳ ಸಂಖ್ಯೆಯು ೧೦೫೮೦ ಎಂದು ಈ ಮೇಲೆ ಹೇಳಿದೆ. ಆದರೆ ಕೆಲವರು ಅವು ೧೦೪೦೨ ಎಂದೂ ಮತ್ತೆ ಕೆಲವರು ೧೦೬೨೨ ಎಂದೂ ಅಭಿಪ್ರಾಯಪಡುತ್ತಾರೆ.

ಈ ಮೇಲೆ ಹೇಳಿದ ಋಕ್ಸಂಹಿತೆಯು ಶಾಕಲಾದಿ ಐದು ಶಾಖೆಗಳಲ್ಲಿಯಾದರೋ ಮೂರನೆಯ ನಾಲ್ಕನೆಯ ಶಾಖೆಗಳಲ್ಲಿ ಶಾಕಲ ಶಾಖೆಗಿಂತ ವಿಶೇಷವಾದ ಪಾಠಭೇದವಿದ್ದಿಲ್ಲವೆಂದು ತಿಳಿದುಬರುವುದು. ಶಾಕಲರಿಂದ ಖಿಲರೂಪವಾದುವೆಂದು ಅಂಗೀಕರಿಸಲ್ಪಟ್ಟ ೧೧ ವಾಲಖಿಲ್ಯಸೂಕ್ತಗಳನ್ನು ಆಶ್ವಲಾಯನರು ಮೂಲಾಂಶಗಳೆಂದು ಮನ್ನಿಸಿದರು. ಶಾಂಖಾಯನರು ಅವುಗಳಲ್ಲಿ ಕೆಲವು ಮಂತ್ರಗಳನ್ನು ಬಿಟ್ಟು ಅವನ್ನು ಸ್ವೀಕರಿಸಿದರು. ಆದ್ದರಿಂದ ಕೆಲವು ಪುರಾಣಗಳಲ್ಲಿ ಶಾಕಲಬಾಷ್ಕಲ ಮಾಂಡೂಕಗಳೆಂಬ ಮೂರು ಶಾಖೆಗಳೇ ಪರಿಗಣಿಸಲ್ಪಡುತ್ತವೆ. ಮಾಂಡೂಕ ಶಾಖಾನುಸಾರವಾದ ಪಾಠಭೇದವು ಮೊದಲೇ ಯಾವ ಕಾಲದಲ್ಲೋ ನಾಮಶೇಷವನ್ನು ಪಡೆದಿರುವುದರಿಂದೇ ಈಗ ಎಲ್ಲಿಯೂ ಅದರ ವಾರ್ತೆಯು ಸಹ ಕೇಳಲ್ಪಡುವುದಿಲ್ಲ. ಇನ್ನು, ಶಾಕಲ ಬಾಷ್ಕಲಗಳೆಂಬ ಎರಡು ಶಾಖೆಗಳಲ್ಲಿ, ಬಾಷ್ಕಲರ ಪಾಠದಲ್ಲಿ ಶಾಕಲರ ಪಾಠಕ್ಕಿಂತ ವಿಶೇಷವೇನಂದರೆ— ಎಂಟು ಸೂಕ್ತಗಳ ಸಂಯೋಜನವೂ ಮೊದಲನೆಯ ಮಂಡಲದಲ್ಲಿ ಕೆಲವು ಭಾಗದ ಸ್ಥಾನಪರಿವರ್ತನವೂ ಮಾಡಲ್ಪಟ್ಟಿರುವುದೆಂಬುದನ್ನು ಅರ್ವಾಚೀನವೈದಿಕ ಗ್ರಂಥಗಳಿಂದ ಅರಿಯುತ್ತೇವೆ. ಆ ವಿಶೇಷಾಂಶವು ಈಗಣ ಸಂಹಿತಾಪಾಠದಲ್ಲಿ ದೊರೆಯುವುದಿಲ್ಲ. ಒಟ್ಟಿನಲ್ಲಿ ಶಾಕಲ ಪಾಠವೊಂದೇ ಈಗ ಸರ್ವ ಸಮ್ಮತವಾಗಿರುವುದು.

ಈ ಋಕ್ಸಂಹಿತೆಯಲ್ಲಿರುವ ಹತ್ತುಮಂಡಲಗಳೂ ಒಂದು ವಿಧವಾಗಿಯೇ ಇಲ್ಲ. ಆದರೂ ೧ ರ ಮುಂದಿನ ೭ ರ ವರೆಗೆ (೨-೩-೪-೫-೬-೭) ಎಂಬ ೬ ಮಂಡಲಗಳು ಸ್ವಲ್ಪ ಸಮಾನತೆಯನ್ನು ಪಡೆಯು

ತ್ರವೆ. ಹೇಗೆಂದರೆ, ಇವುಗಳಲ್ಲಿ ಪ್ರತಿಯೊಂದು ಮಂಡಲವು ಒಬ್ಬೊಬ್ಬ ಗೋತ್ರೀಯಋಷಿಯಿಂದ ಹೊರಹೊಮ್ಮಿದುದೆಂದು ಹಳೆಯ ನುಡಿಗಳಿಂದಲೂ ಒಳಗಣ ಹೇತುವಿನಿಂದಲೂ ತಿಳಿದುಬರುತ್ತದೆ. ಈ ಆರು ಮಂಡಲಗಳು ಆ ಆ ಗೋತ್ರೀಯಃ (ವಂಶೀಯ) ರಾದ ಮಹಾನುಭಾವರಿಂದೇ ಪರಂಪರೆಯಿಂದ ಬೇರೆ ಬೇರೆಯಾಗಿ ಬಹುಕಾಲದಿಂದಲೂ ಚೆನ್ನಾಗಿ ಕಾಪಾಡಲ್ಪಟ್ಟು ಮುಂದೆ ಒಟ್ಟುಗೂಡಿಸಿದವಾಗಿರುವುವು. ಹೀಗೆ ಒಂದೊಂದು ಗೋತ್ರಸಂಬಂಧದಿಂದ ಗೋತ್ರಮಂಡಲಗಳೆನಿಸುವ ಇವುಗಳಲ್ಲಿ ಸೂಕ್ತಗಳ ಸೇರುವೆಯು ಮಿಕ್ಕಮಂಡಲಗಳಿಗಿಂತಲೂ ಬೇರೆ ಬಗೆಯಾಗಿದೆ. ಮೊದಲನೆಯ ಎಂಟನೆಯ, ಹತ್ತನೆಯವುಗಳಲ್ಲಿ ಒಂದೊಂದು ಮಂಡಲಪ್ರವರ್ತಕನು ಒಬ್ಬನೇ ಅಲ್ಲ. ಬಹುಜನದ್ರಷ್ಟರಿರುವರು; ಈ ಮೂರು ಮಂಡಲಗಳಲ್ಲಿಯೂ ಆ ಆ ಸಂಬಂಧದೊಡನೆ ವಿಂಗಡಿಸಿದ ಶಾತಾರ್ಚಿನ ಮುಂತಾದ ಅನೇಕ ಸೂಕ್ತಸಮುಚ್ಚಯಗಳು ಕಂಡುಬರುವುವು. ಅಂದರೆ—

**ಮಧುಚ್ಛನ್ದ ಪ್ರಭೃತಯೋಽಗಸ್ತ್ಯಾನ್ತಾ ಆದ್ಯಮಣ್ಡಲೇ ।**
**ಯೇ ಸನ್ತಿ ಋಷಯಸ್ತೇ ವೈ ಸರ್ವೇ ಪ್ರೋಕ್ತಾಃ ಶತರ್ಚಿನಃ ॥**

ಎಂಬ ಕಾವ್ಯಾನುಸಾರವಾಗಿ, ಮೊದಲನೆಯ ಮಂಡಲಪ್ರವರ್ತಕರಾದ ಮಧುಚ್ಛಂದನೇ ಮೊದಲಾಗಿ ಸಗಸ್ಯನವರೆಗಿರುವ ಋಷಿಗಳೆಲ್ಲ ಶತರ್ಚಿನರೆನಿಸುವರು. ಪೂರ್ವಾಚಾರ್ಯರಿಂದ 'ಶತರ್ಚಿನ' ಪದದ ನಿರ್ವಚನವು ಹೀಗೆ ಮಾಡಲ್ಪಟ್ಟಿದೆ—

**ದದರ್ಶಾದೌ ಮಧುಚ್ಛನ್ದಾದ್ಯಧಿಕಂ ಯದೃಚಾಂ ಶತಮ್ ।**
**ತತ್ಸಾಹಚರ್ಯಾದನ್ಯೇಽಪಿ ವಿಜ್ಞೇಯಾಸ್ತು ಶತರ್ಚಿನಃ ॥**

ಮೊದಲು ಮಧುಚ್ಛಂದನು ನೂರರ ಮೇಲ್ಪಟ್ಟು ಋಕ್ಕುಗಳ ಪ್ರವರ್ತಕನಾದುದರಿಂದ ಅವನಿಗೆ 'ಶತರ್ಚಿ' ಯೆಂಬ ಸಾಮಾನ್ಯವಾದ ಹೆಸರು ಬಂದಿದೆ. ಅವನ ಸಾಹಚರ್ಯಮೂಲಕವಾಗಿ ಇತರರಿಗೂ ಶತರ್ಚಿಗಳೆಂದು ನುಡಿವುದಾದರೋ ಕೊಡೆಯನ್ನು ಹಿಡಿದವನೊಬ್ಬನೇ ಆದರೂ ಅವನ ಸಂಗಡಿಗರಿಗೂ 'ಛತ್ರಿಣಃ' ಕೊಡೆಯುಳ್ಳವರೆಂದು ಕರೆಯುವ ಮಾತಿನಂತಿದೆ.

ಈ ಗುಟ್ಟಿನ ಗಂಟನ್ನು ಇನ್ನಿಷ್ಟು ಸಡಲಿಸುವಾ ! ಮೊದಲನೆಯ ಮಂಡಲವನ್ನು ಶತರ್ಚಿಸಂಜ್ಞಕರಾದ ಅನೇಕ ಋಷಿಗಳು ಸಾಕ್ಷಾತ್ಕರಿ

ಸಿಕೊಂಡಿರುವರು. ಮೊದಲನೆಯ ಮಂಡಲದೊಳಗಿನ ೧ ರಿಂದ ೧೦ ಸೂಕ್ತಗಳಲ್ಲಿರುವ ೧೦೨ ಋಕ್ಕುಗಳನ್ನು ಮಧುಚ್ಛಂದನು ಸಾಕ್ಷಾತ್ಕರಿಸಿ ಕೊಂಡವನಾದ್ದರಿಂದ ಅವನಿಗೆ (ಅಂದರೆ ನೂರರ ಮೇಲ್ಪಟ್ಟು ಋಕ್ಕುಗಳನ್ನು ಕಂಡಕೊಂಡವನಾದ ಮಧುಚ್ಛಂದನಿಗೆ) ಶತರ್ಚಿ ಎಂಬ ಸಾಮಾನ್ಯವಾದ ಹೆಸರುಂಟಾಯಿತು. ಅದರಮೇಲಿಂದ ಸಂಪೂರ್ಣಮಂಡಲ ಪ್ರವರ್ತಕರಾದ ಬೇರೆ ಬೇರೆ ಋಷಿಗಳನ್ನಾದರೂ ಶತರ್ಚಿಗಳೆಂಬ ಹೆಸರಿನಿಂದ ಕರೆವುದುಂಟು. ಆಶ್ವಲಾಯನ ಗೃಹ್ಯಸೂತ್ರದಲ್ಲಿ (೩-೪-೨) ಮೊದಲನೆಯ ಮಂಡಲಪ್ರವರ್ತಕರಾದ ಋಷಿಗಳ ತರ್ಪಣಮಾಡುವುದಕ್ಕೋಸ್ಕರ '**ಶತರ್ಚಿನಸ್ತೃಪ್ಯಂತು**' ಎಂಬ ಉಲ್ಲೇಖವಿದೆ.

ಅದರ ಮುಂದಿನ ಎರಡನೆಯ ಮಂಡಲವು ಮೊದಲಾಗಿ ಒಂಭತ್ತನೆಯ ಮಂಡಲದವರೆಗಿರುವ ಸೂಕ್ತಗಳ ಪ್ರವರ್ತಕರು '**ಮಾಧ್ಯಮ**'ರೆಂಬ ಹೆಸರಿನಿಂದ ಸಂಬೋಧಿಸಲ್ಪಡುತ್ತಾರೆ. ಒಂಭತ್ತನೆಯ ಮಂಡಲದ ಸಂವಿಧಾನವಾದರೋ ಋಷಿಸಂಬಂಧದ ಕಟ್ಟಳೆಗೊಳಪಟ್ಟದ್ದಲ್ಲ; ಅದರೊಳಗಣ ಎಲ್ಲಾ ಸೂಕ್ತಗಳಿಗೂ ಸೋಮದೇವತೆಯೇ ಧ್ಯೇಯವಾಗಿರುವುದರಿಂದ ದೇವತಾಸಂಬಂಧವುಳ್ಳದ್ದಾಗಿದೆ. ಇದರಲ್ಲಿ ಸೂಕ್ತಗಳ ಸಮುಚ್ಚಯ (ಜೊತೆಗೊಳಿಸುವಿಕೆ) ಗಳು ಆ ಆ ಛಂದೋ ಜಾತಿಗಳಿಗನುಸಾರವಾಗಿ ಪ್ರಕಟವಾಗಿವೆ. ಯಾವ ಯಾವ ಜಾತಿಯ ಛಂದೋಬದ್ಧಗಳಾದ ಸೂಕ್ತಗಳು ಎಷ್ಟಿರುವುವೋ ಅವೆಲ್ಲವೂ ಆ ಆ ಛಂದೋಜಾತಿಗಳ ಪರಿವಿಡಿದು ಬೇರೆ ಬೇರೆ ಜೋಡಣೆಗೊಳಿಸಿದವುಗಳಾಗಿವೆ. ಗೋತ್ರಮಂಡಲಗಳ ಸೂಕ್ತಸಮುಚ್ಚಾಯಗಳಾದರೋ ದೇವತೆಗಳ ಸಂಬಂಧಕ್ಕೊಳಪಟ್ಟಿವೆ. ಎಂಟನೆಯ ಮಂಡಲದ ಸೂಕ್ತಗಳಲ್ಲಿ ಗೋತ್ರಮಂಡಲಗಳ ಸೂಕ್ತಗಳಂತೆ ಅನ್ಯೋನ್ಯ ಸಂಬಂಧವಿರುವುದು ತೋರಿಬರುವುದಾದರೂ, ಇದು (೮ನೆಯ ಮಂಡಲವು) ಗೋತ್ರಮಂಲವೆನಿಸದು. ಏಕೆಂದರೆ— ಇದರ ದ್ರಷ್ಟರು ಏಕಗೋತ್ರೀಯರಲ್ಲ.

ಇದರ ದ್ರಷ್ಟರಲ್ಲಿ ಕಣ್ವ ಗೋತ್ರೀಯರಿಗೆ ಪ್ರಾಧಾನ್ಯವಿರುವುದರಿಂದ ಹೆಚ್ಚುಗಾರಿಕೆಯುಳ್ಳದ್ದೇ ಲೆಕ್ಕಿಸಲ್ಪಡುವುದೆಂಬ ನ್ಯಾಯಾನುಸಾರವಾಗಿ ಇದನ್ನು ಒಂದು ಗೋತ್ರದವರೇ ಕಂಡುಕೊಂಡರೆಂಬುದು ಸಮನಿಸುವುದಲ್ಲವೇ ? ಎಂದರೆ ಇದರಲ್ಲಿರುವ ಸೂಕ್ತಗಳ ಜೊಡಣೆಯ ಬಗೆಯು, ಇದು ಗೋತ್ರಮಂಡಲಕ್ಕಿಂತ ಬೇರೆಯಾದುದೆಂಬುದನ್ನು ತಿಳಿಸುವುದು. ಆದ್ದರಿಂದ ಇದು ಗೋತ್ರಮಂಡಲದಲ್ಲಿ ಪರಿಗಣಿಸಲ್ಪಡದು.

ಮೊದಲನೆಯ ಮಂಡಲದ ಪೂರ್ವಾರ್ಧವು (೫೦ ಸೂಕ್ತಗಳು) ಎಂಟನೆಯ ಮಂಡಲವನ್ನು ಹೋಲುತ್ತದೆ. ಹೇಗೆಂದರೆ— ಆ ೫೦ ಸೂಕ್ತಗಳಲ್ಲಿ ಅರ್ಧಕ್ಕಿಂತ ಹೆಚ್ಚುಪಾಲು ಕಣ್ವಗೋತ್ರೀಯರಿಂದ ಕಂಡದ್ದಾಗಿದೆ. ಎಂಟನೆಯ ಮಂಡಲದಲ್ಲಿ ಕಣ್ವಗೋತ್ರೀಯರಿಂದ ಅರಿಯಲ್ಪಟ್ಟ ಗಾನಾನುಕೂಲಗಳಾದ ಕೆಲವು ಛಂದೋವಿಶೇಷಗಳು ಇದರ ಪೂರ್ವಾರ್ಧದಲ್ಲಿ ಪ್ರಯೋಗಿಸಲ್ಪಟ್ಟಿವೆ. ಮತ್ತು ಇವೆರಡರಲ್ಲಿಯೂ ಸಮಾನವಾದ ಅರ್ಥಗಳೂ ಸಮಾನವಾದ ರೂಪಗಳೂ ಉಳ್ಳ ಅನೇಕ ವಾಕ್ಯಗಳು ದೊರೆಯುತ್ತವೆ. ಹೀಗಿದ್ದರೂ ಇವೆರಡರಲ್ಲಿ ಪ್ರಾಚೀನತರವಾದ ಭಾಗವು ಯಾವುದು ? ಇಷ್ಟು ನಿಕಟಸಂಬಂಧವುಳ್ಳ ಇವುಗಳನ್ನು ಬೇರೆ ಬೇರೆ ಭಾಗದಲ್ಲಿ ಸೇರಿಸಲು ಕಾರಣವೇನಿರಬಹುದು ? ಎಂಬ ಬಗ್ಗೆ ನಿಜವಾದ ಸಂಗತಿಯನ್ನು ತೋರಿಸುವುದು ಹಗುರಲ್ಲ; ಆದರೂ ಮೊದಲನೆಯ ಎಂಟನೆಯ ಮಂಡಲಗಳ ಆವಿರ್ಭಾವಕಾಲವು ಬೇರೆ ಬೇರೆಯಾದುದರಿಂದಾಗಲಿ, ಕಣ್ವಗೋತ್ರೀಯಶಾಖೆಗಳು ಎರಡು ಹುಟ್ಟಿದುದರಿಂದಾಗಲಿ ಆ ತೆರನಾದ ಸೇರುವೆಯು ಉಂಟಾಗಿರುವುದೆಂದು ಹೇಳಬಹುದು.

ಒಂಭತ್ತನೆಯ ಮಂಡಲವು ಎಂಟು ಮಂಡಲಗಳ ತರುವಾಯ ಸಂಘಟಿತವಾದುದೆಂಬಲ್ಲಿ ಸಂದೇಹವೇ ಇಲ್ಲ. ಅದರಲ್ಲಿ ಅಡಕವಾಗಿರುವ ಸೂಕ್ತಸಮುದಾಯವು ಗೋತ್ರಮಂಡಲಗಳನ್ನು ಕಂಡವರ ಮಧ್ಯದಲ್ಲಿಯೇ ಹೊರಹೊಮ್ಮಿರಬಹುದು. ಆದರೆ ಅದು ಯಾವುದೋ ಕಾರಣದಿಂದ ಗೋತ್ರಮಂಡಲಗಳಲ್ಲಿ ಸೇರಿಸಲ್ಪಡದೆ ವಿಕ್ಷಿಪ್ತತನದಿಂದಿದ್ದು ಪಶ್ಚಾತ್ಕಾಲದಲ್ಲಿ ಜೋಡಣೆಗೊಳಿಸಿದುದಾಗಿ ಒಂದು ಮಂಡಲ ಸ್ವರೂಪವನ್ನೇ ಪಡೆದಿರುವುದೆಂದು ತಿಳಿದುಬರುತ್ತದೆ. ಅದರಲ್ಲಿ ಕೆಲವು ಸೂಕ್ತಗಳು ಹಳೆಯವಲ್ಲವೆಂದು ಕೆಲವರು ವಾದಿಸುವರು. ಆದರೂ ಬಹುಭಾಗವು ವೈದಿಕಸಾಹಿತ್ಯದ ಆರಂಭಕಾಲದಲ್ಲಿಯೇ ಮೈದೋರಿರುವುದು. ಒಂಭತ್ತನೆಯ ಮಂಡಲದ ಸೂಕ್ತಗಳ ಪ್ರಕಟನೆಯ ಕಾಲಭೇದಗಳು ಸಂಭವಿಸುವುವಾದರೂ ವಿಮರ್ಶಿಸುವುದಕ್ಕೆ ಸಾಕಷ್ಟು ಉಪಕರಣಗಳು ದೊರೆಯದ್ದರಿಂದ ಈಗ ಅವು ದುರ್ಬೋಧಗಳಾಗಿವೆ.

ಇನ್ನು ಹತ್ತನೆಯ ಮಂಡಲದ ಬಗ್ಗೆ ಸ್ವಲ್ಪ ವಿಚಾರಮಾಡುವಾ ! ಈ ಮಂಡಲವು ಹಿಂದಿನಿಂದ ಸಂಘಟಿತವಾದುದು; ಇಷ್ಟೇ ಅಲ್ಲ; ಇದರಲ್ಲಿಯ ಸೂಕ್ತಗಳಾದರೂ ಮುಂಚಿನ ಒಂಭತ್ತು ಮಂಡಲಗಳು ಚೆನ್ನಾಗಿ

ಬಳಕೆಯಲ್ಲಿ ಬಂದ ತರುವಾಯವೇ ಆವಿರ್ಭೂತಗಳಾಗಿರುವುವು. ಹೇಗೆಂದರೆ- ಇದರ ಸೂಕ್ತಗಳ ಪ್ರವರ್ತಕರು ಮುಂಚಿನ ಒಂಭತ್ತು ಮಂಡಲ ಗಳ ಪರಿಚಯವು ತಮಗಿದ್ದಿತೆಂಬುದನ್ನು ಅಡಿಗಡಿಗೆ ಹೊರಗೆಡಹುತ್ತಿ ರುವರು. ಇದರಲ್ಲಿ ಇಪ್ಪತ್ತರಿಂದ ಇಪ್ಪತ್ತಾರರವರೆಗಿರುವ ಷಟ್‌ಸೂಕ್ತಾ ತ್ಮಕ ಭಾಗವು 'ಅಗ್ನಿಮೀಳೆ' ಎಂಬ (ಋಗ್ವೇದದ) ಮೊದಲನೆಯ ಮಂತ್ರದ ತುಣುಕಿನಿಂದ ಆರಂಭಿಸಲ್ಪಟ್ಟದ್ದಾಗಿದೆ. ಅದು ಕಾರಣವೇ ಹತ್ತನೆಯ ಮಂಡಲದ ಪ್ರಕಟನೆಯ ಕಾಲದಲ್ಲಿ ಮುಂಚಿನ ಒಂಭತ್ತು ಮಂಡಲಗಳು ಇದ್ದವೆಂದು ಊಹಿಸಲು ಶಕ್ಯವಿದೆ. ಮತ್ತು ಇದು ಸೋಮಮಂಡಲದ (ಒಂಭತ್ತನೆಯ ಮಂಡಲದ) ಮುಂದೆ ಜೋಡಿಸ ಲ್ಪಟ್ಟಿರುವುದರಿಂದಲೂ, ಮೊದಲನೆಯ ಮಂಡಲದಷ್ಟೇ ಸೂಕ್ತಗಳಿಂದ ಕೂಡಿರುವುದರಿಂದಲೂ ಈ ಮಂಡಲವು ಪರಿಶಿಷ್ಟ ಸೂಕ್ತ ಸಮುದಾಯ ರೂಪವಾದುದೆನಿಸುವುದು. ಈ ಮಂಡಲವು ಹಿಂದಿನಿಂದ ಪ್ರಕಟವಾದು ದೆನಿಸಿದರೂ ಇದರಲ್ಲಿಯ ಪರಿಶಿಷ್ಟಾತ್ಮಕ ಸೂಕ್ತಗಳು ಮಾತ್ರ ಪೂರ್ವ ಮಂಡಲಗಳಲ್ಲಿ ಕಾಣಬರುವ ಖಿಲಾಂಶಗಳಿಗಿಂತಲೂ ಬುನಾದಿಯಾದ ವುಗಳೇ. ಈ ಮಂಡಲದಲ್ಲಿ ೧ ರಿಂದ ೧೯೯ ರವರೆಗಿರುವುವು ಮಹಾ ಸೂಕ್ತಗಳೆಂದೂ, ಅವುಗಳ ಮುಂದಿನವು ಕ್ಷುದ್ರಸೂಕ್ತಗಳೆಂದೂ ಹೇಳಲ್ಪ ಡುವುವು. ಬೃಹದ್ದೇವತೆಯಲ್ಲಿ '**ದಶರ್ಚತಾಯಾ ಅಧಿಕಂ ಮಹಾ ಸೂಕ್ತಂ ವಿದುರ್ಬುಧಾಃ**' ಎಂಬ ಮೊದಲಾದ ವಾಕ್ಯಗಳಿಂದ ನಿರೂ ಪಿಸಲ್ಪಟ್ಟಿರುವ ಮೇರೆಗೆ, ಒಂದು ಋಚೆ ಮೊದಲಾಗಿ ಹತ್ತು ಋಚೆ ಗಳುಳ್ಳದು ಕ್ಷುದ್ರಸೂಕ್ತವೆಂದೂ ೧೦ ರಿಂದ ಹೆಚ್ಚು ಋಚೆಗಳುಳ್ಳದ್ದು ಮಹಾಸೂಕ್ತವೆಂದೂ ಸಾಂಕೇತಿಕ ಹೆಸರುಗಳಿರುವುವು. ಒಟ್ಟಿನಲ್ಲಿ ಮಧ್ಯ ದಲ್ಲಿರುವವರು '**ಮಾಧ್ಯಮ**' ರೆನಿಸುತ್ತಾರೆ. ಅಂದರೆ ದ್ವಿತೀಯಾದಿ ನವಮಾಂತಗಳಾದ ಮಂಡಲಗಳಲ್ಲಿರುವ ಋಷಿಗಳು 'ಮಾಧ್ಯಮ' ರು. ಮೊದಲನೆಯ ಮಂಡಲದ ದ್ರಷ್ಟರು ಶತರ್ಚಿಗಳು; ಎರಡನೆಯ ಮಂಡಲದ ದ್ರಷ್ಟನು ಗೃತ್ಸಮದನು; ಮೂರನೆಯ ಮಂಡಲದ ದ್ರಷ್ಟನು ವಿಶ್ವಾಮಿತ್ರನು; ನಾಲ್ಕನೆಯ ಮಂಡಲದ ದ್ರಷ್ಟನು ವಾಮದೇವನು; ಐದನೆಯ ಮಂಡಲದ ದ್ರಷ್ಟನು ಅತ್ರಿಯು; ಆರನೆಯ ಮಂಡಲದ ದ್ರಷ್ಟನು ಭರದ್ವಾಜನು; ಏಳನೆಯ ಮಂಡಲದ ದ್ರಷ್ಟನು ವಸಿಷ್ಠನು; ಎಂಟನೆಯ ಮಂಡಲದ ದ್ರಷ್ಟರು ಪ್ರಗಾಥರು; ಒಂಭತ್ತನೆಯ ಮಂಡ ಲದ ದ್ರಷ್ಟರು ಪಾವಮಾನ್ಯರು; ಹತ್ತನೆಯ ಮಂಡಲದ ದ್ರಷ್ಟರು ಕ್ಷುದ್ರ

ಸೂಕ್ತರು ಮತ್ತು ಮಹಾಸೂಕ್ತರು ಎಂದು ಆಶ್ವಲಾಯನಗೃಹ್ಯಸೂತ್ರಾರ್ಥವನ್ನನುಸರಿಸಿ ಹೇಳಿದೆವು. ಋಗ್ವೇದಾನುಕ್ರಮಣಿಯಲ್ಲಿ ೧, ೯, ೧೦ ಎಂಬೀ ಮಂಡಲಗಳೊಳಗಿನ ಪ್ರತಿಯೊಂದು ಸೂಕ್ತ ಪ್ರವರ್ತಕ ಋಷಿಗಳ ಹೆಸರುಗಳು ಹೇಳಲ್ಪಟ್ಟಿವೆ. ಅವುಗಳಲ್ಲಿ ಕೆಲವು ಸ್ತ್ರೀಯರ ಹೆಸರುಗಳೂ ಬಂದಿವೆ.

ಋಗ್ವೇದದ ಸರ್ವ ಸೂಕ್ತಗಳೂ ಒಂದೇ ಕಾಲದಲ್ಲಿಯೇ ಆವಿರ್ಭವಿಸಿರುವುದಿಲ್ಲ. ಭಾಷೆಯ ರೀತಿಯು ಹತ್ತನೆಯ ಮಂಡಲವೊಂದನ್ನು ಉಳಿದು, ಮಿಕ್ಕ ಮಂಡಲಗಳ ಸರ್ವಸೂಕ್ತಗಳಲ್ಲಿಯೂ ಬಹುಮಟ್ಟಿಗೆ ಒಂದೇ ವಿಧವಾಗಿರುವುದು. ಅವುಗಳ ಶೈಲಿಯಲ್ಲಿಯೂ ಕಲ್ಪನಾಸರಣಿಯಲ್ಲಿಯೂ ಭೇದವು ಕಂಡು ಬರುವುದಾದರೂ ಭಾಷೆಯ ರೀತಿಯಲ್ಲಿ ಯಾವ ಭೇದವೂ ತೋರುವುದಿಲ್ಲ. ಸೂಕ್ತಘಟನೆಯೂ ಛಂದೋಬಂಧನೆಯೂ ವಿಷಯ ವರ್ಣನೆಯೂ ಮುಂತಾದುದನ್ನು ಸೂಕ್ಷ್ಮದೃಷ್ಟಿಯಿಂದ ವಿಚಾರಿಸಿದರೆ ಋಗ್ವೇದದ ಹತ್ತೂ ಮಂಡಲಗಳ ಪ್ರಕಟನೆಯ ಕಾಲವು ಬೇರೆ ಬೇರೆಯಾಗಿರುವುದೆಂದು ಗೊತ್ತಾಗುವುದು.

ಇತರ ವೇದಗಳಲ್ಲಿ ಪಾಠಭೇದವು ಅಲ್ಲಲ್ಲಿ ಕಾಣಬರುವುದು. ಆದರೆ ಋಗ್ವೇದವು ಮಿಕ್ಕ ಮೂರು ವೇದಗಳ ಆವಿರ್ಭಾವಕಾಲಗಳಲ್ಲಿಯೂ ಹೀಗೆಯೇ ಇದ್ದಿತಾದುದರಿಂದ ಇದರ ಪಾಠಾಂತರಗಳು ಎಂದೂ ಸಂಭವಿಸಿರುವುದಿಲ್ಲ. ವೈದಿಕಗ್ರಂಥಶೇಖರಾಯಮಾಣವಾದ ಈ ಋಗ್ವೇದವು ಮೊದಲಿನಿಂದಲೂ ಯಾವ ವಿಕಾರಕ್ಕೂ ಒಳಪಡದಂತೆ ಬಲು ಎಚ್ಚರಿಕೆಯಿಂದ ಕಾಪಾಡಲ್ಪಟ್ಟಿರುವುದರಿಂದೇ ಎಲ್ಲಾ ಕಾಲದಲ್ಲಿಯೂ ಒಂದೇ ವಿಧವಾಗಿ ಉಳಿದಿರುವುದು. ಮಿಕ್ಕ ವೇದಗಳೂ ಕರ್ಮಕಲಾಪಗಳೂ ಮೈದೋರುವುದಕ್ಕಿಂತ ಮೊದಲೇ ಅನೂಚಾನ ಪರಂಪರೆಯಿಂದ ಈ ಪುಣ್ಯಗ್ರಂಥವು ವೈದಿಕಸಾಹಿತ್ಯಭವನಾರಂಭಮೂಲಸ್ತಂಭಾಯಮಾನವಾಗಿದೆ.

ಹಿಂದಿನಿಂದ ತಲೆದೋರಿದ ಯಜುಃಸಾಮಾಥರ್ವಣವೇದಗಳಲ್ಲಿ, ಜನರಿಗೆ ಋಗ್ವೇದದಲ್ಲಿ ಹೇಗೋ ಹಾಗೆ ಮನದೊಲ್ಮೆಯು ಇದ್ದುದು ಕಾಣಬರುವುದಿಲ್ಲ. ಏಕೆಂದರೆ, ಅವುಗಳು ಹೊಸದಾಗಿ ಮೈದೋರಿದ ಯಜ್ಞಕ್ರೀಯೆಗಳನ್ನು ನೆರವೇರಿಸುವುದಕ್ಕೆ ಅನುಕೂಲವಾಗುವಂತೆ ಇಷ್ಟಾನುಸಾರವಾಗಿ ಋಗ್ವೇದದಿಂದ ಎತ್ತಿ ತೆಗೆದುಕೊಳ್ಳಲ್ಪಟ್ಟವುಗಳೂ ಹೊಸ

ದಾಗಿ ಜೋಡಿಸಲ್ಪಟ್ಟವುಗಳೂ ಆದ ಸೂಕ್ತಗಳ ಸಮುದಾಯದಿಂದ ಕೂಡಿವೆ. ಅದುಕಾರಣವೇ, ಇತರ ವೇದಗಳ ಪ್ರವರ್ತಕರಾದ ಪರಮರ್ಷಿಗಳು ತಾವು ಕಂಡಕೊಂಡ ವೇದಗಳಿಗಿಂತ ಮೊದಲು ಪ್ರಚಾರದಲ್ಲಿದ್ದ ಋಗ್ವೇದವನ್ನು ಆದರಾತಿಶಯದಿಂದ ಸಂರಕ್ಷಿಸಿದರು.

ವಸ್ತುತತ್ತ್ವವನ್ನು ಪರಭಾವಿಸಿದರೆ, ಈ ಋಗ್ವೇದವು ಎರಡು ಕಾಲಗಳಲ್ಲಿ ಎರಡುಬಗೆಯ ಅವಸ್ಥೆಯನ್ನು ಅನುಭವಿಸಿರುವುದೆಂದು ತಿಳಿದು ಬರುತ್ತದೆ. ಹೇಗೆಂದರೆ — ಇದು ಇತರ ವೇದಗಳ ಪ್ರಚಾರಕ್ಕಿಂತ ಮೊದಲು ಬಹುಕಾಲದವರೆಗೆ ಸಂಹಿತೆಯ ರೂಪವನ್ನು ಪಡೆಯದೆ ಹಾಗೇ ಇದ್ದಿತು. ಕೆಲವು ಕಾಲಾನಂತರದಲ್ಲಿ ಶಬ್ದವಿದ್ಯೆಯ ನಿಯಮಗಳಿಂದ ಸಂಹಿತೆಯ ರೂಪವಾದ ಪರಿಣಾಮವನ್ನು ಪಡೆಯಿತು. ಆವಿರ್ಭವಿಸಿದ ಕಾಲದ ಮೊದಲ್ಗೊಂಡು ಕೇವಲ ಅನೂಚಾನ (ಗುರುವಿನ ಬಳಿಯಲ್ಲಿದ್ದು ಸಾಂಗವಾಗಿ ಅಧ್ಯಯನಮಾಡುವಣ) ಪದ್ಧತಿಯಿಂದ ಬಂದ ಈ ವೇದವು ಸಂಹಿತೆಯ ಕಾಲದಲ್ಲಿ ಪದಗಳ ಕೊನೆಯ ವರ್ಣವಿಕಾರಗಳಿಂದ ಸ್ವರೂಪಭೇದವನ್ನು ತಳೆಯಿತು. ಸಂಹಿತೆಯ ಪಾಠವು ಋಸಾದಿಯ ಪಾಠಕ್ಕಿಂತಲೂ ಎಷ್ಟೋ ಭೇದಗಳನ್ನು ಹೊಂದಿರುವುದು. ಆದರೆ ಈ ಭೇದಗಳಾದರೋ ಅನ್ಯಶಬ್ದಗಳ ಮೂಲಕವಾದವುಗಳಲ್ಲ. ಇದರಲ್ಲಿ ಒಳ್ಳೆಯ ಶಬ್ದವಾವುದು, ಸುಮ್ನುವೋ, ದುಮ್ನುವೋ ? ಎಂಬೀ ತೆರದ ಶಬ್ದಸಂದೇಹವು ಸಂಭವಿಸದು. ಹಾಗಾದರೆ ಈ ವಿಧವಾದ ಭೇದಗಳಿರುವುದೇತಕ್ಕೆ ? ಎಂದರೆ, ಈ ಭೇದಗಳು ಪ್ರಾಧಾನ್ಯವಾಗಿ ಲೌಕಿಕ ಸಂಸ್ಕೃತದಲ್ಲಿರುವ ಸಂಧಿನಿಯಮಗಳ ಎಡೆಯಾಟದಿಂದ ಹುಟ್ಟಿವೆ. ಹೇಗೆಂದರೆ- ಮೊದಲು 'ತುವಂ ಹಿ ಅಗ್ನೆ' ಎಂಬೀ ರೂಪದಿಂದ ಇದ್ದುದು ಹಿಂದಿನಿಂದ 'ತ್ವಂ ಹ್ಯಗ್ನೆ' ಎಂಬೀ ರೂಪವನ್ನು ಪಡೆಯಿತು. 'ತುವಮ್' ಎಂಬಲ್ಲಿ 'ತ್ವಮ್' ಎಂದೂ 'ಹಿ ಅಗ್ನೆ' ಎಂಬಲ್ಲಿ 'ಹ್ಯಗ್ನೆ' ಎಂದೂ ಮಾಡಲ್ಪಟ್ಟ ಈ ವಿಕಾರವು ಸಂಧಿನಿಮಿತ್ತಕವಾಗಿದೆ. ಪಠಿಸುವಾಗ ಕಿವಿಗೆ ಇಂಪಾಗಿ ಕೇಳಿಬರುವಂತೆ ಮಾಡುವ ಬಯಕೆಯಿಂದ ಪ್ರವರ್ತಿಸಲ್ಪಟ್ಟ ಈ ಸಂಧಿನಿಯಮವು ಛಂದೋಲಕ್ಷಣಕ್ಕೂ ಅನುಕೂಲವಾಗಿದೆ. ಹೀಗೆ ಸಂಹಿತೆಯ ಪಾಠವು ಸಿದ್ಧವಾದರೂ ಈ ವೇದದ ಪೂರ್ವರೂಪವನ್ನು ತಿಳಿಯಲು ಶಕ್ಯವಿದೆ. ಈ ಸಂಹಿತಾ ಪಾಠದಲ್ಲಿ ಋಸಾದಿಯ ಶಬ್ದ ದೋಷಗಳೂ, ಸ್ವರಭೇದಗಳೂ, ವೈಕಲ್ಪಿಕರೂಪಭೇದಗಳೂ ಕಾಯ್ದಿಡಲ್ಪಟ್ಟಿವೆ. ಅವುಗಳನ್ನು ಅನಾಯಾಸವಾಗಿ ತೆಗೆಯಲು ಬರುವಂತಿದ್ದರೂ

ಹಾಗೆಮಾಡಿರುವುದಿಲ್ಲ. ಈ ಮುಂತಾದ ವಿಶೇಷ ಸಂಗತಿಗಳು ಈ ಋಗ್ವೇದವು ಮೊದಲನೆಯ ಅವಸ್ಥೆಯಲ್ಲಿದ್ದ ಕೆಲವು ಶಬ್ದದೋಷಗಳನ್ನೂ, ಎರಡನೆಯವಸ್ಥೆಯಲ್ಲಿ ಸೇರಿಸಿದ ಸಂಧಿನಿಮಿತ್ತಕಗಳಾದ ವಿಕಾರಗಳನ್ನೂ ಬಿಟ್ಟು ಮಿಕ್ಕ ಸರ್ವವಿಷಯಗಳಲ್ಲೂ ಬುನಾದಿಯಿಂದ ಪರಂಪರೆವಿಡಿದು ತನ್ನ ಪರಿಶುದ್ಧತೆಯನ್ನು ಕಳೆದುಕೊಳ್ಳದೆ ಉಳಿದಿರುವುದೆಂದು ಸೂಚಿಸುತ್ತವೆ. ಬ್ರಾಹ್ಮಣ ಭಾಗಗಳಲ್ಲಿ ಕಂಡುಬರುವ ಋಗ್ವೇದ ವಿಷಯಕವಾದ ವಿಚಾರವನ್ನು ಪರಶೀಲನೆ ಮಾಡಿದರೆ ಈಗಿನ ಋಗ್ವೇದ ಪಾಠವು ಬ್ರಾಹ್ಮಣ ಭಾಗಗಳ ಪ್ರಚಾರಕಾಲದಲ್ಲಿ ಯಜುರ್ವೇದದ ಗದ್ಯಭಾಗಕ್ಕಿಂತಲೂ ವಿಶೇಷವಾದ ಪ್ರತಿಷ್ಠೆಯನ್ನು ಪಡೆದಿದ್ದಿತೆಂದು ತಿಳಿಯಲ್ಪಡುವುದು.

**ಯಜುರ್ವೇದವು :—**

ಈ ಸಂಹಿತೆಯೊಳಗಣ ಋಚೆಗಳು ಯಾಜ್ಞಿಕಕರ್ಮಗಳಲ್ಲಿ ಉಪಯುಕ್ತಕಗಳಾಗುವಂತೆ ಅನುಕ್ರಮವಾಗಿ ಒತ್ತಟ್ಟಿಗೆ ಸೇರಿಸಲ್ಪಟ್ಟಿವೆ. ಒಟ್ಟಿನಲ್ಲಿ, ಈ ಸಂಹಿತೆಯಾದರೋ ದ್ರವ್ಯಮಯಯಾಜ್ಞಿಕಕರ್ಮಗಳಲ್ಲಿ ಮುಖಂಡರೆನಿಸುವ ವಿಶಿಷ್ಟಪುರೋಹಿತರಿಗೆ ಉಪಯುಕ್ತಗಳಾದ ಋಚೆಗಳ ಸಂಗ್ರಹಾತ್ಮಕ ಪುಸ್ತಕವೆಂದು ಹೇಳಿಸಿಕೊಳ್ಳಲ್ಪಡುವುದು. ಇದು ಕೃಷ್ಣ, ಶುಕ್ಲಗಳೆಂಬ ಎರಡು ತೆರದ ಪಾಠಭೇದಗಳುಳ್ಳದ್ದಾಗಿರುವುದೆಂಬ ಸಂಗತಿಯನ್ನು ಹಿಂದೆ ನಾವು ಹೇಳಿದ್ದೇವೆ. ಯಜುರ್ವೇದವು ಮೊದಲಿನ ಅಧ್ಯಾಪಕರಾದ ಗುರುಗಳ ಪರಂಪರೆವಿಡಿದು ಮುಖೋದ್ಗತವಾಗಿದ್ದುದನ್ನೇ ಅವರ ಶಿಷ್ಯ-ಪ್ರಶಿಷ್ಯರು ಬಾಯಿಂದ ಕಲಿತು ನೆನಪಿನಲ್ಲಿಟ್ಟುಕೊಳ್ಳುತ್ತ ಬಂದುದು. ಈ ರೀತಿಯಾದ ಪ್ರವಚನಭೇದಮೂಲಕ ಅನೇಕ ಶಾಖಾರೂಪದಿಂದ ಯಜುರ್ವೇದಾಧ್ಯಾಯಿಗಳು ಬೇರೆ ಬೇರೆಯಾದರು. ಚರಣವ್ಯೂಹದಲ್ಲಿ ಯಜುರ್ವೇದದ ೮೬ ಭೇದಗಳುಂಟೆಂದು ಹೇಳಲ್ಪಟ್ಟಿದೆ. ಆದರೆ, ಆ ಎಲ್ಲ ಶಾಖೆಗಳ ಹೆಸರುಗಳು ಹೇಳಲ್ಪಟ್ಟಿಲ್ಲ; ಎಷ್ಟು ಹೆಸರುಗಳು ತೋರಿಸಲ್ಪಟ್ಟಿವೆಯೋ ಅವನ್ನು ನಾವಿಲ್ಲಿ ಬರೆಯುತ್ತೇವೆ:— ಚರಕವೆಂಬುದು ೧೨ ಭೇದಗಳುಳ್ಳದ್ದಾಗಿದೆ. ಅವು ಚರಕ, ಆಹ್ವರಕ, ಕಠ, ಪ್ರಾಚ್ಯಕಠ, ಕಪಿಷ್ಠಲಕಠ, ಚಾರಾಯಣೀಯ, ವಾರಾಯಣೀಯ ವಾರ್ತಾನ್ತವೀಯ, ಶ್ವೇತಾಶ್ವತರ, ಔಪಮನ್ಯವ, ಪಾತಾಣ್ಡನೀಯ, ಮೈತ್ರಾಯಣೀ ಎಂದಿವೆ. ಮೈತ್ರಾಯಣೀ ಶಾಖೆಯಲ್ಲಿ ಮತ್ತೆ ೬ ಭೇದಗಳುಂಟಾಗಿವೆ. ಅವು— ಮಾನವ, ವಾರಾಹ, ದುಂದುಭ, ಛಗಲೇಯ

(ಭಾಗಲೇಯ) ಹಾರಿದ್ರುವೀಯ, ಶ್ಯಾಮಾಯನೀಯ ಎಂದಿವೆ, ತೈತ್ತಿರೀ ಯದಲ್ಲಿ ಔಖೇಯ (ಔಖೀಯ) ಖಾಣ್ಡಿಕೇಯ ಎಂಬ ಮುಖ್ಯವಾದ ರಡು ಶಾಖೆಗಳಿವೆ. ಅವುಗಳಲ್ಲಿ ಖಾಂಡಿಕೇಯದ ಶಾಖೆಗಳು ಐದು, ಆವು ತ್ಯಾಕಾಲೇಯ, ಶಾಠ್ಯಾಯನೀ, ಹಿರಣ್ಯಕೇಶೀ, ಭಾರದ್ವಾಜೀ, ಆಪಸ್ತಂಬೀ ಎಂದಿವೆ. ಮತ್ತು ವಾಜಸನೇಯ ಶಾಖೆಯ ಭೇದಗಳು :— ಜಾಬಾಲ, ಬೌಧಾಯನ (ಬೌಧೇಯ), ಕಾಣ್ವ, ಮಾಧ್ಯನ್ದಿನೇಯ, (ಮಾಧ್ಯಂದಿನ), ಶಾಫೇಯ, ತಾಪನೀಯ, ಕಪೋಲ, ಪೌಣ್ಡರವತ್ಸ, ಆವಟಿಕ, ಪರಮಾವಟಿಕ, ಪಾರಾಶರ, ವೈಣೇಯ, ವೈಧೇಯ, ಅದ್ಧ, ಎಂದಿವೆ. ಈ ಮೇಲಿನ ಶಾಖೆಗಳ ಹೆಸರಿನ ಪಾಠಭೇದಗಳು ಬೇರೆ ಬೇರೆ ಪ್ರತಿಗಳಲ್ಲಿ ಭಿನ್ನಭಿನ್ನಗಳಾಗಿವೆ.

ಇಂದಿನವರೆಗೆ ಯಜುರ್ವೇದದ ಆರು ಸಂಹಿತೆಗಳು ಉಪಲಬ್ಧ ವಾಗಿವೆ. ಅವುಗಳಲ್ಲಿ ಮೊದಲನೆಯದು, ಕಾಠಕಸಂಹಿತೆಯು, ಕಠಶಾ ಖೆಯ ಈ ಸಂಹಿತೆಯು ಕಾಲವೈಚಿತ್ರ್ಯದಿಂದ ಭರತಖಂಡವನ್ನು ತ್ಯಜಿಸಿ, ಹಸ್ತಲಿಖಿತರೂಪವಾಗಿ ಜರ್ಮನ್‌ದೇಶದ ರಾಜಧಾನಿಯಾದ ಬರ್ಲಿನ್ ಪಟ್ಟಣದ ಲಾಯಬ್ರರಿಯಲ್ಲಿ ಎಷ್ಟೋ ಕಾಲವಡಗಿದ್ದು, ಗೌರಕಾಯ ರಿಂದ ಗೌರವಿಸಲ್ಪಟ್ಟು ಅವರಿಂದ ಮುದ್ರಿತವಾಗಿದೆ.

೨ನೆಯದು ಕಪಿಷ್ಠಲಕಠಸಂಹಿತೆ, ಇದೂ ಅಚ್ಚಾಗಿದೆ. (೩) ಮೈತ್ರಾಯಣೀಸಂಹಿತೆ, ಇದು ಮೈತ್ರಾಯಣೀಶಾಖೆಯ ಸಂಹಿತೆಯು ಇವೆರಡೂ ವಿದೇಶಗಳಲ್ಲಿಯೇ ಪ್ರಸಿದ್ಧಗೊಳಿಸಲ್ಪಟ್ಟಿವೆ. (೪) ತೈತ್ತಿರೀಯ ಸಂಹಿತೆ, ಇದು ತೈತ್ತಿರೀಯಶಾಖೆಯ ಸಂಹಿತೆಯು; ಇದು ಸಾಯಣ ಭಾಷ್ಯದೊಡನೆ ಪುಣ್ಯಪುರದಲ್ಲಿ ಮುದ್ರಿತವಾಗಿದೆ. ಈ ಮೇಲೆ ನಿರ್ದಿ ಷ್ಟಗಳಾದ ನಾಲ್ಕು ಸಂಹಿತೆಗಳ ಪರಸ್ಪರ ನಿಕಟಸಂಬಂಧವಿದೆ. ಮತ್ತು ಇವು 'ಕೃಷ್ಣಯಜುರ್ವೇದ' ದೊಳಗಿನವು. ಇವುಗಳಿಗೆ ಬೇರಬೇರೆಯಾಗಿ ಕಂಡುಬರುವುದು ವಾಜಸನೇಯಸಂಹಿತೆಯು. ಇದಕ್ಕೆ ಶುಕ್ಲಯಜುರ್ವೇದ ವೆನ್ನುತ್ತಾರೆ. ಇದರಲ್ಲಿ ಕಾಣ್ವ, ಮಾಧ್ಯಂದಿನವೆಂಬ ಎರಡು ಶಾಖೆಗಳಿವೆ. ಆದರೆ, ಇವೆರಡರಲ್ಲಿಯೂ ವಿಶೇಷ ಭೇದವಿರುವುದಿಲ್ಲ. ಉವ್ವಟ ಮಹೀಧರರ ಭಾಷ್ಯಗಳೊಡನೆ ಮಾಧ್ಯಂದಿನಸಂಹಿತೆಯು ಮುಂಬಯಿ ನಿರ್ಣಯಸಾಗರ ಮುದ್ರಣಾಲಯದಲ್ಲಿಯೂ, ಸಾಯಣ ಭಾಷ್ಯದೊಡನೆ ಕಣ್ವಸಂಹಿತೆಯು ಅಜಮೀರದಲ್ಲಿಯೂ ಅಚ್ಚಾಗಿವೆ.

ಹೀಗೆ ಮಾಧ್ಯಂದಿನ, ಕಣ್ವ ಎಂಬೆರಡು ಸಂಹಿತೆಗಳನ್ನು ಗ್ರಹಿಸಿ ಯಜುರ್ವೇದದ ಆರು ಸಂಹಿತೆಗಳು ಪ್ರಸಿದ್ಧವಾಗಿರುತ್ತವೆ.

ಮೊದಲಿನದು ಕಠಶಾಖೆಯು. ಅದರ ಉಪಶಾಖೆಯೇ ಕಪಿಷ್ಠಲ ವೆಂಬುದು; ಇವೆರಡು ಶಾಖಾವಲಂಬಿಗಳು ಪೂರ್ವದಲ್ಲಿ ಪಂಜಾಬ ದೇಶದಲ್ಲಿಯೂ, ಕಾಶ್ಮೀರದೇಶದಲ್ಲಿಯೂ ವಾಸಿಸುತ್ತಿದ್ದರು. ಅವರಲ್ಲಿ ಕಠಶಾಖಾನುಯಾಯಿಗಳು ಈಗಲೂ ಕಾಶ್ಮೀರದೇಶದಲ್ಲಿ ಕಂಡುಬರು ವರು. ಕಪಿಷ್ಠಲರಾದರೋ ಮೂಲಸಹಿತವಾಗಿ ನಷ್ಟರಾಗಿರುವರು. ಮೊದಲಿಗರಿಂದ 'ಕಾಲಾಪ' ರೆಂದು ಕರೆಯಲ್ಪಡುತ್ತಿದ್ದ ಮೈತ್ರಾಯಣ ಶಾಖೀಯರು ಮೊದಲು ನರ್ಮದಾನದೀಮುಖದಿಂದ ದಕ್ಷಿಣಕ್ಕೆ ನಾಶಿಕದ ವರೆಗೆ ಹಬ್ಬಿದರು. ಈಗಲಾದರೋ ಆ ಶಾಖೀಯರು ನರ್ಮದೆಯ ಉತ್ತರಕ್ಕಿರುವ ಗುಜರಾತದೇಶದಲ್ಲಿಯೂ, ಅಹಮದಾಬಾದನಗರದಲ್ಲಿಯೂ ಅದರ ಪಶ್ಚಿಮಕ್ಕಿರುವ ಮೌರ್ವಿಪುರದಲ್ಲಿಯೂ ವಿರಳವಾಗಿರುವರೆಂದು ಹೇಳಲ್ಪಡುತ್ತಾರೆ. ಕಠ, ಕಾಲಾಪವೆಂಬಿವೆರಡು ಶಾಖೆಗಳೂ ಕ್ರಿ. ಶ. ಆರಂಭಕ್ಕಿಂತ ಪೂರ್ವದಲ್ಲಿ ಸರ್ವತ್ರ ವಿಶೇಷಪ್ರಚಾರವಾಗಿದ್ದುವು. ಅದುಕಾರಣವೇ ಪತಂಜಲಿಯು ಕಾಠಕವೂ ಕಾಲಾಪಕವೂ ಪ್ರತಿ ಯೊಂದು ಗ್ರಾಮದಲ್ಲಿ ಪಠಿಸಲ್ಪಡುವುದು ಎಲ್ಲ ಕಡೆ ಕೇಳಲ್ಪಡುವು ದೆಂದು ಹೇಳುವನು, ಹಾಗೂ, ಅಯೋಧ್ಯೆಯಲ್ಲಾದರೂ ಈ ಶಾಖಾ ದ್ವಯವು ಅತ್ಯಾದರದೊಡನೆ ಪುರಸ್ಕರಿಸಲ್ಪಟ್ಟಿದ್ದಿತೆಂದು ರಾಮಾಯಣ ದಿಂದ ತಿಳಿದುಬರುವುದು. ಆದರೆ, ತೈತ್ತಿರೀಯ ವಾಜಸನೇಯಗಳೆಂಬ ಯಜುಃಶಾಖೆಗಳ ಹಬ್ಬುಗೆಯು ಬೆಳೆದುದರಿಂದ ಕಾಠಕಕಾಲಾಪಗಳ ಏಳಿಗೆಯಾಗಲಿಲ್ಲ. ತೈತ್ತಿರೀಯ ಶಾಖಾವಲಂಬಿಗಳು ಮೊದಲು ನರ್ಮ ದೆಯ ದಕ್ಷಿಣತೀರದಲ್ಲಿ ವಿಶೇಷವಾಗಿರುತ್ತಿದ್ದರು. ತೈತ್ತಿರೀಯ ಪ್ರಧಾನ ಭೂತವಾದ ಉಪಶಾಖೆಯೆನಿಸುವ ಆಪಸ್ತಂಬಶಾಖೀಯರು ಈಗಲೂ ಗೋದಾವರೀ ತೀರದಲ್ಲಿರುವರು. ( ಆಂಧ್ರದೇಶದಲ್ಲೂ, ದ್ರಾವಿಡದೇಶ ದಲ್ಲೂ ಇದ್ದಾರೆ ) ಮತ್ತೊಂದು ಉಪಶಾಖೆಯಾದ ಹಿರಣ್ಯಕೇಶಿ ಶಾಖಾ ನುವರ್ತಿಗಳು ಗೋದಾವರಿಯ ಸಮೀಪದ ದಕ್ಷಿಣ ಭಾಗದಲ್ಲಿದ್ದಾರೆ. ವಾಜಸನೇಯಶಾಖೀಯರು ಮೊದಲು ಗಂಗಾತೀರದಲ್ಲಿ ವಿಶೇಷವಾಗಿ ದ್ದರು ಈಗ ಎಲ್ಲಕಡೆಗೂ ಹಬ್ಬಿದ್ದಾರೆ.

ತೈತ್ತಿರೀಯಸಂಹಿತೆಯಲ್ಲಿ ಏಳು ಕಾಂಡಗಳಿವೆ. ಪ್ರತಿಯೊಂದು ಕಾಂಡವೂ ಅನೇಕ ಪ್ರಪಾಠಕಗಳಿಂದ ವಿಭಕ್ತವಾಗಿದೆ. ಆ ಪ್ರಪಾಠಕ

ಗಳಲ್ಲಿಯೂ ಅನೇಕ ಅನುವಾಕಗಳಿವೆ. ಅಂದರೆ ಕೃಷ್ಣಯಜುರ್ವೇದವೆಂದು ಪ್ರಸಿದ್ಧವಾಗಿರುವ ತೈತ್ತಿರೀಯಸಂಹಿತೆಯಲ್ಲಿ ೭ ಕಾಂಡ (ಅಷ್ಟಕ) ಗಳೂ, ೪೪ ಪ್ರಪಾಠಕ (ಪ್ರಶ್ನ) ಗಳೂ, ೭೫೧ ಅನುವಾಕಗಳೂ, ೨೧೯೪ ಮಂತ್ರಗಳೂ, ೧೧೧೯೬೬ ಅಕ್ಷರಗಳೂ ಇವೆ.

ಶುಕ್ಲ ಯಜುರ್ವೇದವೆಂಬ ವಾಜಸೇನೆಯ (ಮಾಧ್ಯಂದಿನೀಯ) ಸಂಹಿತೆಯಲ್ಲಿ ೪೦ ಅಧ್ಯಾಯಗಳೂ, ೩೦೩ ಅನುವಾಕಗಳೂ ೧೯೭೬ ಮಂತ್ರಗಳೂ, ೮೮೮೭೫ ಅಕ್ಷರಗಳೂ ಇವೆ. ಈ ಸಂಹಿತೆಯಲ್ಲಿಯೂ, ಕಣ್ವಸಂಹಿತೆಯಲ್ಲಿಯೂ ಪ್ರತಿಪಾದ್ಯವಿಷಯವು ಒಂದೇ ಆಗಿದೆ. ವಿಷಯಗಳ ಜೋಡಣೆಯಾದರೂ ಸಮಾನವಾಗಿದೆ. ಅಂದರೆ, ಇವೆರಡರಲ್ಲಿರುವ ಭೇದವಾದರೋ ಕೇವಲ ಪಠನಪ್ರಕಾರದಿಂದುಂಟಾದುದು; ಅದಾದರೂ ಕೇವಲ ಗದ್ಯಾತ್ಮಕವಾದ ಅರ್ಥವಾದ ಭಾಗದಲ್ಲೇ ಇರುವುದು, ಪದ್ಯಾತ್ಮಕವಾದ ಮಂತ್ರಭಾಗದಲ್ಲಿರುವುದಿಲ್ಲ. ಇವೆರಡೂ ಶಾಖೆಯುವರು ಉತ್ತರ ಭಾಗದಲ್ಲಿಯೂ ದಕ್ಷಿಣ ದೇಶದ ಕೆಲವಡೆಯಲ್ಲಿಯೂ ಇರುವರು. ಈ ಶಾಖಾಧ್ಯಯನಪರಾಯಣರು 'ಷ' ಎಂಬಕ್ಷರವನ್ನು 'ಖ' ಎಂದುಚ್ಚರಿಸುತ್ತಾರೆ. ಸುಪ್ರಸಿದ್ಧವಾದ ಪುರುಷಸೂಕ್ತದ 'ಸಹಸ್ರಶೀರ್ಷಾ ಪುರುಷಃ' ಎಂಬ ಪ್ರಥಮ ಮಂತ್ರವನ್ನು ಆಶ್ವಲಾಯನ ಶಾಖೆಯುವರು ಗಂಭೀರಸ್ವರದಿಂದ '**ಸಹಸ್ರಶೀರ್ಷಾಪುರುಷಃ**' ಎಂದು ಪಠಿಸುವರಷ್ಟೇ! ಆದರೆ ಅದನ್ನೇ ಶುಕ್ಲಯಜುರ್ವೇದಿಗಳು '**ಸಹಸ್ರಶೀರ್ಖಾ ಪುರಖಃ**' ಎಂದುಚ್ಚರಿಸುವರು. ಇದಲ್ಲದೆ ಭಿನ್ನೋಚ್ಚಾರಗಳೂ ಅವರ ಸಂಪ್ರದಾಯದಲ್ಲಿವೆ.

**ಸಾಮವೇದವು:—**

ಇದರಲ್ಲಿ ೧೫೪೯ ಮಂತ್ರಗಳಿವೆ. ಅವುಗಳಲ್ಲಿ ೭೫ ಋಕ್ಕುಗಳನ್ನು ಬಿಟ್ಟು ಉಳಿದ ಮಂತ್ರಗಳೆಲ್ಲವೂ ಋಕ್ಸಂಹಿತೆಯೊಳಗಿನವೇ ಇವೆ. ಸಾಮವೇದದಲ್ಲಿ ಪೂರ್ವಾರ್ಚಿಕ ಮತ್ತು ಉತ್ತರಾರ್ಚಿಕ ಎಂದು ಎರಡು ಭಾಗಗಳಿವೆ. 'ಆರ್ಚಿಕ' ಎಂದರೆ ಋಕ್ಕುಗಳ ಸಮೂಹವು. ಮೊದಲನೆಯ ಆರ್ಚಿಕದಲ್ಲಿ ಆರುಪ್ರಪಾಠಕಗಳೂ, ಉತ್ತರಾರ್ಚಿಕದಲ್ಲಿ ಒಂಭತ್ತು ಪ್ರಪಾಠಕಗಳೂ ಇವೆ. ಉತ್ತರಾರ್ಚಿಕವೆಂದರೆ ಸಂಗೀತಪುಸ್ತಕವಾಗಿರುವುದು.

ಋಸಾದಿ ಈ ಮೂರು ಪಳಿವಾತುಗಳೇ ಮಿಗಿಲಾದ ಪವಣಗಳೆನಿಸಿದ್ದವು. ಅದು ಕಾರಣವೇ ಹಳೆಯ ಓಲೆಗಳಲ್ಲಿ 'ತ್ರಯೀವಿದ್ಯಾ' ಎಂಬ ಬಳಕೆಯಿದ್ದಿತು. ಎಷ್ಟೋ ದಿವಸಗಳ ತರುವಾಯ ನಾಲ್ಕನೆಯ ಅಥರ್ವಸಂಹಿತೆಯು ಇತರ ಸಂಹಿತೆಗಳೊಡನೆ ಪರಿಗಣಿಸಲ್ಪಟ್ಟಿದೆ. ಈ ವೇದದ ಹೆಸರು ಇತರ ವೇದಗಳಲ್ಲಿರುವುದಿಲ್ಲ. ಈ ವೇದದಲ್ಲಾದರೋ ಆ ಮೂರುವೇದಗಳ ಹೆಸರುಗಳಿವೆ. ಅಥರ್ವವೇದದ ಭಾಷೆಯು ಇತರ ವೇದಗಳ ಭಾಷೆಗಿಂತ ಹಿಂದಿನದೆಂದು ತಿಳಿದುಬರುವುದು. ಎಂಬ ಮೊದಲಾದ ಆಕ್ಷೇಪಗಳು ತಲೆದೋರುತ್ತವೆ. ಆದರೆ 'ಆಥರ್ವಣ'— 'ಆಂಗಿರಸ' 'ಭೃಗು' ಎಂಬಭಿಧಾನವುಳ್ಳವರು ವೇದಕಾಲೀನರಲ್ಲವೇ ? ಇವರ ಹೆಸರುಗಳು ಋಗ್ವೇದದಲ್ಲಿ ಬಂದಿವೆ; ತೈತ್ತಿರೀಯ ಸಂಹಿತೆಯಲ್ಲಿ ಋಗ್ಯಜುಃಸಾಮವೇದಗಳೊಡನೆ 'ಅಂಗಿರಸ' ವೆಂಬ ಹೆಸರೂ ವಾಜಸನೇಯ ಸಂಹಿತೆಯಲ್ಲಿ 'ಅಥರ್ವಣ' ವೆಂಬ ನಾಮವೂ ಕಾಣಲ್ಪಡುವುವು. ಗೋಪಥಬ್ರಾಹ್ಮಣದಲ್ಲಿ (೧-೯)— **'ಶ್ರೇಷ್ಠೋ ಹಿ ವೇದಸ್ತಪಸೋಧಿಜಾತೋ ಬ್ರಹ್ಮಜ್ಞಾನಾಂ ಹೃದಯೇ ಸಂಬಭೂವ'** (೧-೧೬)— **'ಚತ್ವಾರೋ ವಾ ಇಮೇ ವೇದಾ ಋಗ್ವೇದೋ ಯಜುರ್ವೇದಃ ಸಾಮವೇದೋ ಬ್ರಹ್ಮವೇದಃ'** ಎಂಬುದಾಗಿ ಅಥರ್ವವೇದವು ಬ್ರಹ್ಮವೇದವೆನಿಸಿಕೊಳ್ಳುವುದರಿಂದ ಶ್ರೇಷ್ಠವಾದುದೆಂದು ಹೇಳಲ್ಪಟ್ಟಿದೆ. ಇನ್ನು ಅಥರ್ವವೇದದಲ್ಲಿ ಋಙ್ಮಂತ್ರಗಳು ಸೇರಿಸಲ್ಪಟ್ಟಿವೆಯೆಂದು ಹೇಳುವುದಕ್ಕಿಂತ, ಋಗ್ವೇದದಲ್ಲಿಯೇ ಅಥರ್ವಮಂತ್ರಗಳ ಸೇರ್ಪಡೆಯಾಗಿರಬಹುದೆಂದು ನುಡಿಯಬಾರದೇಕೆ ? ಒಂದೇ ಅಖಂಡವಾದ ವೇದವು ನಾಲ್ಕು ಸಂಹಿತೆಗಳ ರೂಪವಾಗಿ ವಿಭಕ್ತವಾಗಿರುವುದೆಂದು ಈ ಹಿಂದೆ ನಾವು ಹೇಳಿದ ಸಂಗತಿಯನ್ನು ಸ್ಮರಿಸಿ ಸರಳದಾರಿಯನ್ನು ಹಿಡಿದರೆ ಆ ವೇದವು ಮುಂಚಿನದು ಈ ವೇದವು ಹಿಂಚಿನದು ಎಂಬೀಕಲ್ಪನೆಗಳಿಗಾಸ್ಪದವೆಲ್ಲಿದೆ ? ಮತ್ತು ಆ ಋಗಥರ್ವಸಂಹಿತೆಗಳ ಭಾಷೆಯ ಪ್ರಾಚೀನಾರ್ವಾಚೀನತ್ವಸಾಧಕಯುಕ್ತಿಯಾದರೂ ನಿತಾಂತ ನಿರ್ಮೂಲವಾದುದು. ಋಕ್ಸಂಹಿತೆಯಲ್ಲಾದರೋ ಭಾಷೆಯ ಪ್ರಯೋಗವು ಒಂದೇ ವಿಧವಾಗಿರುವುದೇ ? ಅಥರ್ವವೇದದಲ್ಲಿಯಾದರೋ ಇತರ ವೇದಗಳಲ್ಲಿಯೂ ಅರ್ವಾಚೀನ ವೈದಿಕ ಸಾಹಿತ್ಯದಲ್ಲಿಯೂ ಕಾಣಬಾರದ ಪ್ರಾಚೀನತಮ ಶಬ್ದಗಳಿರುವುದಿಲ್ಲವೇ ? ಋಗ್ಯಜುಃಸಾಮಸಂಹಿತೆಗಳು ಪ್ರಾಮುಖ್ಯತೆಯಿಂದ ಯಜ್ಞಕ್ರಿಯೆಗಳಿಗುಪಯುಕ್ತವಾದುವಾಗಿ

ಕರ್ಮಕಾಂಡಸಾಂಪ್ರದಾಯಕರಿಂದ 'ವೇದ-ತ್ರಯೀ' ಎಂಬ ಶಬ್ದವೇ ಮುಂದುವರಿಸಲ್ಪಟ್ಟಿದೆ. ಅಥರ್ವವೇದವು ಯಜ್ಞಕ್ರಿಯಾಸಂಬಂಧ ರಹಿತ ವಾದುದೆಂದು ಹೇಳಿಸಿಕೊಳ್ಳಲ್ಪಡದಿರುವುದಕ್ಕಾಗಿ ತದ್ವಿಷಯಕ್ಕೆ ತನ್ನ ಕೊನೆಯಕಾಂಡದಲ್ಲಿ ಸ್ಥಳಕೊಟ್ಟಿದೆ. ಐಹಿಕ, ಪಾರತ್ರಿಕ, ಮೋಕ್ಷರೂಪ ಧ್ಯೇಯ ಸಾಧಕಗಳಾದ ಆಚಾರ ವಿಚಾರಗಳನ್ನೊಳಗೊಂಡ ಅಥರ್ವ ವೇದವು ಯಾವಾಗಲೂ ಎಲ್ಲರಿಂದಲೂ ಸಮಾಮ್ನಾಯ ರೂಪವಾದು ದೆಂದು ಪರಿಗ್ರಹಿಸಲ್ಪಟ್ಟುದುದಾಗಿದೆ. ಮಹಾಭಾರತದಲ್ಲಿ ಈ ವೇದವು ಇತರ ವೇದಗಳಂತೆಯೇ ಪರಮಪ್ರಮಾಣಭೂತವಾದುದೆಂದು ವರ್ಣಿ ಸಲ್ಪಟ್ಟಿದೆ. ಪಾತಂಜಲ ಮಹಾಭಾಷ್ಯದಲ್ಲಿ ಅಥರ್ವವು ಪ್ರಥಮವೇದ ವೆಂದು ನಿರೂಪಿಸಲ್ಪಟ್ಟಿರುವುದು. ಇದರಲ್ಲಿ ಮುಖ್ಯವಾಗಿ ಅಥರ್ವನ್ ಮತ್ತು ಅಂಗಿರಸ್ ಎಂಬ ಎರಡುವಿಧವಾದ ಮಂತ್ರವಿಧಿಗಳಿರುವುದ ರಿಂದ ಇದರ ಹಳೆಯ ಹೆಸರು 'ಅಥರ್ವಾಂಗಿರಸ' ವೆಂಬ ಹೆಸರಿನ ಸಂಕ್ಷಿ ಪ್ತರೂಪವು. ಈ ಅಥರ್ವ ವೇದದ ಪೈಪ್ಪಲಾದ, ಲೌದ, ಮೌದ, ಶೌನಕೀಯ, ಜಾಜಲ, ಜಲದ, ಬ್ರಹ್ಮವದ, ದೇವದರ್ಶ, ಚಾರಣ ವೈದ್ಯ ಎಂಬ ಒಂಭತ್ತು ಶಾಖೆಗಳಿವೆ. ಈಗ ಸರ್ವತ್ರ ಶೌನಕೀಯ ಸಂಹಿತೆಯೇ ವಿಶೇಷಪ್ರಚಾರದಲ್ಲಿದೆ. ಇದರಲ್ಲಿ ೨೦ ಕಾಂಡಗಳೂ, ೭೩೧ ಸೂಕ್ತಗಳೂ, ೫೯೭೭ ಮಂತ್ರಗಳೂ ಇವೆ. ಈ ವೇದದ ಶಾಖಾ ವಲಂಬಿಗಳು ಮಹಾರಾಷ್ಟ್ರ ಮತ್ತು ಗುಜರಾತಬ್ರಾಹ್ಮಣರಿರುವರು.

ಈ ರೀತಿಯಾಗಿ ವೈದಿಕಸಾಹಿತ್ಯದಲ್ಲಿ ನಾಲ್ಕುವಿಧ ಸಂಹಿತೆಗಳಿರು ತ್ತವೆ. ಪೂರ್ವಕಾಲದಲ್ಲಿ ವಿಶುದ್ಧಜ್ಞಾನಿಗಳಾದ ಮಹರ್ಷಿಗಳಿಂದ ಸಾಕ್ಷಾ ತ್ಕರಿಸಲ್ಪಟ್ಟವುಗಳಾಗಿ ಪಿತಾಪುತ್ರ, ಗುರುಶಿಷ್ಯಪರಂಪರೆಯಿಂದ ಬಂದ ಈ ವೇದಗಳ ಅಧ್ಯಯನವೇ ಪರಮಧರ್ಮವೆಂದು ಪುರೋಹಿತರ ವಂಶ ಗಳಲ್ಲಿ ಬಲವಾದ ನಂಬಿಕೆಯಿದ್ದಿತು. ಆ ಸಮಯದಲ್ಲಿ ವೇದಗಳು ಪ್ರಕ್ರಿಯೆಗಳಿಗೆ ಸರಿಯಾಗಿ ಸಂಗ್ರಹಿಸಲ್ಪಟ್ಟು ಮೇಲೆ ಹೇಳಿದಂತೆ ಸಂಹಿ ತೆಗಳೆಂಬ ಹೆಸರನ್ನು ತಾಳಿ ಶಾಶ್ವತವಾದ ಪ್ರತಿಷ್ಠೆಯನ್ನು ಪಡೆದಿದ್ದವು.

**ಮೊದಲನೆಯ ಉಲ್ಲಾಸವು ಮುಗಿದುದು.**



# ವೇದಪರಿಚಯ.

## ಎರಡನೆಯ ಉಲ್ಲಾಸ.

ಪ್ರಥಮೋಲ್ಲಾಸದಲ್ಲಿ ವೇದವೆಂಬುದು — ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷದ್ ಎಂದು ನಾಲ್ಕು ವಿಧವಾಗಿ ವಿಭಾಗಿಸಲ್ಪಟ್ಟಿರುವ ಸಂಗತಿಯನ್ನೂ, ಆ ನಾಲ್ಕು ವಿಧವಾದ ವಿಭಾಗಗಳಲ್ಲಿ ಸಂಹಿತೆಯ ಸ್ವರೂಪವನ್ನು ನಿರೂಪಿಸಿದೆವು. ಈಗ ಉಳಿದ ಬ್ರಾಹ್ಮಣಾದಿ ಮೂರು ಭಾಗಗಳ ಸ್ವರೂಪವು ಪ್ರತಿಪಾದಿಸಲ್ಪಡುವುದು ಕ್ರಮಪ್ರಾಪ್ತವಾಗಿದೆ.

ಮುಂದಿನ ವಿಷಯದಕಡೆ ಹರಿಯಲು ಹವಣಿಸುವ ನಮ್ಮ ಮನೋವೃತ್ತಿಯು ತಾನು ಹಿಂದೆ ವಿಚಾರಿಸಿದ ವಿಷಯಗಳ ಮುಖ್ಯಾಂಶವನ್ನಾದರೂ ಲಕ್ಷೀಕರಿಸದೆ ಮುಂದಕ್ಕೆ ಸಾಗುವುದೆಂದರೆ, ಹಿಂದಿನ ಗಂಟಿನ ನೆನಪಿಲ್ಲದೆ ಕೈಹೊಲಿಗೆಯ ಕೆಲಸದಲ್ಲಿ ದುಡುಕುವ ಸೌಚಿಕ ( ಸಿಂಪಿಗ ) ನ ಪ್ರಮಾದದಂತಾಗಬಹುದಲ್ಲವೇ ? ಆದ್ದರಿಂದ, ಸಿಂಹಾವಲೋಕನ ನ್ಯಾಯಾನುಸಾರವಾಗಿ ಪ್ರಕೃತದಲ್ಲಿ ನಮ್ಮ ಮನಸ್ಸಿನಿಂದ ಹೊರಳಿ ನೋಡಲ್ಪಡತಕ್ಕ ಆ ಮುಖ್ಯಾಂಶವೇನೆಂದರೆ— **ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸಃ '** ( ಶತ. ಬ್ರಾ. ೧೪-೫-೪-೧೦; ಬೃ. ಪಾ. ಉ. ೨-೪-೧೦ ) ಎಂಬ ವಾಕ್ಯಾನುಸಾರವಾಗಿ ಭಗವನ್ನಿಃಶ್ವಾಸಾತ್ಮಕವಾದುವೆಂದು ಹೇಳಲ್ಪಡುವ ಕರ್ಮಕಾಂಡ ಬ್ರಹ್ಮಕಾಂಡಾತ್ಮಕಗಳಾದ ಋಗಾದಿ ವೇದಗಳು ಧರ್ಮಾರ್ಥ ಕಾಮಮೋಕ್ಷಹೇತುವಾಗಿದೆ. ಮತ್ತು ಆ ವೇದಗಳು ಪ್ರವಚನ ಭೇದದಿಂದ ಬೇರೆಬೇರೆ ಅನೇಕ ಶಾಖೆಗಳಿಂದ ಪ್ರಸಿದ್ಧವಾಗಿರುವುವು ! ವಿಶುದ್ಧಜ್ಞಾನಿಗಳಾದ ಪೂರ್ವಮಹರ್ಷಿಗಳಿಂದ ಸಾಕ್ಷಾತ್ಕರಿಸಲ್ಪಟ್ಟವುಗಳಾಗಿ ಗುರು, ಶಿಷ್ಯ ಅಥವಾ ತಂದೆ ಮಗ ಎಂಬ ಪರಂಪರೆಯಿಂದಬಂದ ಆ ವೇದಗಳು ಅಧ್ಯಯನವೇ ಪರಮಧರ್ಮವೆಂದು ಪುರಾತನ ಮಹರ್ಷಿಗಳ ವಂಶೀಯರಲ್ಲಿ ಬಲವಾದ ನಂಬಿಕೆಯಿದ್ದಿತು. ಈ ಸಮಯದಲ್ಲಿಯೇ ಪ್ರಕ್ರಿಯಕ್ಕೆ ಸರಿಯಾಗಿ ಸಂಗ್ರಹಿಸಲ್ಪಟ್ಟು ಮೇಲೆ ಹೇಳಿದಂತೆ ಋಗ್ಯಜುಃ ಸಾಮಥರ್ವಣವೆಂಬ ನಾಲ್ಕು ಸಂಹಿತೆಗಳ ರೂಪವಾಗಿ ಪ್ರತಿಷ್ಠೆಯನ್ನು ಪಡೆದಿದ್ದವು.

ಇನ್ನು, ಈ ಸಂಹಿತೆಗಳು ಎದುವರೆಗೆ ನಿರಾಯಾಸವಾಗಿ ಅರಿಯಲ್ಪಡುತ್ತಿದ್ದವೋ ಅದುವರೆಗೆ 'ಬ್ರಾಹ್ಮಣಭಾಗ' ವೆಂಬುದು ತಲೆದೋರಿರಲಿಲ್ಲ. ವೇದಗಳ ಕ್ರಮಿಕಸಂಚಯ ಮೂಲಕ ಭಾಷೆಯ ವಿಪರ್ಯಾಸವಾಗಲು ಪುರೋಹಿತರು ಅವುಗಳ ಅರ್ಥವನ್ನು ಸರಿಯಾಗಿ ಅರಿತುಕೊಳ್ಳಲು ಕುಂಠಿತಮತಿಯುಳ್ಳವರಾದ ಸಮಯದಲ್ಲಿಯೇ ಬ್ರಾಹ್ಮಣಗ್ರಂಥಗಳ ಆವಶ್ಯಕತೆಯುಂಟಾಯಿತು. ಪುರೋಹಿತರು ದೊಡ್ಡ ದೊಡ್ಡ ಯಜ್ಞಗಳನ್ನು ಮಾಡುವ ವ್ಯವಸಾಯವನ್ನು ಕೈಕೊಂಡಾಗಲೇ ಬ್ರಾಹ್ಮಣ ಗ್ರಂಥಗಳು ಪ್ರಕಟವಾದವು. ಇದರಿಂದ ಆ ಗ್ರಂಥಗಳಲ್ಲಿ ಪ್ರತಿಪಾದಿಸಲ್ಪಡುವ ವ್ಯಾಮೋಹಗೊಳಿಸುವ ಕ್ರಿಯಾಕಲಾಪವು ಸಾಂಗೋಪಾಂಗವಾಗಿ ಹಬ್ಬತೊಡಗಿತು. ವೈದಿಕಮಂತ್ರಗಳೆಲ್ಲವೂ ಯಾಜ್ಞಿಕಕ್ರಿಯೆಗಳಿಗೆ ಸಂಬಂಧಪಟ್ಟವುಗಳಾಗಿ ವ್ಯವಸ್ಥೆಗೊಳಿಸಲ್ಪಟ್ಟವು. ಆಗಲೇ ವೈದಿಕ ಮಂತ್ರಗಳಿಗೂ ಯಾಜ್ಞಿಕಕ್ರಿಯೆಗಳಿಗೂ ಸಂಬಂಧಪಟ್ಟುದಾದ ಪ್ರವೃತ್ತಿ (ಪ್ರಾಕೃತ) ಧರ್ಮವು ಮೇಲ್ಮೆಯನ್ನು ಪಡೆದು ಯಾಜ್ಞಿಕ ಬ್ರಾಹ್ಮಣರ ಪರಂಪರೆಯಲ್ಲಿ ಪ್ರಸಾರವಾಯಿತು.

ಈ ಬ್ರಾಹ್ಮಣ ಗ್ರಂಥಗಳು ಸರ್ವಾತ್ಮನಾ ಗದ್ಯಮಯಗಳಾಗಿಯೂ ಕೆಲವೆಡೆಯಲ್ಲಿ ಸ್ವರಚಿಹ್ನಾಂಕಿತಗಳಾಗಿಯೂ ಇರುತ್ತವೆ. ಇವುಗಳ ವಾಕ್ಯಸರಣಿಯು ಬಹುಕ್ಲಿಷ್ಟವಾಗಿರುವುದು. ಇವು ವೈದಿಕವಾಕ್ಯಗಳ ಅನ್ಯೋನ್ಯ ಮೈತ್ರಿಯನ್ನೂ ಯಜ್ಞಕ್ರಿಯೆಗಳ ಅಂಗಾಂಗಿ ಭಾವವನ್ನೂ, ಪದಗಳ ಪರಸ್ಪರ ಬಿಡುವಿಲ್ಲದಿರುವ ಮೂಲಕ ಸಂಕೇತವುಳ್ಳ ಅರ್ಥವನ್ನೂ ಬೋಧಿಸುತ್ತವೆ. ವ್ಯುತ್ಪತ್ತಿ ಇತಿಹಾಸ ಮುಂತಾದ ಹಿಂದಿನಿಂದ ಹಬ್ಬಿದ ಶಾಸ್ತ್ರಗಳ ಮೂಲವನ್ನು ಶ್ರೌತಾಗಮ ವಾಙ್ಮಯದಲ್ಲಿ ಹೇಗೋ ಹಾಗೆ ಈ ಗ್ರಂಥಗಳಲ್ಲಿಯೂ ಕಾಣಬಹುದು. ಬ್ರಾಹ್ಮಣಗಳಲ್ಲಿ ಕಾಣಬರುವ ಪ್ರಸಂಗೋಚಿತಗಳಾದ ಉಪಾಖ್ಯಾನಗಳು ಹೃದಯಂಗಮವಾಗಿವೆ.

ಒಟ್ಟಿನಲ್ಲಿ, ಪರಿವಿಡಿದು ಒತ್ತಟ್ಟಿಗೆ ಕೂಡಿದ ಮಂತ್ರಗಳ ಸಮುದಾಯವೇ ಸಂಹಿತೆಯೆಂದೂ ಮಂತ್ರಭಾಗವೆಂದೂ ಹೇಳಲ್ಪಡುವುದು. ಆ ಮಂತ್ರಭಾಗಕ್ಕೂ ಬ್ರಾಹ್ಮಣಭಾಗಕ್ಕೂ ಇರುವ ತಾರತಮ್ಯವೇನೆಂದರೆ—"**ಅನುಷ್ಠೇಯಾರ್ಥಸ್ಮಾರಕಾ ಮನ್ತ್ರಾಃ**" ಎಂಬ ವಚನಾನುಸಾರವಾಗಿ ಮಂತ್ರಗಳು ಅನುಷ್ಠೇಯ ವಿಷಯಗಳನ್ನು ಸ್ಮರಣಮಾಡಿಕೊಡುವುವು. ಬ್ರಾಹ್ಮಣಗಳು ಅನುಷ್ಠೇಯ ವಿಧಿಗಳನ್ನು ಹೇಳುತ್ತವೆ. ಇದೇ

ಅರ್ಥವನ್ನು ‘ಶೇಷೇ ಬ್ರಾಹ್ಮಣಶಬ್ದಃ’ (೨-೧೩೩) ಎಂಬ ಜೈಮಿನಿ ಸೂತ್ರದ ಭಾಷ್ಯಕಾರನಾದ ಶಬರಸ್ವಾಮಿಯು ವೃತ್ತಿಕಾರರ ಅಭಿಪ್ರಾಯಗ್ರಹಣಪೂರ್ವಕ ಹೇತು, ನಿರ್ವಚನ, ನಿಂದೆ, ಪ್ರಶಂಸೆ, ಸಂಶಯ ವಿಧಿ, ಪರಕೃತಿ, ಪುರಾಕಲ್ಪ, ವ್ಯವಧಾರಣ ಕಲ್ಪನೆ, ಉಪಮಾನ ಎಂಬ ಹತ್ತು ವಿಷಯಗಳಿಂದ ಯುಕ್ತವಾದುದು ‘ಬ್ರಾಹ್ಮಣವು’ ಎಂದು ಉಲ್ಲೇಖಿಸಿದ್ದಾನೆ. ಹಾಗೂ, ವಾರ್ತಿಕಕಾರರೂ—

**ಮನ್ತ್ರಶ್ಚ ಬ್ರಾಹ್ಮಣಂ ಚೇತಿ ದ್ವೌ ಭಾಗೌ ತೇನ ಮಂತ್ರತಃ ।**
**ಅನ್ಯದ್ಬ್ರಾಹ್ಮಣ ಮಿತ್ಯೇತದ್ಭವೇದ್ಬ್ರಾಹ್ಮಣ ಲಕ್ಷಣಮ್ ॥**

ಮಂತ್ರವ್ಯತಿರಿಕ್ತಭಾಗವೆಲ್ಲವೂ ಬ್ರಾಹ್ಮಣಭಾಗವೆಂದು ಹೇಳಿದ್ದಾರೆ. ಈ ವಚನಾನುಸಾರವಾಗಿ ‘ಅಗ್ನಿರ್ವೈ ದೇವಾನಾಮವಮಃ’ (ಐ, ಬ್ರಾ. ೧-೧) ಎಂಬ ಮುಂತಾದ ವಾಕ್ಯಗಳಲ್ಲಿ ಬ್ರಾಹ್ಮಣ ಲಕ್ಷಣವು ವಿದಮಾನವಾಗಿದೆ.

ಈ ಬ್ರಾಹ್ಮಣಗ್ರಂಥಗಳು ಪ್ರಾಧಾನ್ಯವಾಗಿ ಯಜ್ಞಯಾಗಾದಿ ಕ್ರಿಯೆಗಳನ್ನು ಪ್ರತಿಪಾದಿಸತಕ್ಕವುಗಳಾದ್ದರಿಂದ, ಸರ್ವಯಾಜ್ಞಿಕ ಕರ್ಮಗಳನ್ನು ಚೆನ್ನಾಗಿ ಪರಿಶೀಲನೆಮಾಡಿದ ವಿದ್ವಾಂಸರೇ ಆ ಯಾಜ್ಞಿಕಕ್ರಿಯೆಗಳನ್ನು ನೆರವೇರಿಸುವಲ್ಲಿ ಅಧಿಕಾರಿಗಳಾಗುವರೆಂಬುದನ್ನು ಬಲ್ಲವರಾದ ಋಷಿಗಳು ಕರ್ಮಗಳ ಸಮಗ್ರಸ್ವರೂಪವನ್ನು ವಿವರಿಸದೆ ಅವುಗಳಲ್ಲಿ ದುರ್ಬೋಧಾಂಶಗಳನ್ನಷ್ಟೇ ಪ್ರತಿಪಾದಿಸಿದ್ದಾರೆ. ಈ ಬ್ರಾಹ್ಮಣಗ್ರಂಥಗಳಲ್ಲಿ ಮುಖ್ಯವಾಗಿ ವಿಧಿ, ಅರ್ಥವಾದ, ಉಪನಿಷದ್ ಎಂಬ ಮೂರು ಭಾಗಗಳು ಸಂಘಟಿತವಾಗಿವೆ. ಅವುಗಳಲ್ಲಿ ‘ವಿಧಿ’ ಯೆಂಬ ಶಬ್ದದಿಂದ ಕರ್ಮವಿಧಾಯಕವೂ ‘ಅರ್ಥವಾದ’ ಶಬ್ದದಿಂದ ಪ್ರರೋಚವಪರವೂ, ‘ಉಪನಿಷದ್’ ಎಂಬ ಶಬ್ದದಿಂಡ ವಿವರಣಪರವೂ ಇತಿಹಾಸಾತ್ಮಕವೂ ತತ್ತ್ವವಿಚಾರಪರವೂ ಆದ ಬೇರೆಬೇರೆ ಪ್ರಕರಣಗಳು ವಿವಕ್ಷಿತವಾಗಿವೆ,

ಹೀಗೆ ಎರಡು ತೆರನಾದ ಮಂತ್ರಬ್ರಾಹ್ಮಣಾತ್ಮಕ ಶಬ್ದಸಮುದಾಯದಲ್ಲಿ ಪಾರಲೌಕಿಕ ಇಷ್ಟಸಾಧಕವಿಧಿಗಳೂ ಅವುಗಳ ಉಪಾಯಗಳೂ ಇತಿ ಕರ್ತವ್ಯತೆಯೂ ಇರುವುದರಿಂದೇ ‘ಮನ್ತ್ರಬ್ರಾಹ್ಮಣಯೋರ್ವೇದ ನಾಮಧೇಯಮ್’ ಎಂಬ ಶ್ರೌತಸೂತ್ರವು ಪ್ರತಿಯೊಂದು ಸಂಹಿತೆಯ ಮಂತ್ರಗಳಿಗೂ, ಬ್ರಾಹ್ಮಣಗಳಿಗೂ ವೇದವೆಂಬ ಹೆಸರಿರುವುದೆಂದು

ಬಿಸೂಸುವುದು. ಶ್ರೌತಸೂತ್ರಸಮುದಾಯವು ಬ್ರಾಹ್ಮಣಭಾಗದ ಪ್ರತಿಬಿಂಬವು.

ಆ ಆ ವೇದಕ್ಕೆ ಸಂಬಂಧಿಸಿದ ಬ್ರಾಹ್ಮಣಭಾಗದಲ್ಲಿ ಪ್ರತಿಪಾದಿಸಲ್ಪಡುವ ವಸ್ತುಗಳು, ಆ ಆ ವೇದದಲ್ಲಿ ಅಧಿಕೃತರಾದ ಋತ್ವಿಜರ ಕರ್ಮಗಳ ಭೇದಮೂಲಕವಾಗಿ ಬೇರೆಬೇರೆಗಳಾಗಿರುತ್ತವೆ. ಬೇರೆಬೇರೆ ಕ್ರಿಯೆಗಳಿಗೆ ಸಂಬಂಧಪಟ್ಟ ಬೇರೆಬೇರೆ ಮಂತ್ರಗಳ ವಿನಿಯೋಗಜ್ಞಾನವು ಆ ಆ ವೇದದ ಅರ್ಥಪರಿಜ್ಞಾನವುಳ್ಳ ಋತ್ವಿಜರಿಗೆ ಸರಿಯಾಗಿ ಇರಬೇಕಾದುದು. 'ಹೋತೃ' ವೆಂಬ ಹೆಸರುಳ್ಳ ಋತ್ವಿಜನಿಗೆ ಸಲ್ಲುವ ಕರ್ಮಗಳನ್ನು ಋಗ್ವೇದವ ಬ್ರಾಹ್ಮಣಗಳು ಉಪದೇಶಿಸುತ್ತವೆ. ಇದೇ ಮೇರೆಗೆ ಯಜುರ್ವೇದ ಬ್ರಾಹ್ಮಣಗಳು ಅಧ್ವರ್ಯುವಿಗೂ ಸಾಮವೇದ ಬ್ರಾಹ್ಮಣಗಳು ಉದ್ಗಾತೃವಿಗೂ ಆ ಆ ಕರ್ಮಗಳನ್ನು ಬೋಧಿಸುತ್ತವೆ. ಈ ವಿಷಯವನ್ನು ಇನ್ನಿಷ್ಟು ತೆರೆದಿಡುತ್ತೇವೆ, ಯಜ್ಞಮಾಡುವಲ್ಲಿ ನಾಲ್ಕುಬಗೆಯ ಋತ್ವಿಜರು ಬೇಕಾಗುತ್ತಾರೆ. ಅವರು ' ಹೋತಾ ' ' ಅಧ್ವರ್ಯು ' 'ಉದ್ಗಾತಾ' 'ಬ್ರಹ್ಮ' ಎಂಬ ಹೆಸರಿನಿಂದ ಕರೆಯಲ್ಪಡುತ್ತಾರೆ. ಅವರಲ್ಲಿ ಹೋತಾ ಎಂಬಾತನ ಅಭ್ಯಾಸದ ಗ್ರಂಥವು ಋಗ್ವೇದವು. ಅಧ್ವರ್ಯುವಿನದು ಯಜುರ್ವೇದವು. ಉದ್ಗಾತಾ ಎಂಬಾತನದು ಸಾಮವೇದವು. ಬ್ರಹ್ಮನದು ಅಥರ್ವವೇದವು. ಹೋತೃವಿನಿಂದುಚ್ಚರಿಸಲ್ಪಡತಕ್ಕ ಮಂತ್ರಗಳು ಋಗ್ವೇದಸಂಹಿತೆಯಲ್ಲಿವೆ. ಆ ಮಂತ್ರಗಳನ್ನು ಎಲ್ಲೆಲ್ಲಿ ಉಚ್ಚರಿಸಿ ಯಾವ ಯಾವ ಕ್ರಿಯೆಗಳನ್ನು ಯಜ್ಞದಲ್ಲಿ ಮಾಡಬೇಕಾಗುವುದೋ ಆ ವಿಷಯವೆಲ್ಲವೂ ಋಗ್ವೇದಬ್ರಾಹ್ಮಣದಲ್ಲಿ ವಿವರಿಸಲ್ಪಟ್ಟಿದೆ. ಇದೇಮೇರೆಗೆ ಉಳಿದ ವೇದಸಂಹಿತೆಗಳಲ್ಲಿಯೂ ಆ ಆ ಕ್ರಿಯೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ವಿವರಿಸತಕ್ಕ ವಾಕ್ಯಗಳಿವೆ. ಇಲ್ಲಿ ಇನ್ನೊಂದು ಮಾತನ್ನು ಹೇಳಲೇಬೇಕಾಗಿದೆ. ಏನೆಂದರೆ— ಋಗ್ವೇದಕ್ಕೆ ಸಂಬಂಧಿಸಿದ ಬ್ರಾಹ್ಮಣಗ್ರಂಥಗಳು ಸಂಹಿತೆ ಮಂತ್ರಗಳ ಅನುಕ್ರಮಕ್ಕಿಂತಲೂ ಭಿನ್ನವಾದ ಕ್ರಿಯಾಕ್ರಮವನ್ನು ಅವಲಂಬಿಸಿವೆ. ಯಜುಃಸಾಮಗಳಿಗೆ ಸಂಬಂಧಪಟ್ಟ ಬ್ರಾಹ್ಮಣಗಳು ಆ ಆ ಸಂಹಿತೆಯಲ್ಲಿಯ ಕ್ರಿಯಾಕ್ರಮಕ್ಕೆ ಅನುಸಾರವಾದ ಮಂತ್ರಗಳ ಸಂಗ್ರಹದೊಡನೆ ಆ ಆ ಮಂತ್ರಗಳ ಪರಿಪಾಟಿಯನ್ನೇ ಹಿಂಬಾಲಿಸುತ್ತವೆ. ಕೃಷ್ಣಯಜುರ್ವೇದ ಸಂಹಿತೆಯಲ್ಲಿ ಶ್ರೌತಕರ್ಮಗಳು ಎಷ್ಟು ವಿಸ್ತಾರವಾಗಿ ಹೇಳಲ್ಪಟ್ಟಿವೆಯೋ ಅಷ್ಟು ವಿಶದವಾಗಿ ಶುಕ್ಲಯಜುರ್ವೇದದಲ್ಲಿರುವುದಿಲ್ಲ. ಮತ್ತು ಸಾಮ

ವೇದ ಬ್ರಾಹ್ಮಣಗಳು ಪ್ರತಿಯೊಂದು ಮಂತ್ರದ ಅರ್ಥವನ್ನು ಬಣ್ಣಿಸುವುದಿಲ್ಲ. ಯಜುರ್ವೇದ ಬ್ರಾಹ್ಮಣಗಳಾದರೋ ಬಲುಮಟ್ಟಿಗೆ ಎಲ್ಲ ಮಂತ್ರಗಳ ಅರ್ಥವನ್ನು ಸಂಗ್ರಹರೂಪದಿಂದ ನಿರೂಪಿಸುತ್ತವೆ. ಕೃಷ್ಣ ಯಜುರ್ವೇದದೊಳಗಿನ ಯಾವ ಭಾಗವು ಸಂಹಿತೆಯೆಂದು ಹೇಳಲ್ಪಡುವುದೋ ಆ ಭಾಗದಲ್ಲಿ ಬ್ರಾಹ್ಮಣವೂ ಅಧಿಕವಾಗಿದೆ. ಯಾವ ಭಾಗವು ಬ್ರಾಹ್ಮಣವೆನಿಸುವುದೋ ಅದರಲ್ಲಿ ಸಂಹಿತೆಯೂ ಅಂದರೆ ಮಂತ್ರಭಾಗವು ಕಡಿಮೆಯಿರುವುದಿಲ್ಲ. ಈ ಸಂಹಿತೆಯೊಳಗಿನ ಋಕ್ಕುಗಳು ಯಾಜ್ಞಿಕ ಕರ್ಮಗಳಲ್ಲಿ ಉಪಯೋಗವಾಗುವಂತೆ ಕ್ರಮವಾಗಿ ಸೇರಿಸಲ್ಪಟ್ಟಿವೆ.

ಒಟ್ಟಿಗೆ, ಬ್ರಾಹ್ಮಣ ಭಾಗವೆಂದರೆ— '**ಉದ್ದಿಶ್ಯದೇವತಾಂ ದ್ರವ್ಯತ್ಯಾಗೋ ಯಾಗೋಽಭಿಧೀಯತೇ,** ಎಂಬಂತೆ ಮುಖ್ಯವಾಗಿ ದ್ರವ್ಯಮಯ ಯಜ್ಞಯಾಗಾದಿಕರ್ಮಗಳ ವಿವೇಚನೆಯು ಸಂಗ್ರಹ ರೂಪವಾದುದು. ಆದ್ದರಿಂದ ಶ್ರೀ ರೇಣುಕಭಗವತ್ಪಾದರು ನಿರೂಪಿಸುವ ಮೇರೆಗೆ ಯಾಗಾದಿಕರ್ಮಪ್ರಾಧಾನ್ಯ ಪ್ರತಿಪಾದಕವಾದ ಆ 'ಧರ್ಮ'ಕ್ಕೆ ವೇದೈಕದೇಶವರ್ತಿತ್ವವೇ ಸಿದ್ಧವಾಗುವುದು. ಏಕೆಂದರೆ ಬ್ರಾಹ್ಮಣ ಭಾಗದಲ್ಲಿ ತತ್ಕಾಲೀನಕರ್ಮಿತರ ಕೇವಲ ಅದೃಷ್ಟವಾದವೇ ಅಧಿಕವಾಗಿದೆ.

ಮಂತ್ರ ವಾಙ್ಮಯಕ್ಕೂ ಬ್ರಾಹ್ಮಣ ವಾಙ್ಮಯಕ್ಕೂ ವೇದನಾಮಧೇಯತೆಯುಂಟು; ಆದರೂ ಅದೃಷ್ಟ ಪ್ರಧಾನತೆಯನ್ನು ದೃಢಪಡಿಸುವ ಮೂಲಕ ಯಜ್ಞ ಸಂಸ್ಥೆಯನ್ನು ವರ್ಣಿಸುವ ಬ್ರಾಹ್ಮಣ ವಾಙ್ಮಯಕ್ಕಿಂತಲೂ ಶ್ರೌತ ಧರ್ಮದ ನಿಜವಾದ ತತ್ತ್ವರಹಸ್ಯವನ್ನು ಅರಿತುಕೊಳ್ಳಬೇಕಾದರೆ ವೇದದ ಮಂತ್ರವಾಙ್ಮಯವನ್ನೇ ಸೂಕ್ಷ್ಮ ದೃಷ್ಟಿಯಿಂದ ಅಭ್ಯಾಸಮಾಡುವುದು ವಿಹಿತವು. ಈಶ್ವರ ಪ್ರಸಾದೈಕಲಬ್ಧವಾದುವೆಂದು ಹೇಳಲ್ಪಡತಕ್ಕ ಶುದ್ಧವಾದ ಆಚಾರ, ಉಪಾಸನೆ, ತತ್ತ್ವಜ್ಞಾನವೆಂಬಿವು ವೇದದ ಮಂತ್ರ ವಾಙ್ಮಯದಲ್ಲಿ ನಿರ್ದಿಷ್ಟವಾಗಿವೆ. ಅಂತೇ ತಾತ್ತ್ವಿಕ ವಿಚಾರವನ್ನೇ ಪ್ರಾಮುಖ್ಯವಾಗಿ ಪ್ರತಿಪಾದಿಸಲು ತೊಡಗಿದ ಉಪನಿಷತ್ಕಾರರು ತಮ್ಮ ಆಧ್ಯಾತ್ಮ ವಿವೇಚನಾತ್ಮಕ ವಾಕ್ಯಗಳಲ್ಲಿ ವೇದದ ಮಂತ್ರ ವಾಙ್ಮಯಾಂತರ್ಗತ ಶಬ್ದ (ಮಂತ್ರವರ್ಣ) ಗಳನ್ನು ಅಲ್ಲಲ್ಲಿ ಮೂಲಾಧಾರವಾಗಿಟ್ಟುಕೊಂಡಿರುವರು. ಆ ಮಂತ್ರ ವಾಙ್ಮಯವು ತತ್ತ್ವಜ್ಞಾನ ಬೈಜಿಕ ವಾಕ್ಯಗಳನ್ನೊಡಗೊಂಡಿರುವುದರಿಂದೇ ಜಗತ್ತಿನಲ್ಲಿರುವ

ಸಮಸ್ತವಾದ ಪ್ರಾಚೀನಾರ್ವಾಚೀನಗಳಾದ ಆಧ್ಯಾತ್ಮ ವಿಚಾರ ಪ್ರವಾಹಗಳ ಉಗಮಸ್ಥಾನವೆಂದು ಹೇಳಲ್ಪಡುವುದು. ಈ ದೃಷ್ಟಿಯಿಂದೇ ಈಶ್ವರನೆಂಬ ಪರಮ ಆಪ್ತನ ಉಪದೇಶಪರಂಪರಾತ್ಮಕವಾದ ವೇದವು ನಮ್ಮಿಂದ ಪ್ರಮಾಣತ್ವೇನ ಗ್ರಹಿಸಲ್ಪಡುವುದು.

ಇಂತಹ ಬ್ರಾಹ್ಮಣ ಗ್ರಂಥಗಳು ಪೂರ್ವದಲ್ಲಿ ಬಹಳವಾಗಿದ್ದುವೆಂಬುದು ಅರ್ವಾಚೀನ ವೈದಿಕ ಗ್ರಂಥಗಳಲ್ಲಿ ನಿರ್ದೇಶಿಸಲ್ಪಟ್ಟ ಅವುಗಳ ಹೆಸರುಗಳಿಂದಲೂ ವಾಕ್ಯಾನುಸಂಧಾನಾದಿಗಳಿಂದಲೂ ಅರಿಯಲ್ಪಡುವುದು. ಆದರೆ ಈಗಲಾದರೋ ಅವುಗಳಲ್ಲಿ ಕೆಲವು ಉಪಲಬ್ಧವಾಗಿವೆ. ಯಾವ ಕಾಲದಲ್ಲಿ ಪ್ರಾಕೃತ ಕರ್ಮಾನುಷ್ಠಾನೈಕನಿರತರೇ ಹೆಚ್ಚಾಗಿದ್ದರೋ ಆ ಸಮಯದಲ್ಲಿಯೇ ಈ ಬ್ರಾಹ್ಮಣ ಗ್ರಂಥಗಳು ಮೈದೋರಿದವೆಂಬ ಸಂಗತಿಯನ್ನು ವಾಚಕ ಮಹಾಶಯರು ಮರೆಯದಿರಲಿ. ಕರ್ಮಮಾರ್ಗವನ್ನೇ ನಿರ್ದೇಶಿಸತಕ್ಕುವೂ ಕರ್ಮಗಳ ಮಹಿಮೆಯನ್ನೇ ಕೊಂಡಾಡುವುವೂ ಕರ್ಮಗಳ ಉತ್ಪತ್ತಿ ಪ್ರಯೋಜನಗಳನ್ನೇ ನಿರೂಪಿಸುವುವೂ ಆದ ಇವು ಒಂದೇ ವಿಧವಾದವುಗಳೆಂದು ತೋರಿಬಂದರೂ, ಒಂದೇ ಕಾಲದಲ್ಲಿಯೇ ಪ್ರಸಾರವಾದುವೆಂದು ಹೇಳಲಾಗುವುದಿಲ್ಲ.

ಈಗ ಉಪಲಬ್ಧವಿರುವ ಬ್ರಾಹ್ಮಣ ಗ್ರಂಥಗಳ ಹೆಸರುಗಳನ್ನೂ, ಸಂಕ್ಷಿಪ್ತವಾಗಿ ಅವುಗಳೊಳಗಿನ ವಿಷಯಗಳನ್ನೂ ಇಲ್ಲಿ ಬರೆದು ತೋರಿಸುತ್ತೇವೆ:—

**ಐತರೇಯಬ್ರಾಹ್ಮಣವು :—** ಋಗ್ವೇದಕ್ಕೆ ಸಂಬಂಧಿಸಿದವುಗಳಾದ ಐತರೇಯವೂ ಕೌಷೀತಕಿಯೂ ಎಂಬ ಈ ಎರಡು ಬ್ರಾಹ್ಮಣಗಳಲ್ಲಿ ಐತರೇಯವು ಪ್ರಧಾನತಮವಾದುದು. ಇದರಲ್ಲಿ ಎಂಟು ಪಂಚಿಕೆಗಳಿವೆ. ಪ್ರತಿಯೊಂದು ಪಂಚಿಕೆಗೆ ಐದೈದರಂತೆ ಒಟ್ಟು ನಾಲ್ವತ್ತು ಅಧ್ಯಾಯಗಳುಂಟು. ಇದರ ಸಂಗ್ರಾಹಕನು ಅಥವಾ ಪ್ರಕಾಶಕನು ಮಹಿದಾಸ ಐತರೇಯನು. ಈ ಬ್ರಾಹ್ಮಣದಲ್ಲಿ ಪ್ರಾಮುಖ್ಯತೆಯಿಂದ ಸೋಮಯಾಗ ಅಗ್ನಿಹೋತ್ರ, ರಾಜಸೂಯ ಎಂಬ ಕ್ರಿಯೆಗಳು ವರ್ಣಿಸಲ್ಪಟ್ಟಿವೆ.

**ಕೌಷೀತಕಿಬ್ರಾಹ್ಮಣವು:—** ಇದು ಋಗ್ವೇದ ಶಾಂಖಾಯನವೆಂಬ ಎರಡನೆಯ ಬ್ರಾಹ್ಮಣವು. ಇದಕ್ಕೇ ಕೌಷೀತಕಿಯೆಂಬ ಮತ್ತೊಂದು ಹೆಸರುಂಟು; ಇದರಲ್ಲಿ ಮೂವತ್ತು ಅಧ್ಯಾಯಗಳಿವೆ. ಮೊದಲನೆಯ ಆರು ಅಧ್ಯಾಯಗಳಲ್ಲಿ ಅಗ್ನ್ಯಾಧಾನವು, ಅಗ್ನಿಹೋತ್ರವು ದರ್ಶಪೂರ್ಣ

ಮಾಸದ ಇಷ್ಟಿಯು, ಋತುಯಾಗವು ಮುಂತಾದ ವಿಷಯಗಳಿವೆ. ಆರರಿಂದ ಪೂರ್ವತ್ತರವರೆಗಿರುವ ಅಧ್ಯಾಯಗಳಲ್ಲಿ ಐತರೇಯ ಬ್ರಾಹ್ಮಣದಲ್ಲಿ ಹೇಳಲ್ಪಟ್ಟಿರುವಂತೇ ಸೋಮಯಾಗದ ವರ್ಣನೆಯಿದೆ.

ಬ್ರಾಹ್ಮಣ ಗ್ರಂಥ ಸಮುದಾಯದಲ್ಲಿ ವರ್ಣಿಸಲ್ಪಟ್ಟಿರುವ ಪುರಾವೃತ್ತಾಖ್ಯಾನಾಂಶದಲ್ಲಿ ವಿಮರ್ಶಕರ ಪರಮಾದರವು ಎಷ್ಟಿರುವುದೋ ಅಷ್ಟು ಕರ್ಮಭಾಗದಲ್ಲಿರುವುದಿಲ್ಲ. ಐತರೇಯ ಬ್ರಾಹ್ಮಣದ ಆಳನೆಯ ಪಂಚಿಕೆಯ ಮೂರನೆಯ ಅಧ್ಯಾಯದಲ್ಲಿರುವ ಶುನಃಶೇಫಾಖ್ಯಾನವು ಅತಿರಮಣೀಯವಾಗಿದೆ. ಇನ್ನು ಕೃಷ್ಣಯಜುರ್ವೇದೀಯ ಬ್ರಾಹ್ಮಣಗಳ ಬಗ್ಗೆ ವಿಚಾರಿಸುವಾ !

**ತೈತ್ತಿರೀಯ ಬ್ರಾಹ್ಮಣವು:—** ಇದು ಕೃಷ್ಣಯಜುರ್ವೇದದ (ತೈತ್ತಿರೀಯ ಸಂಹಿತೆಯ) ಉತ್ತರಭಾಗವೇ ಎಂದು ಹೇಳಬಹುದು. ತೈತ್ತಿರೀಯ ಸಂಹಿತೆಯಲ್ಲಿ ಬ್ರಾಹ್ಮಣಭಾಗವೂ ಇದೆ. ಇದರಿಂದ ತೈತ್ತಿರೀಯ ಬ್ರಾಹ್ಮಣದೊಳಗಿನ ಭಾಗವು ತೈತ್ತಿರೀಯ ಸಂಹಿತೆಗೆ ಹಿಂದಿನಿಂದ ಜೋಡಿಸಲ್ಪಟ್ಟಿರಬಹುದೆಂದು ಅರಿಯಲ್ಪಡುವುದು. ಇದರೊಳಗಿನ ಪುರುಷಮೇಧದ ವರ್ಣನೆ ಮುಂತಾದುದನ್ನವಲೋಕಿಸಿದರೆ ಯಜ್ಞಶಾಸ್ತ್ರದ ಘಟನೆಯು ನವೀನವಾದುದೆಂದು ತೋರಿಸಲ್ಪಡುವ ಕಾರಣಗಳಲ್ಲಿ ಇದೂ ಒಂದಾಗಿದೆ.

ಕಠಶಾಖೆಯಲ್ಲಿಯೂ. ಮೈತ್ರಾಯಣೀಶಾಖೆಯಲ್ಲಿಯೂ ಆ ಆ ಸಂಹಿತೆಗಳಲ್ಲಿರುವ ಗದ್ಯಭಾಗಗಳೇ ಬ್ರಾಹ್ಮಣಗಳೆಂದು ಅಂಗೀಕರಿಸಲ್ಪಟ್ಟಿವೆ. ಕಠಶಾಖೆಯ ಸಂಬಂಧವುಳ್ಳದ್ದೆಂದು ಅನುಮಾನಿಸಲ್ಪಡುವ ತೈತ್ತಿರೀಯಬ್ರಾಹ್ಮಣಭಾಗದಲ್ಲಿ ( ೩-೨ ) ನಚಿಕೇತಾಗ್ನಿಯ ಪ್ರತಿಪಾದನಾವಸರದೊಳು ಆ ಹೆಸರಿನ ಒಬ್ಬಾನೊಬ್ಬ ಬ್ರಾಹ್ಮಣ ಕುಮಾರನ ( ನಚಿಕೇತನ ) ಉಪಾಖ್ಯಾನವು ಉದಾಹೃತವಾಗಿದೆ. ಮೈತ್ರಾಯಣ ಶಾಖೆಯಲ್ಲಿ ಬ್ರಾಹ್ಮಣ ಭಾಗವು ಪೃಥಕ್ಕಾಗಿ ಸಿಕ್ಕುವುದಿಲ್ಲ. ಆದರೂ ಮೈತ್ರಾಯಣಸಂಹಿತೆಯ ನಾಲ್ಕನೆಯಕಾಂಡವು ವಿಧಿರೂಪವೂ, ಪರಿಶಿಷ್ಟಾತ್ಮಕವೂ ಆಗಿರುವುದರಿಂದ ಅದು ಬ್ರಾಹ್ಮಣಭಾಗವೆನಿಸಿಕೊಳ್ಳಲು ತಕ್ಕದ್ದಾಗಿದೆ.

**ಶತಪಥಬ್ರಾಹ್ಮಣವು:—** ಇದು ಶುಕ್ಲ ಯಜುರ್ವೇದದ (ವಾಜಸನೇಯ ಸಂಹಿತೆಯ) ಪ್ರಮುಖವಾದ ಬ್ರಾಹ್ಮಣ ಗ್ರಂಥವು. ಶುಕ್ಲ ಯಜು

ರ್ವೇದಿಯ ವಿಧ್ಯಂಶವು ಇದರಲ್ಲಿ ಸವಿಸ್ತಾರವಾಗಿ ನಿಬದ್ಧವಾಗಿದೆ. 'ಶತಪಥ' ವೆಂಬ ಈ ಹೆಸರು 'ಶತಂ ಪನ್ಥಾನೋ ಯಸ್ಮಿನ್' ಎಂಬ ವ್ಯುತ್ಪತ್ತಿಯಿಂದ ೧೦೦ ಅಧ್ಯಾಯಗಳುಳ್ಳದ್ದೆಂಬ ಅನ್ವರ್ಥವನ್ನನುಸರಿಸಿ ರುವುದು. ಸರ್ವವೈದಿಕ ಗ್ರಂಥಸಮುದಾಯದಲ್ಲಿ ಋಗ್ವೇದದ ತರು ವಾಯ ಇದಕ್ಕೆ ಪ್ರಾಧಾನ್ಯವಿದೆ. ಮಾಧ್ಯಂದಿನರ ಪಾಠವೂ ಕಣ್ವರ ಪಾಠವೂ ಎಂಬುದಾಗಿ ಈ ಬ್ರಾಹ್ಮಣದ ಎರಡು ವಿಧವಾದ ಪಾಠಪದ್ಧ ತಿಗಳಿವೆ. ಮಾಧ್ಯಂದಿನರ ಪಾಠಾನುಸಾರವಾಗಿ ೧೪ ಕಾಂಡಗಳೂ ಕಣ್ವರ ಪಾಠಾನುರೋಧವಾಗಿ ೧೭ ಕಾಂಡಗಳೂ ಇವೆ. ಈ ಬ್ರಾಹ್ಮಣದಲ್ಲಿ ಚರಕ ಶಾಖೀಯರ ಅಂಪರೆ, ಕೃಷ್ಣಯಜುರ್ವೇದಿಯ ಕಾಠಕ, ಕಪಿಷ್ಠಲ, ಮೈತ್ರಾಯಣಶಾಖೀಯರ ನಿಂದೆಯುಂಟು! ಅದೇನು ಕಾರಣವೋ? (೧೧-೫-೪)—(೧೧-೫-೫) ಎಂಬಲ್ಲಿ ಅನುಕ್ರಮವಾಗಿ ಉಪನಯನವೂ ಸ್ವಾಧ್ಯಾಯವಿಚಾರವೂ (೧-೩-೮) ಎಂಬಲ್ಲಿ ಉತ್ತರಕ್ರಿಯೆಯೂ ಸಮಾ ಧಿಕಟ್ಟುವಿಕೆಯೂ ಮುಂತಾದ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಮತ್ತು, ಈ ಬ್ರಾಹ್ಮಣವು ಸಹೃದಯಹೃದಯಾವರ್ಜಕಗಳಾದ ಉಪಾ ಖ್ಯಾನರತ್ನಗಳಿಗಾಕರವಾಗಿದೆ.

**ತಾಂಡ್ಯಬ್ರಾಹ್ಮಣವು :—** ಸಾಮವೇದಿಯ ಶಾಖಾದ್ವಯಕ್ಕೆ ಸಂ ಬಂಧಿಸಿದವುಗಳಾದ ತಾಂಡ್ಯವೂ ತಲವಕಾರಿಯ (ಜೈಮಿನೀಯ) ವೂ ಎಂಬಿವೆರಡು ಬ್ರಾಹ್ಮಣಗಳಿವೆ. ಸಾಮವೇದೀಯ ತಂಡಿಶಾಖೆಯನು ಸಾರವಾದುದು ತಾಂಡ್ಯಬ್ರಾಹ್ಮಣವು, ಇದುವೇ ಪಂಚವಿಂಶಬ್ರಾಹ್ಮಣ ವೆಂದೂ ಹೇಳಿಸಿಕೊಳ್ಳಲ್ಪಡುವುದು. ಸ್ವನಾಮಾನುಗುಣ್ಯವಾಗಿ ಇದು ೨೫ ಕಾಂಡಗಳಿಂದ ಸಂಘಟಿತವಾಗಿದೆ. ಇದಾದರೂ ಪ್ರಾಧಾನ್ಯವಾಗಿ ಸೋಮಯಾಗ ಕ್ರಿಯೆಯನ್ನೇ ನಿರೂಪಿಸುವುದು, ಇದರಲ್ಲಿಯೂ ಅನೇಕ ಪುರಾತನೋಪಾಖ್ಯಾನಗಳಿವೆ. ಇವರ ೧೭ನೆಯ ಅಧ್ಯಾಯದೊಳಗಿನ ವಿಷಯಗಳು ವಿಚಾರಾರ್ಹಗಳಾಗಿವೆ. ಜೈಮಿನೀಯ ಬ್ರಾಹ್ಮಣವು ಬಹಳ ಪ್ರಖ್ಯಾತವಾಗಿಲ್ಲ. ಪ್ರಪದ ಬ್ರಾಹ್ಮಣವು ಉಪಲಬ್ಧವಿಲ್ಲ.

**ಷಡ್ವಿಂಶಬ್ರಾಹ್ಮಣವು :—** ಇದು ಪಂಚವಿಂಸಬ್ರಾಹ್ಮಣದ ಪರಿಶಿಷ್ಟ ವೆನಿಸುವುದು.

**ಛಾಂದೋಗ್ಯಬ್ರಾಹ್ಮಣವು :—** ಇದಾದರೂ ಸಾಮವೇದೀಯ ಶಾಖೆಗೆ ಸಂಬಂಧಿಸಿದುದು. ಇದರಲ್ಲಿ ಸ್ವಲ್ಪಭಾಗವೇ ಕ್ರಿಯಾಪ್ರತಿಪಾದ ಕವಾಗಿದೆ. ಇದು ಸೋಮಯಾಗದ ಹೆಸರನ್ನುಕೂಡ ಹೇಳುವುದಿಲ್ಲ,

ಇದರೊಳು ಜನನ ವಿವಾಹಾದಿ ವಿಷಯಗಳೂ ಕೆಲವು ದೇವತಾಸ್ತೋತ್ರಗಳೂ ಉಂಟು. ಇವೆಲ್ಲ ವಿಷಯಗಳು ಈ ಬ್ರಾಹ್ಮಣದ ಪ್ರಾರಂಭದಲ್ಲಿ ಪ್ರತಿಪಾದಿತಗಳಾಗಿವೆ. ಉಳಿದ ಅಧ್ಯಾಯಗಳು ಛಾಂದೋಗ್ಯೋಪನಿಷದಾತ್ಮಕಗಳಾಗಿವೆ.

ಇನ್ನು ಬೇರೆ ನಾಲ್ಕು ಖಂಡಕೃತಿಗಳಿಗಾದರೂ ಬ್ರಾಹ್ಮಣಗಳೆನ್ನುವುದುಂಟು. ಆದರೂ ವಸ್ತುತಃ ಅವು ಬ್ರಾಹ್ಮಣಗಳೆನಿಸಿಕೊಳ್ಳಲಾರವೆಂದು ಹೇಳಬಹುದು. ಏಕೆಂದರೆ– ಅವುಗಳಲ್ಲಿ ಸಾಮ ವಿಧಾನವೆಂಬುದೂ ಒಂದು ಬ್ರಾಹ್ಮಣವೆನಿಸುವುದಷ್ಟೇ ! ಅದು ಅಭಿಚಾರ ಕರ್ಮಗಳಲ್ಲಿ ಅನುಷ್ಠಿಸಲ್ಪಡತಕ್ಕ ಮಂತ್ರಪ್ರಯೋಗಗಳನ್ನುಪದೇಶಿಸುವುದು. ೨ನೆಯದು ದೇವತಾಧ್ಯಾಯ ಬ್ರಾಹ್ಮಣವೆಂಬುದು ಸಾಮವೇದೀಯ ದೇವತೆಗಳನು ಸ್ತುತಿಸುವುದು. ಇದರಲ್ಲಿಯೂ ಕ್ರಿಯಾಸಂಬಂಧದ ಸೇದ್ಧಿಯೇ ಇಲ್ಲ. ಮೂರನೆಯ ವಂಶ ಬ್ರಾಹ್ಮಣವಾದರೂ ಸಾಮವೇದೀಯರಾದ ಆಚಾರ್ಯರ ವಂಶಾನುಕ್ರಮ ಮಾತ್ರವನ್ನು ವರ್ಣಿಸುತ್ತದೆ. ನಾಲ್ಕನೆಯ ಸಂಹಿತೋಪನಿಷದ್ಬ್ರಾಹ್ಮಣದಲ್ಲಿಯಾದರೋ ಐತರೇಯಾರಣ್ಯಕ ತೃತೀಯ ಕಾಂಡದಂತೆ ಕೇವಲ ವೇದಾಧ್ಯಯನ ರೀತಿಯು ಉಪದೇಶಿಸಲ್ಪಡುವುದರ ವಿನಾ ಯಾವ ಕ್ರಿಯೆಯನ್ನೂ ಪ್ರತಿಪಾದಿಸುವುದಿಲ್ಲ.

**ಗೋಪಥಬ್ರಾಹ್ಮಣವು:—** ಇದು ಅಥರ್ವವೇದೀಯ ಬ್ರಾಹ್ಮಣವು. ಇದು ಸಂಹಿತೆಯೊಡನೆ ಸಾಕ್ಷಾತ್ಸಂಬಂಧವುಳ್ಳದ್ದಾಗಿ ಕಂಡು ಬರುವುದಿಲ್ಲವಾದರೂ, ಇದಕ್ಕೆ ಅಥರ್ವವೇದೀಯತ್ವವುದುರ್ನಿವಾರವಾಗಿದೆ. ಇದರಲ್ಲಿ ಎರಡೇ ಕಾಂಡಗಳಿವೆ. ಮೊದಲನೆಯ ಕಾಂಡದಲ್ಲಿ ೫ ಅಧ್ಯಾಯಗಳೂ, ಎರಡನೆಯ ಕಾಂಡದಲ್ಲಿ ಆರು ಅಧ್ಯಾಯಗಳೂ ಇರುತ್ತವೆ.

ಹೀಗೆ ಬೇರೆ ಬೇರೆಯಾಗಿರತಕ್ಕ ಬ್ರಾಹ್ಮಣ ಗ್ರಂಥಗಳಲ್ಲಿ ಬೇರೆಬೇರೆಗಳಾದ ಯಜ್ಞಯಾಗಾದಿಗಳು ಬೇರೆ ಬೇರೆ ರೀತಿಯಾಗಿ ವರ್ಣಿಸಲ್ಪಟ್ಟಿರುವುದರಿಂದ ಅವುಗಳ ಏಕವಾಕ್ಯತೆಯನ್ನು ದೃಢಪಡಿಸಲೋಸುಗವೇ ಜೈಮಿನಿಯು ಪೂರ್ವಮೀಮಾಂಸಾ ಸೂತ್ರಗಳನ್ನು ರಚಿಸಿದನು.

ಯಾವುದಾದರೊಂದು ಬ್ರಾಹ್ಮಣದಲ್ಲಿ ಒಂದಾನೊಂದು ವಚನದ ಅರ್ಥವನ್ನು ಅರಿತುಕೊಳ್ಳಬೇಕಾದ ಸಂದರ್ಭದಲ್ಲಿ, ಆ ವಾಕ್ಯದೊಳು ವಿಧಿಯು ಹೇಳಲ್ಪಟ್ಟಿದೆಯೋ ? ಅರ್ಥವಾದವು ಹೇಳಲ್ಪಟ್ಟಿದೆಯೋ ? ಶ್ರುತಿ-ಸ್ಮೃತಿಗಳಲ್ಲಿ ಪರಸ್ಪರ ವಿರೋಧವು ಕಂಡುಬರಲು ಅವುಗಳಲ್ಲಿ

ಯಾವುದನ್ನು ಪ್ರಮಾಣವೆಂದೊಪ್ಪಬೇಕು ? 'ಉದ್ಭಿದ್' ಎಂಬ ಮೊದಲಾದ ಶಬ್ದಗಳು ಬ್ರಾಹ್ಮಣದೊಳಗಿನ ಕೆಲವು ವಾಕ್ಯಗಳಲ್ಲಿ ತೋರಿಬಂದರೆ ಆ ವಾಕ್ಯಗಳೊಳಗಿನ 'ಉದ್ಭಿದ್' ಎಂಬ ಶಬ್ದವು ಯಾಗದ ನಾಮಧೇಯವೋ ? ಅಥವಾ ಯಾಗದ ಗುಣವಾಚಕವೋ ? ಶ್ರುತಿ, ಲಿಂಗ ಮೊದಲಾದ ಪ್ರಮಾಣಗಳಲ್ಲಿ ಯಾವುದನ್ನು ಅಧಿಕಪ್ರಾಬಲ್ಯವಾದುದೆಂದರಿಯಬೇಕು ? ಮಂತ್ರಪಾಠದಲ್ಲಿ ಒಂದು ಕ್ರಮವು ಹೇಳಲ್ಪಟ್ಟಿದ್ದು ಬ್ರಾಹ್ಮಣಪಾಠದಲ್ಲಿ ಅದಕ್ಕಿಂತ ಭಿನ್ನವಾದಕ್ರಮವು ಹೇಳಲ್ಪಟ್ಟಿರುವುದಾದರೆ ಅವುಗಳಲ್ಲಿ ಪ್ರಮಾಣಭೂತವಾದ ಕ್ರಮವು ಯಾವುದೆಂದು ತಿಳಿಯಬೇಕು ? ಆಯಾಯ ಯಾಗಾದಿಕರ್ಮಗಳನ್ನು ಅನುಷ್ಠಿಸುವ ಅಧಿಕಾರವು ಯಾರಿಗಿರುವುದು ಯಾರಿಗಿರುವುದಿಲ್ಲ ? ಹೀಗೆ ಒಂದಲ್ಲ, ಎರಡಲ್ಲ ಎಷ್ಟೋ ಪ್ರಶ್ನೆಗಳು ಹುಟ್ಟುತ್ತವೆ. ಇವುಗಳನ್ನು ಯಾವುದರ ಆಧಾರದಿಂದ ನಿರ್ಣಯಗೊಳಿಸಬೇಕು ? ಇವುಗಳನ್ನು ನಿರ್ಣಯಗೊಳಿಸುವುದರಲ್ಲಿ ಮೀಮಾಂಸಾಶಾಸ್ತ್ರವೇ ಸಮರ್ಥವಾಗಿದೆ. ಈ ಮಾತಿನ ತಿಳುವಳಿಕೆಗಾಗಿ ಒಂದು ವಿಷಯವನ್ನು ದೃಷ್ಟಾಂತದೊಡನೆ ವಿವರಿಸುತ್ತೇವೆ. ಬ್ರಾಹ್ಮಣಗಳಲ್ಲಿ ಅನೇಕ ಯಾಗಗಳ ಉಲ್ಲೇಖವಿದೆ. ಅವುಗಳಲ್ಲಿ ಪ್ರಕೃತಿಯಾಗಗಳು ಯಾವವು ? ವಿಕೃತಿಯಾಗಗಳ ಸ್ವರೂಪವೇನು ? ವಿಕೃತಿಯಾಗಗಳಲ್ಲಿ ಯಾವಯಾವ ಅಂಗಗಳು ಸ್ವೀಕರಿಸಲ್ಪಡತಕ್ಕವು ? ಎಂಬಿವುಗಳ ಸ್ಪಷ್ಟವಾದ ನಿರ್ಣಯವು ಮಾಡಲ್ಪಟ್ಟಿರುವುದಿಲ್ಲ. ಆದರೆ, ಆ ಪ್ರಕೃತಿವಿಕೃತಿಗಳ ನಿರ್ಣಯವನ್ನು ಪೂರ್ವಮೀಮಾಂಸಾಶಾಸ್ತ್ರದಿಂದೇ ಅರಿತುಕೊಳ್ಳಬೇಕಾಗಿದೆ. ಹೇಗೆಂದರೆ :— '**ಯತ್ರ ಸಮಗ್ರಾಂಗೋಪದೇಶಃ ಸಾ ಪ್ರಕೃತಿಃ**' ಎಂಬಂತೆ ಯಾವ ಯಾಗದಲ್ಲಿ ಆ ಯಾಗಕ್ಕೆ ಆವಶ್ಯಕಗಳಾದ ಎಲ್ಲ ಅಂಗಗಳೂ ಇರುವುವೋ ಅದು ಪ್ರಕೃತಿಯಾಗವೆಂಬ ಸಂಜ್ಞೆಯುಳ್ಳದ್ದಾಗಿದೆ. ಹೇಗೆಂದರೆ :— '**ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ**' ಎಂಬ ಈ ವಾಕ್ಯದಿಂದ ದರ್ಶಪೂರ್ಣಮಾಸವೆಂಬ ಯಾಗದ ಅನುಷ್ಠಾನವು ವಿಧಿಸಲ್ಪಡುವಲ್ಲಿ, ತದಂಗಭೂತಗಳಾದ ಪ್ರಯಾಜ, ಅನುಯಾಜಾದಿಗಳಾದರೂ ಹೇಳಲ್ಪಡುತ್ತವೆ. ಅಂದರೆ ಆ ದರ್ಶಪೂರ್ಣಮಾಸ ಯಾಗಕ್ಕೆ ಸಂಬಂಧಪಟ್ಟ ಯಾವ ಅಂಗವೂ ಅನ್ಯಯಾಗದಿಂದ ಗ್ರಹಣಮಾಡಲ್ಪಡುವುದಿಲ್ಲ. ಆದರೆ ವಿಕೃತಿಯಾಗಗಳಲ್ಲಿ ಅನುಕ್ತಗಳಾದ ಅಂಗಗಳು ಪ್ರಕೃತಿಯಾಗದಿಂದ ತೆಗೆದುಕೊಳ್ಳಲ್ಪಡುತ್ತವೆ. ಈ ರೀತಿಯಾಗಿ ಇತರ

ಯಾಗಗಳಿಗೆ ಅಂಗಗಳನ್ನೊದಗಿಸಿಕೊಡುವ ಮೂಲಕವಾಗಿಯೂ, ಮೂಲ ಅಂಗಗಳಿಗೆ ಕಾರಣಭೂತವಾದ ಸಿಧಿಯೆಂಬ ದೃಷ್ಟಿಯಿಂದಲೂ ಇದಕ್ಕೆ 'ಪ್ರಕೃತಿ' ಯೆಂಬ ಸಂಜ್ಞೆಯುಂಟು.

ಮತ್ತು **ಯತ್ರ ನ ಸಮಗ್ರಾಂಗೋಪದೇಶಃ ಸಾ ವಿಕೃತಿಃ** ' ಎಂಬಂತೆ ಯಾಗದಲ್ಲಿ ಸರ್ವಾಂಗಗಳೂ ಪಠಿಸಲ್ಪಡದೆ '**ಪ್ರಕೃತಿವದ್ವಿಕೃತಿಃ ಕರ್ತವ್ಯಾ**' ಎಂಬ ಅತಿದೇಶ ವಾಕ್ಯದಿಂದ ಆ ಯಾಗಕ್ಕೆ ಪ್ರಕೃತಿಯಾಗಿರತಕ್ಕ ಯಾಗದಿಂದ ತಮಗಪೇಕ್ಷಿತಗಳಾದ ಗ್ರಹಣಪೂರ್ವಕ ಅನುಷ್ಠಿಸಲ್ಪಡುವ ಯಾಗವು ವಿಕೃತಿಯಾಗವೆನಿಸುವುದು.

ಈ ಮೇಲೆ ನಿರ್ದಿಷ್ಟವಾದ ದರ್ಶಪೂರ್ಣಮಾಸವೆಂಬ ಇಷ್ಟಿಯ ಅಂಗಭೂತಗಳಾದ ಪ್ರಯಾಜ ಮತ್ತು ಅನುಯಾಜವೆಂಬಿವೆರಡರ ಸ್ವರೂಪವನ್ನು ಇಲ್ಲಿ ವಿವರಿಸುತ್ತೇವೆ.

**ಪ್ರಯಾಜ**— ಇದು ಅಯ್ದು ಯಾಗಗಳದೊಂದು ಸಂಜ್ಞೆಯು. ಅಂವರೆ, (೧) **ಸಮಿಧೋ ಯಜತಿ.** (೨) **ಇಡೋ ಯಜತಿ** (೩) **ಬರ್ಹಿರ್ಯಜತಿ.** (೪) **ತನೂನಪಾತಂ ಯಜತಿ.** (೫) **ಸ್ವಾಹಾಕಾರಂ ಯಜತಿ.** ಎಂಬ ಅಯ್ದು ಯಾಗಗಳಿವೆ. ಈ ಯಾಗಗಳ '**ಸಮಿಧಃ ಸಮಿಧೋ ಅಗ್ನ ಆಜಸ್ಯ ವ್ಯನ್ತು**' ಇತ್ಯಾದಿ ವಿಧಾಯಕ ಮಂತ್ರಗಳೂ ಅಲ್ಲಿ ಹೇಳಲ್ಪಟ್ಟಿವೆ. ಅವುಗಳನ್ನು ಕ್ರಮವಾಗಿ ಈ ಯಾಗಗಳಿಗೆ ಜೋಡಿಸಿ ಸಮಿಧಾದಿಯಾಗಗಳನ್ನು ನೆರವೇರಿಸುವುದೇ ಪ್ರಪಂಚಪ್ರಯಾಜಯಾಗಗಳು.

ಈ ಪ್ರಯಾಜ ಯಾಗಗಳ ಸ್ವತಂತ್ರವಾದ ಫಲವು ಹೇಳಲ್ಪಟ್ಟಿಲ್ಲವಾದ್ದರಿಂದ, ಇವು ದರ್ಶಪೂರ್ಣಮಾಸದ ಅಂಗಭೂತಗಳಾಗಿರುವುವೆಂದು ತಿಳಿಯತಕ್ಕದ್ದು. ಸಾರಾಂಶ, ಪ್ರಯಾಜಾದಿಗಳಿಂದ ದರ್ಶಪೂರ್ಣಮಾಸ ಯಾಗವನ್ನು ಮಾಡಿದರೆ ಅದರಿಂದ ಕರ್ತನಿಗೆ ಸ್ವರ್ಗವೆಂಬ ಫಲವು ಸಿಕ್ಕುವುದು.

**ಅನುಯಾಜ**— ದರ್ಶಪೂರ್ಣಮಾಸವೆಂಬ ಯಾಗದಲ್ಲಿ ಪಂಚ ಪ್ರಯಾಜಗಳ ಅನುಷ್ಠಾನವು ಹೇಳಲ್ಪಟ್ಟಿರುವಂತೆ ಅನುಯಾಜ ಸಂಜ್ಞಕಗಳಾದ ಮೂರು ಯಾಗಗಳೂ ಹೇಳಲ್ಪಟ್ಟಿವೆ. ಈ ಅನುಯಾಜಗಳು ಇಡಾಭಕ್ಷಣಾನಂತರದಲ್ಲಿ ಉಳಿದ ಕೆಲವು ಕರ್ಮಗಳನ್ನು ಮಾಡಿದ ತರುವಾಯ ಅನುಷ್ಠಿಸಲ್ಪಡುವವು '**ವಾರ್ಜಯಿತ್ವಾಽನುಯಾಜೈಶ್ಚ**

ಶನ್ತಿ' ಮಾರ್ಜನವನ್ನು ಮಾಡಿದ ಬಳಿಕ ಅನುಯಾಜಗಳನ್ನು ನೆರ ವೇರಿಸಬೇಕೆಂಬುದಾಗಿ ಆಶ್ವಲಾಯನ ಶ್ರೌತಸೂತ್ರವು ಈ ವಿಷಯದಲ್ಲಿ ವಿಧಾಯಕ ಪ್ರಮಾಣವಾಗಿದೆ. ಹಾಗೂ ಆಪಸ್ತಂಬ ಪರಿಭಾಷಾ ಸೂತ್ರ ವಲ್ಲಿಯೂ **ಔಪಭೃತಂ ಜುಹ್ವಾಮಾನಿಯ............ಪ್ರತೀಚ ಸ್ತ್ರೀನ ನುಯಾಜಾನ್ ಯಜತಿ'** ಎಂಬುದಾಗಿ ಅನುಯಾಜಗಳು ವಿಧಿಸಲ್ಪ ಟ್ಟಿವೆ. ಅನುಯಾಜಗಳನ್ನು ನೆರವೇರಿಸುವ ಸಮಯದಲ್ಲಿ ಹೋತಾ ಎಂಬಾತನು ಪಠಿಸತಕ್ಕ ಮೂರು ಮಂತ್ರಗಳಿವೆ. ಅವನು ಅವುಗಳನ್ನು ಉಚ್ಚರಿಸುತ್ತಿರುವಾಗ ಆ ಆ ದೇವತೆಗಳನ್ನು ಉದ್ದೇಶಿಸಿ ಮೂರು ಸಾರೆ ಹವಿಃಪ್ರಕ್ಷೇಪ ಮಾಡಲ್ಪಡುವುದೇ ಅನುಯಾಜವು ಇನ್ನು ದರ್ಶಪೂರ್ಣ ಮಾಸ, ಅಗ್ನಿಷ್ಟೋಮ, ಅಶ್ವಮೇಧ, ಸೋಮಯಾಗಾದಿಗಳ ಸ್ವರೂಪ ವನ್ನು ಮುಂದೆ ಚತುರ್ಥೋಲ್ಲಾಸದಲ್ಲಿ ವಿವರಿಸುವೆವು.

ಪ್ರಕೃತವನನುಸರಿಸುವಾ ! ಹೀಗೆ ಬ್ರಾಹ್ಮಣ ಭಾಗದಲ್ಲಿ ಹೇಳಲ್ಪ ಡುವ ಪಕೃತಿ ವಿಕೃತಿ ಮುಂತಾದ ಯಾಗಗಳ ವಿವರಣೆಯನ್ನರಿತುಕೊ ಳ್ಳಲು ಮೀಮಾಂಸೆಯ ನೆರವು ಬೇಕಾಗುವದೆಂದು ಸಿದ್ಧವಾಗುವುದು. ಹಾಗೇ, **' ಅಕ್ತಾಃ ಶರ್ಕರಾ ಉಪದಧಾತಿ '** ಎಂಬ ಮುಂತಾದ ವೈದಿ ಕವಾಕ್ಯಗಳ ತಾತ್ಪರ್ಯವನ್ನು ಸರಿಯಾಗಿ ತಿಳಿದುಕೊಳ್ಳುವಲ್ಲಿಯೂ ಮೀಮಾಂಸಾಶಾಸ್ತ್ರದ ಸಹಾಯವು ಆವಶ್ಯವಾದುದು. ಏಕೆಂದರೆ— ಈ ಮೇಲಿನ ವೇದವಾಕ್ಯದಲ್ಲಿರುವ ' ಶರ್ಕರಾಃ ' ಎಂಬ ಶಬ್ದಕ್ಕೆ ಪುಡಿ ಸಕ್ಕರೆಯ ಸಣ್ಣ ಹಳಕುಗಳಂತಿರುವ ಮಣ್ಣಿನೊಡನೆ ಬೆರೆದ ನುಚ್ಚು ಗಲ್ಲುಗಳೆಂಬರ್ಥವು. ಅವುಗಳ ಅಂಜನವನ್ನು ಮಾಡುವಲ್ಲಿ ತುಪ್ಪದಿಂದ ಮಾಡಬೇಕೋ, ಎಣ್ಣೆಯಿಂದ ಮಾಡಬೇಕೋ ? ಅಥವಾ ರಸಾದಿಗಳಿಂದ ಮಾಡಬೇಕೋ ? ಎಂಬ ಸಂಶಯೇವುಂಟಾಗಲು ಆಗ ಅದರ ನಿರ್ಣಯ ವನ್ನು ವ್ಯಾಕರಣ, ನಿರುಕ್ತಾದಿಗಳನ್ನು ಓದಿದ ಜಾಣನು ಮಾಡಬಲ್ಲನೇ ? ಮಾಡಲಾರನು. ಆದರೆ, ಮೀಮಾಂಸಾಶಾಸ್ತ್ರದ ನಿಯಮಗಳಿಂದಾದರೋ ಆ ಬಗ್ಗೆ ಸುಲಭವಾಗಿ ನಿರ್ಣಯಮಾಡಬಹುದು. ಹೇಗೆಂದರೆ, ಮೇಲೆ ನಿರ್ದಿಷ್ಟವಾದ ಮಂತ್ರದ ವಾಕ್ಯಶೇಷದಲ್ಲಿ ' ತೇಜೋವೈ ಘೃತಮ್ ' ಎಂಬ ವಚನವಿರುವುದರಿಂದ ಆ ಶರ್ಕರಾಂಜನವನ್ನು ತುಪ್ಪದಿಂದೇ ಮಾಡಬೇಕೆಂಬ ನಿರ್ಣಯವನ್ನು ಮೀಮಾಂಸಾಶಾಸ್ತ್ರದ ಸಾಹಾಯ್ಯ ದಿಂದ ನಮಗೆ ಸುಲಭವಾಗಿ ಮಾಡಲಿಕ್ಕೆ ಬರುವುದು. ಈ ಮೇರೆಗೆ ಕರ್ಮಕಾಂಡಬೋಧಕಗಳಾದ ವೈದಿಕವಾಕ್ಯಗಳ ತಾತ್ಪರ್ಯವನ್ನು

ತಿಳಿದುಕೊಳ್ಳುವುದರಲ್ಲಿ ಮೀಮಾಂಸೆಯು ನೆರವಾಗುವುದು. ಅದು ಕಾರಣವೇ ಕುಮಾರಿಲಭಟ್ಟರು :—

**ಧರ್ಮೇ ಪ್ರಮೀಯಮಾಣೇ ಹಿ ವೇದೇನ ಕರುಣಾತ್ಮನಾ ।**
**ಇತಿ ಕರ್ತವ್ಯತಾಭಾಗಂ ಮೀಮಾಂಸಾ ಪೂರಯಿಷ್ಯತಿ ॥**

ಎಂದು ನಿರೂಪಿಸಿದ್ದಾರೆ. ಈ ವಾಕ್ಯದಲ್ಲಿರುವ 'ಇತಿಕರ್ತವ್ಯತಾ' ಎಂಬ ಶಬ್ದದ ಅರ್ಥವು ಹೀಗಿದೆ:— 'ಕರ್ತವ್ಯಸ್ಯ ಇತಿ—ಪ್ರಕಾರಃ, ಇತಿ ಕರ್ತವ್ಯತಾ'— ಅಗ್ನಿಹೋತ್ರಾದಿ ಕರ್ತವ್ಯದ ಅನುಷ್ಠಾನ ಪ್ರಕಾರವು 'ಇತಿಕರ್ತವ್ಯತಾ' ಎಂದು ಹೇಳಲ್ಪಡುವುದು. ಯಾವುದಾದರೊಂದು ವಿಧಿಯು ಶ್ರವಣ ಮಾಡಲ್ಪಟ್ಟುದಾದರೆ, ಆ ಬಗ್ಗೆ ಕಥಂಭಾವಾಕಾಂಕ್ಷೆಯುಂಟಾಗುವುದು. ವ್ಯವಹಾರದಲ್ಲಿ 'ಕೊಡಲಿಯಿಂದ ಕಡಿಯಬೇಕು' ಎಂಬ ನುಡಿಯು ನಮ್ಮ ಕಿವಿಗೆ ಬಿದ್ದಾಗ, 'ಕಥಮ್' ಈ ಕೊಡಲಿಯಿಂದ ಕಟ್ಟಿಗೆಯನ್ನು ಹೇಗೆ ಕಡಿಯಬೇಕು ? ಎಂಬ ಆ ಕಾಂಕ್ಷೆಯು (ಜಿಜ್ಞಾಸೆಯು) ನಮ್ಮಲ್ಲಿ ಹುಟ್ಟುವುದು. ಆ ಕಥಂಭಾವಾಕಾಂಕ್ಷೆಯನ್ನು ನಿವೃತ್ತಿಗೊಳಿಸಲೋಸುಗ ಪ್ರಯೋಜಕ ಪುರುಷನಿಂದ- 'ಕೊಡಲಿಯನ್ನೆತ್ತಿ ಧಾರೆಯುಳ್ಳದರ ಕಡೆಯಿಂದ ಕಟ್ಟಿಗೆಯ ಮೇಲೆ ಪೆಟ್ಟನ್ನು ಹಾಕಿ ಕಟ್ಟಿಗೆಯನ್ನು ಕಡಿಯಬೇಕು ಎಂದು ಹೇಳಲ್ಪಡುವುದೇ ಇತಿಕರ್ತವ್ಯತೆಯು. ಈ ದೃಷ್ಟಾಂತಾನುಸಾರವಾಗಿ, 'ದರ್ಶಪೂರ್ಣಮಾಸಗಳಿಂದ ಯಜಿಸತಕ್ಕದ್ದು' ಎಂಬ ವಾಕ್ಯದ ಶ್ರವಣಾನಂತರದಲ್ಲಿ 'ದರ್ಶಪೂರ್ಣಮಾಸಯಾಗವನ್ನು ಹೇಗೆ ಮಾಡಬೇಕು ?' ಎಂದು ಹುಟ್ಟುವ ಕಥಂಭಾವಾಕಾಂಕ್ಷೆಯ ನಿವೃತ್ತಿಗೋಸ್ಕರ ಪ್ರಯಾಜ, ಅನುಯಾಜಾದಿ ಅಂಗಗಳ ಅಪೇಕ್ಷೆಯಿರುವುದು. ಆದ್ದರಿಂದ, 'ಪ್ರಯಾಜಾನುಯಾಜಾದಿ ಅಂಗಗಳನ್ನು ನೆರವೇರಿಸಿ ತನ್ಮೂಲಕ ಅಪೂರ್ವವನ್ನು ಹುಟ್ಟಿಸಿ ದರ್ಶಪೂರ್ಣಮಾಸ ಯಾಗವನ್ನನುಷ್ಠಿಸತಕ್ಕದ್ದು' ಎಂಬ ಕಥನವೇ ಇತಿ ಕರ್ತವ್ಯತೆಯು. 'ಕಥಮ್' ಎಂಬ ಪದವು ಪ್ರಕಾರದ ಆಕಾಂಕ್ಷೆಯನ್ನು ಸೂಚಿಸಿರುವುದರಿಂದ, ಇತಿ ಕರ್ತವ್ಯತೆಯು ಯಾವಾಗಲೂ ಕ್ರಿಯಾರೂಪವೇ ಆಗಿರುವುದೆಂದರಿಯಬೇಕು. 'ಹೇಗೆ ಕಡಿಯಬೇಕು ?' ಎಂಬ ಆಕಾಂಕ್ಷೆಯುದಯಿಸಲು ಆಗ ಕೇವಲ 'ಹಸ್ತಃ' ಎಂದುಚ್ಚರಿಸುವುದರಿಂದ ಆ ಆಕಾಂಕ್ಷೆಯು ಹಿಮ್ಮೆಟ್ಟದು. ಮತ್ತೇನೆಂದರೆ 'ಹಸ್ತೇನ ಉದ್ಯಮ್ಯ ನಿಪಾತ್ಯ'— 'ಕೈಯಿಂದೆತ್ತಿ ಕಸುವಿನಿಂದೇಟನ್ನು ಹಾಕಿ ಕಡಿಯತಕ್ಕದ್ದು' ಎಂಬುದಾಗಿ ಕ್ರಿಯಾರೂಪವಾದ ಸಾಧನವನ್ನೇ ಹೇಳಬೇಕು. ಹೀಗೆ, ಇತಿಕರ್ತವ್ಯತೆಯು

ಸ್ವಭಾವತಃ ಕ್ರಿಯಾರೂಪವಾಗಿರುವುದರಿಂದೇ ಇತಿಕರ್ತವ್ಯತಾಕಾಂಕ್ಷೆಯಲ್ಲಿ ಕ್ರಿಯೆಯ ಅನ್ವಯವಿರುವುದು. ಈ ಮಾತಿನ ಮಾಲೆಯನ್ನು ಇದಕ್ಕೂ ಹೆಚ್ಚು ಬೆಳಸುವುದು ಬೇಡ !

ಇನ್ನು, '**ಮೀಮಾಂಸಾ**' ಅಂದರೇನು ? ಅದರ ಇರುವನ್ನು ಸ್ವಲ್ಪ ತೆರೆದಿಡುವಾ. ಮೀಮಾಂಸಾ ಎಂಬುದು ವಿಚಾರ ಪೂರ್ವಕವಾಗಿ ತತ್ತ್ವ ನಿರ್ಣಯವನ್ನು ಪ್ರತಿಪಾದಿಸತಕ್ಕ ಅದೊಂದು ಶಾಸ್ತ್ರವು. ಅಂದರೆ ಸಂದಿಗ್ಧ ವಾದ ವಾಕ್ಯದ ಯಥಾರ್ಥವಾದರ್ಥವನ್ನು ವಿಚಾರಪೂರ್ವಕವಾಗಿ ನಿರ್ಣ ಯಿಸತಕ್ಕ ವಿಶಿಷ್ಟವಾದ ಶಾಸ್ತ್ರವು ಮೀಮಾಂಸೆಯೆನ್ನಲ್ಪಡುವುದು. ಶ್ರುತಿ ಸ್ಮೃತಿಗಳ ತಾತ್ಪರ್ಯಭೂತವಾದ ಅರ್ಥ (ಧರ್ಮ) ದಲ್ಲಿ ಸಂಶಯ ವುಂಟಾಗಲು ಪೂರ್ವೋತ್ತರ ಸಂದರ್ಭಗಳನ್ನನುಲಕ್ಷಿಸಿ ಶ್ರುತಿಲಿಂಗಾದಿ ಪ್ರಮಾಣಗಳಿಂದ ಆ ವಾಕ್ಯಗಳ ತಾತ್ಪರ್ಯವನ್ನು ನಿಶ್ಚಯಗೊಳಿಸು ವದೇ ಮೀಮಾಂಸಾ ಶಾಸ್ತ್ರದ ಪ್ರಯೋಜನವು. ಆದ್ದರಿಂದ ವಾಕ್ಯಾ ರ್ಥದಲ್ಲಿ ಸಂದೇಹವುಂಟಾಗಲು ಹೇಗೆ ನಿರ್ಣಯವನ್ನು ಮಾಡಬೇಕೆಂಬು ದರ ತಿಳಿವಿಗಾಗಿ ಮೀಮಾಂಸಾ ಶಾಸ್ತ್ರದ ಪದ್ಧತಿಯನ್ನು ಅರಿವುದು ಆವಶ್ಯಕವಾದುದು. ಸಮಸ್ತ ವೇದರಾಶಿಯು ಪೂರ್ವಕಾಂಡ, ಉತ್ತರ ಕಾಂಡವೆಂಬ ಎರಡು ಭಾಗಗಳಿಂದ ವಿದಿತವಾಗಿರುವುದಷ್ಟೇ. ಅವೆರಡ ರಲ್ಲಿ ಪೂರ್ವಕಾಂಡವೆಂದರೆ ಕರ್ಮಪ್ರಧಾನವಾದ ಭಾಗವು. ಉತ್ತರ ಕಾಂಡವೆಂದರೆ ಜ್ಞಾನಪ್ರಧಾನವಾದ ಭಾಗವು. ಅವೆರಡೂ ಭಾಗಗಳಲ್ಲಿ ಪವೃತ್ತಿ ನಿವೃತ್ತಿ ಧರ್ಮಗಳು ಪ್ರತಿಪಾದಿಸಲ್ಪಡುವುದರಿಂದ ಅವೆರಡು ಕಾಂಡಗಳೊಳಗಿನ ಸಂದಿಗ್ಧವಾದ ಅರ್ಥಗಳನ್ನು ನಿರ್ಣಯಿಸತಕ್ಕ ಮೀಮಾಂಸೆಯಾದರೂ ಇಬ್ಭಾಗವಾಗಿದೆ. ಅವೆರಡು ಮೀಮಾಂಸೆಗ ಳಿಗೆ ಪೂರ್ವಮೀಮಾಂಸೆ, ಉತ್ತರ ಮೀಮಾಂಸೆಯೆನ್ನುತ್ತಾರೆ. ಅವೆರ ಡರ ವಿಷಯವೂ ಫಲವೂ ಬೇರೆ ಬೇರೆಯಾಗಿವೆ. ಅವೆರಡರಲ್ಲಿ ಕರ್ಮಾ ನುಷ್ಠಾನ ವಿಷಯಕ ಸಂಶಯಗಳನ್ನು ನಿರ್ಣಯಿಸತಕ್ಕ ಪೂರ್ವಮೀ ಮಾಂಸಾ ಶಾಸ್ತ್ರವನ್ನು ಜೈಮಿನಿಯು ರಚಿಸಿದನು. ಈ ಪೂರ್ವ ಮೀಮಾಂ ಸಾಶಾಸ್ತ್ರದ ಸಾಂಗೋಪಾಂಗ ವಿವೇಚನೆಗೋಸ್ಕರ ಜೈಮಿನಿಯು ಒಟ್ಟು ೨೭೪೫ ಸೂತ್ರಗಳನ್ನು ನಿರ್ಮಿಸಿದ್ದಾನೆ. ಆ ಸೂತ್ರಗಳಿಂದ ಸೂಚಿಸ ಲ್ಪಡತಕ್ಕ ವಿಷಯ ವಿಭಾಗದ ದೃಷ್ಟಿಯಿಂದ ಎಲ್ಲ ಸೂತ್ರಗಳೊಂದು ಗೂಡಿದ ಹನ್ನೆರಡು ಅಧ್ಯಾಯಗಳುಳ್ಳ ಮೀಮಾಂಸಾ ದರ್ಶನದಲ್ಲಿ '**ಅಥಾತೋ ಧರ್ಮಜಿಜ್ಞಾಸಾ**' ಎಂಬುದು ಆದಿಮಸೂತ್ರವು; 'ಅನ್ವಾ

ಹಾರ್ಯೇಚ ದರ್ಶನಾತ್' ಎಂಬುದು ಅಂತಿಮಸೂತ್ರವು. ಈ ಹನ್ನೆರಡು ಅಧ್ಯಾಯಗಳಲ್ಲಿಯೂ ಮೊದಲಿನ ಆರು ಅಧ್ಯಾಯಗಳಿಗೆ 'ಪೂರ್ವಷಟ್ಕ' ವೆಂದೂ ಮುಂದಿನ ಆರು ಅಧ್ಯಾಯಗಳಿಗೆ ಉತ್ತರ ಷಟ್ಕವೆಂದೂ ಹೇಳುತ್ತಾರೆ. ಈ ಹನ್ನೆರಡು ಅಧ್ಯಾಯಗಳೊಳಗಿನ ವಿಷಯ ವಿಭಾಗಗಳಿಗೆ ಶಾಸ್ತ್ರೋಕ್ತಗಳಾದ ಹನ್ನೆರಡು ಹೆಸರುಗಳಿವೆ. ಅವನ್ನು ಮಾಧವಾಚಾರ್ಯರು ಎರಡು ಕಾರಿಕೆಗಳಲ್ಲಿ ಅಡಗಿಸಿದ್ದಾರೆ. ಹೇಗೆಂದರೆ:—

**ಧರ್ಮೋ ದ್ವಾದಶಲಕ್ಷಣ್ಯಾ ವ್ಯುತ್ಪಾದ್ಯ ಸ್ತತ್ರಲಕ್ಷಣೈಃ ।**
**ಪ್ರಮಾಣಭೇದಶೇಷತ್ವಪ್ರಯುಕ್ತಿಕ್ರಮಸಂಜ್ಞಕಾಃ ॥**
**ಅಧಿಕಾರೋಽತಿದೇಶಶ್ಚ ಸಾಮಾನ್ಯೇನ ವಿಶೇಷತಃ ।**
**ಊಹೋ ಬಾಧಶ್ಚ ತನ್ತ್ರಂ ಚ ಪ್ರಸಂಗಶ್ಚೋದಿತಾಃಕ್ರಮಾತ್ ।**

(೧) ಧರ್ಮ ಪ್ರಮಾಣವು. (೨) ಧರ್ಮಾಧರ್ಮ ಭೇದಗಳು. (೩) ಶೇಷಶೇಷಿಭಾವವು. (೪) ಕ್ರತ್ವರ್ಥ ಪುರುಷಾರ್ಥ ಭೇದದಿಂದ ಪ್ರಯುಕ್ತಿ ವಿಶೇಷವು. (೫) ಶ್ರುತ್ಯರ್ಥಪಾಠನಾದಿ ಕ್ರಮಭೇದವು. (೬) ಅಧಿಕಾರ ವಿಶೇಷವು. (೭) ಸಾಮಾನ್ಯಾತಿದೇಶವು. (೮) ವಿಶೇಷಾತಿದೇಶವು. (೯) ಊಹೆಯು. (೧೦) ಬಾಧವು. (೧೧) ತನ್ತ್ರವು. (೧೨) ಪ್ರಸಂಗವು

ಈ ಹನ್ನೆರಡು ಅಧ್ಯಾಯಗಳಲ್ಲಿ ಮೂರನೆಯ, ಆರನೆಯ, ಹತ್ತನೆಯ ಅಧ್ಯಾಯಗಳ ಪ್ರತಿಯೊಂದರಲ್ಲಿಯೂ ಎಂಟೆಂಟು ಪಾದಗಳೂ, ಮಿಕ್ಕ ಒಂಭತ್ತು ಅಧ್ಯಾಯಗಳ ಪ್ರತಿಯೊಂದರಲ್ಲಿಯೂ ನಾಲ್ಕು ನಾಲ್ಕು ಪಾದಗಳೂ ಇವೆ. ಇವೆಲ್ಲ ಒಟ್ಟು ಅರವತ್ತು ಪಾದಗಳು; ಈ ಅರವತ್ತು ಪಾದಗಳ ಪ್ರತಿಯೊಂದರಲ್ಲಿ ಮತ್ತೆ ಅಧಿಕರಣಗಳೆಂಬುವೂ ಇರುತ್ತವೆ. ಈ ಅಧಿಕರಣಗಳು ಒಂದು ಸಾವಿರವಿರುತ್ತವೆ. ಅಧಿಕರಣವು ಅಂದರೆ, ಅವಾಂತರ ಪ್ರಕರಣವು. ಇದು ಪೂರ್ವೋತ್ತರಮೀಮಾಂಸಾ ಸಾಧಾರಣ ಸಂಜ್ಞೆಯು. ಅಂದರೆ ಪೂರ್ವಮೀಮಾಂಸೆ, ಉತ್ತರಮೀಮಾಂಸೆಯೆಂಬ ಎರಡೂ ಮುಖ್ಯ ಪ್ರಕರಣ ಗ್ರಂಥಗಳಲ್ಲಿರುವ ಅವಾಂತರ ಪ್ರಕರಣಗಳಿಗಿರುವ ಸಂಜ್ಞೆಯು. ಹೇಗೆಂದರೆ, ಪೂರ್ವಮೀಮಾಂಸೆಯಲ್ಲಿ ಧರ್ಮವೇ ಮುಖ್ಯವಿಷಯವು. ಆದ್ದರಿಂದ, ಪೂರ್ವಮೀಮಾಂಸೆಯು ಧರ್ಮವಿಷಯಕವಾದ ಮುಖ್ಯ ಪ್ರಕರಣವೆನ್ನಲ್ಪಡುವುದು. ಆ ಮುಖ್ಯ ಪ್ರಕರಣದೊಳಗಿನ '**ಅಥಾತೋ ಧರ್ಮ ಜಿಜ್ಞಾಸಾ**' ಎಂಬ ಪ್ರಥಮಸೂತ್ರದಿಂದ 'ಧರ್ಮವು ಜಿಜ್ಞಾಸ್ಯವು, ಎಂಬಿಷ್ಟೇ ವಿಷಯವನ್ನು ನಿಶ್ಚಿತಗೊಳಿಸತಕ್ಕ ವಾಕ್ಯಸಮುದಾಯವು ಅವಾಂತರಪ್ರಕರಣವು. ಹಾಗೇ ಉತ್ತರಮೀಮಾಂಸೆಯು ಮುಖ್ಯ

ವಿಷಯವು ಬ್ರಹ್ಮವು. "ಅಥಾತೋ ಧರ್ಮ ಜಿಜ್ಞಾಸಾ" ಎಂಬ ಪ್ರಥಮಸೂತ್ರದಿಂದ ಆ ಬ್ರಹ್ಮವು ಜಿಜ್ಞಾಸ್ಯ (ವಿಚಾರ್ಯ) ವು ಎಂಬ ರ್ಥವನ್ನು ಗಟ್ಟಿಗೊಳಿಸುವುದು ಅವಾಂತರಪ್ರಕರಣವು. ಈ ಅವಾಂತರ ಪ್ರಕರಣರೂಪವಾದ ಅಧಿಕರಣದಲ್ಲಿ ಅಯ್ದು ಅಂಶ (ಭಾಗ) ಗಳಿರುತ್ತವೆ. ಅವಾವೆಂದರೆ—

**ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಮ್ ।**
**ಸಂಗತಿಶ್ಚೇತಿ ಪಂಚಾಂಗಂ ಶಾಸ್ತ್ರೇಽಧಿಕರಣಂ ವಿದುಃ ॥**

(೧) ವಿಷಯವು. (೨) ವಿಶಯ (ಸಂಶಯ) ವು. (೩) ಪೂರ್ವ ಪಕ್ಷವು. (೪) ಉತ್ತರಪಕ್ಷವು. (೫) ಸಂಗತಿಯು. ಈಗ ಇವುಗಳನ್ನು ಉದಾಹರಣೆಯೊಡನೆ ಸ್ಪಷ್ಟೀಕರಿಸುತ್ತೇವೆ, ಪೂರ್ವಮೀಮಾಂಸೆಯ ಮೊದಲನೆಯ ಅಧಿಕರಣವು ಜಿಜ್ಞಾಸಾಧಿಕರಣವೆನ್ನಲ್ಪಡುವುದು, ಈ ಅಧಿಕರಣದಲ್ಲಿ ಧರ್ಮವು ಜಿಜ್ಞಾಸಿಸಲ್ಪಡತಕ್ಕದ್ದೋ, ಅಲ್ಲವೋ?, ಎಂಬ ಪ್ರಶ್ನೆಯು ಪೂರ್ವಪಕ್ಷ, ಉತ್ತರ ಪಕ್ಷಾದಿಗಳ ಪದ್ಧತಿಯಿಂದ ವಿಚಾರಿ ಸಲ್ಪಟ್ಟಿರುವುದು. ಆದ್ದರಿಂದ ಇದರಲ್ಲಿ ಅವಾಂತರ ಪ್ರಕರಣದ ಲಕ್ಷ ಣವು ಸಮಂಜಸವಾಗಿರುವುದು. ಹೇಗೆ ಎಲ್ಲ ಅಧಿಕರಣಗಳಲ್ಲಿಯೂ ಯಾವುದಾದರೊಂದು ವೇದವಾಕ್ಯವು ವಿಷಯವಾಗಿರುವಂತೆ ಈ ಅಧಿಕ ರಣದಲ್ಲಿ '**ಸ್ವಾಧ್ಯಾಯೋಽಧ್ಯೇತವ್ಯಃ**' (ತೈ, ಆ. ೧೬) ಎಂಬ ವಾಕ್ಯವು (೧) ವಿಷಯವಾಕ್ಯವು. ಈ ವಾಕ್ಯದಲ್ಲಿ ಹೇಳಲ್ಪಟ್ಟ ಮೇರೆಗೆ ಸ್ವಾಧ್ಯಾ ಯದ (ಸ್ವಶಾಖೆಯ) ಅಧ್ಯಯನವನ್ನು ಮಾಡಬೇಕೋ ಮಾಡಬಾರದೋ? ಎಂಬ ಸಂಶಯಕ್ಕೆ (೨) ವಿಶಯವೆನ್ನುತ್ತಾರೆ. ಅರ್ಥವನರಿಯದೆ ವೇದಾ ಧ್ಯಯನ ಮಾಡುವುದರಿಂದ ದ್ವಿಜನು ಕೃತಾರ್ಥನಾಗಬಹುದಲ್ಲವೇ? ಎಂಬ ಮುಂತಾದ ಈ ವಿಧವಾದ ನುಡಿಗಡಣವು (೩) ಪೂರ್ವಪಕ್ಷದ ಹೇಳು ವಿಕೆಯು. ಆ ಪೂರ್ವ ಪಕ್ಷವನ್ನು ನಿರಸನಗೊಳಿಸಿ ಅರ್ಥಗ್ರಹಣಪೂರ್ವ ಕವಾಗಿ ಅಧ್ಯಯನ ಮಾಡುವುದರಿಂದೇ ಪ್ರಶ್ನೆಗಳ ತೊಡಕನ್ನು ಬಿಡಿ ಸಲು ಶಕ್ಯವಾಗುವುದಾದ್ದರಿಂದ, ಅರ್ಥಗ್ರಹಣಪೂರ್ವಕವಾಗಿಯೇ ಸ್ವಾಧ್ಯಾಯದ ಅಧ್ಯಯನವನ್ನು ಮಾಡತಕ್ಕದ್ದು, ಎಂಬುದಾಗಿ ಸಿದ್ಧಾಂತ ಗೊಳಿಸುವುದಕ್ಕೆ (೪) ಉತ್ತರಪಕ್ಷವೆಂದು ಹೇಳುತ್ತಾರೆ. ಈ ಅಧಿಕ ರಣದಂತೆ ಅನೇಕ ಅಧಿಕರಣಗಳು ಒಂದರ ಮುಂದೆ ಒಂದು ಬರಲು, ಆಗ ಮುಂದಿನ ಅಧಿಕರಣವು ಹಿಂದಿನ ಅಧಿಕರಣದೊಡನೆ ಹೇಗೆ ಸಂಬಂಧ ಪಟ್ಟಿರುವುದೆಂಬುದನ್ನು ತೋರಿಸುವಿಕೆಗೆ (೫) ಸಂಗತಿಯು ಎಂಬ ಸಂಜ್ಞೆ ಯುಂಟು. ಈ ಸಂಗತಿಯು ಶಾಸ್ತ್ರ ಸಂಗತಿಯು, ಅಧ್ಯಾಯ ಸಂಗ

ತಿಯು, ಪಾದ ಸಂಗತಿಯು, ಅಧಿಕರಣ ಸಂಗತಿಯು ಎಂಬ ಭೇದ ಗಳುಳ್ಳದ್ದಾಗಿಯೂ ಕಾಣಬರುವುದು. ವಾಸ್ತವಿಕವಾಗಿ ನೋಡಿದರೆ, ಅನೇಕ ವ್ಯಾಪಕ ಭೇದಾತ್ಮಕ ಸಂಗತಿಯು ಅಧಿಕರಣದ ಅವಾಂತರ ವಿಭಾಗವೆನಿಸಲಾರದು. ಅದುಕಾರಣವೇ ಮೇಲಿನ ಶ್ಲೋಕದಲ್ಲಿರುವ **'ಸಂಗತಿಶ್ಚೇತಿ ಪಂಚಾಂಗವ್'** ಎಂಬುದನ್ನುಳಿದು **'ನಿರ್ಣಯಶ್ಚೇತಿ ಪಂಚಾಂಗವ್'** ಎಂದು ಬದಲುಮಾಡಿ 'ನಿರ್ಣಯವು' ಅಧಿಕರಣದ ಪಂಚಮಾವಯವವೆಂದು ಕೆಲವರು ನುಡಿವರು.

ಈ ಲಕ್ಷಣಗಳಿಂದ ಕೂಡಿರುವ ಅವಾಂತರ ಪ್ರಕರಣರೂಪಗಳಾದ ಒಂದು ಸಾವಿರ ಅಥವಾ ೭೮೯ ಅಧಿಕರಣಗಳುಳ್ಳ ದ್ವಾದಶಾಧ್ಯಾಯಾ ತ್ಮಕವಾದ ಪೂರ್ವಮೀಮಾಂಸೆಯನ್ನು **'ದ್ವಾದಶಲಕ್ಷಣೀ'** ಎಂದೂ ಕೆಲವರು ಹೇಳುತ್ತಾರೆ. ಈ ಗ್ರಂಥದ ಹೊರತಾಗಿ **'ಸಂಕರ್ಷಣಕಾಂಡ'** ಎಂಬ ಹೆಸರಿನ ನಾಲ್ಕು ಅಧ್ಯಾಯಗಳುಳ್ಳ ಬೇರೊಂದು ಗ್ರಂಥವೂ ಪ್ರಸಿದ್ಧವಾಗಿದೆ. ಅದರಲ್ಲಿ ಒಟ್ಟು ೪೬೭ ಸೂತ್ರಗಳಿವೆ. ಭಾಟ್ಟದೀಪಿಕಾ ಕಾರನೂ, ಖಂಡದೇವನೂ ಆ ಸೂತ್ರಗಳನ್ನು ಒಪ್ಪುವರು. ಭಾಸ್ಕರ ನೆಂಬ ವಿದ್ವಾಂಸನು ಆ ಗ್ರಂಥಕ್ಕೆ ಟೀಕೆಯನ್ನು ಬರೆದಿದ್ದಾನೆ. ಆದರೆ, ಪೂರ್ವದ ಯಾವ ಪ್ರತಿಷ್ಠಿತ ಗ್ರಂಥಕಾರರೂ ಈ ಸೂತ್ರಗಳನ್ನು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿರುವುದಿಲ್ಲ. ಮತ್ತು ಈ ಸೂತ್ರಗಳಲ್ಲಿ ಗ್ರಥಿತ ವಾದ ವಿಷಯಗಳಾದರೂ ಅಷ್ಟೊಂದು ಮಹತ್ವವಾದುವೂ ಅಲ್ಲ. ಈ ಬಗೆಯ ಅನೇಕಕಾರಣಗಳಿಂದ ಈ ಸೂತ್ರಗಳನ್ನು ಹಿಂದಿನಿಂದ ಬೇರೆ ಯಾವನೋ ಒಬ್ಬನು ಬರೆದಿರುವನು. ಆದ್ದರಿಂದ ಈ ಸೂತ್ರಗಳಿಗೂ ಜೈಮಿನಿಗೂ ಯಾವ ಸಂಬಂಧವೂ ಇರುವುದಿಲ್ಲವೆಂದು ಅನೇಕ ಪಂಡಿ ತರು ಅಭಿಪ್ರಾಯಪಡುತ್ತಾರೆ.

ಈ ರೀತಿಯಾಗಿ ಜೈಮಿನಿಯು ಈ ಮೀಮಾಂಸಾದರ್ಶನದ ಸೂತ್ರ ಗಳಿಂದ ಯಾವ ಸಿದ್ಧಾಂತವನ್ನು ಪ್ರಸ್ಥಾಪಿಸಿದನೋ ಅದನ್ನು ಆದರ್ಶ ವಾಗಿಟ್ಟುಕೊಂಡೇ ಮುಂದೆ ಬೇರೆಬೇರೆ ಮೀಮಾಂಸಕರು ಬೇರೆಬೇರೆ ಗ್ರಂಥಗಳನ್ನು ಬರೆದಿದ್ದಾರೆ. ಮತ್ತು, ವಿದ್ಯಾರಣ್ಯರು ಪಂಚದಶಿ ಯಲ್ಲಿ (ಧ್ಯಾ. ೯)

**ಕರ್ಮೋಪಾಸ್ತೀ ವಿಚಾರ್ಯೇತೇ ಅನುಷ್ಠೇಯಾವಿನಿರ್ಣಯಾತ್ ।**
**ಬಹುಶಾಖಾವಿಪ್ರಕೀರ್ಣಂ ನಿರ್ಣೇತುಂಕಃಪ್ರಭುರ್ನರಃ ॥**

**ನಿರ್ಣೀತೋರ್ಥಃ ಕಲ್ಪಸೂತ್ರೈರ್ಗ್ರಥಿತಸ್ತಾವತಾಽಽಸ್ತಿಕಃ ।**
**ವಿಚಾರಮಂತರೇಣಾಪಿ ಶಕ್ನೋತ್ಯನುಷ್ಠಾತುಮಂಜಸಾ ॥**

ಯಾವುದೊಂದು ಗ್ರಂಥದಿಂದಾಗಲಿ ಅಥವಾ ವಾಕ್ಯದಿಂದಾಗಲಿ ಅನುಷ್ಠೇಯವಾದ ಧರ್ಮದ ನಿರ್ಣಯವಾಗದಿರುವುದರಿಂದ, ಯಾವನಾದರೂ ಕರ್ಮೋಪಾಸನೆಗಳ ವಿಚಾರದಲ್ಲಿ ತೊಡಗುವುದು ಸ್ವಾಭಾವಿಕವಾಗಿರುವುದು. ಆದರೆ ಅನೇಕ ಶಾಖೆಗಳಲ್ಲಿ ಅಲ್ಲಲ್ಲಿ ವಿಹಿತಗಳಾದ ಕರ್ಮೋಪಾಸನೆಗಳನ್ನು ಸಕ್ರಮವಾಗಿ ಒತ್ತಟ್ಟಿಗೆ ಸಂಗ್ರಹಿಸಿ ನಿರ್ಣಯಿಸಲು ನಮ್ಮಂಥವರು ಯಾರು ತಾನೇ ಸಮರ್ಥರಾಗಿದ್ದಾರೆ ? ಆದುಕಾರಣವೇ ಕಲ್ಪಸೂತ್ರಕಾರರು ನಿಶ್ಚಿತಾರ್ಥವನ್ನು ಸಂಗ್ರಹಿಸಿ ನಿರೂಪಿಸಿದರು. ಆಸ್ತಿಕಪುರುಷನು ಅದನ್ನು ಅರಿತುಕೊಂಡು ಯಥಾವಿಧಿ ಅನುಷ್ಠಿಸಲು ಶಕ್ತನಾಗುವನು, ಎಂದು ಹೇಳಿರುವ ಮೇರೆಗೆ ಬೋಧಾಯನ ಆಪಸ್ತಂಬ ಮೊದಲಾದವರ ಹೆಸರಿನಿಂದ ಪ್ರಸಿದ್ಧಗಳಾಗಿರುವ ಕಲ್ಪಸೂತ್ರಗಳಾದರೋ ಬ್ರಾಹ್ಮಣಭಾಗದೊಳಗಿನ ಸಂಶಯಾಸ್ಪದವಾಕ್ಯಗಳನ್ನು ನಿಷ್ಕರ್ಷಿಸಿ ಯಜ್ಞಯಾಗಾದಿ ಕರ್ಮಾನುಷ್ಠಾನದ ನಿಯಮವನ್ನು ಪ್ರತಿಪಾದಿಸತಕ್ಕವಾಗಿವೆ.

ಇನ್ನು ವಾಚಕರನ್ನು ಹೀಗೇ ಬ್ರಾಹ್ಮಣಭಾಗದ ವಿಚಾರಸರಣಿಯೆಂಬ ಹಳುವಿನ ಕಾಲುದಾರಿಯಲ್ಲಿಯೇ ಇನ್ನಿಷ್ಟು ಮುಂದಕ್ಕೆ ಕರೆದೊಯ್ದರೆ ಅವರಿಗೆ ಕಡುಬೇಸರವಾಗಬಹುದು; ಆದ್ದರಿಂದ ಈಗ ಅವರಿಗೆ ಅವರ ಮನಸಿ ಉಲ್ಲಾಸವನ್ನು ಹೆಚ್ಚು ಮಾಡುವ ಆರಣ್ಯಕೋಪನಿಷದ್ವಾಙ್ಮಯವೆಂಬ ಬಯಲುದಾರಿಯನ್ನು ತೋರಿಸುತ್ತೇವೆ.

ಬ್ರಾಹ್ಮಣಗಳಲ್ಲಿಯೇ ಸಮಾವಿಷ್ಟಗಳಾಗಿರತಕ್ಕ ಕೆಲವು ಭಾಗಗಳು ಆರಣ್ಯಕಗಳೆಂದೂ ಉಪನಿಷತ್ತುಗಳೆಂದೂ ಹೇಳಲ್ಪಡುತ್ತವೆ. 'ಆರಣ್ಯಕವ' ಅಂದರೇನು ? ಎಂಬ ಮಾತಿಗೆ ಸಾಯಣಾಚಾರ್ಯರು ತೈತ್ತಿರೀಯ ಆರಣ್ಯಕದ ಭಾಷ್ಯಾರಂಭದಲ್ಲಿ ಹೀಗೆ ಹೇಳಿದ್ದಾರೆ—

**ಆರಣ್ಯಾಧ್ಯಯನಾದೇತದಾರಣ್ಯಕಮಿತೀರ್ಯತೇ ।**
**ಅರಣ್ಯೇ ತದಧೀಯೀತೇತ್ಯೇವಂ ವಾಕ್ಯಂಪ್ರವಕ್ಷ್ಯತೇ ॥**
**ಏತದಾರಣ್ಯಕಂ ಸರ್ವಂ ನಾವ್ರತೀಶ್ರೋತುಮರ್ಹತಿ ॥**

ವೇದದ ಯಾವ ಭಾಗವು ಅರಣ್ಯದಲ್ಲಿ ಅಧ್ಯಯನಮಾಡಲ್ಪಡುವುದೋ ಅದು 'ಆರಣ್ಯಕ' ವು. ಅರಣ್ಯದಲ್ಲಿ ಅದನ್ನು ಅಧ್ಯಯನಮಾಡ

ಜೇಕೆಂಬ ವಾಕ್ಯವಾದರೂ ಮುಂದಿನ ಅರಣ್ಯಕಭಾಗದಲ್ಲಿಯೇ ಇರು ವುದು. ದ್ವಿಜನಾದರೂ ವೇದವ್ರತಾದಿ ನಿಯಮಾನುಷ್ಠಾನವಿಲ್ಲದವನಾಗಿ ದ್ದರೆ ಅವನಿಗೆ ಆರಣ್ಯಕವನ್ನು ಶ್ರವಣ ಮಾಡುವ ಅಧಿಕಾರವಿರುವುದಿಲ್ಲ.

ಕೆಲವು ಆರಣ್ಯಕಗಳಲ್ಲಿ ಸೋಮಯಾಗಾದಿಗಳಿಗೆ ಸಂಬಂಧಪಟ್ಟ ಕ್ರಿಯಾಮಾರ್ಗವೂ ಪ್ರತಿಪಾದಿಸಲ್ಪಟ್ಟಿರುವುದು, ಆದರೂ ಆರಣ್ಯಕಗಳಲ್ಲಿ ಯಜ್ಞಯಾಗಾದಿ ಕೃತ್ಯಗಳೇ ಮುಖ್ಯವಿಷಯಗಳಾಗಿರುವುದಿಲ್ಲ; ಮತ್ತೇ ನೆಂದರೆ, ಯಜ್ಞದ ಮೂಲತತ್ತ್ವಗಳನ್ನೂ ಅವುಗಳ ರಹಸ್ಯಾರ್ಥವನ್ನೂ ಪ್ರತಿಪಾದಿಸುವುದೇ ಅವುಗಳ ಧ್ಯೇಯವಾಗಿರುವುದು. ಅವುಗಳಲ್ಲಿ ಪ್ರಾಣ ಪುರುಷಾದಿ ಶಬ್ದಾಭಿಧೇಯನಾದ ವಿಶ್ವಾತ್ಮನ ಸ್ವರೂಪವಿಚಾರದ್ವಾರಾ ಈಶ್ವರಾಸ್ತಿತ್ವವಾದವೂ ಚೆನ್ನಾಗಿ ಸ್ಥಾಪಿಸಲ್ಪಟ್ಟಿದೆ. ಈ ವಿಚಾರಕ್ಕೆ ಸರ್ವಾತ್ಮ ಭಾವನೆಯನ್ನು ದೃಢಪಡಿಸಲನುಕೂಲವಾದ ರಹಸ್ಯವಿದ್ಯೆಯೂ ನೆರವಾಯಿತು. ಈ ಅಧ್ಯಾತ್ಮವಿದ್ಯೆಯು ಯಾಜ್ಞಿಕಕ್ರಿಯೆಗಳ ಹುರು ಳನ್ನು ಬಲ್ಲವರೂ ಅವುಗಳ ಬಗ್ಗೆ ಬೇಸರಗೊಂಡವರೂ ಆದ ಯಜ್ಞ ವಿರೋಧಿಗಳ ವರ್ಗದಿಂದೇ ಪ್ರಸಾರಗೊಳಿಸಲ್ಪಟ್ಟಿತು. ಇವರೇ ವೇದದ ಉತ್ತರಭಾಗವೆನಿಸುವ ಉಪನಿಷದ್ವಿದ್ಯೆಯ ( ರಹಸ್ಯವಿದ್ಯೆಯ ) ಪ್ರವರ್ತಕ ರೆಂದು ಪ್ರಖ್ಯಾತರಾದರು. ಬ್ರಾಹ್ಮಣಾರಣ್ಯಕಗಳಲ್ಲಿ ಚರಾಚರಾತ್ಮಕವಾದ ವಿಶ್ವಪ್ರಪಂಚದ ಮೂಲಕಾರಣದ ವಿಚಾರವು ಪರಿಪಕ್ವವಾಗುವಷ್ಟ ರಲ್ಲಿಯೇ ಆ ವಿಚಾರದೊಡನೇ ಅಧ್ಯಾತ್ಮವಿಚಾರವೆಂಬುದೂ ( ಅಂದರೆ ಸರ್ವರಲ್ಲಿಯೂ ಆತ್ಮರೂಪನಾಗಿರುವನು ಶಿವನೋರ್ವನೇ ಎಂಬ ಮೊದ ಲಾದ ಅರಿವೂ ) ಬೆರೆದುದರಿಂದೇ ಬ್ರಾಹ್ಮಣಭಾಗಗಳೊಡನೆ ಆರಣ್ಯ ಕೋಪನಿಷದ್ಭಾಗಗಳೂ ಜೋಡಿಸಲ್ಪಟ್ಟುವು. ಚಿತ್ತಶುದ್ಧಿಯುಳ್ಳವರು ಏಕಾಂತಸ್ಥಳದಲ್ಲಿ ಕುಳಿತು ಅಧ್ಯಯನಮಾಡತಕ್ಕ ಧರ್ಮವಾಕ್ಯಗಳು ರಹಸ್ಯವಿದ್ಯಾರೂಪಗಳಾಗಿರುವುದರಿಂದ ಇಂತಹ ವಾಕ್ಯ ಸಮುದಾಯವೇ **'ಉಪನಿಷದ್'** ಎಂದು ಪ್ರಸಿದ್ಧವಾಗಿರುವುದು. ಈ ವಿಧವಾದ ಕೆಲವು ಪ್ರಾಚೀನ ಉಪನಿಷತ್ತುಗಳ ವಚನಗಳು ಆರಣ್ಯಕಗಳಲ್ಲಿ ಅಂಶತಃ ಅಂತರ್ಭೂತಗಳಾಗಿರುತ್ತವೆ.

ವೇದಕಾಲೀನವಾಙ್ಮಯವು ಮೊದಲು ತಾಡಿನೋಲೆ ಮೊದಲಾದ ವುಗಳಲ್ಲಿ ಕೈಯಿಂದ ಬರೆಯಲ್ಪಟ್ಟಿರಲಿಲ್ಲ. ಋತ್ವಿಜರ ಸಂಪ್ರದಾಯ ದಲ್ಲಿ ಮುಖೋದ್ಗತವಾಗಿದ್ದಿತು. ಮುಂದೆ ಕೆಲವು ಕಾಲಾನಂತರದಲ್ಲಿ ಅಧ್ಯಯನ ಅಧ್ಯಾಪನ ಸೌಕರ್ಯಾರ್ಥವಾಗಿ ಅದನ್ನು ತಾಡಿನೋಲೆ

ಮೊದಲಾದ ಪತ್ರಗಳಲ್ಲಿ ಬರೆದಿಡುವ ರೂಡಿಯು ಹೆಚ್ಚಾಯಿತು. ಹೀಗೆ ಬರೆದಿಡಲ್ಪಟ್ಟ ಪ್ರಾಚೀನ ಪುಸ್ತಕಗಳಲ್ಲಿ ಬೇರೆ ಬೇರೆ ಅಧ್ಯಾಪಕರ ಅಧ್ಯಾಪನೆಯ ವಿಷಯಗಳೇ ಕಾಣಬರುತ್ತವೆ. ಇಂತಹದೊಂದು ವಿಷಯವನ್ನು ಇಂತಹ ಕಾಲದಲ್ಲಿಯೇ ವಿದ್ಯಾರ್ಥಿಗಳಿಗೆ ಕಲಿಸಬೇಕೆಂಬ ಪದ್ಧತಿಯಿದ್ದುದರಿಂದ, ವಿದ್ಯಾರ್ಥಿಗಳು ಗುರುಗಳಲ್ಲಿ ವಿದ್ಯಾರ್ಜನಗಾಗಿ ಎಷ್ಟೋ ವರ್ಷಗಳ ವರೆಗೆ ಇರಬೇಕಾಗುತ್ತಿತ್ತು. ಅದುಕಾರಣವೇ, ಅರಿತುಕೊಳ್ಳಲು ಕಠಿಣವಾದ ವಿಷಯಗಳು ಅವರಿಗೆ ಕೊನೆಗೆ ಕಲಿಸಲ್ಪಡುತ್ತಿದ್ದವು. ಅವಾವ ವಿಷಯಗಳೆಂದರೆ, ಆರಣ್ಯಕಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಇರುವ ಅಧ್ಯಾತ್ಮವಿದ್ಯೆಯ ತತ್ತ್ವಗಳು. ಇವು ವೇದಗಳ ಕೊನೆಯ ಭಾಗಗಳಲ್ಲ, ವೇದಗಳ ಅಂತಿಮಧ್ಯೇಯಗಳು.

ತತ್ತ್ವಜ್ಞಾನಾತ್ಮಕಗಳಾದ ಉಚ್ಚತಮ ವಿಚಾರಗಳು ಬ್ರಾಹ್ಮಣ ಭಾಗದ ಪ್ರಚಾರಕ್ಕಿಂತ ಮುಂಚಿತವಾಗಿಯೇ ಸುಪ್ರಸಿದ್ಧವಾಗಿದ್ದವು. ಆ ಕಾಲದ ತತ್ತ್ವಜ್ಞಾನಿಗಳು (ಬ್ರಹ್ಮವಾದಿಗಳು) ತಮ್ಮ ಮತವನ್ನು ಪ್ರಸಾರ ಮಾಡಿದ್ದುದರ ಬಗ್ಗೆ ಋಗಾದಿಸಂಹಿತೆಗಳಲ್ಲಿರುವ ತತ್ತ್ವಜ್ಞಾನಾತ್ಮಕಗಳಾದ ಕೆಲವು ಸೂಕ್ತಗಳೇ ಸಾಕ್ಷಿಯಾಗಿವೆ. ಇದರಿಂದ, ಯಜ್ಞಶಾಸ್ತ್ರ (ಬ್ರಾಹ್ಮಣ) ಗಳ ಪ್ರಗತಿಕಾಲದಲ್ಲಿಯು ಕೂಡಾ ತಾತ್ತ್ವಿಕ ವಿಚಾರದ ಹೆಚ್ಚಳವಿದ್ದಿತೆಂದು ಹೇಳಬಹುದಾಗಿದೆ.

ಪ್ರವೃತ್ತಿ ಧರ್ಮನಿರತರಾದ ಒಂದು ವರ್ಗದ ಜನರು ತಮ್ಮ ಪ್ರವೃತ್ತಿ ಧರ್ಮಪರವಾದ ಯಜ್ಞಶಾಸ್ತ್ರದಲ್ಲಿ ಪ್ರಗತಿಯನ್ನು ಪಡೆಯುತ್ತಿರುವಾಗ ನಿವೃತ್ತಿ ಧರ್ಮಪರಾಯಣರಾದ ಇನ್ನೊಂದು ವರ್ಗದ ಜನರು ಸಮಸ್ತ ಜೀವಿಗಳ ಅಂತಿಮಧ್ಯೇಯಕ್ಕೆ ಮುಖ್ಯ ಸಾಧನವಾದ ಅಧ್ಯಾತ್ಮವಿದ್ಯೆಯ (ಪರಾವಿದ್ಯೆಯ) ಉಚ್ಚತಮವಾದ ವಿಚಾರ ಪ್ರಗತಿಯಲ್ಲಿ ತೊಡಗಿದ್ದರು. 'ಅಂದರೆ' ಈ ಶಿವಜ್ಞಾನಿಗಳು ಬಹಿರಂಗ ಯಾಜ್ಞಿಕ ಕ್ರಿಯೆಗಳಿಂದ ವಿಶೇಷವಾಗಿ ಅಲಿಪ್ತರಾಗಿದ್ದು ರಹಸ್ಯ ವಿದ್ಯೆಯ ಪ್ರಸಾರಕರಾಗಿದ್ದರು. ಸೋಮ-ಕ್ಷೀರ-ದಧಿ-ಘೃತ-ಪಶು-ಹಿರಣ್ಯಾದ್ಯನೇಕ ಪದಾರ್ಥಗಳ ಸಮರ್ಪಣಪೂರ್ವಕವಾಗಿ ಎಷ್ಟೋ ದಿವಸಗಳ ವರೆಗೆ ಇಂದ್ರನೇ ಮೊದಲಾದ ಹಲವು ದೇವತೆಗಳನ್ನು ಕಷ್ಟಪಟ್ಟು ಆರಾಧಿಸುವುದರಿಂದ ಕೊನೆಗೆ ನಮಗೆ ಲಭಿಸುವ ಫಲವಾದರೂ ಎಂತಹುದು ? ಇಂದ್ರನೆಂದರೆ ಆದಾವನು ? ನಿಜವಾದ ದೇವರು ಒಬ್ಬನೇ ಇರುವನಾದರೆ ಇಂದ್ರನು, ಅಗ್ನಿಯು, ವರುಣನು, ಎಂಬ ಹೆಸರಿನ ಹಲವು ದೇವತೆಗಳನ್ನು ಆರಾ

ಧಿಸಬೇಕೆಂಬ ಹಂಬಲವೇಕೆ ? ಎಂಬ ಈ ವಿಧವಾದ ಅನೇಕ ಸಂಶಯಾತ್ಮಕ ಕಲ್ಪನೆಗಳು ಯಾಜ್ಞಿಕ ವರ್ಗದ ಕೆಲವರ ಮನಸ್ಸಿನಲ್ಲಿ ತಲೆದೋರಿದಾಗಲೇ ಪರಾವಿದ್ಯಾಪ್ರಸಾರಕರು ಅವರಿಗೆ ನಿಜವಾದ ದೇವರೆಂದರೆ ಯಾವನು ? ಸರ್ವರಲ್ಲಿಯೂ ಆತ್ಮರೂಪದಿಂದ ಬೆಳಗುವ ಚೈತನ್ಯಕ್ಕೂ ಆ ದೇವರಿಗೂ ಸಂಬಂಧವೇನಾದರೂ ಇರುವುದೋ ? ಸರ್ವಾತ್ಮರೂಪನಾದ ಆ ದೇವರನ್ನು ಹೇಗೆ ಆರಾಧಿಸಬೇಕು ? ಹಾಗೆ ಆರಾಧಿಸುವುದರಿಂದ ಎಂತಹ ಫಲವು ಲಭಿಸುವುದು ? ಎಂಬ ಈ ಮುಂತಾದ ವಿಷಯಗಳೇ ಮುಖ್ಯವಾಗಿ ಉಳ್ಳ ತಾತ್ತ್ವಿಕ ವಿಚಾರದ ಮರ್ಮವನ್ನು ಮನವರಿಕೆಮಾಡಿಕೊಟ್ಟು ಅಪ್ರಾಕೃತಧರ್ಮಾಚರಣೆಗಳನ್ನು ಬೋಧಿಸಿದರು. ಈ ಪ್ರಕಾರವಾದ ಅವರ ಉಪದೇಶಕ್ಕೆ ಕಿವಿಗೊಟ್ಟವರಲ್ಲಿ ಆ ಕಾಲದ ಯಾಜ್ಞಿಕ ಬ್ರಾಹ್ಮಣರೂ ಪ್ರಸಿದ್ಧರಾದ ಕ್ಷತ್ರಿಯರೂ ಪ್ರಮುಖರಾಗಿರುವರು. ಹಾಗೂ ಗಾರ್ಗಿಯು ಮೊದಲಾದ ಸ್ತ್ರೀಯರು ಸಹ ಪ್ರಮುಖ ಬ್ರಹ್ಮವಾದಿನಿಯರಲ್ಲಿ ಪರಿಗಣಿಸಲ್ಪಡುವರು. ಆದರೂ ಯಜ್ಞಶಾಸ್ತ್ರಪ್ರವರ್ತಕರೂ ತಮ್ಮ ಯಾಜ್ಞಿಕ ಕ್ರಿಯೆಗಳ ಪ್ರತಿಷ್ಠೆಗಾಗಿ ಹೆಣಗಾಡುತ್ತಲೇ ಇದ್ದರು. ಅವರಲ್ಲಿ ಶಾಕಲ್ಯ ಮೊದಲಾದವರು ಮುಖಂಡರು ಇದ್ದರೇನಾಯಿತು ? ಒಮ್ಮೆ ಜನರ ಮನಸ್ಸಿನಲ್ಲಿ ಅಭೀಷ್ಟ ಸ್ವರೂಪದ ಯಾಥಾತ್ಮ್ಯವನ್ನರಿತುಕೊಳ್ಳಬೇಕೆಂಬ ಕುತೂಹಲವು ಅಧಿಕವಾಗಿ ಮುಂದುವರಿದರೆ ಅದನ್ನು ತಡೆಯಲು ಯಾರಿಂದಲೂ ಆಗದು. ಹೀಗೆ ತತ್ತ್ವಜ್ಞಾನದ ಜಿಜ್ಞಾಸೆಯು ತಾತ್ಕಾಲೀನ ಜನರಲ್ಲಿ ದಿನದಿನಕ್ಕೆ ಹೆಚ್ಚಾಗಿ ಪರಿಣಮಿಸುವಂತೆ ಸರ್ವತೋಮುಖವಾಗಿ ಪ್ರಯತ್ನ ಮಾಡಿದವರೆಂದರೆ ಆತ್ಮಯಾಜಿಗಳೇ ಅಲ್ಲದೆ ಇನ್ನಾರು ? ಇವರ ಅಪ್ರಾಕೃತಧರ್ಮೋಪದೇಶದ ಪ್ರಾಬಲ್ಯದಿಂದ ಆ ಕಾಲದಲ್ಲಿ ಮಹತ್ತರವಾದ ಕ್ರಾಂತಿಯು ಆಯಿತೆಂದು ಹೇಳಬಹುದು. ದೇಹಕ್ಕಿಂತಲೂ ಆತ್ಮನು ಬೇರೆಯಾಗಿದ್ದಾನೆ; ಸರ್ವಾತ್ಮರೂ ಪರಬ್ರಹ್ಮಾಭಿದ ಪರಶಿವನ ಅಂಶೀಭೂತರು. ಆತ್ಮನು ತನ್ನ ಮೂಲ ಸ್ವರೂಪವಾದ ಶಿವತ್ವಾಭಿವ್ಯಕ್ತಿಯಿಂದೆ ಮುಕ್ತನಾಗುವನು; ಅದಕ್ಕಾಗಿ ಜ್ಞಾನ, ಧ್ಯಾನ, ವ್ರತ, ಪೂಜೆ, ಭಕ್ತಿ ಎಂಬಿವು ಆವಶ್ಯಕವಾದವು; ಎಂಬ ಮುಂತಾದ ತತ್ತ್ವಜ್ಞಾನ ವಿಷಯಕವಾಗಿ ಸ್ವಾನುಭವ ಸಿದ್ಧವೂ ನಿಶ್ಚಿತವೂ ಆದ ವಿಚಾರಗಳನ್ನು ವೈದಿಕವಾಙ್ಮಯಮೂಲಕವಾಗಿ ಪ್ರಸಾರ ಮಾಡಿದ ಅಧ್ಯಾತ್ಮವಿದ್ಯೆಯ ಆದ್ಯಪ್ರವರ್ತಕರು ಅಯಾಜ್ಞಿಕ ವರ್ಗದ ಬ್ರಾಹ್ಮಣರೇ ಎಂಬುದು ನಿರ್ವಿವಾದ ಸಿದ್ಧವು.

ಈ ಆಧ್ಯಾತ್ಮವಿದ್ಯೆಯು 'ರಹಸ್ಯವಿದ್ಯೆ'ಯೆಂದೂ, 'ಉಪನಿಷದ್' ಎಂದೂ, 'ಶಿವಜೀವೈಕ್ಯಮಹಾಬೋಧಸಂಪ್ರದಾಯಪ್ರವರ್ತಕ ಶಾಸ್ತ್ರ' ವೆಂದೂ ಹೇಳಲ್ಪಡುವುದು. ಉಪನಿಷದ್ಗ್ರಂಥಗಳಲ್ಲಿಯೂ 'ಇತಿ ರಹಸ್ಯಮ್' 'ಇತ್ಯುಪನಿಷದ್' ಎಂಬ ಶಬ್ದಗಳು ಅಲ್ಲಲ್ಲಿ ಪ್ರಯೋಗಿಸಲ್ಪಟ್ಟಿವೆ. ಇಂತಪ್ಪ ರಹಸ್ಯವಿದ್ಯೆಯನ್ನು ಅನಧಿಕಾರಿಗಳಿಗೆ ಉಪದೇಶಿಸಕೂಡದೆಂಬರ್ಥಸೂಚಕವಾಕ್ಯಗಳಾದರೂ ಉಪನಿಷತ್ತುಗಳಲ್ಲಿವೆ. ಛಾಂದೋಗ್ಯದಲ್ಲಿ (೩-೧೧).

**ಇದಂ ವಾವ ತಜ್ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರಬ್ರೂಯಾತ್ ಪ್ರಣಾಯ್ಯಾಯ ವಾನ್ತೇವಾಸಿನೇ ॥೫॥**

**ನಾನ್ಯಸ್ಮೈ ಕಸ್ಮೈಚನ ಯದ್ಯಪ್ಯಸ್ಮಾ ಇವಮಾದ್ಭಿಃ ಪರಿಗೃಹೀತಾಂ ಧನಸ್ಯ ಪೂರ್ಣಾಂ ದದ್ಯಾದೇತದೇವ ತತೋಭೂಯ ಇತ್ಯೇತದೇವ ತತೋಭೂಯ ಇತಿ ॥೬॥**

ಈ ಶಿವಜ್ಞಾನವನ್ನು ತಂದೆಯು ತನ್ನ ಹಿರಿಯ ಮಗನಿಗೆ ಅಥವಾ ವಿಶ್ವಾಸವುಳ್ಳ ವಿದ್ಯಾರ್ಥಿಗೆ (ಶಿಷ್ಯನಿಗೆ) ಉಪದೇಶಿಸತಕ್ಕದ್ದು; ಅನಧಿಕಾರಿಯಾದ ಬೇರೆ ಯಾವನಾದರೊಬ್ಬನು ನಾನಾರತ್ನಗಳುಳ್ಳದ್ದೂ, ಜಲಪರಿವೇಷ್ಟಿತವೂ ಆದ ವಸುಂಧರೆಯನ್ನೇ ಅರ್ಪಣಮಾಡಿದರೂ ಅವನಿಗೆ ಉಪದೇಶಿಸಕೂಡದು. ಎಂಬುದಾಗಿ ಹೇಳಲ್ಪಟ್ಟಿದೆ. ಯೋಗಜಾಗಮದಲ್ಲಿಯೂ ಇದೇ ಅಭಿಪ್ರಾಯಾನುಸಾರವಾದ ವಚನವಿದೆ.

**ಭಕ್ತಸ್ಯೈವಾತ್ಮಶಿಷ್ಯಸ್ಯ ವಿರಕ್ತಸ್ಯ ಮಹಾಮತೇಃ ।**
**ಗುರುಣಾ ಜ್ಞಾನಿನಾ ದೇಯಮಾನಂದರಸ ನಿರ್ಭರಮ್ ॥**

ಶಿವಜ್ಞಾನಿಯಾದ ಆಚಾರ್ಯನು ತನ್ನಲ್ಲಿ ಭಕ್ತಿವಿಶ್ವಾಸವುಳ್ಳವನೂ ವಿರಕ್ತನೂ ನಿರ್ಮಲಾಂತಃಕರಣನೂ ಆದ ಶಿಷ್ಯನಿಗೆ ಸ್ವಾತ್ಮಾನಂದರಸಾನುಭವೈಕಸಾಧನವಾದ ರಹಸ್ಯವಿದ್ಯಾರೂಪಶಾಸ್ತ್ರವನ್ನು ಉಪದೇಶಿಸತಕ್ಕದ್ದು. ಶ್ರೀ ರೇಣುಕಭಗವತ್ಪಾದರೂ— **ಪರೀಕ್ಷಿತೇಭ್ಯೋ ದಾತವ್ಯಂ ಶಿಷ್ಯೇಭ್ಯೋ ನಾನ್ಯಥಾ ಕ್ವಚಿತ್ ।'** ಎಂದು ಅಗಸ್ತ್ಯನಿಗೆ ಆಜ್ಞಾಪಿಸಿದ್ದಾರೆ.

ಈ ಹಿಂದೆ ನಾವು ನಿರೂಪಿಸಿರುವಂತೆ, ಗುರುಗೃಹದಲ್ಲಿ ಎಷ್ಟೋ ವರ್ಷಗಳ ವರೆಗೆ ವಾಸಮಾಡಿದ ವಿದ್ಯಾರ್ಥಿಗಳಿಗಾದರೂ ಈ ರಹಸ್ಯವಿದ್ಯೆಯನ್ನು ಗುರುಗಳು ಅವರಿಗೆ ಕೊನೆಗೆ ಉಪದೇಶಿಸುತ್ತಿದ್ದರೆಂಬ

ಸಂಗತಿಯನ್ನು ನಾವು ಪರ್ಯಾಲೋಚಿಸಿದರೆ, ಸಂಹಿತೆ-ಬ್ರಾಹ್ಮಣ-ಆರಣ್ಯಕ-ಉಪನಿಷದ್ ಎಂಬ ವೇದಭಾಗಗಳಲ್ಲಿ ಗುರುಗಳು ವಿದ್ಯಾರ್ಥಿಗಳ ಬುದ್ಧಿತಾರತಮ್ಯಾನುಗುಣವಾಗಿ ಆ ಆ ಕಾಲಕ್ಕೆ ತಕ್ಕ ಆ ಆ ವೇದ ಭಾಗವನ್ನು ಕಲಿಸುತ್ತಿದ್ದರೆಂಬುದು ಸಿದ್ಧವಾಗುವುದು, ಆ ಕ್ರಮವನ್ನನುಸರಿಸಿಯೇ ಬರೆದಿಡಲ್ಪಟ್ಟ ಅಧ್ಯಾಪನೆಯ ಸರಣಿಯುಳ್ಳ ಹಳೆಯ ಕೈಬರೆಹದ ಓಲೆಗಳಲ್ಲಿರುವ ವೈದಿಕ ವಾಙ್ಮಯದಲ್ಲಿ ಆರಣ್ಯಕೋಪನಿಷತ್ತುಗಳು ಕೊನೆಯ ಭಾಗದಲ್ಲಿರುವುವು. ಇದನ್ನು ಕಂಡು ವಿಭ್ರಾಂತರಾದ ಕೆಲವರು ಪೂರ್ವಾಪರ ವಿಚಾರವಿಲ್ಲದೆ, ಸಂಹಿತಾಬ್ರಾಹ್ಮಣಗಳು ಮೊದಲಿನವೆಂದೂ ಆರಣ್ಯಕೋಪನಿಷತ್ತುಗಳು ಹಿಂದಿನಿಂದ ಹುಟ್ಟಿದವುಗಳೆಂದೂ ನುಡಿವರು. ಇನ್ನು ಬೇರೆ ಬೇರೆಯಾಗಿರುವ ಬ್ರಾಹ್ಮಣಗ್ರಂಥಗಳು ಬೇರೆ ಬೇರೆಯಾದ ಒಂದೊಂದು ಸಂಹಿತೆಗೆ ಸಂಬಂಧಿಸಿದವುಗಳಾಗಿರುವಂತೆ, ಆರಣ್ಯಕೋಪನಿಷತ್ತುಗಳಾದರೂ ಒಂದೊಂದು ಬ್ರಾಹ್ಮಣ ಗ್ರಂಥಕ್ಕೆ ಸಂಬಂಧಪಟ್ಟವುಗಳಾಗಿರುವುದಕ್ಕೆ ಆ ಆ ಶಾಖಾನುವರ್ತನವೇ ಕಾರಣವಾಗಿರುವುದು. ಆದ್ದರಿಂದ, ಆ ಆ ಶಾಖಾವಲಂಬಿಗಳು ತಮ್ಮ ತಮ್ಮ ವೈದಿಕ ವಿಭಾಗಗಳನ್ನು ಅಧ್ಯಯನ ಮಾಡುತ್ತಾರೆ.

ಋಗ್ವೇದಕ್ಕೆ ಸಂಬಂಧಿಸಿದ ಐತರೇಯಬ್ರಾಹ್ಮಣದಲ್ಲಿಯೇ ಐತರೇಯಾರಣ್ಯಕವಿದ್ದು ಅದರಲ್ಲಿಯೇ ಐತರೇಯೋಪನಿಷತ್ತೂ ಸೇರಿಸಲ್ಪಟ್ಟಿದೆ.

ಋಗ್ವೇದದೊಳಗಿನ ಕೌಷೀತಕೀ ಬ್ರಾಹ್ಮಣದ ಕೊನೆಗೆ ಕೌಷೀತಕೀ ಆರಣ್ಯಕವಿರುವುದು. ಅದರದೊಂದು ಭಾಗವೇ ಕೌಷೀತಕ್ಯುಪನಿಷತ್ತು.

ಕೃಷ್ಣಯಜುರ್ವೇದದಲ್ಲಿ (ತೈತ್ತಿರೀಯಸಂಹಿತೆಯಲ್ಲಿ) ತೈತ್ತಿರೀಯ ಬ್ರಾಹ್ಮಣದ ಮುಂದೆ ತೈತ್ತಿರೀಯಾರಣ್ಯಕವಿದ್ದು, ಅದರ ಕೊನೆಯಲ್ಲಿ ತೈತ್ತಿರೀಯೋಪನಿಷತ್ತೂ, ಮಹಾನಾರಾಯಣೋಪನಿಷತ್ತೂ ಇವೆ. ಮತ್ತು ಕಾಠಕ, ಶ್ವೇತಾಶ್ವತರ, ಮೈತ್ರಾಯಣೀಯ, ಕಾಲಾಗ್ನಿರುದ್ರ, ರುದ್ರ ಹೃದಯ, ಕೈವಲ್ಯ, ಪಂಚಬ್ರಹ್ಮವೆಂಬ ಉಪನಿಷತ್ತುಗಳಾದರೂ ಆ ಆ ಶಾಖೆಗಳ ಪ್ರವಿಭಕ್ತರೂಪಗಳಾಗಿರುತ್ತವೆ.

ಶುಕ್ಲಯಜುರ್ವೇದದ (ವಾಜಸನೇಯಿ ಮಾಧ್ಯಂದಿನ ಸಂಹಿತೆಯ) ೪೦ನೆಯ ಅಧ್ಯಾಯವೆಲ್ಲವೂ 'ಈಶ' ಉಪನಿಷತ್ತು. ಇದೇ ಸಂಹಿತೆಗೆ

ಸಂಬಂಧಪಟ್ಟ ಶತಪಥಬ್ರಾಹ್ಮಣದ ೧೪ನೆಯ ಕಾಂಡದ ಮೊದಲನೆಯ ಏಕತೃತೀಯಾಂಶಭಾಗವು ಆರಣ್ಯಕವೆನಿಸುವುದು; ಈ ಕಾಂಡದ ಕೊನೆಯ ಭಾಗವೆಲ್ಲ ಬೃಹದಾರಣ್ಯಕೋಪನಿಷತ್ತು.

ಸಾಮವೇದದ ತಾಂಡ್ಯಬ್ರಾಹ್ಮಣಕ್ಕೆ ಅಂಗಭೂತವಾದ ಆರಣ್ಯಕದ ಕೊನೆಯಲ್ಲಿಯೇ ಛಾಂದೋಗ್ಯೋಪನಿಷತ್ತಿರುವುದು. ಮತ್ತು ಜೈಮಿನೀಯ ಉಪನಿಷದ್ಬ್ರಾಹ್ಮಣವೆಂಬುದೇ ಸಾಮವೇದದ ಜೈಮಿನೀಯ ಅಥವಾ ತಲವಕಾರ ಶಾಖೆಯ ಒಂದು ಆರಣ್ಯಕವಾಗಿರುವುದು. ಅದರ ಎರಡನಯ ಭಾಗಕ್ಕೆ ಕೇನೋಪನಿಷತ್ತು ಅಥವಾ ತಲವಕಾರೋಪನಿಷತ್ತು ಎಂದೂ ಹೇಳುತ್ತಾರೆ. ಮತ್ತು ರುದ್ರಾಕ್ಷಜಾಬಾಲ ಮೊದಲಾದ ಇನ್ನು ಕೆಲವು ಉಪನಿಷತ್ತುಗಳೂ ಸಾಮವೇದದ ಬೇರೆ ಬೇರೆ ಶಾಖೆಗಳ ಪ್ರವಿಭಕ್ತರೂಪವಾದುವೆಂದು ಪ್ರಸಿದ್ಧವಾಗಿವೆ.

ಅಥರ್ವವೇದದ ಬೇರೆ ಬೇರೆ ಶಾಖೆಗಳಿಗೆ ಸಂಬಂಧಿಸಿದ ಮುಂಡಕ, ಮಾಂಡೂಕ್ಯ, ಪ್ರಶ್ನ, ಬೃಹಜ್ಜಾಬಾಲ, ಭಸ್ಮಜಾಬಾಲ ಮೊದಲಾದ ಉಪನಿಷತ್ತುಗಳಾಗಿರುತ್ತವೆ.

ಈ ಮೇಲೆ ಉಲ್ಲೇಖಿಸಲ್ಪಟ್ಟ ಉಪನಿಷತ್ತುಗಳಲ್ಲದೆ ಇನ್ನೂ ಎಷ್ಟೋ ಉಪನಿಷತ್ತುಗಳಿರುವುವೆಂದು ಕೆಲವರು ಹೇಳುತ್ತಾರೆ. ಅವರ ಹೇಳುವಿಕೆಯ ಪ್ರಕಾರ ಆ ಎಲ್ಲ ಉಪನಿಷತ್ತುಗಳನ್ನು ಲೆಕ್ಕಮಾಡಿದರೆ ಅವು ೧೦೦-೧೨೫ ಕ್ಕಿಂತ ಮೇಲ್ಪಟ್ಟು ಆಗುವುವು. ಮುಂಬಯಿ ನಿರ್ಣಯಸಾಗರ ಮುದ್ರಣಾಲಯದೊಡೆಯರು ೧೦೮ ಉಪನಿಷತ್ತುಗಳನ್ನೊಳಗೊಂಡ ಪುಸ್ತಕವೊಂದನ್ನು ಪ್ರಸಿದ್ಧಪಡಿಸಿರುವರು. ಪುಣೆಯ ಆನಂದಾಶ್ರಮ ಸಂಸ್ಕೃತ ಗ್ರಂಥಮಾಲೆಯಲ್ಲಿ ೩೨ ಉಪನಿಷತ್ತುಗಳ ಸಮುಚ್ಚಯವೂ ಪೋಣಿಸಲ್ಪಟ್ಟಿದೆ. ಮದ್ರಾಸ ಅಡಿಯಾರ್ ಪುಸ್ತಕಾಲಯಾಧ್ಯಕ್ಷರಾದ ಅ. ಮಹಾದೇವಶಾಸ್ತ್ರಿಗಳವರು ಅಷ್ಟೋತ್ತರಶತೋಪನಿಷದಂತರ್ಗತಗಳಾದ ಹದಿನೈದು ಶೈವೋಪನಿಷತ್ತುಗಳನ್ನು ಮುದ್ರಣಮಾಡಿಸಿದ್ದಾರೆ. ಆದರೆ, ಈ ಮೇಲೆ ತೋರಿಸಲ್ಪಟ್ಟ ಎಲ್ಲ ಉಪನಿಷತ್ತುಗಳಲ್ಲಿಯೂ ಹತ್ತೇ ಮುಖ್ಯವಾದುವೆಂದು ಕೆಲವರ ಅಭಿಪ್ರಾಯವಿದೆ. ಅವು ಈಶ, ಕೇನ, ಕಠ, ಪ್ರಶ್ನ, ಮುಂಡ ಮಾಂಡೂಕ್ಯ, ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯ ಎಂಬುದಾಗಿವೆ.

ಈಗ ನಾವು 'ಉಪನಿಷದ್' ಎಂಬ ಶಬ್ದದ ಅರ್ಥವೇನೆಂಬುದನ್ನು ನೋಡುವಾ! ವಿಶ್ಲಥಿತವಾಗುವಿಕೆ, ಹೋಗುವಿಕೆ, ನಾಶವನ್ನು ಹೊಂದು

ಏಕೆ ಅಥವಾ ನಾಶಗೊಳಿಸುವಿಕೆ ಎಂಬರ್ಥಗಳುಳ್ಳ 'ಸದ್' ಎಂಬ ಧಾತು ವಿಗೆ ಉಪ+ನಿ ಎಂಬ ಉಪಸರ್ಗಗಳ ಜೋಡಣೆಯಾಗಿ ಉಪ+ನಿ+ಸದ್ =ಉಪನಿಷದ್, ಎಂಬ ಶಬ್ದಸಿದ್ಧಿಯಾಗಿದೆ. 'ಸೀದತಿ' ಎಂಬುದು 'ಸದ್' ಧಾತುವಿನ ವರ್ತಮಾನಕಾಲದ ಕ್ರಿಯಾಪದವು 'ಸದ್' ಎಂಬ ಧಾತು ವಿಗೆ ಬೇರೆಬೇರೆ ಉಪಸರ್ಗಗಳು ಹತ್ತಿ ಬೇರೆಬೇರೆ ಅರ್ಥಗಳು ಸಂಭವಿ ಸುತ್ತವೆ. ಉಪನಿಷತ್ತುಗಳೊಳಗೇ ಅನೇಕ ಸ್ಥಳಗಳಲ್ಲಿ ಕಾಣಬರುವ 'ಉಪನಿಷದ್' ಎಂಬ ಈ ಶಬ್ದಕ್ಕೆ ಅಲ್ಲಿ ಬ್ರಹ್ಮವಿದ್ಯೆಯು, ರಹಸ್ಯ ವಿದ್ಯೆಯು, ತತ್ವ (ಶಿವ) ಜ್ಞಾನವು ಎಂಬರ್ಥಗಳು ವಿವಕ್ಷಿತಗಳಾಗಿವೆ. ಆದ್ದರಿಂದ 'ಉಪನಿಷದ್' ಎಂಬ ಶಬ್ದದ ಮೂಲ ಅರ್ಥವು—ರಹಸ್ಯ ವಿದ್ಯೆಯ (ಶಾಂಭವಜ್ಞಾನದ) ಉಪದೇಶವನ್ನು ಪಡೆಯುವದಕ್ಕೋಸ್ಕರ ವಿದ್ಯಾರ್ಥಿಯು (ಮುಮುಕ್ಷು ಪುರುಷನು) ಆಚಾರ್ಯನ ಬಳಿಯಲ್ಲಿ ಕುಳಿತುಕೊಳ್ಳುವುದು, ಎಂಬುದಾಗಿಯೇ ಉಪನಿಷತ್ತುಗಳಿಗಾದರೂ ಅಭಿ ಪ್ರೇತವಾಗಿರುವುದೆಂದು ಸಿದ್ಧವಾಗುವದು.

ಈ ಸೂಪನಿಷದರ್ಥವೆನಿಸುವ ರಹಸ್ಯವಿದ್ಯೆಯಾದರೋ ಆಗಮಸಂಹಿ ತೆಗಳ ಉತ್ತರಭಾಗದಲ್ಲಿಯೂ ಉತ್ತಮವಾಗಿ ಬಿತ್ತರಿಸಲ್ಪಟ್ಟಿದೆ. ಅದು ಕಾರಣವೇ, ಶಿವಜ್ಞಾನಸಿದ್ಧಕುಲಸಾರ್ವಭೌಮನು (ಸಿ. ಶಿ. ೫-೧೩) —**ವೇದಸಿದ್ಧಾನ್ತಯೋರೈಕ್ಯಮೇಕಾರ್ಥಪ್ರತಿಪಾದನಾತ್ ।** ಎಂದು ಪದೇಶಿಸಿದ್ದಾನೆ.

ಭಾರತೀಯರ ಪ್ರಾಚೀನ ತತ್ವಜ್ಞಾನವಿಷಯಕವಾಗಿ ವಿಚಾರ ಮಾಡತೊಡಗಲು, ಮೊದಲು ಆ ರಹಸ್ಯ ವಿದ್ಯಾವಾಙ್ಮಯಗಳೇ ನಮ್ಮ ಕಣ್ಣೆದುರಿಗೆ ಬಂದು ನಿಲ್ಲುತ್ತವೆ. ಅವುಗಳಲ್ಲಿರುವ ಅತೀಂದ್ರಿಯ ವಿಷಯ ಗಳನ್ನೂ ಆ ವಿಷಯಗಳಿಗೆ ಸಂಬಂಧಪಟ್ಟ ಅಬಾಧಿತ ನಿಯಮಗ ಳನ್ನೂ ಪರಿಭಾವಿಸಿದರೆ, ಅವುಗಳ ಪ್ರವರ್ತಕರು ಮನುಷ್ಯರಲ್ಲಿ ಪರಿಗ ಣಿಸಲ್ಪಡತಕ್ಕವರಲ್ಲವೆಂಬುದನ್ನು ಸುವಿಚಾರಪರರಾದ ಯಾವ ಸಚೇತ ನರು ತಾನೇ ಒಪ್ಪಲಿಕ್ಕಿಲ್ಲ? ಆ ರಹಸ್ಯವಿದ್ಯಾವಾಙ್ಮಯಗಳೇ ಜಗತ್ತಿನಲ್ಲಿ ರುವ ಸರ್ವ ಅರ್ವಾಚೀನ ತತ್ತ್ವಶಾಸ್ತ್ರಗಳ ಉಗಮಸ್ಥಾನವಾಗಿವೆ. ಎಂದು ಹೇಳುವುದು ಅತಿಶಯೋಕ್ತಿಯಲ್ಲ. ತತ್ತ್ವಜ್ಞಾನನಿಧಿಗಳೆಂದು ಪ್ರಸಿದ್ಧಗಳಾ ಗಿರತಕ್ಕ ಆ ವಾಙ್ಮಯಗಳಲ್ಲಿನ ಕೆಲವು ಅಂಶಮಾತ್ರವನ್ನು ಮುಖ್ಯವಾದ ಬಂಡವಾಳವನ್ನಾಗಿ ಪರಿಗ್ರಹಿಸಿದರು. ಹಾಗೂ ಅದರ ಅನುಸಂಧಾನವೆಂಬ ವ್ಯವಹಾರದಿಂದ ಅಧ್ಯಾತ್ಮವಿಚಾರದಲ್ಲಿ ಊರ್ಜಿತಾವಸ್ಥೆಯನ್ನು ಪಡೆದ

ತನ್ಮೂಲಕ ತಾವು ಕೃತಾರ್ಥರಾದುದಲ್ಲದೆ, ಅನ್ಯರ ಆತ್ಮೋನ್ನತಿಗೂ ಕೂಡ ಸಹಾಯಕರೆನಿಸಿದರು. ಇಂತಹ ಸಂತರು ಹಿಂದೆ ಎಷ್ಟೋ ಜನರಾಗಿದ್ದಾರೆ. ಈಗ ಅಂಥವರು ಸ್ವಲ್ಪ ಜನರಾದರೂ ಸಿಕ್ಕಬಹುದು; ಮುಂದಾದರೂ ಅಂಥವರು ಆಗದಿರಲಿಕ್ಕಿಲ್ಲವೆಂದು ಊಹಿಸಲವಕಾಶವಿದೆ. ಆದರೆ ಇವನ್ನೆಲ್ಲ ಲಕ್ಷೀಕರಿಸದೆ ಕೆಲವರು ವೇದಾಗಮಗಳಲ್ಲಿನ ಅಲ್ಪಸ್ವಲ್ಪ ವಾಕ್ಯಗಳನ್ನು ಅಪಾಂಗದೃಷ್ಟಿಯಿಂದವಲೋಕಿಸಿ ಅವನ್ನು ಸಹ ತಮ್ಮ ಸ್ವಾಭಾವಿಕ ಸಂಸ್ಕಾರೋಪೇತಚಿತ್ತವೃತ್ತಿಗನುಗುಣವಾಗಿ ತಲೆ ಕೆಳಗೆ ಮಾಡಿ ಹಿಡಿದು ಮುಖ್ಯ ವಿಷಯವನ್ನೇ ವಿಪರ್ಯಾಸಗೊಳಿಸುವರು. ಹಾಗು ಭ್ರಮೆಯಿಂದ ಬ್ರಹ್ಮಾಮೃತಧಾರೆಯನ್ನು ಕರೆವ ಪರಾವಿದ್ಯಾಪಾಗ್ರೂಪಧೇನುಗಳಿಗೂ ಕೂಡ ಹಸಿದ ಹುಲಿಗಳೆಂದು ಹೆಸರಿಡುವರು, ಅಪಕ್ವಮತಿಗಳು ಬೆದರಿ ವೇದಾಗಮ ಬಾಹ್ಯರಾಗುವಹಾಗೆ ಜನರನ್ನು ವ್ಯಾಮೋಹಗೊಳಿಸತಕ್ಕ ವಚನನಿಚಯವನ್ನು ಬೀರುವರು. ಈ ವಿಧವಾದ ಕಾರ್ಯಕವನ್ನು ಸಾಗಿಸುವವರಿಗೆ ಧಾರ್ಮಿಕನ್ಯಾಯವಾದಿಗಳೆನ್ನಬಹುದೇನು ? ಒಂದು ಮತದ ಸಾಧಾರಣಲಕ್ಷಣಲಕ್ಷಿತರಾದ ಮಾತ್ರದಿಂದೇ ಅವರು ತಾವೂ ಧರ್ಮ ಬೋಧಕರೇ ಎಂದು ಮುಂದುವರಿಯುವ ರೀತಿಯು **'ಆಹೂತೇಷು ವಿಹಂಗಮೇಷು ಮಶಕೋ ನಾಯಾನ್ಪುರೋವಾರ್ಯತೆ'** ಎಂಬ ಗಾದೆಗನುಸಾರವಾಗಿರುವುದಲ್ಲವೇ ? ಇರಲಿ ! ಮುಂದಾದರೂ ಆ ಚಲುವರಿಗೆ :—

**ಯದಾ ಕಿಂಚಿದ್ಜ್ಞೋಽಹಂ ದ್ವಿಪಇವ ಮದಾಂಧಃ ಸಮಭವಂ**
**ತದಾ ಸರ್ವಜ್ಞೋಽಸ್ಮೀತ್ಯಭವದವಲಿಪ್ತಂ ಮಮ ಮನಃ ।**
**ಯದಾ ಕಿಂಚಿತ್ಕಿಂಚಿದ್ಬುಧಜನಸಕಾಶಾದವ ಗತಂ**
**ತದಾಮೂರ್ಖೋಽಸ್ಮೀತಿ ಜ್ವರ ಇವ ಮದೋಮೇ ವ್ಯಪಗತಃ ॥**

ಎಂಬ ಪದ್ಯದ ಅರ್ಥವು ಅನುಭವಗಮ್ಯವಾಗಿ, ಆಗಾದರೂ ಅವರು— **'ಶುದ್ಧಬೀಜಾಪೋಟಿ। ಫಳೇ ರಸಾಳ ಗೋಮಟೀ।'** ಎಂಬಂತೆ ಶುದ್ಧ ವಿಚಾರಗಳ ಪ್ರತಿಜ್ಞಾರೂಪ ಬೀಜಗಳನ್ನು ತಮ್ಮ ತೀಕ್ಷ್ಣಜ್ಞಾನತಂತುಗಳಲ್ಲಿ ಊರಿಕೊಳ್ಳಲಿ; ಇದು ಅವರ ಅದೃಷ್ಟದಲ್ಲಿಯೇ ಇಲ್ಲವೆನಿಸಿದರೆ ತಮ್ಮ ಪೀಳಿಗೆಯ ಹಸನಾದ ಹೊಸಮಿದುಳಿನಲ್ಲಾದರೂ ಊರಿದರೆ ಸಾಕು !

ಈ ಎರಡನೆಯ ಉಲ್ಲಾಸದಲ್ಲಿ ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳ ಸ್ವರೂಪವು ಸಂಕ್ಷೇಪವಾಗಿ ಪ್ರತಿಪಾದಿಸಲ್ಪಟ್ಟುದಾಯ್ತುಷ್ಟೇ !

ಅವುಗಳಲ್ಲಿ ವೈದಿಕ ಆರ್ಯರ ಉಚ್ಚ ವಿಚಾರಗಳುಳ್ಳ ಉಪನಿಷತ್ತುಗಳಾದರೋ ಸರ್ವಮುಮುಕ್ಷುಜನೋಪಾದೇಯಗಳಾದುದರಿಂದ ಅವುಗಳ ತಾತ್ಪರ್ಯವನ್ನು ಈಗ ನಾವು ಬರೆಯಬಹುದಾಗಿದ್ದಿತು. ಹಾಗೂ ವಾಚಕರಾದರೂ ಸನಾತನ ಆರ್ಯರ ಅಧ್ಯಾತ್ಮಿಕಜ್ಞಾನಾಮೃತಾಸ್ವಾದನೆಯಲ್ಲಿ ಉತ್ಕಂಠಿತರಾಗಿರುವುದೂ ಸಾಹಜಿಕವೇ ಸರಿ. ಆದರೂ ವೇದದ ಪೂರ್ವಕಾಂಡಕ್ಕೆ ಸಂಬಂಧಪಟ್ಟ ವಿಷಯಗಳನ್ನು ಕೆಲವಟ್ಟಿಗಾದರೂ ವಿವೇಚಿಸದೆ ಒಮ್ಮೆಗೇ ಉತ್ತರಕಾಂಡದ ಉಚ್ಚವಿಚಾರಗಳಿಗೆ ಕೈನೀಡುವುದು ಅಕ್ರಮವೆಂದು ಯೋಚಿಸಿದ ನಮ್ಮ ಮನಸ್ಸು ಆ ಕಾರ್ಯದಲ್ಲಿ ತೊಡಗಲು ಈಗ ಮಾತ್ರ ಉತ್ಸಾಹವಿಲ್ಲದುದಾಗಿದೆ.

ಈ ಹಿಂದೆ ನಿರೂಪಿಸಲ್ಪಟ್ಟ ಆ ಆ ವೇದಕ್ಕೆ ಸಂಬಂಧಿಸಿದ ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳನ್ನು ವಾಚಕರ ತಿಳುವಳಿಕೆಯ ಸೌಲಭ್ಯಕ್ಕೋಸುಗ ನಿರ್ದೇಶ ಮಾತ್ರವಾಗಿ ಈ ಕೆಳಗೆ ತೋರಿಸುತ್ತೇವೆ—

ಋಗ್ವೇದಕ್ಕೆ— ಐತರೇಯಬ್ರಾಹ್ಮಣ; ಕೌಷೀತಕೀಬ್ರಾಹ್ಮಣ; ಎಂಬಿವೆರಡು. (ಸಾಂಖ್ಯಾಯನ, ಶಾಂಖಾಯನ ಶಬ್ದಗಳು ಕೌಷೀತಕಿಯ ಪರ್ಯಾಯಗಳು)

ಕೃ. ಯ. ವೇ. ಕ್ಕೆ.— ತೈತ್ತಿರೀಯ ಬ್ರಾಹ್ಮಣವು.

ಶು. ಯ. ವೇ. ಕ್ಕೆ.— ಶತಪಥ; ಕಾಣ್ವ; ಎಂಬಿವೆರಡು ಬ್ರಾಹ್ಮಣಗಳು.

ಸಾ. ವೇ. ಕ್ಕೆ.— ಪಂಚವಿಂಶ; ಷಡ್ವಿಂಶ; ಸಾಮವಿಧಾನ; ಆರ್ಷೇಯ; ಮನ್ತ್ರ; ದೇವತಾಧ್ಯಾಯ; ವಂಶ; ಸಂಹಿತೋಪನಿಷದ್; ಬ್ರಾ; ಎಂಬೀ ಬ್ರಾಹ್ಮಣಗಳು.

ಅ. ವೇ. ಕ್ಕೆ.— ಗೋಪಥಬ್ರಾಹ್ಮಣವು; ಎಂಬೀ ರೀತಿಯಾಗಿ ಆ ಆ ವೇದಕ್ಕೆ ಸಂಬಂಧಿಸಿದ ಬ್ರಾಹ್ಮಣಗಳೆಂದು ತಿಳಿಯತಕ್ಕದ್ದು.

ಋ. ವೇ. ಕ್ಕೆ.— ಐತರೇಯಾರಣ್ಯಕ; ಸಾಂಖ್ಯಾಯನಾರಣ್ಯಕ.

ಕೃ. ಯ. ವೇ.— ತೈತ್ತರೀಯಾರಣ್ಯಕ.

ಶು. ಯ. ವೇ.— ಬೃಹದಾರಣ್ಯಕ; (ಅಥವಾ) ಮಾಧ್ಯಂದಿನ ಶಾಖೆಯ ಬ್ರಾಹ್ಮಣದೊಳಗಣ ೧೪ನೆಯ ಕಾಂಡವು; (ಅ) ಕಾಣ್ವಶಾಖೆಯ ಬ್ರಾಹ್ಮಣದೊಳಗಣ ೧೭ನೆಯ ಕಾಂಡವು.

ಋ. ವೇ.— ಐತರೇಯೋಪನಿಷದ್; ಕೌಷೀತಕ್ಯುಪನಿಷದ್.

ಕೃ. ಯ. ವೇ.— ತೈತ್ತಿರೀಯೋಪನಿಷದ್; ಮೈತ್ರಾಯಣ್ಯುಪನಿಷದ್; ಕಠೋಪನಿಷದ್; ಶ್ವೇತಾಶ್ವತರೋಪನಿಷದ್; ಕಾಲಾಗ್ನಿರುದ್ರ; ರುದ್ರಹೃದಯ; ಕೈವಲ್ಯ; ಪಂಚಬ್ರಹ್ಮ.

ಶು. ಯ. ವೇ.— ಈಶಾವಾಸ್ಯೋಪನಿಷದ್; ಬೃಹದಾರಣ್ಯಕೋಪನಿಷದ್.

ಸಾ. ವೇ.— ಛಾಂದೋಗ್ಯೋಪನಿಷದ್; ಕೇನೋಪನಿಷದ್.

ಅ. ವೇ.— ಪ್ರಶ್ನ; ಮಾಂಡೂಕ್ಯ; ಮುಂಡಕ; ಬೃಹಜ್ಜಾಬಾಲ; ಬಸ್ಮಜಾಬಾಲ ಎಂಬಿವು ಉಪನಿಷತ್ತುಗಳು.

ಎರಡನೆಯ ಉಲ್ಲಾಸವು ಮುಗಿದುದು.



# ವೇದಪರಿಚಯು.

## ಮೂರನೆಯ ಉಲ್ಲಾಸವು.

ಹಿಂದಿನ ಪ್ರಕರಣಗಳಲ್ಲಿ ಸಪ್ರಮಾಣವಾಗಿ ಪ್ರತಿಪಾದಿಸಲ್ಪಟ್ಟಿರುವ ಮೇರೆಗೆ ವೇದರೂಪವಾದ ಶಾಸ್ತ್ರವು ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು ಎಂಬೀ ವಿಭಾಗಾತ್ಮಕವಾಗಿರುವಂತೆ ಅಂಗೋಪಾಂಗ ರೂಪ ದಿಂದಲೂ ವಿಸ್ತೃತವಾಗಿರುವುದು. ಯಾಜ್ಞವಲ್ಕ್ಯನು (೧-೩)

**ಪುರಾಣನ್ಯಾಯಮೀಮಾಂಸಾಧರ್ಮಶಾಸ್ತ್ರಾಂಗಮಿಶ್ರಿತಾಃ ।**
**ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ ॥**

ಎಂಬುದಾಗಿ ಹೇಳುತ್ತಾನೆ. ಅವನ ಈ ಹೇಳಿಕೆಯಂತೆ ಋಗಾದಿ ನಾಲ್ಕು ವೇದಗಳೂ, ಶಿಕ್ಷಾ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ಕಲ್ಪವೆಂಬ ಆರು ಅಂಗಗಳೂ; ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರವೆಂಬ ನಾಲ್ಕು ಉಪಾಂಗಗಳೂ ಕೂಡಿ ವೇದವಿದ್ಯೆಯು ಹದಿನಾಲ್ಕುವಿಧವಾಗಿದೆ. ಈ ಹದಿನಾಲ್ಕು ವಿದ್ಯೆಗಳೂ ಪುರುಷಾರ್ಥಸಾಧಕಗಳಾಗಿವೆ. ಮತ್ತು ಋಗಾದಿ ನಾಲ್ಕು ವೇದಗಳ ಉಪವೇದಗಳೂ ಅನುಕ್ರಮವಾಗಿ ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥವೇದ (ಅರ್ಥಶಾಸ್ತ್ರ) ವೆಂಬುದಾಗಿ ಪ್ರಸಿದ್ಧವಾಗಿರುತ್ತವೆ. ಮೇಲಿನ ಹದಿನಾಲ್ಕು ವಿದ್ಯೆಗಳೊಡನೆ ಈ ನಾಲ್ಕು ಉಪವೇದಗಳನ್ನೂ ಸೇರಿಸಿದರೆ ಹದಿನೆಂಟು ವಿದ್ಯೆಗಳಾಗುವುವು.

ಹದಿನಾಲ್ಕು ವಿದ್ಯೆಗಳಲ್ಲಿ ಪರಿಗಣಿಸಲ್ಪಡುವ ಪುರಾಣಗಳಲ್ಲಿ ಉಪಪುರಾಣಗಳೂ ನ್ಯಾಯದಲ್ಲಿ ವೈಶೇಷಿಕಶಾಸ್ತ್ರವೂ, ಮೀಮಾಂಸೆಯಲ್ಲಿ ಬ್ರಹ್ಮಮೀಮಾಂಸೆಯೂ, ಧರ್ಮಶಾಸ್ತ್ರದಲ್ಲಿ (ಕಾಮಿಕಾದ್ಯಾಗಮಸಮುಚ್ಚಯದಲ್ಲಿ) ಮನ್ವಾದಿಸ್ಮೃತಿಗಳೂ ಅಂತರ್ಭೂತಗಳಾಗಿವೆ. "ಧರ್ಮಶಾಸ್ತ್ರ" ವೆಂದರೆ ಶಿವೋಪದಿಷ್ಟವಾದ ಆಗಮಶಾಸ್ತ್ರವು. ಮನ್ವಾದಿಸ್ಮೃತಿಗಳು ಇದನ್ನು ಬಹ್ವಂಶವಾಗಿ ಪುರಸ್ಕರಿಸಿಯೇ ಧರ್ಮಾಚರಣೆಗಳನ್ನು ಪ್ರತಿಪಾದಿಸುತ್ತವೆ. ಅದುಕಾರಣವೇ ಸರ್ವತಂತ್ರಸ್ವತಂತ್ರರು ಆಗಮಸಂಹಿತೆಗಳಿಗೂ ಸ್ಮೃತಿಗ್ರಂಥಗಳಿಗೂ ಸಬಲದುರ್ಬಲನ್ಯಾಯವಿರುವುದೆಂದು ಹೇಳುತ್ತಾರೆ. ಕಲ್ಪಗ್ರಂಥಗಳಲ್ಲಿಯೂ ಧರ್ಮಾಚರಣೆಗಳು ಪ್ರತಿಪಾದಿಸಲ್ಪಡು

ವುದರಿಂದ ಅವುಗಳಿಗೂ ಧರ್ಮಶಾಸ್ತ್ರಗಳೆನ್ನಬಹುದಾದರೂ, ಮೇಲೆ ಕಾಣಿಸಿದ ಹದಿನಾಲ್ಕು ವಿದ್ಯೆಗಳ ಪರಿಗಣನೆಯಲ್ಲಿ ಮುಖ್ಯವಾದ ಧರ್ಮ ಶಾಸ್ತ್ರವೆಂದರೆ ಶಿವೋಪದಿಷ್ಟ ಧರ್ಮಸಂಹಿತೆಯೆಂಬ ಅಭಿಪ್ರಾಯದಿಂದ 'ಧರ್ಮಶಾಸ್ತ್ರ' ವೆಂಬುದು ಪೃಥಕ್ಕಾಗಿ ತೋರಿಸಲ್ಪಟ್ಟಿದೆ. ಹಾಗೂ, ಚಾತುರ್ವರ್ಣ್ಯಧರ್ಮಗಳಿಗೆ ಸಂಬಂಧಿಸಿದ ಸರ್ವವಿಧವಿಧಾನಗಳಿಗೂ ಮೂಲಭೂತಗಳಾದ ವಚನಗಳು ಕಾಮಿಕಾದ್ಯಾಗಮಸಂಹಿತೆಗಳಲ್ಲಿವೆ. ವೇದಾಗಮಸಂಹಿತೆಗಳ ಪ್ರವರ್ತಕರಲ್ಲಿ ಮುಖಂಡನಾದ ಶ್ರೀ ನಂದಿಕೇಶ್ವರನು ಶಿವಧರ್ಮಸಂಹಿತೆಯಲ್ಲಿ ಹೀಗೆ ನಿರೂಪಿಸುತ್ತಾನೆ:—

ಸ ಯೋನಿಃ ಸರ್ವವಿದ್ಯಾನಾಂ ಪುರುಷಃ ಕಾರಣಂಪರಃ।
ನಿಃಶ್ವಾಸತುಲ್ಯಮುದ್ಭೂತಾನ್ನಿಖಿಲಾನ್ನಿಗಮಾನಪಿ ॥
ಸಾವಶೇಷಾನ್ ಕ್ರಿಯಾಭಾಗೈರವೇದ್ಯಾನ್ಪಶುಸಮ್ಮಿತೇಃ।
ವಿಚಿನ್ತ್ಯ ಧರ್ಮಶಾಸ್ತ್ರಂ ತಚ್ಚೈವಮಾಖ್ಯಾತವಾನ್ಪುನಃ।
ಅನನ್ತವೇದಸನ್ದಿಷ್ಟಸರ್ವಾರ್ಥಸ್ಯೋಪಬೃಂಹಣಮ್ ॥
ಕಾಮಿಕಾದಿಪ್ರಭೇದೇನ ಭಿನ್ನಮೇಕಾರ್ಥಶೋಭಿತಮ್।
ತತ್ತತ್ಕಾಲಾವತೀರ್ಣೈಸ್ತು ಮುನಿಭಿಃ ಶಂಸಿತವ್ರತೈಃ ॥
ಶಾಸ್ತ್ರಂ ತದನುಸ್ಮೃತ್ಯೈವ ಕಥ್ಯತೇ ಧರ್ಮಸಂಗ್ರಹಃ ॥
ಆದಿತಃ ಶೈವಮೇವಾಹುರಾರ್ಷಂ ತದನುಸಾರತಃ ॥
ಧರ್ಮಶಾಸ್ತ್ರಮಿತಿ ಪ್ರಾಜ್ಞಾಃ ಶಾಸ್ತ್ರನಿರ್ಣಯತತ್ಪರಾಃ ॥

[ ಸರ್ವವಿದ್ಯಾಧಿಪತಿಯಾದ ಪರಮೇಶ್ವರನು ನಿಃಶ್ವಾಸದಂತೆ ಆವಿರ್ಭ ವಿಸಿದ ಋಗಾದಿವೇದಗಳಲ್ಲಿ ಕ್ರಿಯಾಕಾಂಡವು (ಸರ್ವಜೀವಾನುಷ್ಠೇಯ ಕ್ರಿಯಾಭಾಗವು) ಸಾಂಗವಾಗಿಲ್ಲವೆಂದೂ, ಆ ವೇದಗಳ ಅರ್ಥವು ಜೀವ ಕೋಟಿಗೆ ಸರಿಯಾಗಿ ತಿಳಿಯದೆಂದೂ ಯೋಚಿಸಿ ನಿಶ್ಶೇಷ ಕ್ರಿಯಾಭಾಗ ವನ್ನು ತಿಳಿಸುವಂತಹದೂ, ಸಮಸ್ತವೇದಾರ್ಥದ ಉಪಬೃಂಹಣರೂಪ ವಾದುದೂ, ಏಕಾರ್ಥಬೋಧಕಗಳಾದ ಕಾಮಿಕಾದ್ಯನೇಕ ಸಂಹಿತೆಗಳ ನ್ನೊಳಗೊಂಡುದೂ ಆದ ಆಗಮಶಾಸ್ತ್ರವೆಂಬ ಧರ್ಮಶಾಸ್ತ್ರವನ್ನು ಬೋಧಿ ಸಿದನು. ಬಳಿಕ ಆ ಆ ಕಾಲದಲ್ಲಿ ಅವತರಿಸಿದ ಮುನಿವರ್ಯರಿಂದ ಶಿವಾ ಗಮವೆಂಬ ಮೂಲಧರ್ಮಶಾಸ್ತ್ರವನ್ನನುಸರಿಸಿಯೇ ಧರ್ಮಸಂಗ್ರಹವು ಹೇಳಲ್ಪಡುವುದು. ಅನಾದಿಧರ್ಮಶಾಸ್ತ್ರವೆಂದರೆ ಶಿವಸಂಹಿತಾಭಾಗವೆಂದೇ ಸಿದ್ಧವಾಗುವುದು. ಇದನ್ನು ಆಧಾರವಾಗಿಟ್ಟುಕೊಂಡೇ ಸ್ಮೃತಿಸಮೂ ಹವು ಧರ್ಮಶಾಸ್ತ್ರವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆಯೆಂದು ಶಾಸ್ತ್ರ ನಿರ್ಣಯತತ್ಪರರಾದ ಜಾಣರು ಅಭಿಪ್ರಾಯಪಡುತ್ತಾರೆ. ]

ಎಂಬೀ ಪ್ರಮಾಣವಚನವು ಚತುರ್ದಶವಿದ್ಯೆಗಳಲ್ಲಿ ಪರಿಗಣಿಸಲ್ಪಡುವ ಮೂಲಧರ್ಮಶಾಸ್ತ್ರವೆಂದರೆ ಮುಖ್ಯವಾಗಿ ಶಿವಾಗಮವೆಂದೇ ಉದ್ಘೋಷಿಸುವುದು ಇನ್ನು, ಉಪವೇದಗಳೆನಿಸುವ ಆಯುರ್ವೇದಾದಿಗಳ ಸ್ವರೂಪವು ಹೀಗಿರುವುದು.

**ಆಯುರ್ವೇದವು:—** ಇದರಲ್ಲಿ ಸೂತ್ರ, ಶಾರೀರ, ಐಂದ್ರಿಯ, ಚಿಕಿತ್ಸಾ, ನಿದಾನ, ವಿಮಾನ, ವಿಕಲ್ಪ, ಸಿದ್ಧಿ; ಎಂಬ ಎಂಟುಸ್ಥಾನಗಳು ಕಲ್ಪಿಸಲ್ಪಟ್ಟಿವೆ. ಬ್ರಹ್ಮ, ಪ್ರಜಾಪತಿ, ಅಶ್ವಿನೀಕುಮಾರ, ಧನ್ವಂತರಿ, ಇಂದ್ರ, ಭರದ್ವಾಜ, ಆತ್ರೇಯ, ಅಗ್ನಿ, ವೇಶ್ಯ ಮೊದಲಾದವರಿಂದ ಈ ವೇದವು ಪರಂಪರೆವಿಡಿದು ಬೋಧಿಸಲ್ಪಟ್ಟುದಾಗಿ ಚರಕನಿಂದ ಸಂಕ್ಷಿಪ್ತಗೊಳಿಸಲ್ಪಟ್ಟಿದೆ. ಸುಶ್ರುತನು ಇದರ ಪಂಚಸ್ಥಾನಾತ್ಮಕಗ್ರಂಥವನ್ನು ಪೃಥಕ್ಕಾಗಿ ಬರೆದಿದ್ದಾನೆ. ಈ ಆಯುರ್ವೇದೀಯ ವಿಷಯವೇ ವಾಗ್ಭಟ ವೃಷಭರಾಜೀಯಾದಿ ಗ್ರಂಥಗಳಲ್ಲಿ ವಿಷದೀಕೃತವಾಗಿರುತ್ತದೆ. ಈಗಣ ಡಾಕ್ಟರರವರೀದ ನೂತನ ಸಂಶೋಧನರೂಪವಾದುದೆಂದು ಬಣ್ಣಿಸಲ್ಪಡುವ ಮೂತ್ರವನ್ನು ದಹಿಸಿ ಪರೀಕ್ಷಿಸುವ ಪದ್ಧತಿಯೆಂಬುದು ವೃಷಭರಾಜೀಯಗ್ರಂಥಕಾರನಿಗೆ ಹಳೆಯದು ! ಕಾಮಶಾಸ್ತ್ರವೂ ಆಯುರ್ವೇದದಲ್ಲಿಯೇ ಅಂತರ್ಭೂತವಾಗಿರುವುದು. ಸುಶ್ರುತನು 'ವಾಜೀಕರಣ' ಪ್ರಕರಣವನ್ನು ನಿರೂಪಿಸಿದ್ದಾನೆ. ವಾತ್ಸ್ಯಾಯನನಿಂದ ಪಂಚಾಧ್ಯಾಯಾತ್ಮಕವಾದ ಕಾಮಶಾಸ್ತ್ರವು ರಚಿಸಲ್ಪಟ್ಟಿದೆ. ರತಿರಹಸ್ಯ, ಅನಂಗರಂಗ ಮುಂತಾದ ಗ್ರಂಥಗಳೂ ಕಾಮಶಾಸ್ತ್ರವನ್ನು ವಿವರಿಸತಕ್ಕವುಗಳಾಗಿವೆ. ಶಾಸ್ತ್ರೋದ್ದೀಪಿತ ವಿಷಯೋಪಭೋಗವಾದರೂ ಅಂದರೆ ಕಾಮಶಾಸ್ತ್ರಾನುಸಾರವಾಗಿ ವಿಷಯುಗಳನ್ನುಪಭೋಗಿಸಿದರೂ ಅದು ಕೊನೆಗೆ ದುಃಖದಲ್ಲಿಯೇ ಪರ್ಯವಸಾನ ಹೊಂದುವುದೆಂಬ ಸಂಗತಿಯು ಅನುಭವಸಿದ್ಧವಾಗಿ ವಿಷಯುಗಳಲ್ಲಿ ವಿರಾಗವೃತ್ತಿಯುಂಟಾಗುವಿಕೆಯೇ ಕಾಮಶಾಸ್ತ್ರದ ಅಂತಿಮಧ್ಯೇಯವು. ರೋಗವೂ, ರೋಗಸಾಧನವೂ, ರೋಗನಿವೃತ್ತಿಯೂ, ಅದಕ್ಕುಪಾಯವೂ ಎಂಬಿವುಗಳ ಜ್ಞಾನವಾಗುವಿಕೆಯೇ ಚಿಕಿತ್ಸಾಶಾಸ್ತ್ರದ ಪ್ರಯೋಜನವು. ಮನುಷ್ಯನು ಅಭ್ಯುದಯವನ್ನಾಗಲಿ ನಿಃಶ್ರೇಯಸ್ಸನ್ನಾಗಲಿ ಸಂಪಾದಿಸಲು ಅವನ ಶರೀರವೇ ಮುಖ್ಯಸಾಧನವು, ಅದಾದರೋ ಆರೋಗ್ಯವುಳ್ಳದ್ದಾಗಿದ್ದರಲ್ಲವೇ ? ಅದುಕಾರಣವೇ ದೇಹಸ್ವಸ್ಥತೆಗಾಗಿ ಚಿಕಿತ್ಸಾಶಾಸ್ತ್ರದ ಆವಶ್ಯಕತೆಯುಂಟು.

**ಧನುರ್ವೇದವು:—** ಈ ಎರಡನೆಯ ಉಪವೇದದ ಪ್ರವರ್ತಕನು ವಿಶ್ವಾಮಿತ್ರನು. ಇದರಲ್ಲಿ ದೀಕ್ಷೆ, ಸಂಗ್ರಹ, ಸಿದ್ಧಿ. ಪ್ರಯೋಗಗಳೆಂಬ ನಾಲ್ಕುಪಾದಗಳಿವೆ. ಮೊದಲನೆಯ ದೀಕ್ಷಾಪಾದದಲ್ಲಿ ಆಯುಧಗಳ ಲಕ್ಷಣವೂ, ಅಧಿಕಾರಿಗಳ ಸ್ವರೂಪವೂ ಮುಂತಾದ ವಿಷಯಗಳು ನಿರೂಪಿಸಲ್ಪಟ್ಟಿವೆ. ಆಯುಧಗಳು ಮುಕ್ತ, ಅಮುಕ್ತ, ಮುಕ್ತಾಮುಕ್ತ, ಯಂತ್ರಮುಕ್ತವೆಂಬುದಾಗಿ ನಾಲ್ಕು ವಿಧಗಳಾಗಿರುತ್ತವೆ. ಅವುಗಳಲ್ಲಿ ಚಕ್ರಾದಿಗಳು ಮುಕ್ತಾಯುಧಗಳೆಂದೂ, ಖಡ್ಗಾದಿಗಳು ಅಮುಕ್ತಗಳೆಂದೂ ಶಲ್ಯವೇ ಮುಂತಾದ ಅವಾಂತರಾಯುಧಗಳು ಮುಕ್ತಾಮುಕ್ತಗಳೆಂದೂ ಶರಾದಿಗಳು ಯಂತ್ರಮುಕ್ತಗಳೆಂದೂ ಹೇಳಲ್ಪಡುತ್ತವೆ. ಮುಕ್ತಾಯುಧಕ್ಕೆ ಅಸ್ತ್ರವೆಂದೂ, ಅಮುಕ್ತಾಯುಧಕ್ಕೆ ಶಸ್ತ್ರವೆಂದೂ ಬೇರೆ ಹೆಸರುಗಳಿವೆ. ಅಸ್ತ್ರಗಳು ಬ್ರಾಹ್ಮ, ವೈಷ್ಣವ, ಪಾಶುಪತ, ಪ್ರಾಜಾಪತ್ಯ, ಆಗ್ನೇಯವೆಂಬೀ ಮೊದಲಾದ ಭೇದಗಳಿಂದ ಅನೇಕ ಪ್ರಕಾರವಾಗಿವೆ. ಆ ಆ ದೇವತೆಗಳಿಂದಲೂ, ಮಂತ್ರಗಳಿಂದಲೂ ಯುಕ್ತಗಳಾದ ಈ ನಾಲ್ಕು ವಿಧವಾದ ಆಯುಧಗಳಲ್ಲಿ ಕ್ಷತ್ರಿಯಕುಮಾರರಾಗಲಿ, ಅವರ ಅನುಯಾಯಿಗಳಾದ ಇತರರಾಗಲಿ, ಯಾರು ಅಧಿಕಾರಿಗಳಾಗಿರುವರೋ ಅವರೆಲ್ಲರೂ ಪದಾತಿಗಳೂ, ರಥಾರೂಢರೂ, ಗಜಾರೂಢರೂ, ಅಶ್ವಾರೂಢರೂ ಎಂಬುದಾಗಿ ನಾಲ್ಕು ತೆರನಾಗಿರುತ್ತಾರೆ. ಈ ವೇದದ ಮೊದಲನೆಯ ಪಾದದಲ್ಲಿಯೇ ದೀಕ್ಷೆ, ಅಭಿಷೇಕ, ಶಕುನ, ಮಂಗಲ, ಕರಣಮೊದಲಾದ ವಿಷಯಗಳೂ ಇವೆ. ಎರಡನೆಯ ಪಾದದಲ್ಲಿ ಸರ್ವವಿಶಿಷ್ಟ ಶಸ್ತ್ರಗಳ ಹಾಗೂ ಆಚಾರ್ಯರ ಲಕ್ಷಣಗಳೂ. ಆಚಾರ್ಯೋಪ ಸನ್ನತಿಯ ಪದ್ಧತಿಯೂ ಶಸ್ತ್ರಾಸ್ತ್ರಗಳ ಸಂಗ್ರಹಮಾರ್ಗವೂ ಮುಂತಾದ ವಿಷಯಗಳು ಪ್ರದರ್ಶಿತಗಳಾಗಿವೆ. ಮೂರನೆಯ ಪಾದದಲ್ಲಿ ಗುರುಸಂಪ್ರದಾಯದಿಂದ ಸಿದ್ಧಗಳಾದ ವಿಶಿಷ್ಟಶಸ್ತ್ರಾಸ್ತ್ರಗಳನ್ನು ಪುನಃ ಪುನಃ ಅಭ್ಯಾಸಿಸುವಿಕೆಯೂ, ಮಂತ್ರಾಧಿ ದೇವತೆಗಳ ಸಿದ್ಧೀಕರಣವೂ ಮೊದಲಾದ ವಿಷಯಗಳಿವೆ. ನಾಲ್ಕನೆಯ ಪಾದದಲ್ಲಿ ದೇವತಾರ್ಚನೆ ಅಭ್ಯಾಸ ಮುಂತಾದುದರಿಂದ ಸಿದ್ಧಿಸಲ್ಪಟ್ಟ ಬೇರೆ ಬೇರೆ ಅಸ್ತ್ರಗಳ ಪ್ರಯೋಗಗಳು ತೋರಿಸಲ್ಪಟ್ಟಿವೆ. ದುಷ್ಟರನ್ನು ದಂಡಿಸುವುದೂ, ಕಳ್ಳರೂ, ಕಾಕುಜನರೂ ಮುಂತಾದವರಿಂದ ಬಾಧೆಯುಂಟಾಗದ ಹಾಗೆ ಪ್ರಜೆಗಳನ್ನು ಸಂರಕ್ಷಿಸುವುದೂ ಎಂಬುದೇ ಧನುರ್ವೇದದ ಪ್ರಯೋಜನವು. ವಿಶ್ವಾಮಿತ್ರನು ತನಗೆ ಮಹೇಶ್ವರ ಪ್ರಜಾಪತಿ ಮೊದಲಾದ ಗುರುಪರಂಪ

ರೆಯಿಂದ ಪ್ರಾಪ್ತವಾದ ಈ ಧನುರ್ವೇದವನ್ನು ಕ್ಷತ್ರಿಯರ ಉಪಯೋಗ ಕ್ಕೋಸ್ಕರ ರಚಿಸಿವನು. ಈ ವೇದಾಂತರ್ಗತಗಳಾದ ಎಷ್ಟೋ ವಿಷಯ ಗಳು ಶುಕ್ರನೀತಿ ಬೃಹಸ್ಪತಿತಂತ್ರ ಮೊದಲಾದ ರಾಜನೀತಿಶಾಸ್ತ್ರಗ್ರಂಥ ಗಳಲ್ಲಿ ವಿಶದೀಕರಿಸಲ್ಪಟ್ಟಿವೆ.

**ಗಾಂಧರ್ವವೇದವು :—** ಇದರ ಪ್ರವರ್ತಕನು ಭರತಮುನಿಯು. ಇದು ಗೀತ ವಾದ್ಯ, ನೃತ್ಯವೆಂಬ ಭೇದಗಳಿಂದ ಅನೇಕ ಪ್ರಕಾರವಾ ಗಿದೆ. ದೇವತೆಗಳಾರಾಧನೆಯೂ, ನಿರ್ವಿಕಲ್ಪಸಮಾಧಿ ಮುಂತಾದುದೂ ಸಿದ್ಧಿಸುವುದೇ ಈ ವೇದದ ಪ್ರಯೋಜನವು. ಈ ವೇದವನ್ನನುಸರಿಸಿಯೇ ಸಂಗೀತವಿದ್ಯೆಯನ್ನು ಬೋಧಿಸತಕ್ಕ 'ಸಂಗೀತರತ್ನಾಕರ' ಮೊದಲಾದ ಗ್ರಂಥಗಳು ವಿಪುಲವಾಗಿವೆ.

**ಅರ್ಥವೇದವು:—** ಇದು ಬಹುವಿಧವಾದ ಅರ್ಥಶಾಸ್ತ್ರರೂಪವಾ ಗಿರುವುದು. ವ್ಯಾವಹಾರಿಕ ನೀತಿಶಾಸ್ತ್ರವೂ, ಅಶ್ವಶಾಸ್ತ್ರವೂ, ಶಿಲ್ಪಶಾಸ್ತ್ರವೂ, ಸೂಪಶಾಸ್ತ್ರವೂ, ಚತುಃಷಷ್ಟಿಕಲಾಶಾಸ್ತ್ರವೂ ಮೊದಲಾದ ಅನೇಕಶಾಸ್ತ್ರ ಗಳು ಇದರ ಅಂತರ್ಭೂತಗಳಾಗಿವೆ. ಇವುಗಳ ಪ್ರಯೋಜನಭೇದವು ವಿಶೇಷತಃ ವ್ಯಾವಹಾರಿಕ ವಿಷಯಗಳನ್ನೇ ಅನುಲಕ್ಷಿಸಿರುತ್ತದೆ. 'ಕೌಟಿ ಲ್ಯತಂತ್ರ' ವೆಂಬ ಅರ್ಥಶಾಸ್ತ್ರವಾದರೂ ಈ ವೇದವನ್ನನುಸರಿಸಿರುವುದು.

ವೇದವಿದ್ಯಾವಿಸ್ತಾರರರೂಪಗಳಾಗಿರತಕ್ಕ ಹದಿನಾಲ್ಕು ವಿದ್ಯೆಗಳಲ್ಲಿ ಪರಿಗಣಿಸಲ್ಪಡತಕ್ಕ ವೇದದ ಅಂಗೋಪಾಂಗಗಳ ವಿಷಯಕವಾಗಿ ಬರೆ ಯಬೇಕಾದುದು ಪ್ರಾಸಂಗಿಕವಾದುದಷ್ಟೇ! ಅವುಗಳಲ್ಲಿ ಮೊದಲು ಶಿಕ್ಷಾ ಮೊದಲಾದ ಆರು ಅಂಗಗಳ ಸ್ವರೂಪವನ್ನು ವಿವರಿಸಲುಪಕ್ರಮಿಸುತ್ತೇವೆ. ಪಾಣಿನೀಯಶಿಕ್ಷೆಯಲ್ಲಿ ಹೀಗೆ ಹೇಳಲ್ಪಟ್ಟಿರುವುದು.

**ಛನ್ದಃ ಪಾದೌ ತು ವೇದಸ್ಯ ಹಸ್ತೌ ಕಲ್ಪೋಽಥಪಠ್ಯತೇ ।**
**ಜ್ಯೋತಿಷಾಮಯನಂ ಚಕ್ಷುರ್ನಿರುಕ್ತಂ ಶ್ರೋತ್ರಮುಚ್ಯತೇ ॥**
**ಶಿಕ್ಷಾ ಘ್ರಾಣಂತು ವೇದಸ್ಯ ಮುಖಂ ವ್ಯಾಕರಣಂಸ್ಮೃತಮ್ ।**
**ತಸ್ಮಾತ್ಸಾಂಗಮಧೀತ್ಯೈವ ಬ್ರಹ್ಮಲೋಕೇಮಹೀಯತೇ ॥**

ಹೇಗೆ ಮನುಷ್ಯಾದಿ ಪ್ರಾಣಿಗಳ ಬಾಳುವೆಗೋಸ್ಕರ ಕೈ, ಕಾಲು, ಮೂಗು, ಮೋರೆ ಮೊದಲಾದ ಅವಯವಗಳ ಅವಶ್ಯಕತೆಯುಂಟೋ ಹಾಗೆ ವೇದಪುರುಷನಿಗಾದರೂ ಛಂದಸ್ಸು, ಕಲ್ಪ, ಜೋತಿಷ, ನಿರುಕ್ತ, ಶಿಕ್ಷಾ, ವ್ಯಾಕರಣ, ಎಂಬಿವು ಅನುಕ್ರಮವಾಗಿ ಕಾಲು, ಕೈ, ಕಣ್ಣು, ಮೂಗು, ಮೋರೆಯುಂತಿರುತ್ತವೆ. ಶರೀರಕ್ಕೆ ಹಸ್ತಪಾ

ವಾದಿಗಳಂತೆ ಛಂದಸ್ಸು ಮೊದಲಾದ ಅಂಗಗಳು ವೇದದ ಸಾಕ್ಷಾತ್ಸಂಬಂಧಗಳಾಗಿಯೂ ಪುರಾಣಾದ್ಯುಪಾಂಗಗಳು ಅಂಗುಲ್ಯಾದಿಗಳಂತೆ ಪರಂಪರಾಸಂಬಂಧಗಳಾಗಿಯೂ ಇವೆ.

ಪೂರ್ವಕಾಲದಲ್ಲಿ ಶಿಕ್ಷಾದಿಷಡಂಗಗಳು ಬೇರೆಬೇರೆ ವಿಧಗಳಾದ ವಿಶಿಷ್ಟಗ್ರಂಥಗಳೆಂದು ತಿಳಿಯಲ್ಪಡುತ್ತಿರಲಿಲ್ಲ. ವೇದಗಳ ಯಥಾರ್ಥ ಜ್ಞಾನವು ಯಾವ ನ್ಯೂನತೆಯಿಲ್ಲದಂತೆ ಸರಿಯಾಗಿ ಲಭಿಸಬೇಕೆಂಬ ಹೇತುವಿನಿಂದ ವೇದಶಾಲೆಗಳಲ್ಲಿ ಈ ಗ್ರಂಥಗಳನ್ನು ಅಭ್ಯಾಸಿಸುವ ಸಂಪ್ರದಾಯವಿದ್ದಿತು. ಅದುಕಾರಣವೇ ಮುಂಡಕೋಪನಿಷತ್ತಿನಲ್ಲಿ (೧-೧-೫) **"ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋಜ್ಯೋತಿಷಮಿತಿ"** ಎಂಬುದಾಗಿ ಶಿಕ್ಷಾದಿಷಡಂಗಗಳು ನಿರೂಪಿಸಲ್ಪಟ್ಟಿವೆ. ವೇದಕಾಲೀನಗಳಾದ ಈ ಷಡಂಗಗಳು ಮುಂದೆ ಪ್ರತ್ಯೇಕವಾಗಿ ಉಪಗ್ರಂಥಸ್ವರೂಪವನ್ನು ತಳೆದು ವೇದಶಾಲೆಗಳಲ್ಲಿ ಬೇರೆಬೇರೆಯಾಗಿ ಸ್ವತಂತ್ರರೀತಿಯಿಂದ ಪದ್ಧತಿಯನ್ನನುಸರಿಸಿ ಅಭ್ಯಾಸಿಸಲ್ಪಡತಕ್ಕವುಗಳಾದವು.

ವೇದದ ಆರುಅಂಗಗಳಲ್ಲಿ '**ಶಿಕ್ಷಾ**' ಎಂಬುದು ಪ್ರಧಾನಾಂಗವಾಗಿದೆ. ಈ ಅಂಗದ ಅರ್ಥವು ಪೂರ್ವಾಚಾರ್ಯರಿಂದ ಹೀಗೆ ಹೇಳಲ್ಪಟ್ಟಿದೆ. ೧. '**ಹ್ರಸ್ವದೀರ್ಘಾದಿ ವೈದಿಕಸ್ವರೋಚ್ಚಾರಣಪ್ರತಿಪಾದಕಂ ಶಾಸ್ತ್ರಮ್**' ಅಂದರೆ ಹ್ರಸ್ವದೀರ್ಘಾದಿವೈದಿಕಸ್ವರೋಚ್ಚಾರವನ್ನು ಪ್ರತಿಪಾದಿಸುವ ಶಾಸ್ತ್ರವು 'ಶಿಕ್ಷಾ' ಎನಿಸುವುದು. ೨. **ಸ್ಥಾನಾದಿಕಂ ಶಿಕ್ಷ್ಯತೇ ಅನಯಾ ಇತಿಶಿಕ್ಷಾ**' ವರ್ಣಗಳನ್ನು ಉಚ್ಚರಿಸುವಲ್ಲಿ ಮುಖ ಸಂಬಂಧವಾದ ಸ್ಥಾನಗಳನ್ನು ಉಪದೇಶಿಸುವ ಶಾಸ್ತ್ರವು ಶಿಕ್ಷೆಯು. ಸಾರಾಂಶ, ಶಿಕ್ಷಾ ಅಂದರೆ ಸ್ಪಷ್ಟೋಚ್ಚಾರಪೂರ್ವಕವಾಗಿ ಸ್ವರಾಘಾತದೊಡನೆ ಸಂಹಿತೆಯನ್ನು ಪಠಿಸುವುದು. ಈ ಶಿಕ್ಷಾಂಗದಿಂದ ಉದಾತ್ತ, ಅನುದಾತ್ತ, ಸ್ವರಿತ, ಹ್ರಸ್ವ, ದೀರ್ಘ, ಪ್ಲುತ ಮೊದಲಾದ ಧರ್ಮವಿಶಿಷ್ಟವಾದ ಸ್ವರವ್ಯಂಜನಾತ್ಮಕವರ್ಣೋಚ್ಚಾರದ ಪದ್ಧತಿಯು ಅರಿಯಲ್ಪಡುವುದು.

ಈ ವೇದಾಂಗದ ಹೆಸರು ಪ್ರಥಮತಃ ತೈತ್ತಿರೀಯೋಪನಿಷತ್ತಿನಲ್ಲಿಯೇ ನಿರ್ದೇಶಿಸಲ್ಪಟ್ಟಿದೆ. (ತೈ. ೧-೨) ತೈತ್ತಿರೀಯಸಂಹಿತೆಗೆ ಸಂಬಂಧಿಸಿದ ಕಾಂಡತ್ರಯಾತ್ಮಕ ಬ್ರಾಹ್ಮಣಬಾಗದ ಪರಿಶಿಷ್ಟವೆನಿಸುವ ಹತ್ತು ಅಧ್ಯಾಯಗಳುಳ್ಳ ತೈತ್ತಿರೀಯಾರಣ್ಯಕದ ಕೊನೆಯ ೭-೮-೯ ಎಂಬೀ ಮೂರು ಅಧ್ಯಾಯಗಳೇ ತೈತ್ತಿರೀಯೋಪನಿಷತ್ಸಂಜ್ಞಕಗಳಾಗಿವೆ. ಹತ್ತು

ನೆಯ ಅಧ್ಯಾಯವು ಮಹಾನಾರಾಯಣೋಪನಿಷತ್ತೆಂಬುದಾಗಿ ಪ್ರಸಿದ್ಧವಾಗಿರುವುದು. ತೈತ್ತಿರೀಯೋಪನಿಷತ್ತಿನ ಆ ಮೂರು ಅಧ್ಯಾಯಗಳಿಗೂ ಅನುಕ್ರಮವಾಗಿ ಶಿಕ್ಷಾವಲ್ಲೀ, ಬ್ರಹ್ಮಾನಂದವಲ್ಲೀ, ಭೃಗುವಲ್ಲೀ ಎಂಬ ಹೆಸರುಗಳಿವೆ. ವಾಚಕರ ಅವಗಾಹನೆಗಾಗಿ 'ಶಿಕ್ಷಾ' ಶಾಸ್ತ್ರದ ರಹಸ್ಯಾರ್ಥವನ್ನು ತೆರೆದಿಡಲುದ್ಯುಕ್ತರಾದ ನಮಗೆ 'ಶಿಕ್ಷಾವಲ್ಲೀ' ಯ ಸ್ವರೂಪವನ್ನೀಗ ವಿವರಿಸುವುದುಚಿತವಾದುದಷ್ಟೇ!

ತೈತ್ತೀರೀಯೋಪನಿಷತ್ತಿನೊಳಗಿನದೊಂದು ಭಾಗವೇ ಶಿಕ್ಷಾಧ್ಯಾಯವು, ಇದುವೇ 'ಶಿಕ್ಷಾವಲ್ಲಿ' ಎಂದು ಹೇಳಲ್ಪಡುವುದು. ಆದರೆ ವೇದಗಳ ಅಧ್ಯಾಯಗಳಲ್ಲಿ ವಿಭಾಗಿಸಲ್ಪಟ್ಟ ಪ್ರಕರಣಗಳಿಗೆ ಅನುವಾಕಗಳೆನ್ನುತ್ತಾರೆ; ಕಠೋಪನಿಷತ್ತಿನ ಪ್ರತಿಯೊಂದು ಅಧ್ಯಾಯದಲ್ಲಿ ಮೂರು ವಲ್ಲಿಗಳಿವೆ. ಇದರಿಂದ "ವಲ್ಲೀ" ಅಂದರೆ ಅನುವಾಕವೆಂದರಿಯಲ್ಪಡುವುದು. ಹೀಗಿರುತ್ತಿರಲು ಅನೇಕ ಅನುವಾಕಗಳನ್ನೊಳಗೊಂಡ ಶಿಕ್ಷಾಧ್ಯಾಯಕ್ಕೂ 'ವಲ್ಲೀ' ಎಂಬ ಹೆಸರಿರುವುದು ಪ್ರಾಚೀನ ರೂಢಿಗೆ ವಿಲಕ್ಷಣವಾಗಿ ತೋರುವುದಲ್ಲವೇ? ಇನ್ನು, ಪ್ರತಿಯೊಂದು ಉಪನಿಷತ್ತಿನ ಆರಂಭದಲ್ಲಿ ಶಾನ್ತಿಮಂತ್ರವು ಪಠಿಸಲ್ಪಡುವುದು ಸರಿಯಷ್ಟೇ! ಇತರ ಉಪನಿಷತ್ತುಗಳ ಆರಂಭದಲ್ಲಿ ಪಠಿಸಲ್ಪಡುವ ಶಾಂತಿ ಮಂತ್ರಗಳು ಎಲ್ಲಿಯವೋ ಬೇರೆ ತೆಗೆದುಕೊಳ್ಳಲ್ಪಟ್ಟವುಗಳಾಗಿವೆ. ಈ ಶಿಕ್ಷೋಪನಿಷತ್ತಿನ ಆರಂಭದಲ್ಲಿರುವ 'ಶಂ ನೋ ಮಿತ್ರಃ' ಎಂಬ ಶಾಂತಿಮಂತ್ರವೇ ಇದರ (ಶಿಕ್ಷಾಧ್ಯಾಯದ) ಮೊದಲನೆಯ ಅನುವಾಕವೆನಿಸುವುದು. ಒಂದು ಅನುವಾಕರೂಪವೇ ಆಗಿರತಕ್ಕ ಈ ಶಾಂತಿ ಮಂತ್ರವು ಅಧ್ಯಾಯದ ಆರಂಭದಲ್ಲಿಯೂ ಸಮಾಪ್ತಿಯಲ್ಲಿಯೂ ಒಂದೇ ವಿಧವಾಗಿರುವುದು; ಆದರೂ ಕೊನೆಯ ಅನುವಾಕದೊಳಗಿನ ನಾಲ್ಕು ವಾಕ್ಯಗಳು ಬೇರೆ ತೆರನಾಗಿರುತ್ತವೆ. ಹೀಗೆ ಇತರ ಶಾಂತಿಮಂತ್ರಗಳಿಗಿಂತಲೂ ಶಿಕ್ಷಾಧ್ಯಾಯದ ಶಾಂತಿಮಂತ್ರವು ವಿಶೇಷಭಿನ್ನವಾಗಿರುವುದಾಗಿ ತೋರಿಬರುವುದರಿಂದ ಈ ಶಿಕ್ಷಾಧ್ಯಾಯಕ್ಕೆ 'ವಲ್ಲೀ' ಎಂದು ಹೇಳುವುದಕ್ಕಿಂತಲೂ ಪ್ರಪಾಠಕವು ಅಥವಾ ಅಧ್ಯಾಯವು ಎಂದು ಹೆಸರಿಡುವುದು ಅನುಪಪನ್ನವಾದುದಲ್ಲ, ಆದ್ದರಿಂದ ಈಗ ನಾವು 'ಶಿಕ್ಷಾವಲ್ಲೀ' ಎಂದುಲ್ಲೇಖಿಸದೆ 'ಶಿಕ್ಷೋಪನಿಷದ್' ಅಥವಾ 'ಶಿಕ್ಷಾಧ್ಯಾಯ' ವೆಂಬ ಹೆಸರುಗಳನ್ನೇ ಪ್ರತಿಪಾದಿಸುವೆವು.

ಈ ಶಿಕ್ಷಾಧ್ಯಾಯದಲ್ಲಿ ವಿಷಯನಿರೂಪಣವು ಎರಡನೆಯ ಅನುವಾಕದಿಂದಲೇ ಆರಂಭಿಸಲ್ಪಡುವುದು. ಎರಡನೆಯ ಅನುವಾಕದಲ್ಲಿಯೇ ವಾಕ್ಯೋಚ್ಚಾರಣೆಗೆ ಸಂಬಂಧಪಟ್ಟ ವಿಷಯವಿರುವುದು. ಹೇಗೆಂದರೆ—

ಓಂ ಶಿಕ್ಷಾಂ ವ್ಯಾಖ್ಯಾಸ್ಯಾಮಃ ।
ವರ್ಣಃ ಸ್ವರಃ ಮಾತ್ರಾ ಬಲಮ್ ।
ಸಾಮಸನ್ತಾನಃ ಇತ್ಯುಕ್ತಃ ಶಿಕ್ಷಾಧ್ಯಾಯಃ ॥

ಪಠನಶಾಸ್ತ್ರದ ಭಾಗವನ್ನು ನಾವು ಸ್ಪಷ್ಟೀಕರಿಸುವೆವು. ವರ್ಣ, ಸ್ವರ, ಮಾತ್ರೆ, ಪ್ರಯತ್ನ, ಸಮತೆ, ಅಕ್ಷರ ಪರಂಪರೆ; ಎಂಬುದಾಗಿ ಶಿಕ್ಷಾಧ್ಯಾಯವು ಹೇಳಲ್ಪಟ್ಟಿದೆ.

ಅಂದರೆ ವೈದಿಕವಾಕ್ಯಗಳನ್ನು ಪಠಿಸುವಾಗ ಅಕಾರಾದಿವರ್ಣಗಳೂ, ಉದಾತ್ತಾದಿಸ್ವರಗಳೂ, ಆಭ್ಯಂತರಾದಿಪ್ರಯತ್ನಗಳೂ, ಧ್ವನಿಯಸಮತೆಯೂ, ಅಕ್ಷರಗಳ ಪರಂಪರೆಯೂ ಎಂಬಿಷ್ಟು ವಿಷಯಗಳನ್ನು ಸರಿಯಾಗಿ ಉಪಯೋಗಿಸತಕ್ಕದ್ದು. ಅದು ಹೇಗೆಂದರೆ, ವಾಕ್ಯೋಚ್ಚಾರಸಮಯದಲ್ಲಿ ವರ್ಣಗಳ ವ್ಯತ್ಯಾಸವು, ಅಪಸ್ವರವೂ ಮುಂತಾದ ದೋಷಗಳು ಸಂಭವಿಸದಂತೆ ಎಚ್ಚರವಿರಬೇಕಾದುದು. ವೈದಿಕಕಾಲದಲ್ಲಿ ಈಗಿನಂತಹ ಬರವಣಿಗೆಯ ವ್ಯವಹಾರವು ವಿಶೇಷ ಪ್ರಚಾರದಲ್ಲಿದ್ದಿಲ್ಲ, ಅದು ಕಾರಣವೇ ತತ್ಕಾಲೀನ ಜನರು ಉಚ್ಚರಿಸುವಿಕೆಯನ್ನೇ ಹೆಚ್ಚಾಗಿ ಬಳಕೆಯಲ್ಲಿಟ್ಟುಕೊಂಡಿದ್ದರು. ಹಾಗೆ ಉಚ್ಚರಿಸಲ್ಪಡತಕ್ಕ ವೈದಿಕವಾಙ್ಮಯದ ಅಕ್ಷರಗಳನ್ನೂ, ಸ್ವರಾದಿಗಳನ್ನೂ, ವ್ಯತ್ಯಾಸವಿಲ್ಲದಂತೆ ಈ ವರೆಗೆ ಕಾಪಾಡಿಕೊಂಡು ಬಂದವರು ವೈದಿಕಜನಾಂಗದವರೇ ! ಈಗಲೂ ವೈದಿಕವಾಕ್ಯಗಳನ್ನು ಪಠಿಸುವಾಗ ಅಕ್ಷರಗಳ ಕ್ರಮವನ್ನೂ ಸ್ವರಾದಿನಿಯಮಗಳನ್ನೂ ಅನುಸರಿಸುವ ಪದ್ಧತಿಯಲ್ಲಿ ಒಂದು ವಿಧವಾದ ಹೆಚ್ಚಳವಿರುವುದು ಅಪರಿಹಾರ್ಯವಾಗಿದೆ. ಅಕ್ಷರ ಸ್ವರಾದಿ ವಿಷಯಗಳನ್ನು ಈ ಮೇಲೆ ಉಲ್ಲೇಖಿಸಿದ್ದೇವೆ. ಈಗ ಅವುಗಳ ಇಂಗಿತವನ್ನು ವಿವರಿಸುತ್ತೇವೆ.

ಓದುಗರಿಗೆ ವರ್ಣೋಚ್ಚಾರ ಶಿಕ್ಷಣವು ಅವಶ್ಯವಾದುದು. ಯಾವ ವರ್ಣವನ್ನು ಹೇಗೆ ಉಚ್ಚರಿಸಬೇಕೆಂಬ ಪರಿಜ್ಞಾನವಿಲ್ಲದವರು ಓದುಗರೇ ಅಲ್ಲ. ಆದರೆ ಓದುಗರಲ್ಲಿ ಮುಂದಾಳುಗಳೆಂದು ಹೆಸರುವಾಸಿಗಳಾದವರಲ್ಲಿಯೇ ಕೆಲಂಬರು ಅಕ್ಷರಗಳನ್ನು ನುಡಿವಲ್ಲಿ ಮುಗ್ಗರಿಸುತ್ತಲಿರುವುದನ್ನು ಕಂಡರೆ ಎಗ್ಗರಿಗೂ ಎಳನಗೆಯು ! ಅಂತಾಗಲೂ ಆ

ಪಂಡಿತವಕ್ಕಿಗಳು ವರ್ಣೋಚ್ಚಾರಪದ್ಧತಿಯನ್ನು ದುರ್ಲಕ್ಷಿಸುವುದೇ ಕಾರಣವಲ್ಲವೇ ? ಆದ್ದರಿಂದ ಲೌಕಿಕಗ್ರಂಥಗಳನ್ನೋದುವಲ್ಲಿಯೂ, ವ್ಯಾವಹಾರಿಕ ಭಾಷೆಯನ್ನು ನುಡಿವಲ್ಲಿಯೂ ಅಕ್ಷರೋಚ್ಚಾರ ಪದ್ಧತಿಯ ಶಿಕ್ಷಣವು ಉಪಯೋಗವಾಗುತ್ತಿರಲು ವೇದಪಠನದೃಷ್ಟಿಯಿಂದಾದರೋ ಅದು ಅತ್ಯಂತೋಪಯುಕ್ತವಾದುದೆಂಬಲ್ಲಿ ಸಂದೇಹವೇ ಇಲ್ಲ,

ಹಾಗೂ, ಓದುವಲ್ಲಿಯೂ ಮಾತಾಡುವಲ್ಲಿಯೂ ಉಚ್ಚರಿಸಲ್ಪಡತಕ್ಕ ಅಕ್ಷರಗಳ ಅರ್ಥದೊಳಗಿನ ಭಾವವ್ಯಂಜಕಗಳಾದ ಸ್ವರಗಳ ಆವಶ್ಯಕತೆಯುಂಟು. ಈ ಹೇತುವಿನಿಂದೇ ವೈದಿಕಭಾಷೆಯಲ್ಲಿ ಮೇಲೆಯೂ ಕೆಳಗೂ ' ।— ' ಎಂಬ ಸ್ವರಚಿಹ್ನಗಳು ಬರೆಯಲ್ಪಟ್ಟಿರುತ್ತವೆ. ಅಥವಾ ಆ ಸ್ವರಗಳು ತಲೆಯಿಂದಾಗಲಿ ಕೈಯಿಂದಾಗಲಿ ಸನ್ನೆಮಾಡಿತೋರಿಸಲ್ಪಡುತ್ತವೆ; ಅವುಗಳಿಗೇ ಅನುಕ್ರಮವಾಗಿ ಉದಾತ್ತವೂ ಅನುದಾತ್ತವೂ ಎಂಬ ಸಂಜ್ಞೆಗಳಿವೆ. ವ್ಯಾವಹಾರಿಕ ಭಾಷೆಗಳಲ್ಲಿ ಈ ಸಂಜ್ಞೆಗಳನ್ನು ಯಾರೂ ಉಪಯೋಗಿಸುವುದಿಲ್ಲ. ಆದರೂ ಉದಾತ್ತಾನುದಾತ್ತಸ್ವರಗಳು ಅವುಗಳಲ್ಲಿ ಇಲ್ಲವೇ ಇಲ್ಲವೆಂದು ಹೇಳಲಿಕ್ಕಾಗದು. ಪ್ರಶ್ನೆ, ಉದ್ಗಾರ, ಒತ್ತಾಯದಿಂದ ನುಡಿಯುವಿಕೆ ಮುಂತಾದ ಪ್ರಸಂಗಗಳಲ್ಲಿ ಬೇರೆಬೇರೆ ಶಬ್ದಗಳನ್ನು ಉಚ್ಚರಿಸುವಾಗ ಆ ಆ ಶಬ್ದಗಳಿಂದ ಹುಟ್ಟತಕ್ಕ ಧ್ವನಿಗಳಲ್ಲಿ ಈ ಸ್ವರಗಳು ಕೇಳಲ್ಪಡುತ್ತವೆ. ಒಂದೇ ಕನ್ನಡನುಡಿಯು ಅಟ್ಟುಂಬ ಸುಟ್ಟುಂಬ ಬೇರೆಬೇರೆ ನಾಡಿನವರ ಬಾಯಿಂದುಚ್ಚರಿಸಲ್ಪಡುವಾಗ ಧ್ವನಿಯಲ್ಲಿ ತೋರಿಬರುವ ತಳುಕು ಒಂದೇ ತೆರನಾಗಿರುವುದೇ ? ಮತ್ತು ಯಾವ ಶಬ್ದಗಳನ್ನುಚ್ಚರಿಸುವಲ್ಲಿಯೂ ಆ ಶಬ್ದಗಳಲ್ಲಿರುವ ಹ್ರಸ್ವದೀರ್ಘಗಳನ್ನಾದರೂ ಚೆನ್ನಾಗಿ ಉಚ್ಚರಿಸಬೇಕು. ಹಾಗಲ್ಲದ ಪಕ್ಷದಲ್ಲಿ ಅಕ್ಷರಗಳ ವ್ಯತ್ಯಾಸಮೂಲಕ ಆ ಶಬ್ದಗಳು ವಿಪರೀತಾರ್ಥವಾಚಕಗಳಾಗುತ್ತವೆ. ಹೀಗೆ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸುವಾಗ ಎದೆಯ ತ್ರಾಣವಾದರೂ ಬೇಕಲ್ಲವೇ ? ಎದೆಯೊಳಗಿಂದ ಉಸಿರು ಬಲವಾಗಿ ಅಕ್ಕರಗಳು ಹೊರಹೊಮ್ಮಿದರೇನೇ ಶಬ್ದಗಳು ಸರಿಯಾಗಿ ಉಚ್ಚರಿಸಲ್ಪಡುವುವು. ಇಲ್ಲವಾದರೆ ಆ ನುಡಿಗಳು 'ವಿಭೂತಿವೀಳೆ' ದವರ ಮಾತುಗಳನ್ನು ಹೋಲುವುವು ! ಆದ್ದರಿಂದ ಗದ್ಯಪದ್ಯಾತ್ಮಕವಾಕ್ಯಗಳನ್ನುಚ್ಚರಿಸುವಾಗ ಉರಃಪಿಂಡಸಾಮರ್ಥ್ಯದ ಉಪಯೋಗವಿದೆ.

ಸಾಮವು ಅಂದರೆ, ಧ್ವನಿಯ ಸಮತೆಯು; ಇದು ಛಂದೋಮಯಪದ್ಯಗಳನ್ನು ಪಠಿಸುವಾಗಲೂ ಹಾಡುವಾಗಲೂ ಉಪಯೋಗವಾ

ಗುವುದು. ಧ್ವನಿಯ ಸಮತೆಯು ಶಿಥಿಲವಾದರೆ ಆ ಕ್ಷಣವೇ ಧ್ವನಿಯು ಅಪಸ್ವರವಾಗುವುದು. ಧ್ವನಿಸಮತೆಯ ಸಿದ್ಧಿಗೆ ಸಂಗೀತವಿದ್ಯಾನುಭವದ ನೆರವು ಸ್ವಲ್ಪವಾದರೂ ಬೇಕಾಗುವುದು. ಗಾನವಿದ್ಯೆಯು ವಾಙ್ಮಾತ್ರೇಣ ಸಾಧ್ಯವಾದುದಲ್ಲ. ಭೂಪರಾಗಕ್ಕೆ 'ಮ-ನಿ' ಗಳು ಅಗ್ರಾಹ್ಯಗಳೆಂಬೀ ಮುಂತಾದ ವಿಷಯಗಳನ್ನು ಗಾಯಕರ ಮುಖದಿಂದ ಕೇಳಿಯೋ ತತ್ಪ್ರತಿಪಾದಕ ಪುಸ್ತಕಗಳನ್ನವಲೋಕಿಸಿಯೋ ಒಡಬಡಿಸುವ ಬಂಟನು 'ವಾಗದ್ವೈತಿ' ಯಂತೆ ಹಾಸ್ಯಾಸ್ಪದನಾಗಿರುವನು. ಅವಾಂತರವರ್ಣಾನುಭವಿಯು ಪ್ರಮುಖವರ್ಣಸಂಸ್ಕೃತಾತ್ಮನನ್ನು ಹೋಲಬಲ್ಲನೇ ? ಸ್ವರಗಳೆಂದರೆ ರಾಗವೆಂಬ ವ್ಯಕ್ತಿಯ ಘಟಕಾವಯವಗಳು. ಅಂದರೆ ಸ್ವರಸಮುದಾಯವೇ ರಾಗವು. ಸ್ವರಪಾರಿಶುದ್ಧ್ಯವಿಲ್ಲದ ಧ್ವನಿಯು ಅಪಸ್ವರವಾಗಿ ಕೇಳಿಬರುವುದು. ಆದ್ದರಿಂದ ಓದುಗಾರರೂ, ಹಾಡುಗಾರರೂ ಮೊದಲು ಸ್ವರಗಳ ಸ್ವರೂಪವನ್ನು ಮನನಮಾಡಿ ಆ ಸ್ವರಗಳು ಕಂಠಧ್ವನಿಯಿಂದ ಸಕ್ರಮವಾಗಿ ಅಭಿವ್ಯಕ್ತಗಳಾಗುವಂತೆ ಅಭ್ಯಾಸಿಸಬೇಕು. ಏಕೆಂದರೆ— ಗಾನವು ಕೃತಿಸಾಧ್ಯವೈಸೆ ? ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದವೆಂಬ ಏಳು ಮುಖ್ಯಸ್ವರಗಳಿಗೆ ಅನುಕ್ರಮವಾಗಿ 'ಸ-ರಿ-ಗ-ಮ-ಪ-ಧ-ನಿ' ಎಂಬ ಸಂಜ್ಞೆಗಳಿವೆ. ಸ್ವಾಭಾವಿಕವಾಗಿ ಶುದ್ಧವಾಗಿರುವ ಈ ಏಳು ಮೂಲಭೂತ ಸ್ವರಗಳಲ್ಲಿಯೇ ಆರೋಹಣ, ಅವರೋಹಣಮೂಲಕವಾಗಿಯೂ, ವಿಕೃತ, ಅಗ್ರಾಹ್ಯಗಳೆಂಬ ನಿಯಮಗಳನ್ನನುಸರಿಸಿಯೂ, ವಾದೀ, ಸಂವಾದೀ, ಅನುವಾದೀ ಎಂಬೀ ಸ್ವರಪರಿಣಾಮಗಳನ್ನು ಲಕ್ಷೀಕರಿಸಿಯೂ ಕಿವಿಗಿಂಪಾಗುವಂತೆ ಕಂಠಧ್ವನಿಯಿಂದುದ್ಬುದ್ಧವಾಗುವ ಸ್ವರಮಾಲಿಕೆಯಿಂದ ಹುಟ್ಟುವ ಭಾವ (ಅಥವಾ ರಸ) ವೇ 'ರಾಗ'ವೆನಿಸುವುದು. ಸಾರಾಂಶ, ಕೇಳುವವರ ಮನಸ್ಸಿಗೆ ಆಹ್ಲಾದವನ್ನುಂಟುಮಾಡತಕ್ಕ ಸ್ವರಮಾಲಿಕೆಯೇ ರಾಗವು. ಅಯ್ದಕ್ಕಿಂತಕಡಿಮೆ ಸ್ವರಗಳಿಂದ ರಾಗವೆಂಬುದು ಸಿದ್ಧಿಸದು. ಇಂತಪ್ಪರಾಗಗಳು ನೂರರ ಮೇಲ್ಪಟ್ಟು ಇರುವುವೆಂದು ಹೇಳುತ್ತಾರೆ. ಅಷ್ಟೇ ಏಕೆ ? ನಮಗೆ ಕೃತ್ಯತಃ ಪರಿಚಯವುಳ್ಳ ಶುದ್ಧಗಳೂ, ವಿಕೃತಗಳೂ ಆದ ಸ್ವರಗಳ ಜೋಡಣೆಯಿಂದಲೂ ಅಥವಾ ಒಂದೆರಡು ಸ್ವರಗಳನ್ನು ಮಾಜಿಯೂ ಅವಕ್ಕೂ ಹೆಚ್ಚುರಾಗ (ಸ್ವರಮಾಲಿಕೆ) ಗಳನ್ನು ಸಿದ್ಧಪಡಿಸಬಹುದೆಂದು ನಾವು ಸ್ವಾನುಭವದಿಂದ ಹೇಳುತ್ತೇವೆ. ಈಗಳಾದರೋ ೫೦-೬೦ ರಾಗಗಳೇ ಸುಪ್ರಸಿದ್ಧಗಳಾಗಿಯೂ ಲೋಕಪ್ರಿಯಗ

ಛಾಗಿಯೂ ಇರುತ್ತವೆ. ಇರಲಿ; ಒಟ್ಟಿನಲ್ಲಿ ರಸಿಕಮಹಾಶಯರು ತಕ್ಕ ಮಟ್ಟಿಗಾದರೂ ಸ್ವರಾಭ್ಯಾಸವನ್ನು ಮಾಡಿಯೇ ಪದ್ಯವಾಙ್ಮಯವನ್ನು ಓದುವುದರಲ್ಲಿಯೂ ಹಾಡುವುದರಲ್ಲಿಯೂ ಪ್ರವೃತ್ತರಾಗುವುದುತ್ತಮವು. ಹಾಗಿಲ್ಲದೆ ಒಡಕಜಾಗಟೆಯಂತೆ ಅಪಸ್ವರವನ್ನು ಹೊರಡಿಸಿ ಸುತ್ತಮುತ್ತಲೂ ಭೂತಗಳಿರುತ್ತಿದ್ದರೆ ಅವುಗಳಿಗೂ ಸಹ ಶಿರೋವೇದನೆಯುಂಟಾಗುವಂತೆ ಮಾತ್ರ ಪ್ರಯತ್ನಿಸಬಾರದೆಂದು ಸೂಚಿಸುತ್ತೇವೆ.

ಮಾತನಾಡುವುದಾದರೂ ಧ್ವನಿಸಾಮ್ಯವನ್ನವಲಂಬಿಸಿರುವುದರಿಂದ ಓದುವಾಗಲೂ ಹಾಡುವಾಗಲೂ ಮತ್ತು ನುಡಿವಾಗಲೂ ಧ್ವನಿಯು ಸಮನಾಗಿರುವುದಾದರೆ ಅದರಿಂದ ಓದುಗಾರಿಕೆ ಮುಂತಾದುದು ಕಿವಿಗೆ ಇಂಪಾಗಿ ಕೇಳಿಬರುವುದು.

ಸಂತಾನವು ಅಂದರೆ ಅವಿಚ್ಛಿನ್ನವಾದ ವಕ್ತೃತ್ವಪ್ರವಾಹವು. ಇದಾದರೂ ಅಭ್ಯಾಸಸಾಧ್ಯವು. ಈ ರೀತಿಯಾಗಿ ಶಿಕ್ಷಾಧ್ಯಾಯದ ದ್ವಿತೀಯಾನುವಾಕಮಂತ್ರಪ್ರತಿಪಾದ್ಯ ವಿಷಯಗಳ ವಿಶದೀಕರಣವಿರುವುದು. ಆದರೆ ಇದು ಉಪನಿಷದ್ವಾಙ್ಮಯಾಂತರ್ಗತವಾದ 'ಶಿಕ್ಷಾ' ಬೋಧದ ರೀತಿಯು. ಇನ್ನು ಅರ್ವಾಚೀನ ಶಿಕ್ಷಾಶಾಸ್ತ್ರದಲ್ಲಿ ವೇದಪಠನ ಪದ್ಧತಿ ವಿಷಯಕವಾದ ನಿಯಮಗಳು ಆವಾವುವೆಂಬುದನ್ನು ಪರಾಮರ್ಶಿಸುವಾ! ಪಾಣಿನೀಯಮತಾನುಸಾರವಾದುದೆಂದು ಹೇಳಲ್ಪಡುವ ಸುಪ್ರಸಿದ್ಧವಾದ ಶಿಕ್ಷಾಶಾಸ್ತ್ರವು ಹೀಗೆ ಶಾಸನಗೊಳಿಸುವುದು.

**ಮನ್ತ್ರೋ ಹೀನಃ ಸ್ವರತೋ ವರ್ಣತೋ ವಾ।**
**ಮಿಥ್ಯಾ ಪ್ರಯುಕ್ತೋ ನ ತಮರ್ಥಮಾಹ॥**
**ಸವಾಗ್ವಜ್ರೋ ಯಜಮಾನಂ ಹಿನಸ್ತಿ।**
**ಯಥೇನ್ದ್ರಶತ್ರುಃ ಸ್ವರತೋಽಪರಾಧಾತ್ ॥೫೧॥**

ಸ್ವರ ವರ್ಣಗಳ ಕ್ರಮವಿಲ್ಲದೆ ವಿಪರ್ಯಾಸದೊಡನೆ ಪ್ರಯೋಗಿಸಲ್ಪಡುವ ಮಂತ್ರವು ವಿಪರೀತವಾದ ಅರ್ಥಪ್ರದವಾದುದಾಗಿ ವಜ್ರದಂತೆ ಪರಿಣಮಿಸಿ ಪಠಿಸುವವನನ್ನು ನಾಶಗೊಳಿಸುವುದೆಂಬ ವಿಷಯದಲ್ಲಿ ಸ್ವರ ವ್ಯತ್ಯಾಸದೊಡನೆ ತನ್ನಿಂದ ಪಠಿಸಲ್ಪಟ್ಟ ಮಂತ್ರದಿಂದ ತನ್ನನ್ನೇ ನಾಶ ಮಾಡಿಕೊಂಡ ಇಂದ್ರನ ವೈರಿಯಾದ 'ತ್ವಷ್ಟಾ' ಎಂಬಾತನು ದೃಷ್ಟಾಂತ ರೂಪನಾಗಿರುವನು. ಅಂದರೆ ಯಥಾಯೋಗ್ಯವಾದ ಸ್ವರದಿಂದಲೂ ಅಥವಾ ವರ್ಣದಿಂದಲೂ ಹೀನವಾದ ಮಂತ್ರೋಚ್ಚಾರವಾದರೋ ಅದೊಂದು ಪ್ರತ್ಯಕ್ಷವಾದ ವಿಪರೀತ ಪ್ರಯೋಗವಾಗಿಯೇ ಪರಿಣಮಿಸು

ವುದು; ಅಂತಹ ಮಂತ್ರವು ಇಚ್ಛಿತಾರ್ಥಪ್ರತಿಪಾದಕವಾಗಲಾರದು. ಇಷ್ಟೇ ಅಲ್ಲ, ಆ ದುರ್ಮಂತ್ರವೆಂಬ ಶಬ್ದಾತ್ಮಕವಜ್ರವು ಪೂರ್ವದಲ್ಲಿ ಸ್ವರ ವ್ಯತ್ಯಾಸಮೂಲಕ ಇಂದ್ರನ ಶತ್ರುವನ್ನು ನಾಶಗೊಳಿಸಿದಂತೇ ಯಜಮಾನನಿಗೆ ಕೇಡುಮಾಡುವುದು. ಈಗಲಾದರೋ ಅನೂಚಾನಪದ್ಧತಿಚ್ಯುತರಾದ ಕೆಲಂಬರು ಸುಲಭಕ್ರಿಯದಿಂದ ಸಂಪಾದಿಸಲ್ಪಟ್ಟ ವೈದಿಕ ಸಾಹಿತ್ಯವನ್ನು ಮುಂದಿಟ್ಟುಕೊಂಡು ತದಂತರ್ಗತವಾದ 'ರೌದ್ರೀಸೂಕ್ತ' ಮುಂತಾದುದನ್ನು ಆಚಾರ್ಯರ ಹಂಗು ತಮಗೇತಕೆಂಬ ದುರ್ಭಾವನೆಯಿಂದ ತಾವೇ ಪಠಿಸಬಹುದೆಂದು ಗಳಹುತ್ತಿರುವರಷ್ಟೇ ! ಅಂತಪ್ಪ ಅಸಂಸ್ಕೃತಾತ್ಮರು ಈ ವಿಷಯವನ್ನು ಮಾತ್ಸರ್ಯಹೀನವಾದಮತಿಯೊಡನೆ ಚೆನ್ನಾಗಿ ಅವಲೋಕಿಸಿ ಸ್ಮರಣದಲ್ಲಿಟ್ಟುಕೊಳ್ಳುವುದು ವಿಹಿತವಾಗಿರುವುದು.

ಇಂದ್ರನ ವೈರಿಯಾದ ಆ ವೃತ್ರನ ಕಥೆಯು ತೈತ್ತಿರೀಯಸಂಹಿತೆಯಲ್ಲಿಯೂ (೨-೫-೨) ಶತಪಥಬ್ರಾಹ್ಮಣದಲ್ಲಿಯೂ (೧-೫) ಭಾಗವತಾದಿ ಗ್ರಂಥಗಳಲ್ಲಿಯೂ ಹೇಳಲ್ಪಟ್ಟಿದೆ. ಇಂದ್ರನು ತ್ವಷ್ಟನ ಪುತ್ರನಾದ ವಿಶ್ವರೂಪನೆಂಬಾತನನ್ನು ಕೊಂದನೆಂಬುದರಿಂದ ತ್ವಷ್ಟನು (ವೃತ್ರನು) ಸೋಮಯಾಗದಲ್ಲಿ ಇಂದ್ರನನ್ನು ಬರಮಾಡಿಕೊಳ್ಳಲಿಲ್ಲ. ಇಂದ್ರನಾದರೋ ಆ ಯಾಗಕ್ಕೆ ಎರಡನ್ನುಂಟುಮಾಡಿ ಬಲತ್ಕಾರದಿಂದ ಸೋಮ:ರಸವನ್ನೀಂಟಿ ತೆರಳಿದನು. ಉಳಿದ ಸೋಮರಸದಿಂದ ಇಂದ್ರನನ್ನು ನಾಶಗೊಳಿಸುವುದಕ್ಕೋಸ್ಕರ ಅಭಿಚಾರಕರ್ಮವನ್ನು (ಮಾರಣಕ್ರಿಯೆಯನ್ನು) ಮಾಡಲೆಳಸಿ ತ್ವಷ್ಟನು— "ಸ್ವಾಹೇನ್ದ್ರಶತ್ರುರ್ವರ್ಧಸ್ವ" ಎಂಬ ಮಂತ್ರೋಚ್ಚಾರಪೂರ್ವಕವಾಗಿ ಹೋಮವನ್ನೆಸಗಿದನು. 'ಇನ್ದ್ರಶತ್ರುಃ' ಎಂಬಲ್ಲಿ 'ಶತ್ರು' ಶಬ್ದದರ್ಥವು ಘಾತಕನು, ನಾಶಕನು; ಎಂಬಭಿಪ್ರಾಯದಿಂದೇ 'ಎಲೈ ಜನಿಸುವ ಪುರುಷನೇ ? ಇಂದ್ರ ಘಾತುಕನಾದ ನೀನು ಬೆಳೆಯುವವನಾಗು;' ಎಂಬ ವಿವಕ್ಷೆಯೊಡನೆ ಮಂತ್ರವನ್ನುಚ್ಚರಿಸಿದನು. 'ಇಂದ್ರಶತ್ರುಃ' ಎಂಬಲ್ಲಿ 'ಇನ್ದ್ರಸ್ಯ ಶತ್ರುಃ' ಅಥವಾ 'ಇನ್ದ್ರಃ ಶತ್ರುಃ (ಶಾತಯಿತ್ರಾಯಸ್ಯ') ಎಂದು ವಿಗ್ರಹವು ಎರಡು ವಿಧವಾಗಿದೆ. ತ್ವಷ್ಟನಿಂದ ಆ ಮಂತ್ರವು ಯಾವ ವಿವಕ್ಷೆಯಿಂದುಚ್ಚರಿಸಲ್ಪಟ್ಟಿತೋ ಆಗ ತತ್ಪುರುಷಸಮಾಸತ್ವದಿಂದ ಅಂತ್ಯೋದಾತ್ತವಿರಬೇಕಾದುದು; ಆದರೆ ಪ್ರಮಾದದಿಂದ ಆದ್ಯುದಾತ್ತವಾದ ಮಂತ್ರವು ಪ್ರಯೋಗಿಸಲ್ಪಟ್ಟಿತು. ಆ ಸ್ವರವು ಬಹುವ್ರೀಹಿಸಮಾಸದಲ್ಲಿ ಪರಿಣಮಿಸಿ 'ಇನ್ದ್ರೋಘಾತಕೋ ಯಸ್ಯ' ಎಂಬ

ರ್ಥದಲ್ಲಿ ಪರ್ಯವಸಾನವನ್ನು ಹೊಂದಿ 'ಇಂದ್ರನಿಂದ ವೃತ್ರನು ವಧಿಸ ಲ್ಪಡತಕ್ಕವನು' ಎಂಬ ಫಲಪ್ರದವಾದುದು, ಈ ಆಖ್ಯಾಯಿಕೆಯಿಂದ ಸ್ವರವ್ಯತ್ಯಾಸದೊಡನೆ ಪಠಿಸಲ್ಪಡುವ ಮಂತ್ರವು ವಿಪರೀತ ಫಲಪ್ರದವಾ ಗುವುದೆಂಬಭಿಪ್ರಾಯವು ಸಿದ್ಧಿಸುವುದು.

ಇಲ್ಲಿ ಸ್ವರಾಪರಾಧದ ಉದಾಹರಣೆಯು ತೋರಿಸಲ್ಪಟ್ಟಿರುವಂತೆ ವರ್ಣಾಪರಾಧದ ಉದಾಹರಣೆಯು ಏಕೆ ನಿರೂಪಿಸಲ್ಪಟ್ಟಿರುವುದಿಲ್ಲವೆಂಬ ಸಂಗತಿಯಾದರೋ ಸ್ಫುಟವಾಗಿಯೇ ಇರುವುದಲ್ಲವೇ ? 'ಸಕಲ' ವೆಂಬ ಶಬ್ದವನ್ನು 'ಶಕಲ' ವೆಂದೂ 'ಸಕೃತ್' ಎಂಬ ಶಬ್ದವನ್ನು 'ಶಕೃತ್' ಎಂದೂ ಉಚ್ಚರಿಸಿದರೆ ವರ್ಣಗಳ ಭೇದ ಮೂಲಕ ಅರ್ಥವೈಪರೀತ್ಯವು ಹೇಗೆ ಸಂಭವಿಸುತ್ತಿರುವುದೆಂಬುದನ್ನು ವಾಚಕ ಮಹಾಶಯರರಿಯರೇ ? ಈ ಮೇಲೆ ನಿರ್ದಿಷ್ಟಪ್ರಕಾರ ಸ್ವರಭೇದವು ಇಷ್ಟು ಹಾನಿಕರವಾಗಿರುವು ದೆಂಬುದಾಗಿ ಅರಿಯಲ್ಪಡುತ್ತಿರಲು ವರ್ಣಭೇದವು ಅದೆಷ್ಟು ಹಾನಿಕರ ( ನಾಶಕ್ಕೆ ಕಾರಣ ) ವಾಗಿರುವುದೆಂಬ ಸಂಗತಿಯಾದರೋ ಕೈಮುತಿಕ ನ್ಯಾಯದಿಂದೇ ಸಿದ್ಧವಾಗಿರುವುದರಿಂದ ಆ ವಿಷಯಕವಾಗಿ ಹೆಚ್ಚು ಬರೆಹ ವನ್ನು ಬೆಳೆಸುವುದೇಕೆ ?

ಆಧುನಿಕ ಸುಶಿಕ್ಷಿತರಿಗೆ ಈ ವಿಧವಾದ ನಿಯಮಪೂರ್ವವಾದು ಚ್ಚಾರವೈಶಿಷ್ಟ್ಯವು ಮಹತ್ವವುಳ್ಳದ್ದೆನಿಸುವುದಿಲ್ಲ. ಆದರೆ ನಮ್ಮ ದೃಷ್ಟಿ ಯಿಂದಾದರೋ ಸಾಂಪ್ರದಾಯಿಕ ಉಚ್ಚಾರಕ್ಕೆ ಬಹುಮಹತ್ವವಿದೆ. ಈ ಸಾಂಪ್ರದಾಯಿಕ ಉಚ್ಚಾರಬಲದಿಂದೇ ಏಕಶಾಖೆಯ ಬೇರೆಬೇರೆ ದೇಶದವರು ಒಂದುಸ್ಥಳದಲ್ಲಿ ನೆರೆದಾಗ ಸಮಸ್ವರದಿಂದ ವೇದಪಠ ನದಲ್ಲಿ ಸಮರ್ಥರಾಗಿರುವರು. ಹೇಗೆಂದರೆ ಕರ್ನಾಟಕದಲ್ಲಿರುವ ಋಕ್ ಪಾಠಕರಾದ ನಾವು ಗೌಡ, ಮಹಾರಾಷ್ಟ್ರ, ಆಂಧ್ರ, ದ್ರಾವಿಡ ಮೊದಲಾದ ದೇಶಗಳಲ್ಲಿರುವ ಋಕ್‌ಶಾಖೀಯ ಬ್ರಾಹ್ಮಣರೊಡನೆ ಹ್ರಸ್ವ, ದೀರ್ಘ, ಉದಾತ್ತ, ಅನುದಾತ್ತ ಮೊದಲಾದ ಉಚ್ಚಾರ ಗಳಲ್ಲಿ ಪದ, ಮಾತ್ರಾ, ಸ್ವರ, ವರ್ಣ ಮುಂತಾದವುಗಳ ಸೂಕ್ಷ್ಮವೂ ಸೂಕ್ಷ್ಮತರವೂ ಸಹ ಭೇದವಾಗಗೊಡದಂತೆ ಒಂದೇ ಸ್ವರದಲ್ಲಿ ನಿರ ರ್ಗಳವಾಗಿ ಪಠಿಸಬಲ್ಲೆವು.

ಇದೇಮೇರೆಗೆ ತ್ರಿಲಿಂಗ (ತೆಲುಗು) ದೇಶೀಯಬ್ರಾಹ್ಮಣನು ಋಗ್ವೇ ದವನ್ನು ಪಠಿಸಲು ಮಹಾರಾಷ್ಟ್ರೀಯಬ್ರಾಹ್ಮಣರ ಜೊತೆಯಲ್ಲಿ ನಿರ್ಭ ಯದಿಂದ ಕುಳಿತುಕೊಳ್ಳುವನು. ಮಹಾರಾಷ್ಟ್ರ, ಕರ್ನಾಟಕ, ದ್ರಾವಿಡ ಮೊದಲಾದ ದಾಕ್ಷಿಣಾತ್ಯರಲ್ಲಿ ಪರಸ್ಪರ ಮುಖಪರಿಚಯವು ಕೂಡ ಇಲ್ಲ

ದವರಾದರೂ ಉತ್ತರದೇಶದಲ್ಲಿ ಅಂದರೆ ಶ್ರೀಕಾಶಿಯೇ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಅಧ್ಯಯನಮಾಡಿದ ತೈತ್ತಿರೀಯರೊಡನೆ ಸೇರಿ ನಿರಾಯಾಸವಾಗಿ ಪಠಿಸುವರು. ಇದು ಸಂಪ್ರದಾಯದ ಪ್ರಭಾವವಲ್ಲವೇ ? 'ಸರ್ವಂ' ವೇದಾಧ್ಯಯನಂ ಗುರ್ವಧ್ಯಯನಪೂರ್ವಕಮ್' ಎಂಬ ವೈದಿಕನಿಯಮವು ನಿತ್ಯವಾಗಿರದಿದ್ದರೆ ಅಧ್ಯಯನದಲ್ಲಿ ಇಷ್ಟು ತಂತ್ರೋಕ್ತವಾದ ಶುದ್ಧತೆಯು ದೀರ್ಘಕಾಲದವರೆಗೆ ಉಳಿದಿರಲು ಶಕ್ಯವಿದ್ದಿತೇ ?

ಇದಕ್ಕೆ ವಿಪರೀತವಾದ ಉದಾಹರಣೆಯಾದರೋ ಏತದ್ದೇಶಿಯರಾದ ಆಧುನಿಕ ಸುಶಿಕ್ಷಿತರೂ, ವಿದೇಶದ ಸಂಸ್ಕೃತಜ್ಞರೂ ಉಚ್ಚರಿಸುವ ಪರಿಯು ! ಈ ಮಹಾನುಭಾವರು ಮುಂದಿರುವ ಅಕ್ಷರಗಳನ್ನೇ ಸರಳವಾಗಿ ಉಚ್ಚರಿಸಲರಿಯರು; ಇನ್ನು ಹ್ರಸ್ವ ದೀರ್ಘ, ಉದಾತ್ತ, ಅನುದಾತ್ತ ಮೊದಲಾದವುಗಳ ಶುದ್ಧೋಚ್ಚಾರವನ್ನಾದರೋ ಕೇಳುವುದೇ ಬೇಡ ! ಇದು ಸಂಸ್ಕೃತ ಶಬ್ದಗಳ ಉಚ್ಚಾರವಿಷಯಕವಾದ ಮಾತಾಯ್ತು; ಏತದ್ದೇಶೀಯ ಹಾಗೂ ಪರಕೀಯ ಪ್ರಾಕೃತ ಭಾಷೆಗಳನ್ನುಚ್ಚರಿಸುವ ಬಗೆಯಾದರೂ ಹೀಗೆಯೇ ವಿಲಕ್ಷಣವಾಗಿದೆ. ಹೆಚ್ಚು ಮಾತೇಕೆ ? ಈಗ ಎತ್ತನೋಡಿದತ್ತ 'ಇಂಗ್ಲೀಷ್' ಎಂಬುದು ಅಧಿಕಪ್ರಮಾಣದಿಂದ ಹಿಂದುಸ್ಥಾನದ ವ್ಯಾವಹಾರಿಕ ಭಾಷೆಯಾಗಿರುವುದಲ್ಲವೇ ? ಆದರೆ ಆ ಭಾಷೆಯ ಉಚ್ಚಾರದಲ್ಲಿಯೂ ಬೇರೆ ಬೇರೆ ಪ್ರಾಂತಗಳ ಜನರು ಹೇಗೆ ವೈಚಿತ್ರ್ಯವನ್ನುಂಟುಮಾಡಿರುವರೆಂಬುದು ಅವರಾಡುವ ನುಡಿಗಳು ನಮ್ಮ ಕಿವಿಗೆ ಬಿದ್ದಾಗ ಸಹಜವಾಗಿ ಲಕ್ಷ್ಯಕ್ಕೆ ಬರುವುದು. ಇದರಿಂದ ಶಿಕ್ಷಾಶಾಸ್ತ್ರದಲ್ಲಿ ಮಂತ್ರಗಳು ಸರಿಯಾಗಿ ಉಚ್ಚರಿಸಲ್ಪಡದಿದ್ದರೆ ಅದರಿಂದ ಯಾವ ಪ್ರತ್ಯವಾಯವು ಸಂಭವಿಸುವದೆಂದು ಹೇಳಲ್ಪಡುವುದೋ ಅದರ ಮಹತ್ವವನ್ನಾದರೋ ಯಾರೂ ಮರೆಯುವಂತಿಲ್ಲ. 'ಅಥಶಿಕ್ಷಾಂ' ಪ್ರವಕ್ಷ್ಯಾಮಿ' ಎಂಬ ವಾಕ್ಯಾರಂಭಪೂರ್ವಕವಾಗಿ ಪಂಚಖಂಡಾತ್ಮಕವಾದ ಗ್ರಂಥದಿಂದ ಸರ್ವವೇದ ಸಾಧಾರಣವಾದ ಶಿಕ್ಷೆಯನ್ನು ಪ್ರಕಾಶಪಡಿಸುವ ಶಾಸ್ತ್ರವನ್ನೇ 'ಪಾಣಿನೀಯ ಶಿಕ್ಷಾ' ಗ್ರಂಥವೆಂದು ಹೇಳುವ ವಾಡಿಕೆಯಿದೆ. ಮತ್ತು ಇದು ಪಾಣಿನಿಮುನಿಯಿಂದೇ ರಚಿಸಲ್ಪಟ್ಟಿರುವುದೆಂಬುದಾಗಿ ಬಹು ಜನರು ಅಭಿಪ್ರಾಯಪಡುತ್ತಾರೆ. ಆದರೆ ಆ ಆಶಯವು ನಮಗೆ ರುಚಿಸದು. ಏಕೆಂದರೆ, ಶಿಕ್ಷಾಕಾರನೇ ಮೊದಲನೆಯ ಪ್ರತಿಜ್ಞಾರೂಪವಾದ ಶ್ಲೋಕದಲ್ಲಿ ತನ್ನ ಗ್ರಂಥವು ಪಾಣಿನೀಯಮತಾನುಸಾರವಾದುದೆಂದು ಸ್ವತಃ ಹೇಳುತ್ತಾನೆ. ಇದರಿಂದ ಪ್ರಾಚೀನಕಾಲದಲ್ಲಿ ಪಾಣಿ

ನಿಯಿಂದೇ ರಚಿಸಲ್ಪಟ್ಟ ಶಿಕ್ಷಾಗ್ರಂಥವನ್ನು ಆಧಾರವಾಗಿಟ್ಟುಕೊಂಡು ಈ ಗ್ರಂಥವು ಅವನ ಅನುಯಾಯಿಯಾದ (ಶಿಷ್ಯನಾದ) ೦.ಶ.ಷನೊ ಒಬ್ಬನಿಂದ ಬರೆಯಲ್ಪಟ್ಟಿರುವುದೆಂದು ಹೇಳಲಾಸ್ಪದವಿದೆ. ಮತ್ತು ಈ ಗ್ರಂಥವಲ್ಲಿ ಪಾಣಿನಿಯು ಅನೇಕಸಾರೆ ವಂದನಪೂರ್ವಕವಾಗಿ ಸ್ತುತಿಸಲ್ಪಟ್ಟಿದ್ದಾನೆ. ಈ ಶಾಸ್ತ್ರಪ್ರವರ್ತಕರಾದ ಆಚಾರ್ಯರ ಪಾರಂಪರ್ಯವು ಹೀಗೆ ಹೇಳಲ್ಪಡುವುದು—

**ಶಂಕರಃ ಶಾಂಕರೀಂ ಪ್ರಾದಾದ್ದಾಕ್ಷೀಪುತ್ರಾಯಧೀಮತೆ ।**
**ವಾಙ್ಮಯೇಭ್ಯಃ ಸಮಾಹೃತ್ಯ ದೇವೀಂ ವಾಚಮಿತಿಸ್ಥಿತಿಃ ॥೫೬॥**

ಮೊಟ್ಟಮೊದಲು ಶ್ರೀಶಂಕರನು ಕಲ್ಯಾಣಕಾರಕವೂ (ಶಾಂಕರೀಂ ದೇವೀಂ ವಾಚಂ-ಸ್ವಸಮವೇತ ಚಿಚ್ಛಕ್ತ್ಯವಸ್ಥಾಂತರಜ್ಞಾನಶಕ್ತ್ಯವಬೋಧರೂಪವೂ) ವ್ಯಾಕರಣ ಪ್ರಕಾಶವೂ (ವ್ಯಕ್ತಾತ್ಮಕವೂ) ಆದ 'ಅ ಇ ಉಣ್' ಮೊದಲಾದ ಚತುರ್ದಶ (೧೪) ಸೂತ್ರರೂಪವಾಣಿಯನ್ನು ವೇದ (ಜ್ಞಾನ) ರಾಶಿಯಿಂದ ತೆಗೆದುಕೊಂಡು ದಾಕ್ಷೀಪುತ್ರನಾದ ಪಾಣಿನಿಗೆಕೊಟ್ಟು ನೀನು ಶಾಸ್ತ್ರಕರ್ತನಾಗುವಿಯೆಂದು ಅನುಗ್ರಹಿಸಿದನು. ಮುಂದೆ ಪಾಣಿನಿಯು ಆ ಹದಿನಾಲ್ಕು ಸೂತ್ರಗಳ ಸಹಾಯದಿಂದೇ ಪ್ರತ್ಯಾಹಾರಪೂರ್ವಕವಾಗಿ ವ್ಯಾಕರಣಶಾಸ್ತ್ರವನ್ನು ರಚಿಸಿದನು. ಈ ಶಿಕ್ಷಾಗ್ರಂಥಕಾರನಾದರೂ ಅವನ ಅನುಯಾಯಿಯೇ ಆದ್ದರಿಂದ ಅವನು ಕಲ್ಪಿಸಿದ ಪ್ರತ್ಯಾಹಾರ ಮೊದಲಾದವುಗಳ ಸಹಾಯದಿಂದ ರಚಿಸಲ್ಪಟ್ಟಿರುವ ಮೂಲಕ ಶಿಕ್ಷಾಕಾರನ ಮತ್ತು ಪಾಣಿನಿಮುನಿಯ ಆಚಾರ್ಯ ಪಾರಂಪರ್ಯವು ಒಂದೇ ಆಗಿರುವುದು; ಅದು ಕಾರಣವೇ ಈ ಶ್ಲೋಕದಲ್ಲಿ ಆ ಪರಂಪರೆಯನ್ನು ಅಧಿಕವಾದ ಗೌರವದೊಡನೆ ನಿರ್ದೇಶ ಮಾಡಿದ್ದಾನೆ. ಈ ಮುಂತಾದ ಹೆಗ್ಗುರುತುಗಳಿಂದ ಪಾಣಿನಿಯೂ ಅವನ ಅನುಯಾಯಿಯಾದ ಶಿಕ್ಷಾಕಾರನೂ ಶಿವೋಪಾಸಕರೆಂಬುದು ನಿರ್ವಿವಾದವಾಗಿ ಸಿದ್ಧವಾಗುತ್ತದೆ. ಇಷ್ಟೇ ಅಲ್ಲ, ಮೇಲಿನ ಶ್ಲೋಕದ 'ಶಂಕರಃ ಶಾಂಕರೀಂ ದೇವೀಂವಾಚಂ ವಾಙ್ಮಯೇಭ್ಯಃ ಸಮಾಹೃತ್ಯ ಧೀಮತೇ ದಾಕ್ಷೀಪುತ್ರಾಯಪ್ರಾದಾತ್, ಇತಿಸ್ಥಿತಿಃ (ಅಸ್ತಿ)' ಎಂಬ ಅನ್ವಯಪದಗಳ ಗೂಢಾರ್ಥವನ್ನು ಚೆನ್ನಾಗಿ ಪರಾಮರ್ಶಿಸಿದರೆ ೨೬೦೦ ವರ್ಷಗಳ ಹಿಂದೆ ಪ್ರಸಿದ್ಧನಾಗಿದ್ದ ಪಾಣಿನಿಯೂ ಅವನ ಅನುಯಾಯಿಯಾದ ಶಿಕ್ಷಾಕಾರನೂ 'ಶಾಂಭವ' ಜನಾಂಗದವರೇ ಇದ್ದರೆಂಬ ದೃಢಾಭಿಪ್ರಾಯವಾದರೂ ವ್ಯಕ್ತವಾಗದಿರದು.

ಪಾಣಿನಿಮುನಿಯ ಆಖ್ಯಾಯಿಕೆಯು ಕಥಾಸರಿತ್ಸಾಗರದಲ್ಲಿ ಕಥಾಪೀಠಲಂಬಕದೊಳಿರುವ ನಾಲ್ಕನೆಯ ತರಂಗದಲ್ಲಿ ಸಂಕ್ಷಿಪ್ತವಾಗಿ ಪ್ರತಿಪಾದಿಸಲ್ಪಟ್ಟಿದೆ. ಹೇಗೆಂದರೆ:— ಪೂರ್ವದಲ್ಲಿ ಮಗಧ ದೇಶದೊಳಿರುವ ಪಾಟಲೀಪುತ್ರವೆಂಬ ನಗರದಲ್ಲಿರುತ್ತಿದ್ದ ವರ್ಷನೆಂಬ ಪಂಡಿತನ ಬಳಿಯಲ್ಲಿ ವರರುಚಿಯೇ ಮೊದಲಾದ ಶಿಷ್ಯೋತ್ತಮರು ಶಾಸ್ತ್ರಾಧ್ಯಯನವನ್ನು ಮಾಡುತ್ತಿದ್ದರು. ಅವರಲ್ಲಿ ಪಾಣಿನಿಯೆಂಬ ಶಿಷ್ಯನು ವಿಶೇಷವಾದ ಮಂದಮತಿಯುಳ್ಳವನಾದುದರಿಂದ ಅವರಿಗೆ ವಿದ್ಯಾಸಂಸ್ಕಾರವು ಸ್ವಲ್ಪವಾದರೂ ಲಭಿಸಲಿಲ್ಲ. ಇದನ್ನು ತಿಳಿದವಳಾದ ವರ್ಷನ ಪತ್ನಿಯು ಅವನಿಗೆ ಬುದ್ಧಿವಿಕಾಸವಾಗುವದಕ್ಕೋಸ್ಕರ ತಪಸ್ಸನ್ನಾಚರಿಸಲು ಹಿಮಾಲಯಕ್ಕೆ ಹೋಗೆಂದು ಸೂಚಿಸಿದಳು. ಪಾಣಿನಿಯು ಅವಳ ಅನುಜ್ಞೆಯ ಮೇರೆಗೆ ಹಿಮಾಲಯಕ್ಕೆ ಹೋಗಿ ಅಲ್ಲಿ ಬಹುಕಾಲದವರೆಗೆ ಮಹೇಶ್ವರನನ್ನು ಕುರಿತು ತಪಸ್ಸನ್ನೆಸಗಲು ಅವನ ದೃಢನಿಷ್ಠಾತ್ಮಕವಾದ ಆ ತಪಸ್ಸಿಗೆ ಶಂಕರನು ಮೆಚ್ಚಿ ಅವನಿಗೆ "ಅ ಈ ಉಣ್" ಮೊದಲಾದ ಹದಿನಾಲ್ಕು ಸೂತ್ರಗಳನ್ನೂ ಶಾಸ್ತ್ರಕರ್ತೃತ್ವಸಾಮರ್ಥ್ಯವನ್ನೂ ಅನುಗ್ರಹಿಸಿದನು. ಬಳಿಕ ಪಾಣಿನಿಯು ಪ್ರತ್ಯಾಹಾರಗಳನ್ನು ಕಲ್ಪಿಸಿ ಅಷ್ಟಾಧ್ಯಾಯಾತ್ಮಕವಾದ ವ್ಯಾಕರಣಶಾಸ್ತ್ರವನ್ನು ರಚಿಸಿದನು. ಮತ್ತು ಪಾಣಿನಿಯು ಮರಳಿ ಪಾಟಲೀಪುತ್ರನಗರಕ್ಕೆ ಬಂದು ಬುದ್ಧಿಶಾಲಿಯಾದ ವರರುಚಿಯೊಡನೆ ಶಾಸ್ತ್ರವಾದವನ್ನಾರಂಭಿಸಿದನು. ಈ ಶಾಸ್ತ್ರಾರ್ಥವು ಎಂಟು ದಿವಸಗಳವರೆಗೆ ಜರುಗಿತು. ಎಂಟನೆಯ ದಿವಸದಲ್ಲಿ ಪಾಣಿನಿಯು ಪರಾಭವ ( ಸೋಲು ) ವಾಗುತ್ತಿರುವಷ್ಟರಲ್ಲಿಯೇ ಆಕಾಶದಲ್ಲಿ ಮಹೇಶ್ವರನು "ಹುಂ" ಕಾರವನ್ನು ಮಾಡಿದುದರಿಂದ ಮೊದಲು ಪ್ರಚಲಿತವಾಗಿದ್ದ ಐಂದ್ರವ್ಯಾಕರಣವು ನಷ್ಟವಾಗಿ ವರರುಚಿಯೇ ಮೊದಲಾದ ಸರ್ವಪಂಡಿತರು ಮೌಢ್ಯವೃತ್ತಿಯುಳ್ಳವರಾಗಿ ಪರಾಭವವನ್ನು ಹೊಂದಿದರು. ಮುಂದೆ ವರರುಚಿಯೂ ಮಹೇಶ್ವರನ ಪ್ರಸನ್ನತೆಗೆ ಪಾತ್ರನಾಗಿ ಪಾಣಿನೀಯ ಶಾಸ್ತ್ರದ ಪೂರ್ಣಜ್ಞಾನವನ್ನು ಸಂಪಾದಿಸಿದನು.

"ಅ ಈ ಉಣ್" ಎಂಬ ಮೊದಲಾದ ಹದಿನಾಲ್ಕು ಸೂತ್ರಗಳು ಮಿಕ್ಕ ವೇದಗಳಂತೇ ಅನಾದಿಸಿದ್ಧಗಳಾಗಿವೆ. ಅದು ಕಾರಣವೇ ಅವುಗಳಿಗೆ ಅಕ್ಷರಸಮಾಮ್ನಾಯವೆಂಬ ಹೆಸರಿರುವುದು. ಕೊನೆಯ ಣ್. ಕ್, ಮೊದಲಾದ ಇತ್ಸಂಜ್ಞಕವರ್ಣಗಳು ಮಾತ್ರ ಮಹೇಶ್ವರನಿಂದಭಿವ್ಯಕ್ತಗೊಳಿಸಲ್ಪಟ್ಟಿರುವುದರಿಂದಲೂ ಆ ಸೂತ್ರಗಳ ಪ್ರಕಾಶಕನಾದರೂ ಆ

ಮಹೇಶ್ವರನೇ ಆದ ಮೂಲಕವೂ ಅವುಗಳನ್ನು ಮಾಹೇಶ್ವರ ಸೂತ್ರಗಳೆಂಬುದಾಗಿಯೇ ಹೇಳುತ್ತಾರೆ. ಈ ಸೂತ್ರಗಳು ಚಿಚ್ಛಕ್ತಿವಿಶಿಷ್ಟಬ್ರಹ್ಮ ಪ್ರತಿಪಾದಕಗಳೂ ಆಗಿರುತ್ತವೆಂಬುದು ಇವುಗಳಿಗೆ ಶ್ರೀ ನಂದಿಕೇಶ್ವರನು ಬರೆದ "ಕಾಶಿಕಾ" ಎಂಬ ವ್ಯಾಖ್ಯೆಯಿಂದ ಸ್ಪಷ್ಟವಾಗಿ ಗೋಚರವಾಗುವುದು. ಈ "ಕಾಶಿಕೆ" ಯು ಕಾರಿಕಾರೂಪವಾಗಿರುವುದರಿಂದ ಇದಕ್ಕೆ ಉಪಮನ್ಯುಕೃತ "ವಿಮರ್ಶಿನೀ" ಎಂಬ ವ್ಯಾಖ್ಯೆಯೂ ಇರುತ್ತದೆ. ಈ ಉಪಮನ್ಯುವು ವ್ಯಾಘ್ರಪಾದ ಮುನಿಯ ಮಗನಲ್ಲವೆಂದು ನಮ್ಮ ಅಭಿಪ್ರಾಯವು. ಈ ಸೂತ್ರಗಳ ವೇದತ್ವವಿಷಯಕಗಳಾದ ಅಧಿಕಪ್ರಮಾಣಗಳು 'ಶಬ್ದೇನ್ದುಶೇಖರ' ದ ಪ್ರಾರಂಭದಲ್ಲಿಯೇ ನಾಗೇಶಭಟ್ಟನಿಂದ ತೋರಿಸಲ್ಪಟ್ಟವೆ.

ಪ್ರಸ್ತುತದಲ್ಲಿ ಪಾಣಿನೀಯ ಮತಾನುಸಾರವಾದ ಶಿಕ್ಷಾಗ್ರಂಥದಲ್ಲಿ ಪ್ರತಿಪಾದಿತವಾದ ಮುಖ್ಯವಿಷಯವನ್ನಧಿಕರಿಸಿ ಲಿಖಿಸಬೇಕಾದುದಲ್ಲವೇ ? ಶಿಕ್ಷಾಕರ್ತನು—

**ಉದಾತ್ತಾನುದಾತ್ತಾಶ್ಚ ಸ್ವರಿತಶ್ಚ ಸ್ವರಾಶ್ರಯಃ ।**
**ಹ್ರಸ್ವೋ ದೀರ್ಘಃ ಪ್ಲುತ ಇತಿ ಕಾಲತೋ ನಿಯಮಾ ಅಚಿ ॥೧೧॥**

ಎಂಬ ಸೂತ್ರದಿಂದ ಸ್ವರವೂ, ಕಾಲವೂ ಎಂಬ ಮೊದಲಾದ ಆಯ್ದುವಿಧವಾಗಿ ಆಗತಕ್ಕ ವರ್ಣವಿಭಾಗಗಳನ್ನು ವಿಶದೀಕರಿಸುತ್ತಾನೆ. ಉದಾತ್ತ, ಅನುದಾತ್ತ, ಸ್ವರಿತವೆಂಬ ಈ ಮೂರು ಸ್ವರಗಳೂ ಸ್ವರ (ಅಚ್) ವಿಭಾಜಕಗಳಾಗಿರುವಂತೆ ಹ್ರಸ್ವ, ದೀರ್ಘ, ಪ್ಲುತವೆಂಬ ಈ ಸ್ವರಧರ್ಮಗಳೂ ಕಾಲದ್ವಾರಾ ಸ್ವರವಿಭಾಜಕಗಳೇ ಆಗಿರುತ್ತವೆ.

ಶಿಕ್ಷಾಗ್ರಂಥದಲ್ಲಿರುವ ಅಚ್, ಯಣ್, ಮುಂತಾದ ಸಂಜ್ಞೆಗಳು ಪಾಣಿನೀಯ (ಅಷ್ಟಾಧ್ಯಾಯ) ಶಾಸ್ತ್ರಾನುಸಾರವಾಗಿರುತ್ತವೆ. 'ಅಇಉಣ್' ಮೊದಲಾದ ಶಿವಸೂತ್ರಗಳ ಆಧಾರದಿಂವ ಜೋಡಿಸಲ್ಪಟ್ಟ ವರ್ಣಗಳ ಸಂಕ್ಷಿಪ್ತ ಸಂಜ್ಞೆಗಳನ್ನು ಪ್ರತ್ಯಾಹಾರಗಳೆನ್ನುತ್ತಾರೆ. ಈ ಪ್ರತ್ಯಾಹಾರಗಳನ್ನು ಸಿದ್ಧಪಡಿಸುವ ರೀತಿಯನ್ನು ಪಾಣಿನಿಯು 'ಆದಿರನ್ತ್ಯೇನ ಸಹಿತಾ' ಎಂಬ ಸೂತ್ರದಿಂದ ತೋರಿಸಿದ್ದಾನೆ.

ಈ ಮೇಲೆ ನಿರ್ದಿಷ್ಟವಾದ '**ಉದಾತ್ತಶ್ಚಾನುದಾತ್ತಶ್ಚ**' ಎಂಬ ಶಿಕ್ಷಾಸೂತ್ರಾಂತರ್ಗತ 'ಅಚ್' ಎಂಬುದು ಪ್ರತ್ಯಾಹಾರವು 'ಅಇಉಣ್' ಸೂತ್ರದಲ್ಲಿರುವ 'ಅ' ಎಂಬುದು 'ಐ ಔ ಚ್' ಎಂಬ ಸೂತ್ರದೊಳಗಿನ

'ಚ್' ಪರಿಯಂತರವಿರುವ ಸ್ವರ ವರ್ಣಗಳ ಸಂಜ್ಞೆಯಾಗಿರುವುದರಿಂದ 'ಅಚ್' ಅಂದರೆ ಅ ಇ ಉ ಋ ಒ ಏ ಓ ಐ ಔ ಎಂಬ ವರ್ಣಗಳೆಂದು ತಿಳಿಯತಕ್ಕದ್ದು. ವಿಧೇಯರೂಪಗಳಲ್ಲದ ಅ ಇ ಉ ಋ ಒ ಮೊದಲಾದ 'ಅಣ್' ಪ್ರತ್ಯಾಹಾರದೊಳಗಿನ ವರ್ಣಗಳು ತಮ್ಮ ತಮ್ಮ ಜಾತಿಯ ದೀರ್ಘ ಮುಂತಾದ ಸರ್ವವಿಧವಾದ ಸಂಗ್ರಾಹಕಗಳಾಗಿರುತ್ತವೆಂದು "ಅಣುದಿತ್ಸವರ್ಣಸ್ಯಚಾಪ್ರತ್ಯಯಃ" ಎಂಬ ಸೂತ್ರದಲ್ಲಿ ಪಾಣಿನಿಯು ನಿರೂಪಿಸಿದ್ದಾನೆ. 'ಅಚ್' ಪ್ರತ್ಯಾಹಾರದೊಳಗಿನ ವರ್ಣಗಳನ್ನೇ ಸ್ವರಗಳೆನ್ನುತ್ತಾರೆ. ಆದರೆ ಇವು ಅಲ್ಲದೆ 'ಅಚ್' ಎಂಬುದರ ವಿಶೇಷ ಧರ್ಮಗಳೆನಿಸುವ ಉದಾತ್ತ, ಅನುದಾತ್ತ ಸ್ವರಿತವೆಂಬಿವುಗಳೂ ಸ್ವರಾಭಿಧಾನವುಳ್ಳವುಗಳಾಗಿವೆ. ಈ ಹೆಸರುಗಳು ಆ 'ಉದಾತ್ತ' ಮೊದಲಾದ ಅರ್ಥಗಳಿಂದೇ ಶಿಕ್ಷಾ ಶಾಸ್ತ್ರದಲ್ಲಿಯೂ ವೇದದಲ್ಲಿಯೂ ಪ್ರಸಿದ್ಧವಾಗಿರುತ್ತವೆ. ಕಂಠ ತಾಲು ಮೊದಲಾದ ವರ್ಣೋತ್ಪತ್ತಿಸ್ಥಾನಗಳಲ್ಲಿ ಕೆಳಗಿನ ಭಾಗವೆಂದೂ ಮೇಲಿನ ಭಾಗವೆಂದೂ ಎರಡು ಭಾಗಗಳು ಕಲ್ಪಿಸಲ್ಪಟ್ಟಿವೆ. ಮೇಲಿನ ಭಾಗದಲ್ಲಿ ಉಚ್ಚರಿಸಲ್ಪಡುವ ಸ್ವರವನ್ನು ಉದಾತ್ತವೆಂದೂ ಅಲ್ಲಿಯೇ ಕೆಳಗೆ ಉಚ್ಚರಿಸಲ್ಪಡುವ ಸ್ವರವನ್ನು ಅನುದಾತ್ತವೆಂದೂ ಉದಾತ್ತಾನುದಾತ್ತ ಮಿಶ್ರಿತ ಸ್ವರವನ್ನು ಸ್ವರಿತವೆಂದೂ ಹೇಳುತ್ತಾರೆ. ಸ್ವರಿತದಲ್ಲಿ ಮೊದಲಿನ ಅರ್ಧಭಾಗವನ್ನು ಉದಾತ್ತವೆಂದೂ ಎರಡನೆಯ (ಕೊನೆಯ) ಅರ್ಧಭಾಗವನ್ನು ಅನುದಾತ್ತವೆಂದೂ ತಿಳಿಯುವುದುಂಟು. ಮತ್ತೆ

**ಉದಾತ್ತೇನಿಷಾದಗಾನ್ಧಾರಾವನುದಾತ್ತ ಋಷಭಧೈವತೌ ।**
**ಸ್ವರಿತಪ್ರಭವಾಹ್ಯೇತೇ ಷಡ್ಜಮಧ್ಯಮ ಪಂಚಮಾಃ ॥೧॥**

ಸಂಗೀತ ಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವ ಏಳು ಸ್ವರಗಳಲ್ಲಿ ನಿಷಾದ ಗಾಂಧಾರ (ನಿ.ಗ;) ಗಳು ಉದಾತ್ತಸ್ವರಗಳೆಂದೂ ಋಷಭ ಧೈವತ (ರಿ-ಧ:) ಗಳು ಅನುದಾತ್ತಸ್ವರಗಳೆಂದೂ ತಿಳಿಯಲ್ಪಡುತ್ತವೆ. ಷಡ್ಜ ಮಧ್ಯಮ ಪಂಚಮಸ್ವರ (ಸ-ಮ-ಪ;) ಗಳಾದರೋ ಸ್ವರಿತ ಸ್ವರಜನಿತಗಳಾಗಿವೆ. ಈ ಸಪ್ತಸ್ವರಗಳ ಪರಿಚಯವು ವಿಶೇಷತಃ ಸಾಮವೇದವನ್ನನುಲಕ್ಷಿಸಿರುವುದು. ಋಗ್ವೇದದಲ್ಲಿಯೂ ಯಜುರ್ವೇದದಲ್ಲಿಯೂ ಉದಾತ್ತಾನುದಾತ್ತಸ್ವರಿತಗಳೆಂಬಿವು ಮೂರುಸ್ವರಗಳೇ ಪ್ರಸಿದ್ಧವಾಗಿವೆ. ಸಾಮವೇದದಲ್ಲಿ ಮಾತ್ರ ಐದು ಅಥವಾ ಏಳು ಸ್ವರಗಳಿರುತ್ತವೆ.

ವೇದಪಠನದಲ್ಲಿ ತೋರಿಬರುವ ಗುಣದೋಷಗಳ ಬಗ್ಗೆ ಶಿಕ್ಷಾ ಶಾಸ್ತ್ರದಲ್ಲಿ ಹೀಗೆ ಹೇಳಲ್ಪಡುವುದು:—

**ಗೀತೀ ಶೀಘ್ರೀ ಶಿರಃಕಂಪೀ ತಥಾ ಲಿಖಿತ ಪಾಠಕಃ ।**
**ಅನರ್ಥಜ್ಞೋಽಲ್ಪಕಣ್ಠಶ್ಚ ಷಡೇತೇ ಪಾಠಕಾಧಮಾಃ ॥೩೨॥**

ಗಾನಸ್ವರದಿಂದ ಪಠಿಸುವವನೂ, ತವಕಪಡುವವನೂ, ಬರಿದೆ ತಲೆಯಲ್ಲಾಡಿಸುವವನೂ ಬರೆದಿಡಲ್ಪಟ್ಟುದನ್ನೇ ಓದುವಾತನೂ (ಮುಖೋದ್ಗತವಿಲ್ಲದಿರುವಾತನೂ ) ಪಠಿಸಲ್ಪಡುವ ಪದ ಪದಾರ್ಥಗಳ ಪರಿಜ್ಞಾನವಿಲ್ಲದವನೂ, ಕೀಳದನಿಯುವನೂ, ಎಂಬ ಈ ಆರುವಿಧವಾಗಿರುವ ಪಾಠಕರು ವೇದವನ್ನು ಪಠಿಸುವವರಲ್ಲಿ ಅಧಮರೆಂದು ಹೇಳಲ್ಪಡುತ್ತಾರೆ.

ಹೀಗೆ ವೇದಪಠನದಲ್ಲಿ ಆವಾವ ದೋಷಗಳಿರಕೂಡದೆಂಬುದು ಪ್ರತಿಪಾದಿಸಲ್ಪಟ್ಟು, ಮುಂದಿನ ಸೂತ್ರದಿಂದ ಗುಣಪ್ರಾಶಸ್ತ್ಯವಾದರೂ ಸೂಚಿಸಲ್ಪಡುವುದು:—

**ಮಾಧುರ್ಯಮಕ್ಷರವ್ಯಕ್ತಿಃ ಪದಚ್ಛೇದಸ್ತು ಸುಸ್ವರಃ ।**
**ಧೈರ್ಯಂ ಲಯಸಮರ್ಥಂ ಚ ಷಡೇತೇ ಪಾಠಕಾ ಗುಣಾಃ ॥೩೩॥**

ಎಲೈ ವೇದಪಾಠಕರೇ ? ಕರ್ಣಮಧುರವೂ, ವರ್ಣಗಳ ಸ್ಪಷ್ಟತೆಯೂ, ಪದಚ್ಛೇದವೂ (ಅಂದರೆ ಪದಗಳನ್ನು ವಿಂಗಡಿಸಿ ನುಡಿವುದೂ,) ಉತ್ತಮವಾದ ಸ್ವರೋಚ್ಚಾರವೂ, ಗಾಂಭೀರ್ಯವೂ ( ಹುದುಗದಿರುವುದೂ ) ಇತರರು ನುಡಿಯುವುದರೊಡನೆ ಬೆರೆಯುವ ಸಮರ್ಥತೆಯೂ ಅಥವಾ ಒಬ್ಬನೇ ಪಠಿಸುವಾಗ ಹಿಂದುಮುಂದಿನ ಮಂತ್ರೋಚಾರಗಳಲ್ಲಿ ಸಮತೆಯೂ ಎಂಬಿವು ವೇದಪಠನದ ಉತ್ತಮವಾದ ಆರು ಗುಣಗಳೆಂದು ಅರಿಯಲ್ಪಡುತ್ತವೆ.

ಒಟ್ಟಿನಲ್ಲಿ, ವೇದಾಂಗವೆನಿಸುವ ಈ 'ಶಿಕ್ಷಾ' ಶಾಸ್ತ್ರಾಧ್ಯಯನದಿಂದುಂಟಾಗುವ ಫಲಿತಾಂಶವೇನೆಂದರೆ— ಉದಾತ್ತ, ಅನುದಾತ್ತ, ಸ್ವರಿತ, ಹ್ರಸ್ವ, ದೀರ್ಘ, ಪ್ಲುತ, ಮೊದಲಾದವುಗಳಿಂದ ಕೂಡಿದ ಸ್ವರವ್ಯಂಜನಾತ್ಮಕವರ್ಣಗಳ ಉಚ್ಚಾರ ವಿಶೇಷಜ್ಞಾನ ಪ್ರಾಪ್ತಿಯೇ 'ಶಿಕ್ಷೆ' ಯೆಂಬ ಅಂಗದ ಮುಖ್ಯವಾದ ಪ್ರಯೋಜನವು. ಅದಿಲ್ಲದೆ ಹೋದರೆ ಮಂತ್ರಗಳಿಗೆ ಅನರ್ಥವು ಸಂಭವಿಸುವುದೆಂಬ ಸಂಗತಿಯಾದರೋ ಈ ಹಿಂದೆ ದೃಷ್ಟಾಂತಪೂರ್ವಕವಾಗಿ ಪ್ರತಿಪಾದಿಸಲ್ಪಟ್ಟಿರುವುದಷ್ಟೇ !

ಮುಖ್ಯವಾಗಿ ಶಿಕ್ಷಾಶಾಸ್ತ್ರದಿಂದ ಮಾಡಲ್ಪಟ್ಟ ತೀರ ಹಳೆಯ ಕೆಲಸಗಳಾವುವೆಂದರೆ-ಸಂಹಿತಾಪಾಠವೂ ಪದ ಪಾಠವೂ ಎಂಬಿವೆರಡೇ

ಶಿಕ್ಷಾಶಾಸ್ತ್ರವೆಂಬ ಈ ವೇದಾಂಗದ ಬಹು ಪುರಾತನ ಗ್ರಂಥಗಳು ಪ್ರಾತಿ ಶಾಖ್ಯಗಳೇ ಎಂದು ಹೇಳಲಭ್ಯಂತರವಿಲ್ಲ. ಇವುಗಳಲ್ಲಿ ಪದಪಾಠರಚ ನೆಯ ನಿಯಮದ ಗೊತ್ತುವಳಿಯು ಮಾಡಲ್ಪಟ್ಟಿದೆ; ಅಂದರೆ ಉಚ್ಚಾ ರವೂ, ಆಘಾತವೂ, ಶಬ್ದಸಂಧಿಗಳೊಳಗಿನ ವಾಕ್ಯಗಳೊಳಗಿನ ಮೊದಲು ಕೊನೆಯ ಶಬ್ದಗಳ ಸ್ವರೋಚ್ಚಾರ ಭೇದವೂ, ಮುಂತಾದುದರ ಪರಿ ಚಯವು ಈ ಪ್ರಾತಿಶಾಖ್ಯಗಳಿಂದೇ ಉಂಟಾಗುವುದು. ಶಿಕ್ಷಾ, ಛಂದಸ್ಸು, ವ್ಯಾಕರಣಗಳೆಂಬ ಶಾಸ್ತ್ರಗಳಿಂದ ನಾಲ್ಕು ವೇದಗಳಿಗೂ ಭಾಷೆಗೂ ಉಪಯುಕ್ತಗಳಾದ ನಿಯಮಗಳು ಮಾತ್ರವೇ ತಮ್ಮ ತಮ್ಮ ವಿಷ ಯಾನುಸಾರವಾಗಿ ಹೇಳಲ್ಪಡುತ್ತವೆ. ಆದರೆ ಅವುಗಳ ಅಪವಾದಕ ಗಳಾದ ವಿಶೇಷನಿಯಮಗಳೂ ವ್ಯವಸ್ಥಿತೆಯೂ ಮುಂತಾದ ವಿಷಯ ಗಳು ಆ ಆ ವೇದಶಾಖೆಯ ಪ್ರಾತಿಶಾಖ್ಯೆಗಳೆಂಬ ಸ್ವತಂತ್ರಗ್ರಂಥಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಪ್ರಾತಿಶಾಖ್ಯೆಗಳಲ್ಲಿ ಸಂಹಿತೆಯನ್ನು ಪಠಿಸುವ ಪದ್ಧತಿಯ ಪೂರ್ಣವಿವೇಚನೆಯು ಮಾಡಲ್ಪಟ್ಟಿದೆ. ಐತರೇಯಾರಣ್ಯಕ ಪ್ರಸಿದ್ಧನಾದ ಶಾಕಲ್ಯನೆಂಬಾಚಾರ್ಯನೇ ಋಗ್ವೇದದ ಪದಪಾಠವನ್ನು ಬಳಕೆಯಲ್ಲಿ ತಂದನೆಂದು ಹೇಳುತ್ತಾರೆ.

ಈ ವಿಧವಾದ ಪಾಠಪುಸ್ತಕವು (ಶಿಕ್ಷಾಶಾಸ್ತ್ರವು) ಆ ಆ ಸಂಹಿತೆಯ ಪ್ರತಿಯೊಂದು ಶಾಖೆಗೆ ಸಂಬಂಧಪಟ್ಟುದುದಾಗಿರುವ ಮೂಲಕ "ಪ್ರಾತಿ ಶಾಖ್ಯ" ವೆಂದು ಹೇಳಲ್ಪಡುವುದು. ಈ ಸಮಯದಲ್ಲಿ ಅಂತಹ ಪ್ರಾತಿ ಶಾಖ್ಯಗಳು ಆರು ಉಪಲಬ್ದಗಳಾಗಿವೆ. ಅವುಗಳಲ್ಲಿ ಮೊದಲನೆಯದು ಋಕ್ ಪ್ರಾತಿಶಾಖ್ಯವು. ಇದುವೇ '**ಪಾರ್ಷದಸೂತ್ರ**' ವೆಂದೂ ಹೇಳ ಲ್ಪಡುವುದು. ಇದರ ಕರ್ತನು ಅಶ್ವಲಾಯನನ ಗುರುವಾದ ಶೌನಕ ಮಹರ್ಷಿಯು. ಈ ಗ್ರಂಥವು ಛಂದೋಬದ್ಧ (ಪದ್ಯಮಯ) ವಾಗಿದೆ. ಆದರೆ ಈ ರಚನೆಯು ಪೂರ್ವದ ಒಂದಾನೊಂದು ಸೂತ್ರಪಾಠವನ್ನೇ ಪರಿಷ್ಕರಿಸಿ ಬೆಳೆಸಿದ ಆವೃತ್ತಿಯೆಂದು ತಿಳಿದುಬರುವುದು. ಈ ಗ್ರಂಥವು ಮೂರು ಅಧ್ಯಾಯಗಳುಳ್ಳದ್ದಾಗಿ ಹದಿನೆಂಟು ಪಟಲಗಳಲ್ಲಿ ವಿಭಕ್ತವಾ ಗಿದೆ. ಉವ್ವಟಭಾಷ್ಯೋಪೇತವಾದ ಈ ಗ್ರಂಥವು ಕಾಶಿಯಲ್ಲಿ ಮುದ್ರಿತ ವಾಗಿದೆ.

ಎರಡನೆಯದು 'ತೈತ್ತಿರೀಯಪ್ರಾತಿಶಾಖ್ಯ' ವೆಂಬ ಹೆಸರುಳ್ಳ ಕೃಷ್ಣ ಯಜುರ್ವೇದೀಯ ಪ್ರಾತಿಶಾಖ್ಯವು. ಇದರ ಕರ್ತನಾವನೆಂಬುದು

ಇಂದಿನ ವರೆಗೂ ಗೊತ್ತಾಗಿರುವುದಿಲ್ಲ. ಇದು ಸೂತ್ರರೂಪವಾಗಿಯೇ ಇರುವುದು. ಇದರಲ್ಲಿ ೨೪ ಅಧ್ಯಾಯಗಳಿವೆ.

ಮೂರನೆಯದು ಶುಕ್ಲಯಜುಃಪ್ರಾತಿಶಾಖ್ಯವು, ಇದು ಕಾತ್ಯಾಯನ ಮುನಿಯಿಂದ ರಚಿಸಲ್ಪಟ್ಟಿದೆ. ಇದರಲ್ಲಿ ೮ ಅಧ್ಯಾಯಗಳಿವೆ. ಇದುವೇ 'ವಾಜಸನೇಯೀ ಪ್ರಾತಿಶಾಖ್ಯಸೂತ್ರ' ವೆಂದು ಪ್ರಸಿದ್ಧವಾಗಿರುವುದು.

ನಾಲ್ಕನೆಯದು ಸಾಮವೇದಪ್ರಾತಿಶಾಖ್ಯವೆಂಬುದು, ಇದನ್ನು ಪುಷ್ಪಮಹರ್ಷಿಯು ರಚಿಸಿದ್ದಾನೆ; ಇದುವೇ 'ಪುಷ್ಪಸೂತ್ರ' ವೆಂದೂ ಹೇಳಲ್ಪಡುವುದು.

ಐದನೆಯದು ಅಥರ್ವಪ್ರಾತಿಶಾಖ್ಯವು. ಇದು ಸೂತ್ರನಿಬದ್ಧವಾಗಿದೆ. ಆರನೆಯದು 'ಚತುರಧ್ಯಾಯಿೀ' ಎಂಬ ಹೆಸರುಳ್ಳ ಗ್ರಂಥವು ಅಥರ್ವ ವೇದದ ಪ್ರಾತಿಶಾಖ್ಯರೂಪದಿಂದೇ ಪ್ರಸಿದ್ಧವಾಗಿರುತ್ತದೆ.

ಈ ಪ್ರಾತಿಶಾಖ್ಯಗಳಿಂದೇ ಭರತಖಂಡದಲ್ಲಿ ವ್ಯಾಕರಣಾಧ್ಯಯನವು ಆರಂಭಿಸಲ್ಪಟ್ಟಿರುವುದು. ಇವು ಪ್ರತ್ಯಕ್ಷವಾಗಿ ವೈಯಾಕರಣಗ್ರಂಥಗಳಲ್ಲ; ಆದರೂ ವ್ಯಾಕರಣ ಸಂಬಂಧವಾದ ವಿಷಯಗಳು ಇವುಗಳಲ್ಲಿ ವಿವೇಚಿಸಲ್ಪಟ್ಟಿವೆ. ಈ ಗ್ರಂಥಗಳಲ್ಲಿ ಅನೇಕ ವೈಯಾಕರಣವಾಕ್ಯಗಳು ಉದ್ಧೃತಗಳಾಗಿವೆ. ಇದರಿಂದ ಪ್ರಾತಿಶಾಖ್ಯಗಳ ಪ್ರಚಾರಕಾಲದಲ್ಲಿಯೂ ವ್ಯಾಕರಣದ ಅಧ್ಯಯನವು ಬಲವಾಗಿ ನಡೆದಿದ್ದಿತೆಂದು ಹೇಳಬಹುದಾಗಿದೆ. ಮತ್ತು, ಈಗ ಉಪಲಬ್ಧವಿರುವ ಋಗಾದಿಸಂಹಿತಾಪಾಠಗಳು ಪ್ರಾತಿಶಾಖ್ಯಗಳ ರಚನಾಕಾಲದಿಂದ ಇಂದಿನವರೆಗೆ ( ಎಷ್ಟೋ ಶತಮಾನಗಳ ಪರಿಯಂತವಾಗಿ ) ಇದ್ದಕ್ಕಿದ್ದಂತೇ ಉಳಿದಿವೆ. ಈಗಣ ಋಕ್ ಸಂಹಿತೆಯ ಪಾಠವು ಋಕ್ಪ್ರಾತಿಶಾಖ್ಯದ ನಿಯಮಾನುಸಾರವಾಗಿರುವುದಷ್ಟೇ ! ಋಕ್ಸಂಹಿತಾಂತರ್ಗತಗಳಾದ ಹತ್ತು ಮಂಡಲ (ಅವಯವ) ಗಳು ಈಗಿರುವಂತೇ ಮೊದಲಾದರೂ ಇದ್ದಿರಬಹುದು. ಇಷ್ಟೇ ಅಲ್ಲ; ಆ ಮಂಡಲಗಳಲ್ಲಿಯ ಸೂಕ್ತಗಳ ಅನುಕ್ರಮವಾದರೂ ಈಗಿರುವಂತೆ ಮೊದಲಾದರೂ ಇದ್ದಿರಲೇಬೇಕು ಶೌನಕಾಚಾರ್ಯನ ಅತಿಸೂಕ್ಷ್ಮ ನಿಯಮಗಳಿಗನುಸರಿಸಿ ಈಗ ಉಪಲಬ್ಧವಿರುವ ಮುದ್ರಿತ ಪ್ರತಿಗಳಲ್ಲಿ ಋಕ್ಸಂಹಿತೆಯು ಪದಶಃ ಹಾಗೂ ಶಬ್ದಶಃ ಎಂತಿರುವುದೋ ಅಂತೇ ಆ ಕಾಲದಲ್ಲಿಯೂ ಇದ್ದಿತೆಂಬ ವಿಷಯದಲ್ಲಿ ಸಂದೇಹವೇ ಇಲ್ಲ. ಈ ರೀತಿಯಾಗಿ ವ್ಯಾಕರಣಾಧ್ಯಯನವೂ ಸಂಹಿತಾಪಾಠವೂ ಎಂಬಿವೆರಡು

ದೃಷ್ಟಿಯಿಂದಲೂ ಪ್ರಾತಿಶಾಖ್ಯಗಳು ಬಹು ಮಹತ್ತ್ವವುಳ್ಳವುಗಳೆಂದು ತಿಳಿಯಲ್ಪಡುತ್ತವೆ. ಆದುಕಾರಣವೇ ಈ ಪ್ರಾತಿಶಾಖ್ಯಗಳು 'ಪುರಾತನ ವೇದಾಂಗಶಿಕ್ಷಾಶಾಸ್ತ್ರಗಳು' ಎಂಬುದಾಗಿ ಹೇಳಿಸಿಕೊಳ್ಳಲ್ಪಡುತ್ತವೆ. ಇವಲ್ಲದೆ ಅರ್ವಾಚೀನಗಳಾದ ಶಿಕ್ಷಾಬೋಧಕಗ್ರಂಥಗಳೂ ಅನೇಕವಾಗಿವೆ. ಅವುಗಳ ಕರ್ತರು ಭಾರದ್ವಾಜ, ವಸಿಷ್ಟ, ವ್ಯಾಸ, ಯಾಜ್ಞವಲ್ಕ್ಯ ಮೊದಲಾದವರೆಂದು ತಿಳಿಯಲ್ಪಡುತ್ತಾರೆ. ಅವು ಒಂದೊಂದು ಪ್ರಾತಿಶಾಖ್ಯಕ್ಕೆ ಸಂಬಂಧಪಟ್ಟವುಗಳಾಗಿವೆ. ಇಲ್ಲಿ ಉದಾಹರಣೆಗಾಗಿ ತೈತ್ತಿರೀಯ ಪ್ರಾತಿಶಾಖ್ಯಾನುಸಾರವಾಗಿ ವ್ಯಾಸಸೂತ್ರ (ಶಿಕ್ಷಾಗ್ರಂಥ) ವಿರುವಂತೆ, ಶುಕ್ಲಯಜುಃಪ್ರಾತಿಶಾಖ್ಯಾನುಸಾರವಾಗಿ ಯಾಜ್ಞವಲ್ಕ್ಯಪ್ರಣೀತ ಶಿಕ್ಷಾಗ್ರಂಥವಿರುವುದೆಂದು ತಿಳಿದುಕೊಂಡರೆ ಸಾಕಲ್ಲವೇ !

ಋಕ್ಪ್ರಾತಿಶಾಖ್ಯವೇ ಮುಂತಾದ ಪುರಾತನ ಶಿಕ್ಷಾಶಾಸ್ತ್ರಗಳಿಗೆ ಉವ್ವಟ ಮೊದಲಾದ ವಿದ್ವಾಂಸರಿಂದ ಬರೆಯಲ್ಪಟ್ಟ ವ್ಯಾಖ್ಯಾನಗಳಿರುತ್ತವೆ; ಆದರೂ ತದ್ಗ್ರಂಥ ಪ್ರತಿಪಾದ್ಯವಿಷಯಗಳು ಆ ಶಾಸ್ತ್ರಸಂಪ್ರದಾಯಸಿದ್ಧರಾದ ಆಚಾರ್ಯರ ಬಳಿಯಲ್ಲಿ ಅರ್ಥವತ್ತಾಗಿ ಪಠಿಸದವರಿಗೆ ಅನುಭವಗಮ್ಯವಾಗಲಾರವು. ಆ ಪ್ರಾತಿಶಾಖ್ಯಗಳೆಲ್ಲಿರುವ ವಿಷಯಗಳ ದಿಗ್ದರ್ಶನವಿಂತಿರುವುದು. ೧ ವರ್ಣಸಮಾಮ್ನಾಯ, ಸ್ವರವ್ಯಂಜನಗಳ ಗಣನೆಯು; ಮತ್ತು ಅವುಗಳನ್ನು ಉಚ್ಚರಿಸುವುದೇ ಮೊದಲಾದವುಗಳ ನಿಯಮವು. ೨ ಸಂಧಿಗಳು ( ಅಚ್, ಹಲ್ ವಿಸರ್ಗ ಮೊದಲಾದುವು ) ೩ ಪ್ರಗೃಹ್ಯಸಂಜ್ಞಾ, ಅವಗ್ರಹ ( ಪದವಿಭಾಗನಿಯಮ ). ಮತ್ತು ಇದರ ಅಪವಾದಸೂತ್ರಗಳು. ೪ ಉದಾತ್ತ ಅನುದಾತ್ತ ಶಬ್ದಗಳ ಗಣನೆಯು, ಸ್ವರಿತಭೇಧ, ಆಖ್ಯಾತಸ್ವರಗಳು ಮುಂತಾದುವು. ೫ ಸಂಹಿತಾಪಾಠಕ್ಕೂ ಪದಪಾಠಕ್ಕೂ ಇರತಕ್ಕ ಭೇದದರ್ಶಕನಿಯಮಗಳು. ಸತ್ವ, ಷತ್ವ, ದೀರ್ಘ ಮೊದಲಾದವುಗಳ ವಿವರಣೆಯು. ೬ ಅಥರ್ವಪ್ರಾತಿಶಾಖ್ಯದಲ್ಲಿ ಸಂಹಿತಾಪಾಠಪದಪಾಠಗಳ ನಿಯಮಗಳಲ್ಲದೆ, ಕ್ರಮಪಾಠದ ನಿಯಮಗಳಾದರೂ ತೋರಿಸಲ್ಪಟ್ಟಿವೆ. ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ಈ ಮೂರುತೆರದ ನಿಯಮಗಳೂ ಜಟಾಪಾಠದ ನಿಯಮಗಳೂ ಉಲ್ಲೇಖಿಸಲ್ಪಟ್ಟಿವೆ. ೭ ಸಾಮಪ್ರಾತಿಶಾಖ್ಯದಲ್ಲಿ ಸಾಮವೇದದ ಬೇರೆ ಬೇರೆ ವಿಧಗಳಾದ ಗೀತ ( ಗಾನ ) ಗಳಲ್ಲಿರತಕ್ಕ ಪ್ರಶ್ಲೇಷ, ವಿಶ್ಲೇಷ, ವೃದ್ಧ, ಅವೃದ್ಧ, ಗತ, ಅಗತ, ಉಚ್ಚ, ನೀಚ, ಕೃಷ್ಟ, ಅಕೃಷ್ಟ, ಸಂಕೃಷ್ಟ ಮೊದಲಾದ ಉಚ್ಚಾರಣಕೃತಭೇದಗಳ ವರ್ಣನೆಯುಂಟು.

ಪ್ರಾತಿಶಾಖ್ಯಗಳ ಪ್ರವರ್ತಕರಲ್ಲಿ ಮುಖಂಡರಾದ ಶೌನಕನೂ ಕಾತ್ಯಾಯನನೂ ವೇದವಾಙ್ಮಯದೊಡನೆ ನಿಕಟಸಂಬಂಧವುಳ್ಳ 'ಅನುಕ್ರಮಣೀ' ಎಂಬಭಿಧಾನವುಳ್ಳ ಗ್ರಂಥಗಳನ್ನು ಬರೆದಿದ್ದಾರೆ. ಇವುಗಳಿಗೆ 'ಷಡ್ಗುರುಶಿಷ್ಯ' ನೆಂಬಾತನು ವ್ಯಾಖ್ಯಾನಗಳನ್ನು ಬರೆದಿದ್ದಾನೆ. ಈ ಷಡ್ಗುರುಶಿಷ್ಯಕೃತವ್ಯಾಖ್ಯಾನೋಪೇತಗಳಾದ ಆ ಅನುಕ್ರಮಣೀ ಗ್ರಂಥಗಳು ಬರ್ಲಿನ್ ಶಹರದಲ್ಲಿ ಮುದ್ರಣ ಸಂಸ್ಕಾರವನ್ನು ಪಡೆದು ಭಾರತೀಯರ ಹಸ್ತಪೀಠಗಳನ್ನಲಂಕರಿಸಿವೆ. ಈ ಗ್ರಂಥಗಳಿಂದ ವೈದಿಕ ಸಂಹಿತೆಗಳ ಬೇರೆಬೇರೆ ಭಾಗಗಳಲ್ಲಿ ಯಾವ ಯಾವ ವಿಷಯಗಳು ವಿವೇಚಿಸಲ್ಪಡುವುವೆಂಬುದು ಗೊತ್ತಾಗುವುದು. ಶೌನಕನು ವೈದಿಕ ಸೂಕ್ತಗಳಲ್ಲಿಯ ಋಷಿವರ್ಗದ ಅನುಕ್ರಮಣಿಯನ್ನೂ, ಬೇರೆಬೇರೆಯಾಗಿರುವ ಛಂದಸ್ಸುಗಳನ್ನೂ ದೇವತೆಗಳನ್ನೂ, ಸೂತ್ರಗಳನ್ನೂ ವಿವರಿಸಿ ಬರೆದಿದ್ದಾನೆ. ಕಾತ್ಯಾಯನನು ಋಗ್ವೇದದೊಳಗಿನ ಸರ್ವಸಂಗತಿಯನ್ನೂ ಸೂಚಿಸತಕ್ಕ "ಸರ್ವಾನುಕ್ರಮಣೀ" ಎಂಬುದನ್ನು ರಚಿಸಿದ್ದಾನೆ. ಈ ಗ್ರಂಥದಲ್ಲಿ ಸೂತ್ರಪದ್ಧತಿಯಿಂದ ಪ್ರತಿಯೊಂದು ಸೂಕ್ತದ ಆದಿಶಬ್ದವೂ ಋಕ್ಕುಗಳ ಸಂಖ್ಯೆಯೂ, ಯಾವ ಋಷಿಯಿಂದ ಆ ಋಕ್ಕುಗಳು ಪ್ರಕಟವಾದವೆಂಬುದನ್ನೂ ಹೇಳುವಾಗ ಆ ಋಷಿಯ ಅಭಿಧಾನಗೋತ್ರಗಳೂ, ಯಾವ ದೇವತೆಗಳ ಪ್ರೀತ್ಯರ್ಥವಾಗಿ ಆ ಋಕ್ಕುಗಳು ಹೊರಹೊಮ್ಮಿದವೋ ಆ ದೇವತೆಗಳ ಹೆಸರುಗಳೂ, ಆ ಋಕ್ಕುಗಳು ಯಾವ ಛಂದೋಬದ್ಧ (ವೃತ್ತ) ಗಳಾಗಿರುವುವೋ ಆ ವೃತ್ತಗಳೂ ಪ್ರತಿಪಾದಿಸಲ್ಪಟ್ಟಿವೆ,

ಮತ್ತು, ಶೌನಕನು "ಬೃಹದ್ದೇವತಾ" "ಋಗ್ವಿಧಾನ" ಎಂಬಿವೆರಡು ಪದ್ಯಾತ್ಮಕಗ್ರಂಥಗಳನ್ನೂ ರಚಿಸಿದ್ದಾನೆ. 'ಬೃಹದ್ದೇವತಾ' ಅಂದರೆ ಋಗ್ವೇದದೊಳಗಿನ ಬೇರೆಬೇರೆ ಸೂಕ್ತಗಳಿಂದ ಆಹ್ವಾನಿಸಲ್ಪಡುವ ದೇವತೆಗಳನ್ನು ವಿವರಿಸುವ ಗ್ರಂಥವು. ಈ ಗ್ರಂಥದಲ್ಲಿ ಆ ಆ ದೇವತೆಗಳ ಸಂಬಂಧವಾದ ಪೌರಾಣಿಕ ಕಥೆಗಳೂ ಇವೆ; ಇದರಿಂದ ಈ ಗ್ರಂಥವು ಭಾರತೀಯ ಕಥಾವಾಙ್ಮಯ ದೃಷ್ಟಿಯಿಂದಲೂ ಬಹುಮಹತ್ವವುಳ್ಳದ್ದಾಗಿದೆ.

"ಋಗ್ವಿಧಾನ" ವೆಂಬ ಗ್ರಂಥದಲ್ಲಿ ಋಗ್ವೇದಾಂತರ್ಗತಗಳಾದ ಅನೇಕ ಸೂಕ್ತಗಳ ಜಪವಿನಿಯೋಗರೀತಿಗಳೂ ತತ್ಫಲಗಳೂ ವಿಧಿಸಲ್ಪಟ್ಟಿವೆ. ಹೇಗೆಂದರೆ—

**(೧-೩-೨೬) ಕದ್ರುದ್ರಾಯ ಜಪೇತ್ಸೂಕ್ತಂ ಶೀತಜ್ವರವಿನಾಶನಮ್ |**
**ಲಿಂಗಂಸ್ಪೃಷ್ಟ್ವಾಯುತಂ ಧೀಮಾನ್ನಿರೋಗೀ ಶೀಘ್ರತಸ್ತದಾ ||**
**(೪-೭-೩೧)-ಉರುಂ ನಃ ಪ್ರಜಪೇನ್ಮಂತ್ರಂಶತವಾರಂ ದಿನೇದಿನೇ**
**ಶಿವೇನ ಸಹ ವಕ್ತ್ರಾಚ ಶಿವಲೋಕೇ ಮಹೀಯತೇ ||**

ಎಂಬಿವೇ ಮುಂತಾದ ವಾಕ್ಯಗಳು ಋಗ್ವೇದಾಂತರ್ಗತಗಳಾದ ಬೇರೆಬೇರೆ ಸೂಕ್ತಗಳ ಜಪದಿಂದ ಜ್ಞಾತಾಜ್ಞಾತಪಾಪಗಳ ನಿವೃತ್ತಿಯೂ, ಚಿತ್ತಶುದ್ಧಿಯೂ, ದೀರ್ಘಾಯುರಾರೋಗ್ಯಭಾಗ್ಯವೂ ಮುಂತಾದ ಅಭೀಷ್ಟಾರ್ಥಸಿದ್ಧಿಗಳುಂಟಾಗುವುವೆಂದು ನಿರೂಪಿಸುತ್ತವೆ.

**ವ್ಯಾಕರಣವು:—** ವೇದದ ಷಡಂಗಗಳಲ್ಲಿ ಪರಿಗಣಿಸಲ್ಪಡುವ ವ್ಯಾಕರಣಶಾಸ್ತ್ರವೆಂಬುದು ಇದೇ ಎಂದು ಹೇಳಲ್ಪಡತಕ್ಕ ತೀರ ಹಳೆಯ ಗ್ರಂಥವಾವುದೂ ಈವರೆಗೆ ಉಪಲಬ್ಧವಿಲ್ಲ. ವೇದಾರ್ಥವಿವರಣೆಯೊಡನೆ ನಿಕಟಸಂಬಂಧವುಳ್ಳ ಶಾಬ್ದಿಕಗ್ರಂಥಗಳೇ ವ್ಯಾಕರಣಶಾಸ್ತ್ರಗಳೆಂದು ಹೇಳಲ್ಪಡುತ್ತವೆ. ಆರಣ್ಯಕಗಳಲ್ಲಿ ಕೆಲವೆಡೆ ವ್ಯಾಕರಣದ ಪಾರಿಭಾಷಿಕ ಶಬ್ದಗಳು ಕಂಡುಬರುತ್ತವೆ. ಪಾಣಿನಿಯ 'ಅಷ್ಟಾಧ್ಯಾಯಿ' ಎಂಬ ಗ್ರಂಥವು ವ್ಯಾಕರಣದ ದೃಷ್ಟಿಯಿಂದ ವೇದಾಂಗವೆನಿಸಿಕೊಳ್ಳುವುದು, ಆದರೆ ಆ ನುಡಿಗಟ್ಟಾದರೋ ಬಳಕೆಯ ಸಕ್ಕದ ಮಾತುಗಳ ಚೊಕ್ಕಳಿಕೆಯ ಕಟ್ಟಳೆಗಾಗಿ ಹುಟ್ಟಿದುದೆಂದು ಗಟ್ಟಿಯಾಗಿ ಹೇಳಬಹುದಲ್ಲವೇ? ವೈದಿಕವ್ಯಾಕರಣದ ವಿಚಾರವು ಅದರಲ್ಲಿ ಪ್ರಸಂಗೋಪಾತ್ತವಲ್ಲದೆ ಮುಖ್ಯವಾದುದಲ್ಲ; ಆದ್ದರಿಂದ ವೇದಾಂಗಭೂತಗಳಾದ ವ್ಯಾಕರಣಗ್ರಂಥಗಳಲ್ಲಿ ಪ್ರತಿಯೊಂದು ಶಾಖೆಯನ್ನನುಸರಿಸಿರುವ ಮೇಲೆ ಹೇಳಲ್ಪಟ್ಟ ಪ್ರಾತಿಶಾಖ್ಯಗಳೇ ಪುರಾತನವಾದುವೆಂದು ಹೇಳಿದರೆ ತಾನೇ ದೋಷವೇನು? ಇನ್ನು, ಶಿಕ್ಷಾಶಾಸ್ತ್ರಪ್ರವರ್ತಕನಾದ ಪಾಣಿನಿಮುನಿಯೇ ಮಹೇಶ್ವರ ಪ್ರಸಾದದಿಂದ ರಚಿಸಿದ ವ್ಯಾಕರಣಶಾಸ್ತ್ರವು ಕೇವಲ ಲೌಕಿಕಪ್ರಯೋಗಗಳ ಜ್ಞಾನವನ್ನುಂಟುಮಾಡಿಕೊಡುವುದಕ್ಕೋಸ್ಕರವಾಗಿಯೇ ಇರುವುದೆಂದು ಹೇಳಲಿಕ್ಕಾಗದು. ಈ ಮಾತನ್ನೊಡಂಬಟ್ಟರೆ ಪಾಣಿನೀಯವ್ಯಾಕರಣಕ್ಕೆ ವೇದಾಂಗತ್ವವು ಸಿದ್ಧಿಸುವುದು. ಈ ವ್ಯಾಕರಣಶಾಸ್ತ್ರದ ಪ್ರಥಮ ಸೂತ್ರವು 'ವೃದ್ಧಿರಾದೈಚ್' ಎಂಬುದು. ಈ ಶಾಸ್ತ್ರದಲ್ಲಿ ಎಂಟು ಅಧ್ಯಾಯಗಳೂ ಮೂವತ್ತೆರಡುಪಾದಗಳೂ ಇವೆ. ಈ ಪಾಣಿನೀಯ ಸೂತ್ರಗಳಿಗೆ ಕಾತ್ಯಾಯನಮುನಿಯು ವಾರ್ತಿಕವನ್ನು ರಚಿಸಿದ್ದಾನೆ. 'ವಾರ್ತಿಕ'ವು ಅಂದರೆ—

ಉಕ್ತಾನುಕ್ತದುರುಕ್ತಾನಾಂ ಚಿಂತಾ ಯತ್ರಪ್ರವರ್ತತೆ ।
ತಂ ಗ್ರಂಥಂ ವಾರ್ತಿಕಂ ಪ್ರಾಹುರ್ವಾರ್ತಿಕಜ್ಞಾ ಮನೀಷಿಣಃ ॥

ಯಾವ ಗ್ರಂಥದಲ್ಲಿ ಮೂಲಸೂತ್ರಾದಿಗಳಿಂದ ಉಕ್ತವೂ, ಅನುಕ್ತವೂ ದುರುಕ್ತವೂ ಆದ ಅರ್ಥಗಳ ವಿಚಾರವು ಮಾಡಲ್ಪಡುವುದೋ ಆ ಗ್ರಂಥವನ್ನು ವಾರ್ತಿಕಜ್ಞರಾದ ವಿಬುಧರು 'ವಾರ್ತಿಕ' ವೆಂದು ಹೇಳುತ್ತಾರೆ. ವ್ಯಾಕರಣ, ನ್ಯಾಯ, ಮೀಮಾಂಸಾದಿ ಪ್ರಸಿದ್ಧಗ್ರಂಥಗಳಿಗೆ ಇಂತಹ ಬೇರೆಬೇರೆ ವಾರ್ತಿಕಗಳಿವೆ.

ವ್ಯಾಕರಣದಿಂದಾವ ಪ್ರಯೋಜನವೆಂದರೆ— ವೈದಿಕಪದಗಳ ಸಾಧುತ್ವಜ್ಞಾನಮೂಲಕ ಊಹಾದಿಗಳನ್ನು ಮಾಡಲಿಕ್ಕೆ ಬರುವುದೇ ವ್ಯಾಕರಣಾಧ್ಯಯನದ ಪ್ರಯೋಜನವು. 'ಊಹ' ವು ಅಂದರೆ ಅಧ್ಯಾಹಾರವು ಅನ್ವಯಕ್ಕೆ ಯೋಗ್ಯವಾದ ವಿಭಕ್ತ್ಯಾದಿಗಳನ್ನು ಕಲ್ಪಿಸುವಿಕೆಯು. ಹೇಗೆಂದರೆ, ಪಾರ್ವಣ ಶ್ರಾದ್ಧದಲ್ಲಿ "[ಪರೇತಪಿತರಃ] ಸೌಮ್ಯಾಸಃ" ಎಂಬ ಬಹು ವಚನಯುಕ್ತವಾದ ಪದವು ಅನ್ವಿತವಾಗಿದೆ. ಏಕೆಂದರೆ, ಅಲ್ಲಿ ಪಿತೃಗಳ ಸಂಖ್ಯೆಯು ಮೂರಿರುವುದು. ಆದರೆ ಒಂದೇ ದೇವತೆಯಿಂದ ಯುಕ್ತವಾದ ಏಕೋದ್ದಿಷ್ಟಶ್ರಾದ್ಧದಲ್ಲಾದರೋ "ಸೌಮ್ಯಾಸಃ" ಎಂಬ ಬಹುವಚನ ಪದವು ಸುಸಂಗತ (ಅನ್ವಿತ) ವಾಗುವುದಿಲ್ಲ. ಆದ್ದರಿಂದ, ಅಲ್ಲಿ 'ಸೌಮ್ಯಃ' ಎಂಬ ಏಕವಚನಾಂತಪದವು ಕಲ್ಪಿಸಲ್ಪಡುವುದು; ಇದಕ್ಕೇ "ಊಹ" ವೆನ್ನುತ್ತಾರೆ. ಹೀಗೆ ಊಹಾದಿಗಳನ್ನು ಮಾಡಲಿಕ್ಕೆ ಬರುವುದೇ ವ್ಯಾಕರಣದಿಂದುಂಟಾಗುವ ಪ್ರಯೋಜನವು. ಈ ವಿಧವಾದ ಜಾಣತನವಾದರೋ ಶುದ್ಧ ಶಬ್ದಗಳ ಪರಿಜ್ಞಾನವಿಲ್ಲದೆ ಸಂಭವಿಸದು. ಮತ್ತು 'ಊಹಾದಿಗಳು' ಎಂಬಲ್ಲಿ ಆದಿಶಬ್ದದಿಂದ ವೇದಗಳ ಪರಿಪಾಲನೆಯೂ, ಅಧ್ಯಯನವೂ, ಅಲ್ಪೋಪಾಯದಿಂದ ಶಬ್ದಜ್ಞಾನವೂ ಅಸಂದೇಹವೂ ( ಅರ್ಥಾದಿಗಳ ನಿಶ್ಚಿತಜ್ಞಾನವೂ ) ಎಂಬೀ ಪ್ರಯೋಜನಗಳೂ ವ್ಯಾಕರಣದಿಂದ ಸಿದ್ಧಿಸುವುವು. ಈ ವಿಷಯಕವಾಗಿ ಪಾತಂಜಲ ಮಹಾಭಾಷ್ಯದಲ್ಲಿ ವಿಸ್ತೃತವಾಗಿ ವಿವೇಚಿಸಲ್ಪಟ್ಟಿದೆ. " ರಕ್ಷೋಹಾಗಮಲಘ್ವಸಂದೇಹಾಃ ಪ್ರಯೋಜನಮ್ " ಅಂದರೆ ರಕ್ಷಾ, ಊಹ, ಆಗಮ, ಅಲಘು, ಅಸಂದೇಹವೆಂಬಿವು ಶಬ್ದಾನುಶಾಸನದ ಪ್ರಯೋಜನಗಳು. ಈ ಪ್ರಯೋಜನಗಳ ಅರ್ಥವನ್ನು ಸ್ವತಃ ಪತಂಜಲಿಮುನಿಯೇ ವಿಶದೀಕರಿಸಿದ್ದಾನೆ. ಅದು ಸಹೃದಯಹೃದಯಂಗಮವಾಗಿರುವದರಿಂದ ಅದರ ಭಾವವು ಇಲ್ಲಿ ಪ್ರತಿಬಿಂಬಿಸುವಂತೆ ಮಾಡತೊಡಗುವಾ !

ಪಾಣಿನೀಯ ವ್ಯಾಕರಣ ಸೂತ್ರಗಳಿಗೆ ಕಾತ್ಯಾಯನ ಮುನಿಪ್ರಣೀತವಾರ್ತಿಕವಿರುವಂತೆ ತದನುಸಾರವಾದ ಭಾಷ್ಯವೂ ಪತಂಜಲಿ ಮುನಿಯಿಂದ ರಚಿಸಲ್ಪಟ್ಟಿದೆ. ಇದುವೇ "ಪಾತಂಜಲ ಮಹಾಭಾಷ್ಯ"ವೆಂದು ಪ್ರಸಿದ್ಧವಾಗಿರುತ್ತದೆ. 'ಭಾಷ್ಯ' ಅಂದರೆ:—

**ಸೂತ್ರಾರ್ಥೋವರ್ಣ್ಯತೇ ಯತ್ರ ಪದೈಃ ಸೂತ್ರಾನುಸಾರಿಭಿಃ।**
**ಸ್ವಪದಾನಿ ಚ ವರ್ಣ್ಯನ್ತೇ ಭಾಷ್ಯಂ ಭಾಷ್ಯವಿದೋವಿದುಃ॥**

ಯಾವುದು ಮೂಲಸೂತ್ರಾರ್ಥವನ್ನು ಸೂತ್ರಸಮಾನಪದಗಳಿಂದ ವರ್ಣಿಸಿ, ಕೂಡಲೇ ತನ್ನ ಸೂತ್ರಭೂತಪದಗಳನ್ನೂ ವಿಸ್ತೃತವಾಗಿ ವಿವರಿಸುವುದೋ ಅದನ್ನು ಭಾಷ್ಯವೇತ್ತರು 'ಭಾಷ್ಯ' ವೆಂದು ಹೇಳುತ್ತಾರೆ. ವೈದಿಕವಾಙ್ಮಯದಲ್ಲಿ ವಾರ್ತಿಕ, ಭಾಷ್ಯ, ಟೀಕೆ, ವಿವರಣ, ಟಿಪ್ಪಣಿ, ಪದಯೋಜನೆ ಇತ್ಯಾದಿ ಶಬ್ದಗಳು ರೂಢವಾಗಿವೆ. ಮತ್ತು ಅವುಗಳ ಅರ್ಥಗಳಾದರೂ ಲಕ್ಷಣಗಳಿಂದ ನಿಶ್ಚಿತಗೊಳಿಸಲ್ಪಟ್ಟಿವೆ. ಪ್ರಾಚೀನ ಗ್ರಂಥಕಾರರು ಆ ಆ ಲಕ್ಷಣಲಕ್ಷಿತವಾದ ಗ್ರಂಥಕ್ಕೇ ಆ ಆ ಹೆಸರನ್ನಿಡುತ್ತಿದ್ದರು. ಅದು ಕಾರಣವೇ ಕಾತ್ಯಾಯನಮುನಿಯ ಸೂತ್ರಭೂತವಾಕ್ಯಗಳಿಗೆ ವಾರ್ತಿಕವೆಂದೂ, ಪತಂಜಲಿಮುನಿಯ ಗ್ರಂಥಕ್ಕೆ ಭಾಷ್ಯವೆಂದೂ ಹೇಳುತ್ತಾರೆ. ಇದೇಮೇರೆಗೆ ಜೈಮಿನಿಮುನಿಯ ಆಚಾರ (ಕರ್ಮ) ಬೋಧಕಸೂತ್ರಗಳಿಗೆ ಶಬರಸ್ವಾಮಿಯ ಭಾಷ್ಯವೂ, ಕುಮಾರಿಲಭಟ್ಟನವಾರ್ತಿಕವೂ, ಬಾದರಾಯಣಮುನಿಯ ವಿಚಾರಸೂತ್ರಗಳಿಗೆ ಶಿವಾದ್ವೈತ, ಕೇವಲಾದ್ವೈತ, ದ್ವೈತಾದಿ ಬೇರೆಬೇರೆ ಮತಪ್ರಕ್ರಿಯಾನುಸಾರಗಳಾದ ಬೇರೆ ಬೇರೆ ಭಾಷ್ಯಗಳೂ, ವಾರ್ತಿಕಗಳೂ, ಗೌತಮಕೃತ ನ್ಯಾಯಸೂತ್ರಗಳಿಗೆ ವಾತ್ಸ್ಯಾಯನ ಪ್ರಣೀತಭಾಷ್ಯವೂ, ಪಕ್ಷಿಲಮುನಿಕೃತವಾರ್ತಿಕವೂ ಎಂಬಿವು ಮುಂತಾದವುಗಳಿವೆ.

ಮೇಲೆ ಹೇಳಲ್ಪಟ್ಟ ಲಕ್ಷಣಗಳು ಈ ಸರ್ವವಾರ್ತಿಕಗಳಲ್ಲಿಯೂ ಭಾಷ್ಯಗಳಲ್ಲಿಯೂ ಸ್ಪಷ್ಟವಾಗಿರುವುದರಿಂದಲೇ ಆ ಆ ವಿಷಯಗಳ ಮೇಲೆ ಅನ್ಯ ವಿದ್ವಾಂಸರಿಂದ ಇತರ ಅನೇಕ ಸಂಸ್ಕೃತ ಗ್ರಂಥಗಳು ರಚಿಸಲ್ಪಟ್ಟರೂ ಅವುಗಳನ್ನು ಯಾರೂ 'ವಾರ್ತಿಕ' ಗಳೆಂದಾಗಲಿ, ಭಾಷ್ಯಗಳೆಂದಾಗಲಿ ಹೇಳದೆ ಟೀಕೆ, ವ್ಯಾಖ್ಯಾನ, ವಿವರಣಾದಿನಾಮಗಳಿಂದೇ ಪ್ರಸಿದ್ಧಪಡಿಸಿದ್ದಾರೆ.

ನಮ್ಮ ಪ್ರಾಚೀನ ಶಾಸ್ತ್ರಪದ್ಧತಿಯಂತೆ ಸೂತ್ರ, ಭಾಷ್ಯ ವಾರ್ತಿಕವೆಂಬಿವು ಮೂರರಿಂದೇ ಆ ಆ ಶಾಸ್ತ್ರಗಳ ಪೂರ್ಣತೆಯುಂಟಾಗುವುದು.

ಮತ್ತು ಅವುಗಳನ್ನು ಪ್ರಮಾಣವೆಂದು ಭಾವಿಸಿಯೇ ಆ ಆ ಶಾಸ್ತ್ರಗಳ ಟೀಕಾದಿಗ್ರಂಥಗಳು ಬರೆಯಲ್ಪಡುತ್ತವೆ. ವ್ಯಾಕರಣಶಾಸ್ತ್ರದ ಪಾಣಿನಿ ಮುನಿಯ ಸೂತ್ರಗಳೂ, ಕಾತ್ಯಾಯನಮುನಿಯ ವಾರ್ತಿಕವೂ, ಪತಂಜಲಿಮುನಿಯ ಭಾಷ್ಯವೂ ಎಂಬಿವು ಮೂರೂ ಪ್ರಮಾಣಭೂತ ಗ್ರಂಥಗಳಾಗಿರುವುದರಿಂದೇ ಈ ಶಾಸ್ತ್ರಕ್ಕೆ 'ತ್ರಿಮುನಿವ್ಯಾಕರಣ' ವೆನ್ನುತ್ತಾರೆ.

ಪತಂಜಲಿಮುನಿಯು ತನ್ನ ಗ್ರಂಥಕ್ಕೆ 'ಭಾಷ್ಯ' ವೆಂಬ ಸಂಜ್ಞೆಯಿರುವುದು ಸಾರ್ಥಕವಾದುದೆಂಬುದನ್ನು ತೋರಿಸುವುದಕ್ಕೋಸ್ಕರವೇ "**ರಕ್ಷೋಹಾಗಮಲಘ್ವಸಂದೇಹಾಃ ಪ್ರಯೋಜನಮ್**" ಎಂಬ ಸೂತ್ರರೂಪವಾದ ವಾಕ್ಯವನ್ನೇ ಕ್ರಮವಾಗಿ ವಿವರಿಸಿದ್ದಾನೆ. ಮೊದಲು 'ರಕ್ಷಾ' ಎಂಬ ಪ್ರಯೋಜನದ ವ್ಯಾಖ್ಯೆಯನ್ನು ಹೀಗೆ ಮಾಡಿದ್ದಾನೆ. ವೇದಗಳ ರಕ್ಷಣೆಗಾಗಿ ವ್ಯಾಕರಣಶಾಸ್ತ್ರವನ್ನು ಅವಶ್ಯವಾಗಿ ಅಧ್ಯಯನ ಮಾಡತಕ್ಕದ್ದು. ಏಕೆಂದರೆ, ಲೋಪ-ಆಗಮ-ವರ್ಣವಿಕಾರ ಮೊದಲಾದವುಗಳನ್ನು ತಿಳಿದುಕೊಂಡವನೇ ವೇದಗಳನ್ನು ಚೆನ್ನಾಗಿ ಕಾಪಾಡಬಲ್ಲನು. ಅವನಿಗೇ ಇಲ್ಲಿ ಲೋಪವೆಂತಾದುದು ? ಇಲ್ಲಿ ಆಗಮವು ಹೇಗಾಯ್ತು ? ಇಲ್ಲಿ ತ್ ಇದ್ದಲ್ಲಿ ನ್ ಏಕೆ ಆಯಿತು ? ನ್ ದ ಅನುಸ್ವಾರವೆಂತಾದುದು ? ಎಂಬೀ ಮುಂತಾದುದರ ಪರಿಜ್ಞಾನವಿರುವುದು. ಈ ಮೂಲಕವಾಗಿ ಅವನು ಸ್ವತಃ ಶುದ್ಧವಾಗಿ ಪಠಿಸುವನಲ್ಲದೇ ಅನ್ಯರಿಗೂ ಸುಶುದ್ಧವಾಗಿ ವೇದಪಾಠವನ್ನು ಹೇಳಬಲ್ಲನು.

'**ಊಹ**' ವೆಂಬುದು ಶಬ್ದಾನುಶಾಸನದ ಎರಡನೆಯ ಪ್ರಯೋಜನವು. ವೇದಮಂತ್ರಗಳು ಸರ್ವಲಿಂಗವಿಭಕ್ತಿಗಳಿಂದ ಪಠಿಸಲ್ಪಡುವುದಿಲ್ಲ. ಯಜ್ಞಾದಿಕರ್ಮಕರ್ತನಾದ ಬ್ರಾಹ್ಮಣನು ಸಂದರ್ಭಾನುಸಾರವಾಗಿ ಅವುಗಳನ್ನು ವಿಪರಿಣಾಮ ( ಬದಲಾವಣೆ ) ಗೊಳಿಸಬೇಕಾಗುತ್ತದೆ. ಅವನಿಂದ ವ್ಯಾಕರಣವೇ ಅಧ್ಯಯನ ಮಾಡಲ್ಪಡದಿದ್ದರೆ ಅವನಿಗೆ ಪ್ರಸಂಗಾನುಗುಣವಾಗಿ ಲಿಂಗವಿಭಕ್ತಿಗಳನ್ನು ಉಚಿತವಾಗಿ ವಿಪರಿಣಾಮಗೊಳಿಸುವುದೇ ಗೊತ್ತಾಗುವುದಿಲ್ಲ. ಈ ವಿಷಯದಲ್ಲಿ ಹಿಂದೆ ನಾವು 'ಸೌಮ್ಯಾಸಃ ಎಂಬ ಪದದ ಉದಾಹರಣೆಯನ್ನು ತೋರಿಸಿದ್ದೇವೆ. ಆದ್ದರಿಂದ ಪ್ರಸಂಗದಲ್ಲಿ ಮಂತ್ರೋಕ್ತಪದಗಳ ಯೋಗ್ಯವಾದ 'ಊಹ' ವನ್ನು ಮಾಡುವುದಕ್ಕೆ ಬರಬೇಕೆಂಬುದ್ದೇಶದಿಂದಲೇ ವ್ಯಾಕಾರಣಾಧ್ಯಯನದ ಆವಶ್ಯಕತೆಯುಂಟು.

''ಆಗಮ'' ವೆಂಬುದು ಶಬ್ದಾನುಶಾಸನದ ಮೂರನೆಯ ಪ್ರಯೋಜನವು. ಬ್ರಾಹ್ಮಣನು ಯಾವ ಫಲಾಪೇಕ್ಷೆಯೂ ಇಲ್ಲದೇ 'ಧರ್ಮ' ಭಾವನೆಯಿಂದ ಷಡಂಗವೇದಾಧ್ಯಯನವನ್ನು ಮಾಡತಕ್ಕದ್ದು: ಹಾಗೂ ಆ ಸಾಂಗವೇದದ ಅರ್ಥವನ್ನಾದರೂ ಅರಿತುಕೊಳ್ಳಬೇಕು ಎಂಬ ವಿಧಿ ವಾಕ್ಯವಿದೆ. 'ಮುಖಂ ವ್ಯಾಕರಣಂ ಸ್ಮೃತಮ್ ।' ಎಂಬಂತೆ ವೇದ ಪುರುಷನ ಮುಖವೆನಿಸುವ ವ್ಯಾಕರಣವು ಷಡಂಗಗಳಲ್ಲಿ ಪ್ರಧಾನವಾದು ದರಿಂದ, ಪ್ರಧಾನವಾದುದರ ಸಲುವಾಗಿ ಮಾಡಲ್ಪಡುವ ಯತ್ನವು ಸಫಲವಾಗದಿರದು. ಆದ್ದರಿಂದ ಬ್ರಾಹ್ಮಣನಿಗೆ ಸ್ವಧರ್ಮದೃಷ್ಟಿಯಿಂದಲೂ ವ್ಯಾಕರಣಾಧ್ಯಯನವು ವಿಹಿತವಾಗಿದೆ.

''ಲಘು'' ವೆಂಬುದು ಶಬ್ದಾನುಶಾಸನದ ನಾಲ್ಕನೆಯ ಪ್ರಯೋಜನವು. ಇದಕ್ಕೋಸ್ಕರವೂ ವ್ಯಾಕರಣದ ಅಧ್ಯಯನವು ಅವಶ್ಯವಾದುದು. ಬ್ರಾಹ್ಮಣನಿಗೆ ಶಬ್ದಗಳ ಜ್ಞಾನವಿರಬೇಕಾದುದಲ್ಲವೇ ? ವ್ಯಾಕರಣದ ಹೊರತು ಅನ್ಯ ಯಾವ ಸುಲಭೋಪಾಯಗಳಿಂದಲೂ ಶಬ್ದಗಳನ್ನರಿತು ಕೊಳ್ಳಲು ಶಕ್ಯವಿಲ್ಲ. ಈ ವಿಷಯದಲ್ಲಿ ಪತಂಜಲಿಮುನಿಯು— ವೇದದೊಳಗಿನ ಪ್ರತಿಯೊಂದು ಶಬ್ದದ ಜ್ಞಾನವನ್ನುಂಟುಮಾಡಿಕೊಳ್ಳಬೇಕಾದುದೋ ಹೇಗೆ ? ಎಂದು ಆಕ್ಷೇಪಿಸಿಕೊಂಡು ಅದಕ್ಕೆ ಉತ್ತರವನ್ನು ಹೇಳುತ್ತಾನೆ. 'ಪ್ರತಿಪದಪಾಠ' ವೆಂಬುದು ಶಬ್ದಜ್ಞಾನೋಪಾಯವಲ್ಲ, ಏಕೆಂದರೆ ಈ ಬಗ್ಗೆ ಒಂದು ಆಖ್ಯಾಯಿಕೆಯುಂಟು. ಅದೆಂತೆಂದರೆ, ಪುರಾತನ ಕಾಲದಲ್ಲಿ ಬೃಹಸ್ಪತ್ಯಾಚಾರ್ಯನು ಇಂದ್ರನಿಗೆ ದಿವ್ಯಸಹಸ್ರ ವರ್ಷಗಳ ವರೆಗೂ ಪ್ರತಿಪದೋಕ್ತ ಶಬ್ದಗಳ ಪಾರಾಯಣವನ್ನು ಬೋಧಿಸಿದನು; ಆದರೂ ಕೊನೆಗಾಣಲಿಲ್ಲ. ಬೃಹಸ್ಪತಿಯು ಅಧ್ಯಾಪಕನು, ಇಂದ್ರನು ಅಧ್ಯಯನಮಾಡತಕ್ಕವನು, ದಿವ್ಯಸಹಸ್ರವರ್ಷಗಳ ವರೆಗೆ ಅಧ್ಯಯನಕಾಲವು; ಹೀಗಿದ್ದರೂ ಇಂದ್ರನಿಗೆ ಶಬ್ದಜ್ಞಾನವು ಪೂರ್ಣವಾಗಲಿಲ್ಲ ! ಈ ವಿಷಯಕವಾಗಿ ವರ್ತಮಾನಕಾಲದಲ್ಲಿ ಹೇಳುವುದೇನು ? ಈಗ ನೂರು ವರ್ಷಗಳವರೆಗೆ ಬಾಳತಕ್ಕ ಮಾನವರು ಎಷ್ಟು ಮಂದಿ ಸಿಕ್ಕಬಹುದು ? ಒಂದು ಪಕ್ಷದಲ್ಲಿ ಕೆಲವರು ನೂರುವರ್ಷಗಳವರೆಗಾದರೂ ಬದುಕಿರುವರೆಂದು ತಿಳಿಯುವಾ ! ಅವರಲ್ಲಿ ಓರ್ವನ ಆ ಸಂಪೂರ್ಣಾಯುಷ್ಯದ ವಿಶೇಷಾಂಶವು ವಿದ್ಯೆಯ ಆಗಮಕಾಲವೂ, ಅಧ್ಯಯನ ಕಾಲವೂ ಪ್ರವಚನಕಾಲವೂ, ವ್ಯವಹಾರಕಾಲವೂ ಎಂಬೀ ನಾಲ್ಕು ವಿಧವಾಗಿ ಉಪಯೋಗಿಸಲ್ಪಡುವುದು. ಆದರೆ ಆಗಮಕಾಲದಿಂದೇ ಸರ್ವಾ

ಯುಷ್ಯವೂ ಮುಗಿದುಹೋದರೆ ಮುಂದೆ ಸ್ವಾಧ್ಯಾಯ, ಪ್ರವಚನ, ವ್ಯವಹಾರಗಳಿಗೆ ಕಾಲವೆಲ್ಲಿದೆ ? ವ್ಯಾಕರಣಶಾಸ್ತ್ರವೆಂಬೀ ಸ್ವಲ್ಪವಾದುಪಾಯದಿಂದ ಶಬ್ದಗಳ ಜ್ಞಾನವಾಗಲಭ್ಯಂತರವಿಲ್ಲವಾದುದರಿಂದ, ವ್ಯಾಕರಣವನ್ನು ಅವಶ್ಯವಾಗಿ ಅಧ್ಯಯನಮಾಡತಕ್ಕದ್ದು. ವ್ಯಾಕರಣವನ್ನು ಕಲಿತಬಳಿಕ ಶಬ್ದಜ್ಞಾನಕ್ಕೋಸ್ಕರ ಪ್ರತಿಪದಪಾಠದ ಅವಶ್ಯಕತೆಯಿರುವುದಿಲ್ಲ.

"ಅಸಂದೇಹ" ವೆಂಬುದು ಶಬ್ದಾನುಶಾಸನದ ಐದನೆಯ ಪ್ರಯೋಜನವು. ಸಂದೇಹವು ಉಳಿಯಕೂಡದೆಂದೇ ವ್ಯಾಕರಣವನ್ನು ಕಲಿಯಬೇಕಾಗಿದೆ. ಯಾಜ್ಞಿಕರು– ''**ಸ್ಥೂಲಪೃಷತೀಂ, ಆಗ್ನಿವಾರುಣೀಂ, ಅನಡ್ವಾಹೀಂ ಆಲಭೇತ್**'' ಎಂದುಚ್ಚರಿಸುತ್ತಾರೆ. ಆ ಪದಗಳಲ್ಲಿ 'ಸ್ಥೂಲಪೃಷತೀಮ್' ಎಂಬುದರ ವಿಗ್ರಹವನ್ನು ಹೇಗೆ ಮಾಡಬೇಕು ? ಕರ್ಮಧಾರಯವನ್ನು ಮಾಡಬೇಕೋ? ಬಹುವ್ರೀಹಿಯನ್ನೋ? ಎಂಬ ಸಂದೇಹವುಂಟಾಗುವುದು. ವೈಯಾಕರಣನು ಪದಗತಸ್ವರದಮೇಲಿಂದ ಆ ಸಮಾಸವನ್ನು ನಿಶ್ಚಿತಗೊಳಿಸುತ್ತಾನೆ. ಅದಕ್ಕೆ ಪೂರ್ವಪದ ಪ್ರಕೃತಿಸ್ವರತ್ವವಿದ್ದರೆ ಅಂದರೆ ಸ್ಥೂಲವೆಂಬ ಪೂರ್ವಪದದ ಯಾವ ಪ್ರಕೃತಿಸ್ವರವಿರುವುದೋ ಅದುವೇ ಸ್ಥಿರವಾಗಿದ್ದರೆ ಅದನ್ನು ಬಹುವ್ರೀಹಿಯೆಂದೂ ಅಂತೋದಾತ್ತಸ್ವರವಿದ್ದರೆ ಕರ್ಮಧಾರಯವೆಂದೂ ತಿಳಿಯುತ್ತಾನೆ. ಯಾವನು ವ್ಯಾಕರಣವನ್ನು ಕಲಿತಿಲ್ಲವೋ ಅವನು ಹಾಗೆ ನಿರ್ಣಯಗೊಳಿಸಲಾರನು. ಹಾಗೂ ಅಪಶಬ್ದಗಳೂ, ಸ್ವರತಃ ಅಥವಾ ವರ್ಣತಃ ದುಷ್ಟಶಬ್ದಗಳೂ, ಅಸಂಗತಶಬ್ದಗಳೂ ಎಂಬಿವು ಮುಂತಾದವುಗಳ ಪ್ರಯೋಗಗಳು ಸಂಭವಿಸಕೂಡದೆಂಬ ಹೇತುವಿನಿಂದಲೂ ವ್ಯಾಕರಣಾಧ್ಯಯನವು ಅವಶ್ಯವಾದುದು. ಹೀಗೆ ಅನೇಕ ಸೋದಾಹರಣಪ್ರಯೋಜನಗಳು ಪಾತಂಜಲಮಹಾಭಾಷ್ಯದಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಇರಲಿ,

**ನಿರುಕ್ತವು:—**

ಈ ರೀತಿಯಾಗಿ ಶಿಕ್ಷೆಯೂ ವ್ಯಾಕರಣವೂ ಎಂಬ ಎರಡು ಅಂಗಗಳ ಅಧ್ಯಯನದಿಂದ ವರ್ಣೋಚ್ಚಾರದ ಮತ್ತು ಪದಗಳ ನಿರ್ದೋಷತ್ವದ ಜ್ಞಾನವುಂಟಾದಬಳಿಕ ವೈದಿಕಮಂತ್ರಗಳೊಳಗಿನ ಪದಗಳ ಅರ್ಥಾಕಾಂಕ್ಷೆಯು ಹೆಚ್ಚುವುದು. ಅದರ ಸಫಲತೆಗಾಗಿಯೇ ವೈದಿಕ ಶಬ್ದಗಳ ವ್ಯುತ್ಪತ್ತಿಯನ್ನು ತಿಳುಹಿ ಋಕ್ಕುಗಳರ್ಥವನ್ನು ನಿರ್ಣಯಿಸಲೋಸುಗ ಈ ಶಾಸ್ತ್ರದ ಉದಯವಾಗಿದೆ. ಬುನಾದಿಯಿಂದಲೂ ಭಾರತೀಯ ಪಂಡಿತರು ವೇದಗಳೊಳಗಣ ಕಠಿಣಶಬ್ದಗಳ ಅರ್ಥವನ್ನು ಬಿಡಿಸಲು ಬಿಡು

ವಿಲ್ಲದೆ ಹೆಣಗುತ್ತಿದ್ದರೆಂದು ತಿಳಿದುಬರುವುದು. ಆ ಕಾಲದಲ್ಲಿ ಜಾಣರು ಋಗ್ಗಾದಿವೇದಗಳಲ್ಲಿಯ ದುರ್ಬೋಧ ಶಬ್ದಗಳನ್ನು ಆರಿಸಿ ಬೇರೆ ಒತ್ತಟ್ಟಿಗೆ ಸರಂಗೊಳಿಸಿ ಪ್ರತಿಯೊಂದು ವೇದದ ಕಠಿಣಶಬ್ಧಗಳ ಕೋಶಗಳನ್ನು ತಯಾರಿಸುವ ಕೆಲಸವನ್ನು ಮೊದಲು ಕೈಕೊಂಡರು. ಪ್ರಜಾಪತಿಯಾದ ಕಶ್ಯಪನು ವೇದಗಳಲ್ಲಿರುವ ದುರೂಹಗಳೂ, ವ್ಯಾಪಕಗಳೂ, ಏಕಾರ್ಥಕಗಳೂ ಆದ ಅನೇಕ ಶಬ್ದಗಳನ್ನೂ ಕೆಲವು ಅನೇಕಾರ್ಥಕ ಶಬ್ದಗಳನ್ನೂ ಸಂಗ್ರಹಿಸಿದನು. ಹೀಗೆ ಸಂಗೃಹೀತವಾದ ಶಬ್ದಸಮುದಾಯವೇ 'ನಿಘಂಟು' ಎಂಬ ಹೆಸರುಳ್ಳದ್ದಾಯಿತು. 'ನಿಘಂಟು' ಅಂದರೆ ವೇದಾರ್ಥನಿಗಮನ (ಬೋಧ) ಸಾಧನವೆಂದರ್ಥವು. ಇದರ ತರುವಾಯ ಅನೇಕ ವೈದಿಕ ಮತ್ತು ಲೌಕಿಕ ನಿಘಂಟುಗಳು ರಚಿಸಲ್ಪಟ್ಟವು. ಇಂತಪ್ಪ ನಿಘಂಟುಗಳನ್ನೇ 'ಕೋಶ' ಗಳೆಂಬ ಪರ್ಯಾಯವಾಚಕವಾಗಿ ಹೇಳುವುದು ಹೆಚ್ಚಾಗಿ ಬಳಕೆಯಲ್ಲಿದೆ. ಅಮರಕೋಶಾದಿ ಗ್ರಂಥಗಳಿಗೆ ನಿಘಂಟುಗಳೆನ್ನುತ್ತಾರೆ. ಕಶ್ಯಪನಿಂದ ಸಂಗೃಹೀತವಾದ ಆ ವೈದಿಕ ನಿಘಂಟುವಿಗೆ ಯಾಸ್ಕಾಚಾರ್ಯನಿಂದ ವ್ಯಾಖ್ಯೆಯು ಬರೆಯಲ್ಪಟ್ಟಿದೆ. 'ನಿಘಂಟು' ಎಂಬ ಈ ವೈದಿಕ ಕೋಶವೂ ಯಾಸ್ಕನಿಂದೇ ರಚಿಸಲ್ಪಟ್ಟಿರುವುದೆಂದು ಕೆಲಂಬರು ಹೇಳೇತ್ತಾರೆ. ಆದರೆ ಈ ಮಾತು ನಮಗೆ ಸರಿದೋರದು. ಯಾಸ್ಕನೇ ಸ್ವತಃ ' ಈ ನಿಘಂಟುಗ್ರಂಥವು ಪ್ರಾಚೀನ ಋಷಿವಂಶಜರಿಂದ ಸಂಗೃಹೀತವಾದುದು. ' ಎಂದು ನುಡಿವನಲ್ಲವೇ ? ಈ ನಿಘಂಟುವಿಗೆ ಅವನಿಂದ ಬರೆಯಲ್ಪಟ್ಟ ವ್ಯಾಖ್ಯೆಯು 'ನಿರುಕ್ತ' ವೆಂದು ವ್ಯವಹೃತವಾಗಿದೆ. ಸಾಯಣಾಚಾರ್ಯನು ಋಗ್ವೇದ ಭಾಷ್ಯದ ಭೂಮಿಕೆಯಲ್ಲಿ 'ನಿಘಂಟು'ವಿಗೆ 'ನಿರುಕ್ತ' ವೆಂಬ ನಿರ್ದೇಶದೊಡನೆ ಲಾಕ್ಷಣಿಕರೂಪದಿಂದ ನಿಘಂಟುವಿನ ವ್ಯಾಖ್ಯೆಗೆ ನಿರುಕ್ತವೆಂದು ಹೇಳುತ್ತಾನೆ. ಆದರೆ ವಸ್ತುತಃ 'ನಿಘಂಟು'ವು ಬೇರೆ 'ನಿರುಕ್ತ' ವೆಂಬುದು ಬೇರೆ. ಕೇವಲ ನಿಘಂಟುವಿನಲ್ಲಿ 'ನಿರುಕ್ತ' ಲಕ್ಷಣಗಳಿರುವುದಿಲ್ಲ. ನಿರುಕ್ತದ ಲಕ್ಷಣವಾದರೋ ಹೀಗಿರುವುದು:—

ವರ್ಣಾಗವೋ ವರ್ಣವಿಪರ್ಯಯಶ್ಚ
ದ್ವೌಚಾಪರೌ ವರ್ಣವಿಕಾರನಾಶೌ ।
ಧಾತೋಸ್ತದರ್ಥಾತಿಶಯೇನ ಯೋಗ
ಸ್ತದುಚ್ಯತೇ ಪಂಚವಿಧಂ ನಿರುಕ್ತಮ್ ॥

ಆದ್ದರಿಂದ, ವರ್ಣಾಗಮವರ್ಣವಿಪರ್ಯಾದಿಗಳು ನಿಘಂಟುವಿನಲ್ಲಿರುವುದಿಲ್ಲ; ಅದರ ವ್ಯಾಖ್ಯೆಯಲ್ಲಿರುತ್ತವೆ. ಇಂತಿರುವುದೇ ನಿರುಕ್ತವು.

ಅರ್ಥಾಕಾಂಕ್ಷೆಯನ್ನು ತೊಲಗಿಸುವುದಕ್ಕೋಸ್ಕರವೇ ಯಾಸ್ಕಮುನಿಯು:— 'ಸಮಾಮ್ನಾಯಃ ಸಮಾಮ್ನಾತಃ ಸವ್ಯಾಖ್ಯಾತವ್ಯಃ' ಎಂಬುದು ಮೊದಲಾಗಿ ತ್ರಯೋದಶಾಧ್ಯಾಯಾತ್ಮಕವಾದ 'ನಿರುಕ್ತ' ವನ್ನು ರಚಿಸಿದ್ದಾನೆ, ಈ ಗ್ರಂಥದಲ್ಲಿ ನಾಮ, ಆಖ್ಯಾತ, ನಿಪಾತ, ಉಪಸರ್ಗವೆಂಬ ಭೇದರೂಪಗಳಾದ ಚತುರ್ವಿಧಪದಗಳನ್ನು ನಿರೂಪಿಸಿ ವೈದಿಕ ಮಂತ್ರಾಂತರ್ಗತಪದಗಳ ಅರ್ಥವನ್ನೂ ಪ್ರಕಾಶಪಡಿಸಿದ್ದಾನೆ. ಅನುಷ್ಠೇಯವಾದರ್ಥವನ್ನು ಪ್ರಕಾಶಗೊಳಿಸುವ ಮೂಲಕವೇ ಮಂತ್ರಗಳಿಗೆ ಕರಣತ್ವವಿರುವುದು. ಪ್ರತಿಯೊಂದು ಪದದ ಅರ್ಥಜ್ಞಾನವಾದರೇನೇ ವಾಕ್ಯಾರ್ಥಜ್ಞಾನವಾಗುವುದು. ಆದ್ದರಿಂದ ಮಂತ್ರಗಳಲ್ಲಿಯ ಪದಗಳ ಅರ್ಥಜ್ಞಾನಕ್ಕೋಸ್ಕರ 'ನಿರುಕ್ತ' ವೆಂಬ ವೇದಾಂಗವು ಅತ್ಯಂತಾಪೇಕ್ಷಿತವಾಗಿದೆ. ಪದಾರ್ಥಜ್ಞಾನಪೂರ್ವಕವಾಗಿ ವಾಕ್ಯಾರ್ಥಜ್ಞಾನವಾಗದಿರುವ ಪಕ್ಷದಲ್ಲಿ ಅನುಷ್ಠಾನವೆಂಬುದೇ ಸುಘಟಿಸದು. ಹಾಗೂ, 'ಸೃಣ್ಯೇವಜರ್ಫರೀತುರ್ಫರೀತೂ' (ಋ. ೧೦-೧೧೬-೬) ಎಂಬ ಮೊದಲಾದ ದುರ್ಜ್ಞೇಯ ಶಬ್ದಗಳ ಅರ್ಥಜ್ಞಾನವಾದರೂ ನಿರುಕ್ತಸಹಾಯವಿಲ್ಲದೆ ಅನ್ಯ ಯಾವ ಸಾಧನದಿಂದಲೂ ಆಗಲಾರದು. ವೈದಿಕದ್ರವ್ಯ (ದೇವತಾತ್ಮಕ ಪದಾರ್ಥ) ಗಳ ಪರ್ಯಾಯ ಶಬ್ದರೂಪ ನಿಘಂಟೂ ನಿರುಕ್ತದಲ್ಲಿ ಅಂತರ್ಭೂತವಾಗಿರುವುದು.

ಅತಿಗಂಭೀರಗಳಾದ ವೇದಗಳ ಅರ್ಥವನ್ನು ಸ್ಪಷ್ಟೀಕರಿಸುವುದಕ್ಕೋಸ್ಕರವೇ ಅವುಗಳ ಷಡಂಗಗಳು ( ಶಿಕ್ಷಾದಿಗ್ರಂಥಗಳು ) ಪ್ರವೃತ್ತಗಳಾಗಿರುವುವಷ್ಟೇ ! ಈ ಆರು ಅಂಗಗಳಲ್ಲಿ 'ನಿರುಕ್ತ' ವಾದರೂ ಮುಖ್ಯವಾಗಿರುತ್ತದೆ. ಏಕೆಂದರೆ ಇದರ ಸಹಾಯವಿಲ್ಲದೆ ಸಾಮಾನ್ಯಜನರಿಗೆ ವೇದಾರ್ಥಜ್ಞಾನವಾಗುವಿಕೆಯು ಪ್ರಾಯಃ ಅಸಂಭವವೇ ಸರಿ. ಇದು ನಿರ್ವಚನಪ್ರಧಾನಶಾಸ್ತ್ರವು. ಆದ್ದರಿಂದ ಇದರಲ್ಲಿ ವ್ಯಾಕರಣಾದಿ ವಿಷಯಗಳೂ ಅಡಕವಾಗಿವೆ. ಸ್ವತಃ ಯಾಸ್ಕಮುನಿಯೇ— 'ಯಾವನು ಚನ್ನಾಗಿ ವ್ಯಾಕರಣವನ್ನರಿತವನಲ್ಲವೋ ಅವನು ನಿರುಕ್ತವನ್ನು ಪಠಿಸಲನರ್ಹನು' ಎಂಬುದಾಗಿ ವ್ಯಾಕರಣದೊಡನೆ ನಿರುಕ್ತದ ಘನಿಷ್ಠವಾದ ಸಂಬಂಧವನ್ನು ಸೂಚಿಸಿದ್ದಾನೆ. ಆದರೆ, ವ್ಯಾಕರಣವೂ ನಿರುಕ್ತವೂ ಒಂದೇ ಎಂದು ತಿಳಿಯಕೂಡದು. ವ್ಯಾಕರಣದ ವಿಷಯವು ಸಂಕುಚಿತವಾದುದು, ನಿರುಕ್ತ ಪ್ರತಿಪಾದ್ಯ ವಿಷಯವಾದರೋ ವ್ಯಾಪಕವಾಗಿದೆ; ಈ ಅಭಿಪ್ರಾಯವನ್ನು ಯಾಸ್ಕಮುನಿಯು (೧-೧೫) "ತದಿದಂ ವಿದ್ಯಾಸ್ಥಾನಂ

ವ್ಯಾಕರಣಸ್ಯ ಕಾರ್ತ್ಸ್ನ್ಯಮ್ ।" ಎಂಬುದಾಗಿ ನಿರೂಪಿಸಿದ್ದಾನೆ. ಆದ್ದರಿಂದ ಈ ನಿರುಕ್ತಶಾಸ್ತ್ರವು ಸರ್ವವಿದ್ಯೆಗಳ ಸ್ಥಾನವೂ ವ್ಯಾಕರಣದ ಪೂರ್ಣತೆಯುಳ್ಳದ್ದೂ ಆಗಿದೆ. ಸಾರಾಂಶ, ಈ ಶಾಸ್ತ್ರವು ಅನೇಕ ವಿದ್ಯೆಗಳಿಗಾಶ್ರಯವಾಗಿರುವುದಾದರೂ ಇದರಲ್ಲಿ ವ್ಯಾಕರಣ ವಿಷಯವು ಪ್ರಾಧಾನ್ಯವಾಗಿರುವುದರಿಂದ ಇದನ್ನು ಅಭ್ಯಾಸಿಸದೆ ವ್ಯಾಕರಣ ಮಾತ್ರವನ್ನು ಕಲಿತವನು ಪೂರ್ಣ ವೈಯಾಕರಣನೆನಿಸಲಾರನು. ವೇದಮಂತ್ರಗಳ ಪದವಿಭಾಗ ಪರಿಜ್ಞಾನವು ನಿರುಕ್ತಶಾಸ್ತ್ರದಿಂದೇ ಉಂಟಾಗುವುದಲ್ಲವೇ ?

ಪೂರ್ವದಲ್ಲಿ ನಿರುಕ್ತವಿಷಯಕವಾದ ಅನೇಕ ದೊಡ್ಡ ದೊಡ್ಡ ಗ್ರಂಥಗಳಿದ್ದವೆಂಬುದು ಯಾಸ್ಕೀಯನಿರುಕ್ತದ— "ತಾನಸ್ಯೇಕೆ ಸಮಾಮನನ್ತಿ ।" (೭-೧೩) ಎಂಬ ವಾಕ್ಯದಿಂದ ಗೊತ್ತಾಗುವುದು. ಹಾಗೂ, ಯಾಸ್ಕಮುನಿಯು ತನಗಿಂತಲೂ ಮುಂಚಿನವರಾದ ಔಪಮನ್ಯವ, ಔದುಂಬರಾಯಣ ಮುಂತಾದ ನಿರುಕ್ತಕಾರರ ಪರಸ್ಪರ ಮತಭೇದಗಳನ್ನು ವ್ಯಕ್ತಪಡಿಸಿರುವನಲ್ಲದೆ ಅವರಲ್ಲಿ ಕೆಲವರ ಅಭಿಪ್ರಾಯಗಳ ಬಗ್ಗೆ ತನ್ನ ಅರುಚಿಯನ್ನೂ ತೋರಿಸಿದ್ದಾನೆ. ಅವುಗಳಲ್ಲಿ ಈಗ ಕೌತ್ಸವ್ಯಕೃತನಿರುಕ್ತವೂ, ಶಾಕಪೂಣಿವಿರಚಿತನಿರುಕ್ತವೂ ಎಂಬಿವೆರಡು ಗ್ರಂಥಗಳು ನೂತನವಾಗಿ ಲಾಹೋರಿನಲ್ಲಿಯೂ, ಪೂನಾದಲ್ಲಿಯೂ ಮುದ್ರಿತಗಳಾಗಿವೆ. ಹೀಗೆ ಯಾಸ್ಕ, ಕೌತ್ಸವ್ಯ, ಶಾಕಪೂಣಿಯೆಂಬಿವು ಮೂರು ನಿರುಕ್ತಗಳನ್ನು ಬಿಟ್ಟು ಬೇರೆ ಮತ್ತಾವ ಪ್ರಾಚೀನನಿರುಕ್ತಗ್ರಂಥಗಳೂ ಈಗ ಉಪಲಬ್ಧಗಳಿಲ್ಲ. ವೇದಾರ್ಥಬೋಧಕಗಳಾದ ಆ ಔಪಮನ್ಯವಾದಿನಿರುಕ್ತಗ್ರಂಥಗಳು ಈ ಸಮಯದಲ್ಲಿ ಉಪಲಬ್ಧವಿಲ್ಲದಿಹುದು ನಮ್ಮ ದುರ್ದೈವವಲ್ಲವೇ ? ಉಳಿದ ಆ ಹಳೆಯ ನಿರುಕ್ತಗಳು ಈಗ ಉಪಲಬ್ಧಗಳಾಗಿಲ್ಲವಾದರೂ ನಿರುಕ್ತಶಾಸ್ತ್ರದ ಆವಶ್ಯಕತೆಯು ಬುನಾದಿಯಿಂದಲೂ ಇದ್ದಿತೆನ್ನುವುದಕ್ಕೇನೂ ಅಭ್ಯಂತರವಿಲ್ಲ.

ಈಗ ಸರ್ವತ್ರ ಪ್ರಸಿದ್ಧವಾಗಿರುವ ಯಾಸ್ಕೀಯ ನಿರುಕ್ತವು ನೈಘಂಟುಕ, ನೈಗಮ, ದೈವತವೆಂಬ ಮೂರು ಕಾಂಡಗಳುಳ್ಳದ್ದಾಗಿದೆ. ಯಾಸ್ಕನು ತನ್ನಿಂದ ಬರೆಯಲ್ಪಡುವ ವ್ಯಾಖ್ಯೆಯ ಆರಂಭದಲ್ಲಿ ಉತ್ತಮವಾದ ಭೂಮಿಕೆಯನ್ನು ಬರೆದಿದ್ದಾನೆ. ಇದರಲ್ಲಿ ಗ್ರಂಥದ ಪ್ರಯೋಜನವನ್ನು ಹೇಳುವುದರೊಡನೆ ನಿಘಂಟುವಿನ ರಚನೆಯು ಏಕೆ ಉಂಟಾದುದು ? ಮತ್ತು ಹೇಗೆ ಮೈದೋರಿತು ? ಎಂಬುದರ ಪರಿಯನ್ನೂ ವಿವರಿಸಿದ್ದಾನೆ. ವೇದಾರ್ಥದ ಪರಿಜ್ಞಾನದಲ್ಲಿ ನಿರುಕ್ತದ ಆವಶ್ಯಕತೆ

ಯುಂಟೆಂಬುದನ್ನು ನಿರೂಪಿಸುವ ಸಂದರ್ಭದಲ್ಲಿ ವೇದವಿರೋಧಿಗಳ ಕುತರ್ಕವನ್ನು ಸಮಂಜಸವಾಗಿ ಖಂಡಿಸಿದ್ದಾನೆ. ಹಾಗೂ ಅನೇಕ ಪ್ರಾಸಂಗಿಕವಾಕ್ಯಗಳನ್ನೂ ಬರೆದಿದ್ದಾನೆ. ಪದವಿಭಾಗಾದಿಗಳನ್ನೂ ನಿರ್ವಚನರೀತಿಯನ್ನೂ ಚೆನ್ನಾಗಿ ನಿರೂಪಿಸಿರುವನಲ್ಲದೆ, ಅರ್ಥದ ಮರ್ಮವನರಿಯದೆ ಕೇವಲ ವೇದಪಾಠದಿಂದ ಪ್ರಯೋಜನವಿಲ್ಲವೆಂಬುದೇ ಮುಂತಾದ ವಿಷಯಗಳನ್ನೊಳಗೊಂಡ ಭೂಮಿಕೆಯನ್ನು ಬರೆದ ತರುವಾಯ 'ಗೌಃ' ಎಂದು ಮೊದಲಾಗಿ 'ದೇವಪತ್ನ್ಯಃ' ಎಂಬುದರವರೆಗಿರುವ ಎಲ್ಲ ನಿಘಂಟುವಿಗೆ ಉತ್ತಮವಾದ ವ್ಯಾಖ್ಯೆಯನ್ನು ಬರೆದಿದ್ದಾನೆ. ಈ ಗ್ರಂಥದಲ್ಲಿ ವ್ಯಾಕರಣವೂ ಭಾಷಾವಿಜ್ಞಾನವೂ ಎಂಬಿವೆರಡೇ ವಿಷಯಗಳು ಪ್ರಾಧಾನ್ಯವಾದವುಗಳಾದರೂ. ವಿಜ್ಞಾನ, ಸಾಹಿತ್ಯ ಮೊದಲಾದ ಶಾಸ್ತ್ರಗಳಿಗೆ ಸಂಬಂಧಿಸಿದ ವಿಷಯಗಳೂ ಅಲ್ಲಲ್ಲಿ ನಿರ್ದಿಷ್ಟಗಳಾಗಿವೆ.

ಈ ಯಾಸ್ಕೀಯ ನಿರುಕ್ತಕ್ಕೆ ಸ್ಕಂದಸ್ವಾಮಿಯೂ ದುರ್ಗಾಚಾರ್ಯನೂ ಟೀಕೆಯನ್ನು ಬರೆದಿದ್ದಾರೆ. ನಮಗೆ ದುರ್ಗಾಚಾರ್ಯನ ಟೀಕೆಯ ಆಂತರಂಗಿಕ ಪರಿಚಯವಿರುವುದು. ಈ ಟೀಕೆಯಲ್ಲಿ ಪ್ರತಿಪಾದಿಸಲ್ಪಡತಕ್ಕ ಕಾರ್ಯಕಾರಣರೂಪವಾದ ಭಾವ ದ್ವೈವಿಧ್ಯದ ವಿವೇಚನೆಯನ್ನು ಮಾಡುವಾಗ (೧—೨) ಉದ್ಧೃತವಾದ **"ಸನ್ಮಾತ್ರಂ ಭಾವ ಲಿಂಗಂ ಸ್ಯಾತ್"** ಎಂಬ ಆಗಮಿಕ ವಚನವು ವಿಮರ್ಶನೀಯವಾಗಿರುವುದಲ್ಲವೇ ? ದುರ್ಗಾಚಾರ್ಯನು ಕೆಲವೆಡೆಯಲ್ಲಿ ಮೂಲ (ನಿರುಕ್ತ) ವಾಕ್ಯಗಳನ್ನೇ ಲಕ್ಷೀಕರಿಸದಿರುವುದು ಆಶ್ಚರ್ಯಜನಕವಾಗಿದೆ. ಅದು ಹೇಗೆಂದರೆ, ವೇದಗಳಲ್ಲಿ ಪಶುಪಕ್ಷ್ಯಾದಿ ಪ್ರಾಣಿಗಳ ಹಿಂಸೆಯು ಪ್ರಸಿದ್ಧವಾಗಿರುವ ಪಕ್ಷದಲ್ಲಿ ಅದನ್ನು ಹೇಗೆ ತಾನೇ ಅಂಗೀಕರಿಸತಕ್ಕದ್ದು ? ಎಂಬುದಾಗಿ ಯಾಸ್ಕಮುನಿಯು ( ನಿರುಕ್ತಕಾರನು ) ವೇದಗಳ ಬಗ್ಗೆ ಪೂರ್ವಪಕ್ಷವನ್ನು ಮಾಡಿಕೊಂಡು ಆ ಆಕ್ಷೇಪವನ್ನು ತಾನೇ ಹೀಗೆ ನಿರಸನಗೊಳಿಸಿದ್ದಾನೆ. **" ಆಮ್ನಾಯವಚನಾತ್ತ್ವಹಿಂಸಾಪ್ರತೀಯತೆ। "** (೧-೧೬) ವೇದವಚನದಿಂದಾದರೋ ಅಹಿಂಸೆಯೇ ಸ್ಪಷ್ಟವಾಗಿ ಗೋಚರವಾಗುವುದು. ಇನ್ನು, ಯಾರು ವೇದದ ಹೆಸರಿನಿಂದ ಪಶುಬಲಿಯು ಮುಂತಾದ ಹಿಂಸಾತ್ಮಕ ಕರ್ಮಗಳಲ್ಲಿ ನಿರತರಾಗಿರುವರೋ, ಅವರೇ ಆ ಕರ್ಮಾಪರಾಧಿಗಳಲ್ಲದೆ ವೇದಕ್ಕೆ ಆ ಸಂಬಂಧವಾದ ಯಾವ ದೋಷವೂ ತಟ್ಟದು. ಸಾರಾಂಶ, ವೇದವಾಙ್ಮಯದಲ್ಲಿ ಸಾರ್ವತ್ರಿಕವಾಗಿ ಅಹಿಂಸೆಯೇ ಪುರಸ್ಕೃತವಾಗಿರುವುದು. ವಸ್ತುಸ್ಥಿತಿಯು ಹೀಗಿರುತ್ತಿರಲು ಅದನ್ನು

ವಿಪರ್ಯಾಸಗೊಳಿಸುವುದಾದರೋ :— **" ನೈಷ ಸ್ಥಾಣೋರಪರಾಧೋ ಯದೇನಮನ್ಧೋ ನ ಪಶ್ಯತಿ । "** ಕುರುಡನಿಗೆ ಕೊರಡು ಕಾಣಿಸದಿದ್ದರೆ ಅದಾರತಪ್ಪು ? ಕೊರಡು ಅಪರಾಧಿಯೆನಿಸಲಾರದಷ್ಟೆ ! ಇದು ವಸ್ತುವಿನ ದೋಷವಲ್ಲ; ನೋಡುವಾತನಲ್ಲಿರುವ ನ್ಯೂನತೆಯು. ಎಂಬುದಾಗಿ ನಿರುಕ್ತಕಾರನ ಉಕ್ತರೂಪವಾಕ್ಯಗಳಿರುತ್ತಿರಲು, ದುರ್ಗಾಚಾರ್ಯನು ಆ ವಾಕ್ಯಗಳರ್ಥವನ್ನು ಸ್ವೀಯಸ್ವರಾಲಾಪದಲ್ಲಿ ಪರ್ಯವಸಾನಗೊಳಿಸಿರುವನು. ಹೇಗೆಂದರೆ:— **" ಪಶುಮೃಗಪಕ್ಷಿಸರೀಸೃಪಾಃಸಮ್ಯಗುಪಯುಕ್ತಾಃಸನ್ತೋ ಯಜ್ಞೇ ಪರಮುತ್ಕರ್ಷತಾಂ ಪ್ರಾಪ್ನುವನ್ತಿ । ಸೋಽಯಮಭ್ಯುದಯ ಏವ ಸಂಪದ್ಯತೆ, ನ ಹಿಂಸಾ । "** ಅಂದರೆ ಯಜ್ಞದಲ್ಲಿ ಕೊಲ್ಲಲ್ಪಡತಕ್ಕ ಅಶ್ವ, ವರಾಹ, ಶ್ಯೇನಾದಿ ಪ್ರಾಣಿಗಳು ಸ್ವರ್ಗವೇ ಮುಂತಾದ ಪರಮೋತ್ಕರ್ಷತೆಯನ್ನು ಪಡೆಯುವುವು: ಆದ್ದರಿಂದ ಅವುಗಳನ್ನು ಕೊಲ್ಲುವುದು ಹಿಂಸೆಯಲ್ಲವು. ಮತ್ತೇನೆಂದರೆ ಅದು ಅವುಗಳ ಅಭ್ಯುದಯಕ್ಕಾಗಿರುವುದು; ಈ ಕಾರಣದಿಂದ ವೈದಿಕ ಹಿಂಸೆಯು ಹಿಂಸೆಯೆನಿಸದು. ಎಂದು ಹೇಳುವ ದುರ್ಗಾಚಾರ್ಯನ ಈ 'ಅಭ್ಯುದಯ' ನುಡಿಗೆ ತಕ್ಕ ಮನ್ನಣೆಯು ಪ್ರಸಂಗಾನುಗುಣವಾಗಿ ಅವನ ಅನುಯಾಯಿಗಳಲ್ಲಿಯೋ ಸಿಕ್ಕಬಹುದಲ್ಲವೇ ? ಇರಲಿ.

ವೇದಗಳು ಬಹಳ ಪುರಾತನಗಳಾದುದರಿಂದ ವೈದಿಕ ಭಾಷೆಗೂ, ತದನಂತರ ಸಂಸ್ಕೃತದ ಭಾಷೆಗೂ, ಬದಲಾವಣೆಯುಂಟಾಗಿ ಆ ವೇದಗಳ ಅರ್ಥವನ್ನು ಅರಿತುಕೊಳ್ಳುವುದು ಕಠಿಣವಾದ ಸ್ಥಿತಿಯಲ್ಲಿ ವ್ಯುತ್ಪತ್ತಿಶಾಸ್ತ್ರವು ಬಹಳ ಅನುಕೂಲವಾದ ಸಾಧನವಾಗಿರುವುದು; ಅದು ಹೇಗೆಂದರೆ ವ್ಯುತ್ಪತ್ತಿಯ ನೆರವಿನಿಂದ ಯಾವ ಯಾವ ಶಬ್ದವು ಯಾವ ಯಾವ ಧಾತುವಿನಿಂದ ಸಿದ್ಧವಾಗಿರುವುದೆಂಬುದು ಗೋಚರವಾಗಿರುವುದರಿಂದ ತೀರ ಬಿಕ್ಕಟ್ಟಿನ ಶಬ್ದದ ಅರ್ಥವಾದರೂ ಈ ಶಾಸ್ತ್ರದ ಆಸರದಿಂದ ಅರಿಯಲ್ಪಡುವುದು. ಇದುವೇ ವ್ಯುತ್ಪತ್ತಿ ಶಾಸ್ತ್ರದ ಮೊದಲನೆಯ ಮಹತ್ತರವಾದ ಉಪಯೋಗ.

ವೇದಗಳ ಅರ್ಥವನ್ನು ತಿಳಿಯದಿರುವಾತನಿಗೆ ವೇದಗಳಲ್ಲಿರುವ ಸ್ವರಗಳ ಜ್ಞಾನವಾಗಲೂ ಶಕ್ಯವಿಲ್ಲ. ಹಾಗೂ ವ್ಯಾಕರಣ ರೀತಿಯಿಂದ ಸಿದ್ಧಗೊಳಿಸಿದ ಶಬ್ದಗಳ ರೂಪಗಳಾದರೂ ಗೋಚರವಾಗುವದಿಲ್ಲ, ಏಕೆಂದರೆ ವೇದಮಂತ್ರಗಳಲ್ಲಿರುವ ಉದಾತ್ತ, ಅನುದಾತ್ತ, ಸ್ವರಿತವೆಂಬೀ

ಮೂರು ಬಗೆಯ ಸ್ವರಗಳು ಅರ್ಥವನ್ನವಲಂಬಿಸಿಯೇ ಇರುತ್ತವೆ. ಯಾವ ಭಾಷೆಯಲ್ಲಾದರೂ ಮಾತನಾಡುವಾಗ ವಕ್ತೃವಿನ ಇಚ್ಛಾನುಸಾರವಾಗಿ ಸಂದರ್ಭಕ್ಕೆ ಸರಿಯಾಗಿರುವ ಬೇರೆ ಬೇರೆ ಅರ್ಥಗಳನ್ನು ವ್ಯಕ್ತಪಡಿಸುವಿಕೆಯಾದರೋ, ವಾಕ್ಯಗಳಲ್ಲಿರುವ ಶಬ್ದಗಳ ಅಥವಾ ಅಕ್ಷರಗಳ ಮೇಲೆ ಮಾಡಲ್ಪಡುವ ಸ್ವರಾಘಾತಗಳನ್ನಾಶ್ರಯಿಸಿಯೇ ಇರುವುದೆಂಬಭಿಪ್ರಾಯವನ್ನು ಹಿಂದೆಯೇ ಹೇಳಿದ್ದೇವೆ. ವೇದವಾಕ್ಯಗಳ ಪಠನದಲ್ಲಿಯೂ ಸ್ವರಗಳ ಆವಶ್ಯಕತೆಯಿರುವುದರಿಂದ ಅಂತಪ್ಪ ಸ್ವರಜ್ಞಾನವಾಗುವದಕ್ಕಾಗಿ ಮೊದಲು ಅರ್ಥಜ್ಞಾನವು ಬೇಕಾಗುವುದು. ಅರ್ಥಜ್ಞಾನವಾದರೋ ವ್ಯುತ್ಪತ್ತಿಶಾಸ್ತ್ರಜ್ಞಾನವಿಲ್ಲದೆ ಸಂಭವಿಸದು. ಅದುಕಾರಣ ಪರ್ಯಾಯದಿಂದ ಸ್ವರಜ್ಞಾನಕ್ಕೋಸ್ಕರ ವ್ಯುತ್ಪತ್ತಿಯಜ್ಞಾನವು ಅವಶ್ಯವಾದುದೆಂಬಭಿಪ್ರಾಯವೇ ಸಿದ್ಧಿಸುವುದು. ವ್ಯಾಕರಣದ ರೂಪಗಳ ಜ್ಞಾನವಾದರೂ ವ್ಯುತ್ಪತ್ತಿಯನ್ನೇ ಅವಲಂಬಿಸಿರುವುದು, ಅಂದರೆ ವ್ಯುತ್ಪತ್ತಿಶಾಸ್ತ್ರವು ತನ್ನ ಮುಖ್ಯ ಕೆಲಸವನ್ನು ಮಾಡುವುದರೊಡನೆ ವ್ಯಾಕರಣದ ನ್ಯೂನತೆಯನ್ನು ಹೋಗಲಾಡಿಸುವ ಕಾರ್ಯವನ್ನೂ ಕೈಕೊಳ್ಳುವುದು. ಹೇಗೆ ವೇದಾರ್ಥಪರಿಜ್ಞಾನಕ್ಕಾಗಿ ವೇದಗಳೊಳಗಣ ವ್ಯಾಕರಣದ ರೂಪಗಳನ್ನೂ ಸ್ವರಗಳನ್ನೂ ತಿಳಿಯಲು ವ್ಯುತ್ಪತ್ತಿಯ ಆವಶ್ಯಕತೆಯುಂಟೋ ಹಾಗೆ ಋಕ್ಕುಗಳ ಪದಗಳನ್ನು ಬಿಡಿಸುವುದಕ್ಕೂ ವ್ಯುತ್ಪತ್ತಿಯ ನೆರವು ಬೇಕು. ಅಕ್ಷರಗಳ ಸಂಧಿಯಾಗಿ ಸಂಹಿತಾಪಾಠದ ಮೇಲಿಂದ, ಪದಪಾಠವನ್ನು ತಯಾರಿಸಬೇಕಾದರೆ ಮೊದಲು ಮಂತ್ರದ ( ಋಕ್ಕಿನ ) ಅರ್ಥವನ್ನು ಅರಿತುಕೊಂಡು ಅರ್ಥಕ್ಕೆ ಸರಿಯಾಗಿ ಪದಚ್ಛೇದವನ್ನು ಮಾಡತಕ್ಕದ್ದು. ಉದಾಹರಣೆಗಾಗಿ ನಾವು ಒಂದು ಮಂತ್ರದ ಭಾಗವನ್ನು ತೆಗೆದುಕೊಳ್ಳುವಾ ! 'ಅವಸಾಯ ಪದ್ವತೆ ರುದ್ರಮೃಳ' ಎಂಬಲ್ಲಿ 'ಅವಸಾಯ' ಎಂಬುದರ ಪದಚ್ಛೇದವು ಮಾಡಲ್ಪಡುವುದಿಲ್ಲ. ಏಕೆಂದರೆ 'ಅವಸಾಯ ಶಬ್ದವು' 'ಅವ್'—ಹೋಗು; ಎಂಬ ಧಾತುವಿನಿಂದಾಗಿದೆ. ಆದರೆ ಇದರ ರೂಪವು ಮತ್ತೊಂದು ಕಡೆ ಬಂದರೆ ಪದಚ್ಛೇದಮಾಡಲ್ಪಡುವುದು. ಹೇಗೆಂದರೆ 'ಅವಸಾಯಾಶ್ವಾನ್' ಕುದುರೆಗಳನ್ನು ಬಿಚ್ಚಿ (ಬಿಡುಗಡೆಮಾಡಿ) ಎಂಬಲ್ಲಿ 'ಅವ—ಸಾಯ' ಎಂದು ಪದವಿಭಾಗವು ಮಾಡಲ್ಪಡುವುದು. 'ಅವಸಾಯ' ಎಂಬ ರೂಪವು 'ಅವ' ಉಪಸರ್ಗ ಪೂರ್ವಕವಾದ 'ಸಾ' ಎಂಬ ಧಾತುವಿನಿಂದ ಸಿದ್ಧವಾಗಿದೆ. ಆದ್ದರಿಂದ ಉಪಸರ್ಗವನ್ನೂ ಧಾತುವನ್ನೂ ವಿಂಗಡಿಸಿ ತೋರಿಸುವುದಕ್ಕಾಗಿಯೇ

'ಅವಸಾಯ' ಶಬ್ದದ ಪದಚ್ಛೇದವನ್ನು ಮಾಡಬೇಕಾಗುವುದು. ಪದವಿಭಾಗವೆಂಬುದು ಅತ್ಯಂತವಾಗಿ ಅರ್ಥವನ್ನೂ, ಅರ್ಥವು ವ್ಯುತ್ಪತ್ತಿಯನ್ನೂ, ಅವಲಂಬಿಸಿರುವ ಮೂಲಕವಾಗಿಯೇ ಪರ್ಯಾಯದಿಂದ ಪದವಿಭಾಗವಾದರೂ ವ್ಯುತ್ಪತ್ತಿಯನ್ನಾಶ್ರಯಿಸಿಯೇ ಇರುವುದು. ಆ ಆ ಋಕ್ಕುಗಳಿಂದ ಬೋಧಿಸಲ್ಪಡುವ ದೇವತೆಗಳ ಸ್ವರೂಪವನ್ನೂ, ಕರ್ಮಕಲಾಪವನ್ನೂ ತಿಳಿಯಬೇಕಾದರೆ, ಋಕ್ಕುಗಳ ಅರ್ಥಜ್ಞಾನದ ಆವಶ್ಯಕತೆಯುಂಟು. ಋಕ್ಕುಗಳ ಅರ್ಥವಾದರೋ ವ್ಯುತ್ಪತ್ತಿಯ ಜ್ಞಾನವಿಲ್ಲದವನಿಗೆ ಗೋಚರವಾಗದೆಂಬದನ್ನು ಇಲ್ಲಿ ಮಗುಳೊಮ್ಮೆ ಪೇಳುತ್ತೇವೆ. ಆದ್ದರಿಂದ ವೈದಿಕವಿಧಿಯು ಯಥಾಸಾಂಗವಾಗಿ ನೆರವೇರಬೇಕಾದರೆ ವ್ಯುತ್ಪತ್ತಿ (ನಿರುಕ್ತ) ಶಾಸ್ತ್ರದ ಬೆಂಬಲವುಬೇಕು.

ಮಂತ್ರಾಧಿಷ್ಠಿತ ದೇವತೆಯುನ್ನು ತಿಳಿಯುವುದಕ್ಕಾಗಿ ಮಂತ್ರದ ಅರ್ಥವನ್ನು ಅರಿತುಕೊಳ್ಳಲೇಬೇಕೆಂಬ ಕಟ್ಟಳೆಯೇಕೆ ? ಯಾವ ಮಂತ್ರದಲ್ಲಿ ಯಾವ ದೇವತೆಯ ಹೆಸರು ಕಂಡುಬರುವುದೋ ಆ ಮಂತ್ರದ ದೇವತೆಯೆಂದು ಅರ್ಥಜ್ಞಾನದ ಹಂಗಿಲ್ಲದೆ ತೀರ್ಮಾನಿಸಬಹುದಷ್ಟೆ! ಎಂದು ಶಂಕಿಸುವುದು ಭ್ರಮಮೂಲಕವಾದುದೇ ಸರಿ. ಒಂದೇ ಮಂತ್ರದಲ್ಲಿ ಹಲವುಬಾರಿ ಎರಡು ಅಥವಾ ಅದಕ್ಕೂ ಹೆಚ್ಚು ದೇವತೆಗಳ ಹೆಸರುಗಳು ಬಂದಿರುತ್ತವೆ. ಯಾವ ದೇವತೆಯ ಮಂತ್ರವಿದೆಯೋ ಆ ದೇವತೆಯ ಹೆಸರು ಆ ಮಂತ್ರದಲ್ಲಿರದೆ ಅನ್ಯದೇವತೆಯ ಹೆಸರಿರುವುದು ಕಾಣಬರುವ ಸ್ಥಳದಲ್ಲಿ ಅರ್ಥಜ್ಞಾನವಿಲ್ಲದೆ ದೇವತೆಯನ್ನು ನಿಶ್ಚಯಿಸಲಳವಲ್ಲ. ಹೇಗೆಂದರೆ :— 'ಇನ್ದ್ರಂ ನತ್ವಾ ಶವಸಾ ದೇವತಾ ವಾಯುಂ ಪೃಣನ್ತಿ' ದೇವತೆಗಳು ನಿನ್ನನ್ನು ಇಂದ್ರನಂತೆಯೂ, ವಾಯುವಿನಂತೆಯೂ, ಸಾಮರ್ಥ್ಯವುಳ್ಳವನನ್ನಾಗಿ ಮಾಡುತ್ತಾರೆ. ಎಂಬ ಈ ಅಗ್ನಿದೇವತಾಕಮಂತ್ರದಲ್ಲಿ ಇಂದ್ರ ವಾಯುದೇವತೆಗಳ ಹೆಸರುಗಳು ಬಂದಿವೆ. ಮತ್ತು 'ಅಗ್ನಿರಿವ ಮನ್ಯೋ ತ್ವಿಷಿತಃ ಸಹಸ್ವ' ಅಗ್ನಿಯಂತೆ ಪ್ರಕಾಶಿಸುತ್ತಲಿರುವ ಎಲೈ ಮನ್ಯುವೇ ? ನೀನು ಸಾಮರ್ಥ್ಯವುಳ್ಳವನಾಗು. ಎಂಬ ಈ ಋಕ್ಕು ಮನುವಿನದಾಗಿದೆ. ಆದರೆ ಇದರಲ್ಲಿ ಅಗ್ನಿಯ ಹೆಸರಿದೆ. ಇವೇ ಮುಂತಾದ ಪ್ರಮಾಣಭೂತಗಳಾದ ಉದಾಹರಣೆಗಳಿಂದ ವೇದವನ್ನು ಅರ್ಥಪೂರ್ವಕವಾಗಿ ಪಠಿಸಬೇಕೆಂಬ ತಿರುಳು ನೆಲೆಗೊಳ್ಳುವುದು.

ಇನ್ನು, ವೇದವಾಕ್ಯಗಳಲ್ಲಿ ನಿಸರ್ಗಸಿದ್ಧವಾದ ದೈವಿಕ ಪ್ರಭಾವ ವಿರುವುದರಿಂದ ಪಾಠಮಾತ್ರದಿಂದ ಏನೂ ಫಲವಿಲ್ಲವೆಂದುಹೇಳಲಾಗುವ ದಿಲ್ಲ. ವೇದಾಭ್ಯಾಸವು—

**ವೇದಸ್ವೀಕರಣಂ ಪೂರ್ವಂ ವಿಚಾರೋಽಭ್ಯಸನಂ ಜಪಃ |**
**ತದ್ದಾನಂ ಚೈವ ಶಿಷ್ಯೇಭ್ಯೋ ವೇದಾಭ್ಯಾಸೋ ಹಿ ಪಂಚಧಾ ||**

ಎಂಬುದಾಗಿ ಅಯ್ದು ಬಗೆಯಾಗಿದೆ. ಋಕ್ಪ್ರಾತಿಶಾಖ್ಯದ ಹದಿನೈದನೆಯ ಪಟಲದಲ್ಲಿ ವಿಧಿಸಲ್ಪಟ್ಟಿರುವ ಮೇರೆಗೆ ಆಚಾರ್ಯನ ಬಳಿಯಲ್ಲಿ ಬ್ರಹ್ಮಚರ್ಯಾದಿ ವ್ರತಧಾರಣಪೂರ್ವಕವಾದ ವೇದಗ್ರಹಣವು ಅಧ್ಯಯನವೆನಿಸುವುದು. ಮಂತ್ರಗಳ ಲಕ್ಷಣವನ್ನೂ ಅರ್ಥವನ್ನೂ ಸರಿಯಾಗಿ ಅರಿತುಕೊಳ್ಳುವ ರೀತಿಯು ವಿಚಾರವು; ಚಿಂತನವೇ ಅಭ್ಯಸನವು; ವಿನಿಯೋಗ ಜ್ಞಾನಪೂರ್ವಕವಾಗಿ ವಿಶಿಷ್ಟಧ್ಯೇಯಾನುಸಂಧಾನದೊಡನೆ ಪಠಿಸುವಿಕೆಯೇ ಜಪವು; ಸುಸಂಸ್ಕೃತರೂ ವ್ರತಿಗಳೂ ಆದ ಶಿಷ್ಯರಿಗೆ ವೇದಗ್ರಹಣಮಾಡಿಸುವಿಕೆಯು ಅಧ್ಯಾಪನರೂಪವಾದ ದಾನವೆನಿಸುವುದು. "**ಪಾರಾಯಣಂ ವರ್ತಯೆದ್ಬ್ರಹ್ಮಚಾರೀ ಗುರುಃ ಶಿಷ್ಯೇಭ್ಯಸ್ತದನುವ್ರತೇಭ್ಯಃ |**" (ಋ. ಪ್ರಾ. ಶಾ. ೧೫;೧) ಎಂಬ ವಚನಾನುಸಾರವಾಗಿ ಪಾರಾಯಣವೆಂಬ ಅಧ್ಯಾಪನವೂ ಅಭ್ಯಾಸವರ್ಗದಲ್ಲಿಯೇ ಸೇರಿದೆ. ವೇದಗಳ ಬೇರೆಬೇರೆ ಸೂಕ್ತಗಳನ್ನು ಜಪಿಸುವ ಮಾತುಗಳಿಂದಲೂ ಜಾಪಕನಿಗೆ ಅನಿಷ್ಟನಿವೃತ್ತಿ ದ್ವಾರಾ ಇಷ್ಟಫಲಪ್ರಾಪ್ತಿಯಾಗುವುದೆಂದು ಆ ಆ ವೇದವಿಧಾನಗ್ರಂಥಗಳಲ್ಲಿ ನಿರೂಪಿಸಲ್ಪಟ್ಟಿದೆ. ಅವುಗಳಲ್ಲಿ ಋಗ್ವಿಧಾನಾಂತರ್ಗತಗಳಾದ ಎರಡು ಶ್ಲೋಕಗಳನ್ನು ಈ ಹಿಂದೆ ಉಲ್ಲೇಖಿಸಿದ್ದೇವೆ,

ಬ್ರಹ್ಮತೇಜಸ್ಸುಳ್ಳವನೇ ಬ್ರಾಹ್ಮಣನು, ತೇಜಸ್ಸು ಅಂದರೆ ವರ್ಚಸವು; ಆ ತೇಜಸ್ಸಾದರೋ ಬ್ರಾಹ್ಮಣೋಚಿತವಾದ ವೇದಾಧ್ಯಯನ ರೂಪವಾದುದು. ಒಬ್ಬನು ಎಲ್ಲಾ ವೇದಶಾಖೆಗಳನ್ನೂ ಅಧ್ಯಯನ ಮಾಡಲಾರನೆಂಬುದೇನೋ ನಿಜ; ಆದರೆ ಸ್ವಶಾಖೆಯ ಅಧ್ಯಯನವಾದರೂ ಮಾಡಲ್ಪಡದಿರುವುದು ವಿಹಿತವೇ ? ಸ್ವಾಧ್ಯಾಯ ( ಸ್ವಶಾಖಾಧ್ಯಯನ ) ಪರಿತ್ಯಾಗದಿಂದ ಶೂದ್ರತ್ವವು ಸಂಭವಿಸುವುದು ; ಅಂದರೆ ಸ್ವಾಧ್ಯಾಯ ವಿಮುಖನಾದ ಬ್ರಾಹ್ಮಣನು ಶೂದ್ರತುಲ್ಯನಾಗುವನು. ಇದೇ ಅಭಿಪ್ರಾಯವನ್ನು ಮನುವು (೨-೧೬೮)—'**ಯೋಽನಧೀತ್ಯ ದ್ವಿಜೋ ವೇದಾನ್**'

ಎಂಬದಾಗಿ ಹೇಳಿರುವನಷ್ಟೆ! ಈ ವಾಕ್ಯದಿಂದ ಸ್ವಾಧ್ಯಾಯಹೀನನಾದ ಬ್ರಾಹ್ಮಣನು ಸ್ವಲ್ಪ ಕಾಲದಲ್ಲಿಯೇ ತನ್ನ ಸಂತತಿಯೊಡನೆ ಶೂದ್ರಸಮಾನನಾಗುವನೆಂದು ಹೇಳಲ್ಪಟ್ಟಿರುವುದು ಮನನೀಯವಾಗಿರುವುದು. ಮುಖ್ಯವಾದ ಸ್ವಾಧ್ಯಾಯವನ್ನೇ ದುರ್ಲಕ್ಷಿಸಿ ಅವೈದಿಕವಾಙ್ಮಯವ್ಯಾಮೋಹಿತರಾಗಿರುವ ಬ್ರಾಹ್ಮಣರಲ್ಲಿ **'ಪಿತರಮುಪೇಕ್ಷ್ಯ ಶ್ವಶುರೇ ಗಾಢಾನುರಾಗಃ'** ಎಂಬ ಗಾದೆಯ ಮಾತು ಚೆನ್ನಾಗಿ ಅನ್ವಯಿಸುವುದಲ್ಲವೇ? ಕೆಲವರು ಅಂಗೋಪಾಂಗಗಳಲ್ಲಿ ಪರಿಗಣಿಸಲ್ಪಡುವ ವ್ಯಾಕರಣ, ಜ್ಯೋತಿಷ್ಯ, ನ್ಯಾಯಾದಿ ಶಾಸ್ತ್ರಗಳಲ್ಲಿ ಯಾವುದಾದರೊಂದನ್ನು ಅಂತುಮಿಂತುಮ ಭ್ಯಾಸಿಸಿ ತಾವದರಿಂದ ಕೃತಾರ್ಥರಾಗುವೆವೆಂದು ಭಾವಿಸಿ ಸ್ವಾಧ್ಯಾಯ ವಿಮುಖರಾಗುವುದು ವಿಹಿತವಲ್ಲ. ಉತ್ತರ ಕರ್ಣಾಟಕದಲ್ಲಿ ಒಬ್ಬಾನೊಬ್ಬ ಪಂಚಾಂಗಕರ್ತನು ಪ್ರತಿವರ್ಷವೂ ತನ್ನಿಂದ ಪ್ರಕಟಿಸಲ್ಪಡುವ 'ಪಂಚಾಂಗ'ದ ಆರಂಭದಲ್ಲಿ ಜ್ಯೋತಿಷಶಾಸ್ತ್ರದ ಪ್ರಾಶಸ್ತ್ಯದ್ಯೋತಕ ಪ್ರಸ್ತಾವನೆಯನ್ನು ಬರೆಯಲು ತೊಡಗಿ ಅದರ ಪುಷ್ಟಿಗಾಗಿ—'ಯಥಾ ಶಿಖಾಮಯೂರಾಣಾಂ ನಾಗಾನಾಂ ಮಣಯೋ ಯಥಾ।' ಎಂಬ ಶ್ಲೋಕವನ್ನು ಉಲ್ಲೇಖಿಸಿ ಇದು ಋಗ್ವೇದದ ೭ ನೆಯ ಖಂಡದೊಳಗಿನದೆಂದು ಅಪ್ಪಣೆಕೊಡಿಸಿದ್ದಾನೆ. ಇದು 'ಬ್ರ. ಶ್ರೀ.' ಗಳ ಖಂಡಿತ ವಚನವು! ಸಿದ್ಧಾಂತಿಗಳ ರಾದ್ಧಾಂತದಲ್ಲಿ ಇದೊಂದು ಪ್ರಮಾಣವಾಕ್ಯೋದ್ಧಾರವು! ಋಗ್ವೇದದಲ್ಲಿ 'ಖಂಡ' ವೇ? ಮೊಗಲಾಯಿ! ಈ ದಿವ್ಯ ವ್ಯಕ್ತಿಯಿಂದ ಪ್ರತಿವರ್ಷವೂ ಪ್ರಕಟಿಸಲ್ಪಟ್ಟ ಹತ್ತು ಹನ್ನೆರಡು ವರ್ಷಗಳಿಂದ ಈ ವರೆಗಿನ ಪಂಚಾಂಗ ಪ್ರತಿಗಳಲ್ಲಿ ಆ ಶ್ಲೋಕವು ಋಙ್ಮಂತ್ರ ರೂಪವಾಗಿಯೇ ಗಟ್ಟಿಗೊಂಡಿರುವುದು ಆ ಪಂಚಾಂಗಕರ್ತನ ದಿಟ್ಟತನ ನಿದರ್ಶಕವಾಗಿರುವುದಲ್ಲವೇ? ಅನ್ಯನೊಬ್ಬನು ತನ್ನದೊಂದು ಬರವಣಿಗೆಯಲ್ಲಿ **'ರುದ್ರೇಣಾತ್ತಮುಶ್ನನ್ತಿ'** ಎಂಬ ಪ್ರಮಾಣ ವಾಕ್ಯವನ್ನು ಋಗ್ವೇದದೊಳಗಿನದೆಂದು ಉಲ್ಲೇಖಿಸಿದ್ದಾನೆ: ಇದಲ್ಲವೇ ಅವನ ವೇದವಿದ್ಯಾಪ್ರಭಾವವು? ಸ್ವಾಧ್ಯಾಯವಿಮುಖರಾಗಿ ಬ್ರಾಹ್ಮಣ್ಯವನ್ನೂ ಕಾಯ್ದುಕೊಳ್ಳಬೇಕೆಂಬವರ ಹಂಬಲವು ಅರ್ಧಜರತೀಯನ್ಯಾಯವನ್ನನುಕರಿಸುವುದೆಂದು ಹೇಳಬಾರದೇಕೆ? ಇಂತಪ್ಪ ಮಹಾಭಾಗರು ಸ್ವಾತ್ಮೋನ್ನತಿಗೆ ಹೇತುಭೂತವಾದ ವೇದವಿದ್ಯೆಯ ಅಭಿರುಚಿಯುಳ್ಳವರಾಗಿರುವುದಾದರೆ ಆ ವಾಙ್ಮಯಾಸ್ವಾದನೆಯಲ್ಲಿ ಶ್ರದ್ಧೆಯೊಡನೆ ಯಥಾವಿಧಿ ಪ್ರಯತ್ನಿಸುವುದೊಳಿತು. ಅದಿಲ್ಲದೆ ಎಣ್ಣೆಯ ಲಳಗೆಯಲ್ಲಿ ಬಾಲವನ್ನಿಳಿಬಿಟ್ಟು ಸೀಪುವ ಇಲಿಗಳಂತೆ ಏಕೆ ಹೆಣಗಾಡುವರೋ!

ಪ್ರಕೃತವನನುಸರಿಸುವಾ ! 'ಸ್ವಾಧ್ಯಾಯೋಽಧ್ಯೇತವ್ಯಃ' ( ತೈ. ಆ. ೧೬) ಎಂಬ ವಿಧಿವಾಕ್ಯಾನುಸಾರವಾಗಿ ಶಿಷ್ಯರಿಗೆ ಸ್ವಾಧ್ಯಾಯದ ಆವಶ್ಯಕತೆಯುಂಟು ಈ ವಾಕ್ಯವು ಶತಪಥ ಬ್ರಾಹ್ಮಣದಲ್ಲಿಯೂ (೧೧-೫; ೬-೧) ನಿರೂಪಿಸಲ್ಪಟ್ಟಿರುವುದು. ಈ ವಿಧಿವಾಕ್ಯದಲ್ಲಿರುವ 'ಅಧ್ಯೇತವ್ಯಃ' ಎಂಬ ಶಬ್ದವು ಪಾಠ ಮಾತ್ರ ವಾಚಕವಾಗಿರುವುದರಿಂದ 'ವೇದವನ್ನು ಪಠಿಸತಕ್ಕದ್ದು' ಎಂಬ ಇಷ್ಟೇ ಅರ್ಥವಾಗುವುದಲ್ಲವೇ ? ಇದರಿಂದ ವೇದಾರ್ಥಜ್ಞಾನದ ಉಪಯುಕ್ತತೆಯೇ ತೋರುವುದಿಲ್ಲ ? ಎಂಬ ಆಕ್ಷೇಪಕ್ಕೆ ಭಟ್ಟಮತಾನುಯಾಯಿಗಳಾದ ಮೀಮಾಂಸಕರು ಸಮರ್ಪಕವಾದ ಉತ್ತರವನ್ನು ಹೇಳಿ 'ಸ್ವಾಧ್ಯಾಯ' ಶಬ್ದದಲ್ಲಿ 'ಪಠನ' ವೆಂಬರ್ಥವಿರುವಂತೆ 'ಬೋಧನ' ವೆಂಬರ್ಥವೂ ಅಂತರ್ಭೂತವಾಗಿರುವದೆಂಬ ತಾತ್ಪರ್ಯವನ್ನು ಅಂದವಾಗಿ ವಿವರಿಸಿದ್ದಾರೆ. ವೇದದ ಅರ್ಥಪರಿಜ್ಞಾನವಿಲ್ಲದೆ ಕೇವಲ ಅಧ್ಯಯನರೂಪವಾದ ಭಾರಮಾತ್ರವನ್ನು ಹೊರತ್ತಿರುವವನ ಪರಿಯಾದರೋ ಶಾನೆ ಎಲೆ, ಹೂ, ಹಣ್ಣುಗಳನ್ನು ತಾನು ತಳೆದಿದ್ದರೂ ಅವುಗಳ ರೂಪ, ರಸ, ಗಂಧ, ಸ್ಪರ್ಶೋಪಭೋಗಸುಖವಿಲ್ಲದಿರುವ ವೃಕ್ಷದಂತೆಯೇ ಸರಿ. ಕತ್ತೆಯು ಚಂದನಕಟ್ಟಿಗೆಗಳ ಹೊರೆಯನ್ನೇ ಬೆನ್ನು ಮೇಲೆ ಹೊತ್ತುಕೊಂಡಿದ್ದಾಗಲಾದರೂ ಆದರ ಉಪಭೋಗದ ವಿಷಯವಾಗಿ ತಾನೇನೂ ಸಂಬಂಧಪಡದಿರುವ ಹಾಗೇ ವೇದದ ಅರ್ಥಪರಿಜ್ಞಾನವಿಲ್ಲದೆ ಅಧ್ಯಯನ ( ಪಾಠ ) ಮಾತ್ರದಿಂದೇ ನಾನು ಕೃತಾರ್ಥನಾಗುವೆನೆಂಬುವವನ ಬಗೆಯಾಗಿರುವುದೆಂಬಭಿಪ್ರಾಯವುಳ್ಳ ವಾಕ್ಯವು ನಿರುಕ್ತದಲ್ಲಿ (೧-೧೯) ಹೀಗಿರುವುದು— **"ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಂ ।"** ಮತ್ತು, ಋಕ್ಸಂಹಿತೆಯಲ್ಲಿ (೧೦-೭೧-೪)—

**ಉತ ತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಮ್ । ವಿ ಸಸ್ರೇ ಜಾಯೇವ ಪತ್ಯ ಉಶತೀ ಸವಾಸಾಃ॥**

ವೇದಪಾಠಕರಾದ ಬಹುಜನರಲ್ಲಿ ಯಾವನೋ ಒಬ್ಬನು ಮಾತ್ರ ಮನಃಪೂರ್ವಕವಾಗಿ ಅಧ್ಯಯನ ಮಾಡುತ್ತಿರಬಹುದು. ಆದರೂ ಅರ್ಥಪರಿಜ್ಞಾನವಿಲ್ಲದೆ ಹೀಗೆ ವೇದವನ್ನು ಪಠಿಸುವದರಿಂದಲೂ ಆ ವೇದಘೋಷವನ್ನು ಶ್ರವಣಮಾಡುವದರಿಂದಲೂ ವೇದವಾಣಿಯ ನಿಜ ಸ್ವರೂಪವೇ ಚೆನ್ನಾಗಿ ಗೋಚರವಾಗುವುದಿಲ್ಲ. ಋತುಸ್ನಾತಳಾದ ತಾರುಣ್ಯ ಲಾವಣ್ಯ ವಿಶಿಷ್ಟಸಾಧ್ವಿಯು ಪತಿಯನ್ನು ಕಾಮಿಸಿ ತನ್ನ ದೇಹವನ್ನು

ಆಪನಿಗೆ ಮಾಜದೆ ಇಷ್ಟವಾಗುವ ಹಾಗೆ ತೋರಲು, ಆವಳ ರಮಣ ನಾದರೋ ಆ ಮಸದನ್ನೆಯನ್ನು ಮನವಾರೆ ನೋಡಿ ಮನದ ಬಯಕೆ ಯನ್ನೀಡೇರಿಸಿಕೊಳ್ಳುವಹಾಗೆ, ತುಂಬಾ ಬಟ್ಟೆಯು ಹೊದಿಕೆಯುಳ್ಳ ಆ ಗರತಿಯ ಸುಕುಮಾರಶರೀರವನ್ನು ಅನ್ಯಪುರುಷನು ಯಥಾವತ್ತಾಗಿ ನೋಡಲು ಕೂಡ ಶಕ್ಯವಿಲ್ಲವಷ್ಟೇ ? ಅರ್ಥವು ವಾಕ್ಕಿನ ಶರೀರವು. (ವಾಕ್ ಎಂಬ ಶಬ್ದವು ಸ್ತ್ರೀಲಿಂಗವಿದೆ.) ಆ ವಾಣಿಯು ನಿಜಸ್ವರೂಪ ವನ್ನು ಅರ್ಥಜ್ಞನು ಚೆನ್ನಾಗಿ ಗ್ರಹಿಸುವನಲ್ಲದೆ ಪಾಠಕರು ಸರಿಯಾಗಿ ಕಂಡುಕೊಳ್ಳಲಾರರು.

ಎಂಬುದಾಗಿ ಅರ್ಥಜ್ಞನ ಪ್ರಶಂಸೆಯು ಮಾಡಲ್ಪಟ್ಟಿದೆ. ಒಟ್ಟಿ ನಲ್ಲಿ ವೇದವಾಕ್ಕು ಅರ್ಥಪರಿಜ್ಞಾನವೂ ತದ್ವಿಷಯಕವಾದ ಅನುಷ್ಠಾನವೂ ಮುಂತಾದ ಪರಮಧ್ಯೇಯಗಳುಳ್ಳದ್ದಾಗಿದೆ.

**ಛಂದಃ ಶಾಸ್ತ್ರವು:—** ಶಿಕ್ಷಾ, ವ್ಯಾಕರಣ, ನಿರುಕ್ತಗಳೆಂಬ ಈ ಮೂರು ಅಂಗಗಳಂತೆ 'ಛಂದಸ್ಸು' ಎಂಬುದೂ ವೇದಾಂಗವೆನಿಸುವುದು. ಋಗ್ವೇದ ಮಂತ್ರಗಳು ಛಂದೋವಿಶೇಷವಿಶಿಷ್ಟಗಳಾಗಿರುತ್ತವೆ. ಅಂದರೆ ಮಂತ್ರಗಳ ಪಾದಗಳು ಬೇರೆಬೇರೆ ಛಂದಸ್ಸುಗಳಲ್ಲಿ ರಚಿಸಲ್ಪಟ್ಟಿವೆ. ಪಾಠ ಕರಿಗೂ ಕರ್ಮಕರ್ತರಿಗೂ ಆ ಛಂದಸ್ಸುಗಳ ಜ್ಞಾನವು ಅವಶ್ಯವಾಗಿ ರಬೇಕಾದುದು. ಅವುಗಳ ತಿಳುವಳಿಕೆಯಿಲ್ಲದವರು ವೈದಿಕಮಂತ್ರ ಪಾಠಕ್ಕೂ ಕರ್ಮಾನುಷ್ಠಾನಕ್ಕೂ ಅನರ್ಹರೆಂದು ತಿರಸ್ಕರಿಸಲ್ಪಡು ತ್ತಾರೆ— **ಯೋ ಹ ವಾ ಅವಿದಿತಾರ್ಷೇಯಚ್ಛನ್ದೋದೈವತ ಬ್ರಾಹ್ಮ ಣೇನ ಮನ್ತ್ರೇಣ ಯಾಜಯತಿ ವಾಽಧ್ಯಾಪಯತಿಸ್ಥಾಣುಂ ವರ್ಚ್ಛತಿ ಗರ್ತಂ ವಾ ಪ್ರತಿಪದ್ಯತೆ ವಾ ಪ್ರಮೀಯತೆ ಪಾಪೀಯಾನ್ಭವತಿ, ತಸ್ಮಾ ದೇತಾನಿ ಮನ್ತ್ರೇ ವಿದ್ಯಾತ್ ।** ". ಎಂಬ ಆರ್ಷೇಯ ಬ್ರಾಹ್ಮಣ ವಚನವು ಋಷಿ ಛಂದಸ್ಸು ದೇವತೆಗಳ ಪರಿಜ್ಞಾನವಿಲ್ಲದೆ ಪಠಿಸಲ್ಪ ಡುವ ಮಂತ್ರವು ಶ್ರೇಯಸ್ಕರವಾದುದಲ್ಲವೆಂದು ಹೇಳುವುದು. ಶೌನಕ ಮುನಿಯಾದರೂ (ಅನುಕ್ರ. ೧-೧) ಹೀಗೆ ಹೇಳಿದ್ದಾನೆ— '**ಏತಾನ್ಯವಿ ದಿತ್ವಾ ಯೋಽಧೀತೇಽನುಬ್ರೂತೆಜಪತಿ ಜುಹೋತಿ ಯಜತೇ ಯಾಜಯತೇ ತಸ್ಯ ಬ್ರಹ್ಮ ನಿರ್ವೀರ್ಯಂ ಯಾತಯಾಮಂ ಭವತ್ಯಥಾನ್ತರಾಶ್ವಗರ್ತಂ ವಾ ಪ್ರತಿಪದ್ಯತೇ ಸ್ಥಾಣುಂ ವರ್ಚ್ಛತಿ ಪ್ರಮೀಯತೇವಾ ಪಾಪೀಯಾನ್ಭವತಿ ।**' ಯಾವ ಮನುಷ್ಯನು ಋಷಿಯನ್ನೂ ಛಂದಸ್ಸನ್ನೂ ದೇವತೆಯನ್ನೂ ವಿನಿಯೋಗವನ್ನೂ ಅರಿತು

ಕೊಳ್ಳದೆ ವೇದದ ಅಧ್ಯಯನ, ಅಧ್ಯಾಪನ, ಜಪ, ಹವನ, ಯಜನ, ಯಾಜನಾದಿಗಳನ್ನು ಮಾಡುವನೋ ಅವನ ವೇದವು ನಿಷ್ಫಲವೂ ದೋಷ ಯುಕ್ತವೂ ಆಗುವುದು; ಮತ್ತು ಅವನು ಅಶ್ವಗರ್ತವೆಂಬ ನರಕದಲ್ಲಿ ಬೀಳುವನು. ಅಥವಾ ಮೃತನಾದ ಬಳಿಕ ಶುಷ್ಕವೃಕ್ಷನಾಗುವನು ( ಸ್ಥಾವ ರಯೋನಿಯಲ್ಲಿ ಜನಿಸುವನು ); ಇಲ್ಲವೆ ಮನುಷ್ಯಯೋನಿಯಲ್ಲಿ ಹುಟ್ಟಿ ದರೂ ಅಲ್ಪಾಯುಷ್ಯವುಳ್ಳವನಾಗಿ ಸ್ವಲ್ಪದಿವಸಗಳಲ್ಲಿಯೇ ಸಾಯು ವನು, ಅಥವಾ ಪಾಪಾತ್ಮನಾದರೂ ಆಗುವನು. ಇಸ್ನು, ಯಾವನು ಋಷ್ಯಾದಿಗಳನ್ನರಿತು ವೇದಾಧ್ಯಯನಾದಿಗಳಲ್ಲಿ ಪ್ರವೃತ್ತನಾಗುವನೋ ಅವನಿಗೆ ಯೋಗ್ಯವಾದ ಫಲವು ದೊರಕುವುದು. ಈ ವಿಷಯವಾದರೂ ಅನುಕ್ರಮಣಿಕೆಯಲ್ಲಿ ಹೇಳಲ್ಪಟ್ಟಿದೆ '**ಅಥವಿಜ್ಞಾಯೈತಾನಿ ಯೋಽಧೀ ತೇ ತಸ್ಯ ವೀರ್ಯವದಥಯೋಽರ್ಥವಿತ್ತಸ್ಯವೀರ್ಯವತ್ತರಂ ಭವ ತಿ, ಜಪಿತ್ವಾ ಹುತ್ವೇಷ್ಟ್ವಾ ತತ್ಫಲೇನಯುಜ್ಯತೇ |**' ಯಾವ ದ್ವಿಜನು ಋಷಿ, ಛಂದಸ್ಸು ಮೊದಲಾದವುಗಳನ್ನು ತಿಳಿದು ವೇದಾಧ್ಯಯನವೇ ಮುಂತಾದ ವಿಹಿತಕರ್ಮಗಳನ್ನನುಷ್ಠಿಸುವನೋ ಅವನಿಗೆ ವೇದವು ಫಲ ಪ್ರದವಾಗಿರುವುದು; ಅವನು ವೇದದರ್ಥವನ್ನೂ ಅರಿತವನಾದರೆ ಅಧಿಕ ಫಲವನ್ನು ಪಡೆವನು. ಹೀಗೆ ಭಾಷ್ಯಾದಿಗಳ ಪರಿಜ್ಞಾನಪೂರ್ವಕವಾಗಿ ವೇದಪಾಠದಲ್ಲಿಯೂ ತದರ್ಥಾನುಸಂಧಾನದಲ್ಲಿಯೂ ಆಸಕ್ತನಾಗಿರುವ ಪುರುಷನಿಂದ ಅನುಷ್ಠಿಸಲ್ಪಡುವ ಜಪ, ಹವನ, ಯಜನಾದಿ ಕರ್ಮ ಗಳಾದರೂ ಸಫಲಗಳಾಗುತ್ತವೆ.

ವೇದಾಂಗರೂಪವಾದ ಛಂದಃಶಾಸ್ತ್ರದ ಸ್ವರೂಪವನ್ನು ಪ್ರತಿಪಾದಿ ಸಲುದ್ಯುಕ್ತರಾದ ನಾವು ಈಗ ಋಷ್ಯಾದಿ ಶಬ್ದಗಳ ಅರ್ಥವನ್ನಾದರೂ ವಿವರಿಸುವುದು ಅಕ್ರಮವಲ್ಲವೆಂದು ಭಾವಿಸುತ್ತೇವೆ. 'ಋಷಿ' ಯು ಅಂದರೆ ಮಂತ್ರಗಳನ್ನು ಸಾಕ್ಷಾತ್ಕರಿಸಿಕೊಂಡವನು, ಅಥವಾ ಸ್ಮರಿಸಿದವನು; ಹೀಗೆಯೇ ಕಾತ್ಯಾಯನಮುನಿಯು ಸರ್ವಾನುಕ್ರಮಣಿಯಲ್ಲಿ— '**ದ್ರಷ್ಟಾರ ಋಷಯಃ ಸ್ಮರ್ತಾರಃ |**' ಎಂದು ಹೇಳಿದ್ದಾನೆ. ಔಪಮನ್ಯವಾಚಾರ್ಯ ನಾದರೂ ಸ್ವರಚಿತ ನಿರುಕ್ತದಲ್ಲಿ ಹೀಗೆಯೇ ಋಷಿಶಬ್ದದ ನಿರ್ವಚನ ವನ್ನು ತೋರಿಸಿದ್ದನೆಂಬುದನ್ನು ಯಾಸ್ಕನು ತನ್ನ ಗ್ರಂಥದಲ್ಲಿ ( ನಿರು ನೈ. ೨-೧೧ ) ಉಲ್ಲೇಖಿಸಿದ್ದಾನೆ— '**ಹೋತ್ರಮೃಷಿರ್ನಿಷೀದನ್ನೃಷಿದರ್ಶ ನಾತ್ ಸೋಮಾನ್ಸದರ್ಶೇತ್ಯೌಪಮನ್ಯವಃ |**' ಎಂಬುದಾಗಿ ಋಷಿ ಶಬ್ದಾರ್ಥದ ವಿಷಯದಲ್ಲಿ ಔಪಮನ್ಯಮುನಿಯ ನಿರುಕ್ತಿಯನ್ನು ತೋರಿಸಿ

**‘ತದ್ಯೇನಾಂಸ್ತಪಸ್ಯಮಾನಾನ್ಬ್ರಹ್ಮಸ್ವಯಂಭ್ವಭ್ಯಾನರ್ಷತ್ತ ಋಷ ಯೋಽಭವಂಸ್ತದೃಷೀಣಾಮೃಷಿತ್ವಮ್ ।** ( ತೈ. ಆ. ೨-೯ ) **ಇತಿ ವಿಜ್ಞಾಯತೇ**’ ಎಂದು ತೈತ್ತಿರೀಯಾರಣ್ಯಕವಾಕ್ಯಪ್ರಮಾಣವನ್ನು ಮುಂದು ಮಾಡಿದ್ದಾನೆ. ಈ ಎಲ್ಲ ವಾಕ್ಯಗಳ ತಾತ್ಪರ್ಯವೇನೆಂದರೆ— ಮಂತ್ರ ಸಮೂಹವನ್ನು ಸಾಕ್ಷಾತ್ಕರಿಸಿಕೊಂಡವರು ಋಷಿಗಳೆಂದು ಹೇಳಲ್ಪಡು ತ್ತಾರೆ. ಮೊದಲಿಗರಾದ ಮಹನೀಯರು ಸ್ವರೂಪತಃ ನಿರ್ಮಲರಾಗಿರು ವವರಾದರೂ ಪುನಃ ತಪಸ್ಸನ್ನಾಚರಿಸಲು ಅದರಿಂದ ತುಷ್ಟನಾದ ಪರ ಶಿವನು ( ಸ್ವತಃಸಿದ್ಧನಾದ ಪರಬ್ರಹ್ಮನು ) ಆ ಮುನಿಗಳನ್ನು ಅನುಗ್ರಹಿಸ ಲಭಿಮುಖನಾಗಿ ಸ್ವಪ್ರಕಾಶರೂಪವಾದ ಸ್ವಾತ್ಮೀಯಾನುಗ್ರಹಶಕ್ತಿ ಕಿರಣ ಗಳನ್ನು ಅವರ ಹೃದಯಗಳಲ್ಲಿ ವ್ಯಾಪಿಸುವಂತೆ ಮಾಡಿದನು. ಇಂತು ಸಾಕ್ಷಾತ್ಪರಶಿವನಿಂದನುಗ್ರಹೀತರಾದ ಆ ಪುರಾತನ ಮುನಿಗಳೇ ಋಷಿಗ ಳೆಂದು ಹೇಳಿಸಿಕೊಳ್ಳಲ್ಪಡತಕ್ಕವರಾದರು. ಅದುಕಾರಣವೇ ಅಂತಿರುವ ವರಾದ ಅನ್ಯಮುನಿಗಳಿಗಾದರೂ ಈ ಹೇತುವಿನಿಂದೇ ಋಷಿತ್ವವುಂಟಾ ಗಿದೆ. ಋಷಿಗಳು ಪೂರ್ವಕಾಲದಲ್ಲಿ ಪರಾಪರವಿದ್ಯಾತ್ಮಕ ವೇದ (ಜ್ಞಾನ) ವನ್ನು ಪರಶಿವಾನುಗ್ರಹದಿಂದ ಅನುಭವಗಮ್ಯವಾಗುವ ಹಾಗೆ ಮಾಡಿ ಕೊಂಡರು. ಅವರೇ ವೇದದೊಳಗಿನ ಆ ಆ ಮಂತ್ರಗಳ ಪ್ರವರ್ತಕ ರಾದ ಋಷಿಗಳು. ಈಗಲೂ ಸ್ಮರಣಾರ್ಥವಾಗಿ ಅವರ ಹೆಸರುಗಳು ಮಂತ್ರಗಳ ಆದಿಯಲ್ಲಿ ಉಚ್ಚರಿಸಲ್ಪಡುತ್ತವೆ. ಶತಪಥಬ್ರಾಹ್ಮಣದಲ್ಲಿ— **‘ಪ್ರಜಾಪತಿಃ ಪ್ರಥಮಾಂ ಚಿತಿಮಪಶ್ಯತ್ಪ್ರಜಾಪತಿರೇವ ತಸ್ಯ ಆರ್ಷೇಯಮ್ ।’** ಇತ್ಯಾದಿ ವಾಕ್ಯಗಳಿಂದ ಮಂತ್ರೋಚ್ಚಾರಾದಿಗ ಳಲ್ಲಿ ಆ ಆ ಮಂತ್ರಪ್ರವರ್ತಕರಾದ ಋಷಿಗಳ ಜ್ಞಾನವು ಆವಶ್ಯಕವಾ ದುದೆಂಬಭಿಪ್ರಾಯವು ಪ್ರತಿಪಾದಿಸಲ್ಪಟ್ಟಿದೆ. ಆದ್ದರಿಂದ ಆರ್ಷೇಯ (ಋಷಿಯೊಡನೆ ಸಂಬಂಧ) ವಿಲ್ಲದುದು ಮಂತ್ರವೇ ಅಲ್ಲ. **‘ಯೇನ ಯ ಋಷಿಣಾದೃಷ್ಟೋ ಮನ್ತ್ರಃ ಸಿದ್ಧಿಶ್ಚ ತೇನ ವೈ ಮನ್ತ್ರೇಣ ತಸ್ಯ ಸಂಪ್ರೋಕ್ತ ಋಷಿಭಾವಸ್ತದಾತ್ಮಕಃ ।’** ಎಂಬ ವಾಕ್ಯಾನುಸಾರ ವಾಗಿ ಯಾವ ಮಂತ್ರವು ಯಾವ ಋಷಿಯಿಂದ ಸಾಕ್ಷಾತ್ಕರಿಸಲ್ಪಟ್ಟಿರು ವುದೋ ಆ ಮಂತ್ರವನ್ನು ತತ್ಪ್ರವರ್ತಕನಾದ ಆ ಋಷಿಯ ಸ್ಮರಣಪೂರ್ವ ಕವಾಗಿಯೇ ಜಪಾದಿಕ್ರಿಯೆಗಳಲ್ಲಿ ವಿನಿಯೋಗಿಸತಕ್ಕದ್ದು.

ಇನ್ನು ‘ದೇವತಾ’ ಅಂದರೆ ಮಂತ್ರಪ್ರತಿಪಾದನೀಯ ವಿಷಯವು. ದೇವತೆಯು ಅಥವಾ ದೇವರು ಎಂಬಿವೆರಡೂ ಶಬ್ದಗಳ ಅರ್ಥವು ಒಂದೇ

ಆಗಿರುವುದು. ಋಗ್ವೇದದ ಪ್ರಥಮಾಷ್ಟಕದೊಳಗಿನ ೨೪ನೆಯ ಸೂಕ್ತಾಂತರ್ಗತವಾದ ೧೧ನೆಯ ಮಂತ್ರದಲ್ಲಿಯೂ ಅದೇ ಅಷ್ಟಕದ ೪೫ನೆಯ ಸೂಕ್ತದ ೨ನೆಯ ಮಂತ್ರದಲ್ಲಿಯೂ ೩೩ ದೇವತೆಗಳ ಉಲ್ಲೇಖವಿದೆ. ತೈತ್ತಿರೀಯ ಸಂಹಿತೆಯಲ್ಲಿ (೧-೪-೧೦-೧) ಆಕಾಶಪೃಥಿವಿಗಳಲ್ಲಿಯೂ ಅಂತರಿಕ್ಷದಲ್ಲಿಯೂ ೧೧-೧೧ ದೇವತೆಗಳಿರುತ್ತವೆಂದು ನಿರೂಪಿಸಲ್ಪಟ್ಟಿದೆ. ಇರಲಿ.

ಕೆಲವು ಮಂತ್ರಗಳಲ್ಲಿ ಸ್ಥಾವರಪದಾರ್ಥಗಳಿಗೂ ದೇವತಾಭಾವವು ಸೂಚಿಸಲ್ಪಡುವುದು. ಇದರಿಂದ ಅಚೇತನ ವಸ್ತುಗಳಿಗೂ ದೇವತ್ವವಿರುವುದೆಂದು ಹೇಳಲ್ಪಟ್ಟಂತಾಗುವುದಲ್ಲವೇ ? ಎಂದು ಶಂಕಿಸಕೂಡದು. ಯಾವ ಮಂತ್ರದಿಂದ ಯಾವುದು ಸ್ತುತಿಸಲ್ಪಡುವುದೋ ಆ ವಸ್ತುವು ಆ ಮಂತ್ರದ ದೇವತೆಯು. ಆದ್ದರಿಂದ ಶಾಖಾದ್ಯಚೇತನ ಪದಾರ್ಥಗಳಿಗೂ ದೇವತ್ವವು ಸಂಭವಿಸುವುದು. ಅಥವಾ '**ಮೃದಬ್ರವೀತ್**' '**ಆಪೋಽಬ್ರುವನ್**' ಇತ್ಯಾದಿ ಶ್ರುತಿವಾಕ್ಯಗಳಿಂದಲೂ '**ಅಭಿಮಾನಿವ್ಯಪದೇಶಸ್ತು**' (೨-೧-೩-೫) ಎಂಬ ವೈಯಾಸಿಕಸೂತ್ರದಿಂದಲೂ ಆ ಆ ವಸ್ತ್ವಭಿಮಾನಿದೇವತೆಗಳು ಅಂಗೀಕರಿಸಲ್ಪಡುತ್ತಾರೆ. ಯಾಸ್ಕೀಯನಿರುಕ್ತದಲ್ಲಿ (ದೈ. ೧-೫)— '**ಅಪಿಹ್ಯದೇವತಾ ದೇವತಾವತ್ ಸ್ತೂಯನ್ತೆ ಯಥಾಶ್ವಪ್ರಭೃತೀನ್ಯೌಷಧಪರ್ಯನ್ತಾನಿ |**' ಅಶ್ವ ಮೊದಲಾಗಿ ಔಷಧಪರ್ಯಂತಗಳಾದ ಕೆಲವು ವಸ್ತುಗಳು ದೇವತೆಗಳಲ್ಲವಾದರೂ ದೇವತೆಗಳಂತೆ ಸ್ತುತಿಸಲ್ಪಡುವುವೆಂದು ಹೇಳಲ್ಪಟ್ಟಿದೆ.

ಪ್ರಕೃತದಲ್ಲಿ 'ಛಂದಸ್ಸು' ಎಂಬುದರ ಸ್ವರೂಪವಿಚಾರವೇ ಮುಖ್ಯವಾದುದಷ್ಟೇ ? 'ಛನ್ದಯತಿ— ಆಹ್ಲಾದಯತೀತಿ ಛನ್ದಃ; ಛಾದಯತಿ— ರಕ್ಷತೀತಿಛನ್ದಃ ।' ಎಂದು ಛಂದಃ ಶಬ್ದದ ನಿರ್ವಚನವಿರುವುದು. ಯಾಸ್ಕನು 'ಛನ್ದಃ' ಎಂಬ ಶಬ್ದದರ್ಥವನ್ನು ಹೀಗೆ ತೋರಿಸಿದ್ದಾನೆ— "**ಮನ್ತ್ರಾ ಮನನಾತ್, ಛಂದಾಂಸಿ ಛಾದನಾತ್, ಸ್ತೋಮಃ ಸ್ತವನಾತ್, ಯಜುರ್ಯಜತೇರಿತ್ಯಾದಿ |**' (ದೈ. ೧-೧೨) ಮನನ ಮಾಡುವುದರಿಂದ ಆತ್ಮೋನ್ನತಿಯನ್ನುಂಟುಮಾಡುವ ವರ್ಣಗಳಿಗೆ ಮಂತ್ರಗಳೆಂದೂ, ಯಾವುಗಳಿಂದ ವಿಧ್ಯುಕ್ತಕರ್ಮಗಳು ರಕ್ಷಿಸಲ್ಪಡುವುವೋ ಅವುಗಳಿಗೆ ಛಂದಸ್ಸುಗಳೆಂದೂ, ಯಾವುದರಿಂದ ದೇವತೆಯು ಸ್ತುತಿಸಲ್ಪಡುವುದೋ ಅದನ್ನು ಸ್ತೋಮವೆಂದೂ, ಯಾವುದರಿಂದ ಯಜ್ಞವು ಮಾಡಲ್ಪಡುವುದೋ ಅದನ್ನು ಯಜುಸ್ಸೆಂದೂ ಹೇಳುತ್ತಾರೆ.

ಮಂತ್ರಗಳ ಛಂದೋಜ್ಞಾನವನ್ನು ಕಾತ್ಯಾಯನಾದಿ ಪ್ರಣೀತ ಸರ್ವಾನುಕ್ರಮಸೂತ್ರಗಳಿಂದಲೂ ಪಿಂಗಲಸೂತ್ರಾದಿ ಗ್ರಂಥಗಳಿಂದಲೂ ಅರಿತುಕೊಳ್ಳತಕ್ಕದ್ದು. ಕಾತ್ಯಾಯನಾದಿಮುನಿಯು ಬರೆದ ಸರ್ವಾನು ಕ್ರಮಣಿಯಲ್ಲಿ (೧-೧)—

"ಬೃಹತೀ ಪಂಕ್ತಿ ತ್ರಿಷ್ಟುಬ್ಜಗತ್ಯತಿಜಗತೀ ಶಕ್ವರ್ಯತಿಶಕ್ವರ್ಯಷ್ಟ್ಯತ್ಯಷ್ಟಿ ಧೃತ್ಯತಿಧೃತಯಃ ಕೃತಿಪ್ರಕೃತ್ಯಾಕೃತಿವಿಕೃತಿ ಸಂಕೃತ್ಯಭಿಕೃತ್ಯುತ್ಕೃತಯಶ್ಚತುರ್ವಿಂಶತ್ಯಕ್ಷರಾದೀನಿ ಚತುರುತ್ತರಾಣ್ಯಾನಾಧಿಕೇನೈಕೇನ ನಿಚೃದ್ಭೂರಿಜೌ ದ್ವಾಭ್ಯಾಂ ವಿರಾಟ್ ಸ್ವರಾಜಾವಿತ್ಯಾದಿ"

ಎಂಬುದಾಗಿ ೨೧ ಛಂದಸ್ಸುಗಳು ನಿರೂಪಿಸಲ್ಪಟ್ಟಿವೆ. ಅವುಗಳನ್ನು ಅಕ್ಷರಸಂಖ್ಯೆಯೊಡನೆ ಇಲ್ಲಿ ಬರೆದುತೋರಿಸುತ್ತೇವೆ.—

| | | |
|---|---|---|
| ಗಾಯತ್ರೀ ಛಂದಸ್ಸು | ೨೪ | ಅಕ್ಷರಗಳುಳ್ಳದ್ದು |
| ಉಷ್ಣಿಕ್ | ೨೮ | ,, |
| ಅನುಷ್ಟುಪ್ | ೩೨ | ,, |
| ಬೃಹತೀ | ೩೬ | ,, |
| ಪಂಕ್ತಿ | ೪೦ | ,, |
| ತ್ರಿಷ್ಟುಪ್ | ೪೪ | ,, |
| ಜಗತೀ | ೪೮ | ,, |
| ಅತಿಜಗತೀ | ೫೨ | ,, |
| ಶಕ್ವರೀ | ೫೬ | ,, |
| ಅತಿಶಕ್ವರೀ | ೬೦ | ,, |
| ಅಷ್ಟಿ | ೬೪ | ,, |
| ಅತ್ಯಷ್ಟಿ | ೬೮ | ,, |
| ಧೃತಿ | ೭೨ | ,, |
| ಅತಿಧೃತಿ | ೭೬ | ,, |
| ಕೃತಿ | ೮೦ | ,, |
| ಪ್ರಕೃತಿ | ೮೪ | ,, |
| ಆಕೃತಿ | ೮೮ | ,, |
| ವಿಕೃತಿ | ೯೨ | ,, |

| | | |
|---|---|---|
| ಸಂಕೃತಿ | ೯೬ | ,, |
| ಅಭಿಕೃತಿ | ೧೦೦ | ,, |
| ಉತ್ಕೃತಿ | ೧೦೪ | ,, |

ಈ ಪ್ರಕಾರವಾಗಿ ೨೪ ಅಕ್ಷರಗಳಿಂದ ಮೊದಲುಮಾಡಿ ೧೦೪ ಅಕ್ಷರಗಳವರೆಗಿರುವ ಗಾಯತ್ರೀ ಮೊದಲಾದ ೨೧ ಛಂದಸ್ಸುಗಳಿರುತ್ತವೆ. ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಒಂದು ಅಕ್ಷರವು ಕಡಿಮೆಯಾಗುವುದರಿಂದ 'ನಿಚೃತ್' ಎಂಬ ವಿಶೇಷಣವೂ, ಒಂದು ಅಕ್ಷರವು ಹೆಚ್ಚಾಗುವುದರಿಂದ ಭೂರಿಜ್, ಎಂಬ ವಿಶೇಷಣವೂ, ಎರಡಕ್ಷರಗಳು ಕಡಿಮೆಯಾಗುವುದರಿಂದ 'ವಿರಾಟ್' ಎಂಬ ವಿಶೇಷಣವೂ, ಎರಡಕ್ಷರಗಳು ಅಧಿಕವಾಗುವುದರಿಂದ 'ಸ್ವರಾಟ್' ಎಂಬ ವಿಶೇಷಣವೂ ಸೇರಿಸಲ್ಪಡುವುದೆಂಬುದೇ ಮುಂತಾದ ಹೆಚ್ಚಿನ ವಿಷಯಗಳು ಸರ್ವಾನುಕ್ರಮಣಿಯಲ್ಲಿಯೂ ಪಿಂಗಲಸೂತ್ರಗ್ರಂಥದಲ್ಲಿಯೂ ಪ್ರತಿಪಾದಿಸಲ್ಪಟ್ಟಿರುವುದರಿಂದ ಜಿಜ್ಞಾಸುಗಳು ಆ ಗ್ರಂಥಗಳನ್ನವಲೋಕಿಸಬಹುದು.

ಪಿಂಗಲಮುನಿಯಿಂದ ರಚಿಸಲ್ಪಟ್ಟ ಛಂದಃಶಾಸ್ತ್ರವು ಎಂಟು ಅಧ್ಯಾಯಗಳುಳ್ಳದ್ದಾಗಿದೆ. ಇದಕ್ಕೆ ಹಲಾಯುಧನು ವೃತ್ತಿಯನ್ನು ಬರೆದಿದ್ದಾನೆ. ಇದರಲ್ಲಿ ಗಾಯತ್ರೀ ಮೊದಲಾದ ಛಂದಸ್ಸುಗಳ ವಿವೇಚನೆಯಿದೆ. ಮೊದಲನೆಯ ಮೂರು ಅಧ್ಯಾಯಗಳಲ್ಲಿ ಗಾಯತ್ರೀ, ಉಷ್ಣಿಕ್ ಮೊದಲಾದ ವೈದಿಕಛಂದಸ್ಸುಗಳೂ 'ಅಥಲೌಕಿಕಮ್' ಎಂಬ ಸೂತ್ರ ಮೊದಲಾಗಿ ಮುಂದಿನ ಅಯ್ದು ಅಧ್ಯಾಯಗಳಲ್ಲಿ ಪುರಾಣೇತಿಹಾಸಕಾವ್ಯ ನಾಟಕಾದಿಗಳಲ್ಲಿ ಉಪಯುಕ್ತಗಳಾದ ಛಂದಸ್ಸುಗಳೂ ಪ್ರಸಂಗಾನುಗುಣವಾಗಿ ನಿರೂಪಿಸಲ್ಪಟ್ಟಿವೆ. ಮುಖ್ಯವಾಗಿ '**ಗಾಯತ್ರ್ಯಾವಸವಃ**' ಎಂಬೀ ಮೊದಲಾದ ಸೂತ್ರಗಳಿಂದ ಛಂದಸ್ಸುಗಳ ಪ್ರತಿಯೊಂದು ಪಾದದಲ್ಲಿರುವ ಅಕ್ಷರಸಂಖ್ಯೆಯು ನಿಶ್ಚಯಿಸಲ್ಪಡುವುದರಿಂದ ವೇದ ಋಕ್ಕುಗಳ ವೃತ್ತಗಳಿಗೆ ಸಂಬಂಧಿಸಿದ ವಿಚಾರವನ್ನು ಅರಿತುಕೊಳ್ಳಲು ಛಂದೋವಿಧಾನವು ಸಾಧನೆಯಾಗಿರುವುದೆಂದು ತಿಳಿಯತಕ್ಕದ್ದು.

ಒಟ್ಟಿನಲ್ಲಿ ಮಂತ್ರಪ್ರವರ್ತಕನು ಋಷಿಯೆಂದೂ, ಮಂತ್ರಧ್ಯೇಯವೇ ದೇವತೆಯೆಂದೂ, ಮಂತ್ರದ ನಿಯಮಿತಾಕ್ಷರ ನಿಬದ್ಧಶೈಲಿಯು ಛಂದಸ್ಸೆಂದೂ ಅರಿಯಲ್ಪಡುವುದರಿಂದ ಆ ಆ ಮಂತ್ರಗಳ ಋಷಿ, ದೇವತೆ, ಛಂದಸ್ಸುಗಳು ಬೇರೆ ಬೇರೆಯಾಗಿರುತ್ತವೆಂದು ಸಿದ್ಧವಾಗು

ವುದು. ಅವುಗಳಲ್ಲಿ ಮಂತ್ರಸಮುದಾಯಾತ್ಮಕವಾದ ಆ ಆ ಸಂಹಿತೆಯ ಶಾಖಾಪ್ರವರ್ತಕರ (ಋಷಿಗಳ) ಹೆಸರುಗಳನ್ನೂ ಋಕ್ಸಂಹಿತೆಯ ವಿಭಾಗ ವಿಶೇಷ ವಿಚಾರವನ್ನೂ ಪ್ರಥಮೋಲ್ಲಾಸದಲ್ಲಿಯೇ ವಿವರಿಸಿರುವೆವಷ್ಟೆ ? ಈ ಸಂಹಿತೆಯ ಸರ್ವಮಂಡಲಗಳ ಸೂಕ್ತಗಳೂ ಛಂದೋಮಯಗಳಾದುದರಿಂದ ಋಗ್ವೇದವು ಪದ್ಯರೂಪವಾದುದೆಂಬುದು ಸ್ಪಷ್ಟವು. ಹೀಗೆ ಋಕ್ಸಂಹಿತೆಯ ಪದ್ಯಾತ್ಮಕಗಳಾದ ಸರ್ವಸೂಕ್ತಗಳಲ್ಲಿ ಕೆಲವು ಸ್ತೋತ್ರ ರೂಪಗಳಾಗಿಯೂ, ಕೆಲವು ಸಂವಾದರೂಪಗಳಾಗಿಯೂ, ಕೆಲವು ವೇದ ಕಾಲೀನ ಸ್ಥಿತಿಸೂಚಕಗಳಾಗಿಯೂ, ಕೆಲವು ಸಂಸ್ಕಾರಬೋಧಕಗಳಾಗಿಯೂ, ಕೆಲವು ಆಧ್ಯಾತ್ಮವಿದ್ಯೆಯ ಅಂದರೆ ಪರಾವಿದ್ಯೆಯ (ಶಿವಜ್ಞಾನದ) ವಿಚಾರಪರಗಳಾಗಿಯೂ, ಕೆಲವು ಪೂರ್ವವೃತ್ತಾಂತಜ್ಞಾಪಕಗಳಾಗಿಯೂ ಇರುತ್ತವೆ. ವಿಶಿಷ್ಟಸೂಕ್ತಗಳ ಪ್ರವರ್ತಕರಾದ ಋಷಿಗಳು ಬೇರೆ ಬೇರೆ ಇರುವಂತೆ ಅವುಗಳ ದೇವತೆ ಛಂದಸ್ಸುಗಳಾದರೂ ಬೇರೆ ಬೇರೆಯಾಗಿರುವುವು. ಈ ದೇವತಾ ಛಂದಸ್ಸುಗಳ ನಿರೂಪಣೆಗಾಗಿ ನಾವೀಗ ಋಕ್ಸಂಹಿತೆಯ ಪ್ರಥಮ ಮಂಡಲವನ್ನು ಉದಾಹರಣೆಗಾಗಿ ನಮ್ಮ ಮುಂದಿಟ್ಟುಕೊಳ್ಳುವಾ. ಈ ಮಂಡಲದಲ್ಲಿ ಬೇರೆ ಬೇರೆ ದೇವತೆಗಳನ್ನುದ್ದೇಶಿಸಿರುವ ಸೂಕ್ತಗಳ ಸಂಖ್ಯೆಯನ್ನೂ ಆ ಆ ಸೂಕ್ತಗಳ ಛಂದಸ್ಸುಗಳನ್ನೂ ಇಲ್ಲಿ ಬರೆಯುತ್ತೇವೆ.—

| | | | |
|---|---|---|---|
| ಇಂದ್ರ | ದೇವತಾಕ | ಸೂಕ್ತಗಳು | ೪೪ |
| ಅಗ್ನಿ | ,, | ,, | ೩೪ |
| ಅಶ್ವೀ | ,, | ,, | ೧೫ |
| ಮರುತ್ | ,, | ,, | ೧೧ |
| ವಿಶ್ವದೇವ | ,, | ,, | ೮ |
| ಉಷಾ | ,, | ,, | ೫ |
| ಋಭು | ,, | ,, | ೪ |
| ಇಂದ್ರಾಗ್ನೀ | ,, | ,, | ೩ |
| ಮಿತ್ರಾವರುಣ | ,, | ,, | ೩ |
| ದ್ಯಾವಾಪೃಥವೀ | ,, | ,, | ೩ |
| ಪೂಷನ್ | ,, | ,, | ೨ |
| ವಿಷ್ಣು | ,, | ,, | ೨ |
| ಅಶ್ವ | ,, | ,, | ೨ |

| | | | |
|---|---|---|---|
| ಸೂರ್ಯ | ,, | ,, | ೨ |
| ವರುಣ | ,, | ,, | ೧ |
| ಇಂದ್ರಾವರುಣ | ,, | ,, | ೧ |
| ಬ್ರಹ್ಮಣಸ್ಪತಿ | ,, | ,, | ೧ |
| ವಾಯು | ,, | ,, | ೧ |
| ಇಂದ್ರಾಮರುತ್ | ,, | ,, | ೧ |
| ಸೋಮ | ,, | ,, | ೧ |
| ಅಗ್ನಿಷೋಮ | ,, | ,, | ೧ |
| ರುದ್ರ | ,, | ,, | ೧ |
| ದಾನಸ್ತುತಿ | ,, | ,, | ೧ |
| ಬೃಹಸ್ಪತಿ | ,, | ,, | ೧ |
| ಅನ್ನ | ,, | ,, | ೧ |
| ರಾತಿ | ,, | ,, | ೧ |

ಎಂಬ ದೇವತೆಗಳ ಸೂಕ್ತಗಳಿರುತ್ತವೆ. ಇನ್ನು ಬೇರೆ ಮೂವತ್ತಾರು ದೇವತಾಸೂಕ್ತಗಳೂ ಮೂರು ಆಪ್ರೀಸೂಕ್ತಗಳೂ ಇವೆ. ಛಂದಸ್ಸಿನ ದೃಷ್ಟಿಯಿಂದ ಪರಿಕಿಸಿದರೆ—

| | | |
|---|---|---|
| ತ್ರಿಷ್ಟುಪ್ | ಛಂದೋಬದ್ಧಗಳಾದ ಸೂಕ್ತಗಳು | ೫೧ |
| ಗಾಯತ್ರಿ | ,, | ೩೪ |
| ಜಗತೀ | ,, | ೧೨ |
| ಅತ್ಯಷ್ಟಿ | ,, | ೬ |
| ದ್ವಿಪದಾವಿರಾಜ | ,, | ೬ |
| ಅನುಷ್ಟುಪ್ | ,, | ೫ |
| ಪಙ್ಕ್ತಿ | ,, | ೩ |
| ಅತಿಶಕ್ವರಿ | ,, | ೧ |
| ಉಷ್ಣಿಕ್ | ,, | ೧ |
| ವಿರಾಜ | ,, | ೧ |

ಸಾಧಾರಣವಾಗಿ ೭೧ ಸೂಕ್ತಗಳು ಬೇರೆ ಬೇರೆ ಛಂದೋಬದ್ಧಗಳಾಗಿವೆ. ಇತರ ಮಂಡಲಗಳಲ್ಲಿರುವ ದೇವತಾ ಛಂದಸ್ಸುಗಳನ್ನು ಜಿಜ್ಞಾಸುಗಳು ಸರ್ವಾನುಕ್ರಮಣಿಯನ್ನವಲೋಕಿಸಿ ಅರಿತುಕೊಳ್ಳಬಹುದು.

ಜ್ಯೋತಿಷವು—

ಕಾಲವೆಂಬುದು ಅಂದರೆ ಸಮಯವು ವೈದಿಕ ಕರ್ಮಗಳಿಗೆ ಅಂಗಭೂತವಾಗಿರುವುದರಿಂದ ಆದರ ಜ್ಞಾನವುಂಟಾಗುವುದಕ್ಕೋಸ್ಕರವೇ ಆದಿತ್ಯ, ಗರ್ಗ ಮೊದಲಾದ ಮುನಿಗಳಿಂದ ಜ್ಯೋತಿಷವೆಂಬ ವೇದಾಂಗವು ರಚಿಸಲ್ಪಟ್ಟಿದೆ. ಈ ಜ್ಯೋತಿಷ ವಾಙ್ಮಯವು ಅನೇಕ ಪ್ರಕಾರವಾಗಿರುವುದು.

ಕಲ್ಪವು—

ಈ ಶಾಸ್ತ್ರವೂ ವೇದಾಂಗವೆಂದು ಹೇಳಲ್ಪಡುತ್ತದೆ. ಇದು ಸೂತ್ರರೂಪವಾಗಿರುವುದು. ಅನ್ಯಶಾಖಾಂತರ್ಗತಗುಣಗಳ ಸಂಗ್ರಹದೊಡನೆ ವೈದಿಕ ಕರ್ಮಾನುಷ್ಠಾನದ ವಿಶೇಷ ಕ್ರಮಗಳನ್ನು ನಿಶ್ಚಿತಗೊಳಿಸುವುದಕ್ಕೋಸ್ಕರವೇ ಕಲ್ಪಸೂತ್ರಗ್ರಂಥಗಳು ರಚಿಸಲ್ಪಟ್ಟಿವೆ. ಪ್ರಯೋಗತ್ರಯಭೇದ ಮೂಲಕ ಇವು ಮೂರು ತೆರನಾಗಿವೆ. ಆಶ್ವಲಾಯನ, ಸಾಂಖ್ಯಾಯನ ಮೊದಲಾದ ಆಚಾರ್ಯರು ಹೋತೃಪ್ರಯೋಗ ಪ್ರತಿಪಾದಕ ಕಲ್ಪಸೂತ್ರಗಳನ್ನೂ; ಬೋಧಾಯನ, ಆಪಸ್ತಂಬ, ಕಾತ್ಯಾಯನಾದಿಗಳು ಆಧ್ವರ್ಯ ಪ್ರಯೋಗಪ್ರತಿಪಾದಕ ಕಲ್ಪಸೂತ್ರಗಳನ್ನೂ; ಲಾಟ್ಯಾಯನ, ದ್ರಾಹ್ಯಾಯಣಾದಿಗಳು ಔದ್ಗಾತೃಪ್ರಯೋಗಪ್ರತಿಪಾದಕ ಕಲ್ಪ ಸೂತ್ರಗಳನ್ನೂ ರಚಿಸಿದ್ದಾರೆ.

ಶ್ರೌತ್ರಸೂತ್ರಗಳೂ ಗೃಹ್ಯಸೂತ್ರಗಳೂ, ಧರ್ಮಸೂತ್ರಗಳೂ ಕಲ್ಪವೆಂಬ ವೇದಾಂಗದ ವಿಭಾಗಗಳೆಂದು ಹೇಳಲ್ಪಡುತ್ತವೆ. ಅವುಗಳ ಸ್ವರೂಪವನ್ನು ಪರಿವಿಡಿದು ದಿಗ್ದರ್ಶನಗೊಳಿಸುವ ಮನೀಷೆಯಿಂದ ನಾವೀಗ ಸೂತ್ರವಾಙ್ಮಯದ ತಿರುಳನ್ನೂ ಸಂಕ್ಷೇಪವಾಗಿ ತೋರಿಸುತ್ತೇವೆ. 'ಸೂತ್ರ'ವು ಅಂದರೆ ಬಹ್ವರ್ಥಸೂಚಕವಾದುದು—

**ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋ ಮುಖಮ್ ।**
**ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋವಿದುಃ ॥**

ಅಲ್ಪಾಕ್ಷರಗಳಿಂದ ಕೂಡಿದುದೂ, ಸಂದೇಹವಿಲ್ಲದುದೂ, ಸರ್ವತಃ ಸಾರಯುಕ್ತವೂ, ಸರಳವೂ, ನಿರ್ದೋಷವೂ ಆಗಿರತಕ್ಕುದೇ ಸೂತ್ರವು.

ಇಂತಪ್ಪ ಸೂತ್ರರೂಪಗ್ರಂಥಗಳು ಶಬ್ದಪ್ರಧಾನವಾದುವೆಂದೂ, ಅರ್ಥಪ್ರಧಾನವಾದುವೆಂದೂ, ವ್ಯವಹಾರಪ್ರಧಾನವಾದುವೆಂದೂ, ಮೂರು

ವಿಧವಾಗಿರುತ್ತವೆ. ಅವುಗಳಲ್ಲಿ ಪಾಣಿನಿ ಮೊದಲಾದವರಿಂದ ರಚಿಸಲ್ಪಟ್ಟ ವೈಯಾಕರಣಸೂತ್ರಗ್ರಂಥಗಳೇ ಶಬ್ದಪ್ರಧಾನವಾದುವು; ಅವುಗಳಿಗೆ ಶಬ್ದಶಾಸ್ತ್ರಗಳೆನ್ನುತ್ತಾರೆ; ಶಬ್ದಾತ್ಮಕವಾದ ಜಗತ್ತಿನ ವಿಚಾರಾವಸರದಲ್ಲಿ ಆ ಸೂತ್ರಗ್ರಂಥಗಳ ಆವಶ್ಯಕತೆಯುಂಟು.

೧. ಜೈಮಿನಿ ಕೃತ ಆಚಾರ ಸೂತ್ರಗಳೂ, ೨. ಬಾದರಾಯಣ ಗ್ರಥಿತವಿಚಾರಸೂತ್ರಗಳೂ, ೩. ಗೌತಮಪ್ರಣೀತ ನ್ಯಾಯಸೂತ್ರಗಳೂ, ೪. ಕಣಾದರಚಿತವೈಶೇಷಿಕ ಸೂತ್ರಗಳೂ, ೫. ಕಪಿಲ ಪ್ರಣೀತಸಾಂಖ್ಯ ಸೂತ್ರಗಳೂ, ( ಈಗ ಪ್ರಸಿದ್ಧಗಳಾಗಿರತಕ್ಕ ಸಾಂಖ್ಯಸೂತ್ರಗಳ ಪ್ರಾಚೀನತ್ವ ವಿಷಯದಲ್ಲಿ ವಾದವಿರುವುದಾದರೂ ಮತ್ತೆ ಬೇರೆ ಮೂಲಸೂತ್ರಗಳಿರಲಿಕ್ಕೇಬೇಕೆಂಬುದು ನಿರ್ವಿವಾದವು. ) ೬. ಪತಂಜಲಿವಿರಚಿತಯೋಗ ಸೂತ್ರಗಳೂ ಎಂಬೀದಾರ್ಶನಿಕ ಸೂತ್ರಗಳು ಅರ್ಥಪ್ರಧಾನವಾದವು. ಇವು ಪ್ರಾಧಾನ್ಯವಾಗಿ ಜ್ಞಾನವಿಚಾರಪರಗಳಾದುದರಿಂದ ಅರ್ಥಾತ್ಮಕ ಜಗತ್ತಿನ ವಿಚಾರದಲ್ಲಿ ಸಹಾಯಕಗಳಾಗಿವೆ. ಶಿವಶಕ್ತ್ಯಾತ್ಮಕವಾದ ಈ ವಿಶ್ವಪ್ರಪಂಚವು ಶಬ್ದಾರ್ಥರೂಪವಾಗಿರುವುದೈಸೆ ? ಹೀಗೆ ಶಬ್ದಾರ್ಥಗಳೆಂಬ ಭಾಗದ್ವಯಾತ್ಮಕವಾದ ಜಗತ್ತಿನ ವಿಚಾರವು ಅವಶ್ಯವಾದುದರಿಂದ ಶಬ್ದಸೂತ್ರಗಳು ಶಬ್ದರೂಪವಾದ ಭಾಗವನ್ನೂ, ಅರ್ಥಪ್ರಧಾನಗಳಾದ ಮೀಮಾಂಸಾದಿಷಡ್ದರ್ಶನಸೂತ್ರಗಳು ಅರ್ಥರೂಪವಾದ ಭಾಗವನ್ನೂ ವಿಚಾರಿಸುವುದರಲ್ಲಿ ಪ್ರವೃತ್ತಗಳಾಗಿವೆ.

ವ್ಯವಹಾರಸೂತ್ರಗಳಾವವೆಂದರೆ-- ವ್ಯವಹಾರವಾದರೋ ಐಹಿಕ ಪಾರಲೌಕಿಕವೆಂಬುದಾಗಿ ಎರಡು ವಿಧವಾಗಿದೆ. ಇಹಲೋಕ ಸಂಬಂಧವಾದ ವ್ಯವಹಾರವಾದರೂ ಸುವ್ಯವಸ್ಥಿತವಾಗಿ ಸಾಗಬೇಕೆಂಬುದ್ದಿಶ್ಯವಾಗಿ ಕೆಲವು ಸೂತ್ರಗ್ರಂಥಗಳು ಮೈದೋರಿವೆ; ಅವುಗಳ ತಿರುಳಿನ ತಿಳುವಳಿಕೆಗಾಗಿ ಪ್ರತಿಯೊಂದು ಸೂತ್ರಗ್ರಂಥದ ಮೊದಲಿನವರಡೆರಡು ಸೂತ್ರಗಳನ್ನಿಲ್ಲಿ ತೋರಿಸುತ್ತೇವೆ— ೧. ಧರ್ಮಾರ್ಥಕಾಮೇಭ್ಯೋ ನಮಃ' ೨. 'ಶಾಸ್ತ್ರೇ ಪ್ರಕೃತತ್ವಾತ್'। (ಕಾಮಸೂ) ೧. ಅಥಾತೋ ಧಾತುಸ್ಥದೋಷಗತ್ಯವಿಕಾರಹೇತು ಭೂತಾರ್ಥ ವಾರ್ಥಕದ್ರವ್ಯಾಣ್ಯದ್ಯಾತ್।' ೨. ಚಿರಾಯುರಿಚ್ಛಾ ಪ್ರವೃತ್ತಿರಾಯುರ್ವೇದಾರ್ಥ ಪುರುಷಾರ್ಥೋಪಪಾದಿಕಾ।' (ಆಯುರ್ವೇದೀಯ ಸೂ.) ೧. 'ಸುಖಸ್ಯಮೂಲಂ ಧರ್ಮಃ।' ೨. ಧರ್ಮಸ್ಯ ಮೂಲಮರ್ಥಃ।' ( ಚಾಣಕ್ಯ ಸೂ. ) ಈ ಮುಂತಾದ ಸೂತ್ರಗಳ ಪ್ರವೃತ್ತಿಯಾದರೋ

ಕೇವಲ ಇಹಲೋಕದ ವ್ಯವಹಾರವನ್ನು ಹೇಳುವುದಕ್ಕಾಗಿಯೇ ಇರು ವುದು. ಈ ಸೂತ್ರಗ್ರಂಥಗಳ ಕೆಲವೆಡೆಯಲ್ಲಿ ಧರ್ಮವೂ ಮೋಕ್ಷವೂ ತತ್ಸಾಧನಗಳೂ ಉಲ್ಲೇಖಿಸಲ್ಪಟ್ಟಿವೆ; ಆದರೂ ಆ ಸೂತ್ರಗಳು ಕೇವಲ ಧರ್ಮಪರವಾದುವೆಂದು ತಿಳಿಯಲ್ಪಡುವುದಿಲ್ಲ. ಪಾರಲೌಕಿಕ ವ್ಯವಹಾರ ಬೋಧಕಸೂತ್ರಗಳಾದರೋ ವೇದದೊಳಗಿನ ಮುಖ್ಯ ವಿಷಯ ವಿಚಾ ರಾತ್ಮಕಗಳಾದ ಕಲ್ಪಸೂತ್ರಗಳೇ.

ಮಂತ್ರಭಾಗದ ಸಂಹಿತೆಗಳೂ ವಿಧಿ ಮೊದಲಾದ ಭಾಗಗಳ ಬ್ರಾಹ್ಮಣಗಳೂ ಶಾಖಾಭೇದದಿಂದ ಅನೇಕವಾಗಿವೆ. ಈ ಮೂಲಕ ಅಧ್ಯಯನ ಸಂಪ್ರದಾಯವಾದರೂ ಗುರುಶಿಷ್ಯ ಪರಂಪರೆಯಿಂದ ಬಹಳ ಬೆಳೆಯಿತು. ಹೀಗೆ ಅಧ್ಯಯನ ಅಧ್ಯಾಪನ ಸಂಪ್ರದಾಯವು ಬೇರೆ ಬೇರೆಯಾಗಿ ಪಸರಿಸಲು, ಆವಾವ ಹೇತುವಿನಿಂದಲೋ ಆ ಆ ಸಂಪ್ರ ದಾಯದಲ್ಲಿ ವಿಚಾರಭಿನ್ನತೆಯುಂಟಾದುದರಿಂದೇ ಆಚಾರ ಪದ್ಧತಿಯೂ ಬೇರೆ ಬೇರೆ ವಿಧವಾಗಿ ಪರಿಣಮಿಸಿತು. ಆ ಸಮಯವೇ ಪಶ್ವಾದಿ ಪ್ರಾಣಿಹಿಂಸಾತ್ಮಕ ಯಾಜ್ಞಿಕಕರ್ಮಗಳ ಉಗಮಕಾಲವೆಂದೂಹಿಸಲ್ಪಡು ವುದು. ಈ ಊಹೆಯು ನಿರಪವಾದವಾಗಿರುವುದೆಂಬಲ್ಲಿ ಸಂದೇಹವೇ ಇಲ್ಲ. ತತ್ಕಾಲೀನರಾದ ವೈದಿಕ ಪಂಡಿತರಿಂದ ಶತಪಥವೇ ಮುಂತಾದ ಬ್ರಾಹ್ಮಣಭಾಗಗಳೊಳಗಿನ ಯಾವ ಆಚಾರಗಳು ಯಥಾಕ್ರಮವಾಗಿ ಸಂಗ್ರಥಿತವಾದುವೋ ಅವೇ ಈಗ 'ಕಲ್ಪಸೂತ್ರ' ಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಈ ಸೂತ್ರಗ್ರಂಥಗಳು ರಚಿಸಲ್ಪಡದಿದ್ದ ಪಕ್ಷದಲ್ಲಿ ಸರ್ವ ಶಾಖೀಯ ಬ್ರಾಹ್ಮಣಗಳೂ ಸಮಾನವಾಗಿಯೇ ಸರ್ವರಿಗೂ ಪ್ರಮಾಣ ಭೂತಗಳಾಗಿರುವುದರಿಂದ ಪ್ರತಿಯೊಬ್ಬನೂ ಸರ್ವಬ್ರಾಹ್ಮಣಗಳಲ್ಲಿ ಉಕ್ತ ಗಳಾದ ಆಚಾರಗಳನ್ನೂ ಅಂಗೀಕರಿಸಬೇಕಾಗುತ್ತಿತ್ತು; ಹಾಗೆ ಅನು ಷ್ಠಿಸಲ್ಪಡುವುದಾದರೋ ಅಸದಳವೇ ಸರಿ! ಎಂದು ಅರಿತವರಾದ ಕೆಲ ವರು ಒಂದು ಪ್ರಸಂಗದಲ್ಲಿ ಒಂದು ವಿಧವಾದ ಆಚಾರವನ್ನು ಪರಿಗ್ರ ಹಿಸುವುದೂ ಅನ್ಯಪ್ರಸಂಗದಲ್ಲಿ ಬೇರೆ ವಿಧವಾದ ಆಚಾರವನ್ನೇ ಅಂಗೀ ಕರಿಸುವುದೂ ಎಂಬ ಅನವಸ್ಥೆಯು ಸಂಭವಿಸುತ್ತಿತ್ತು; ಹಾಗಾಗಬಾರ ದೆಂಬ ಉದ್ದೇಶದಿಂದೇ ಆ ಆ ಸೂತ್ರಕಾರರು— 'ಈ ಶಾಖೆಯವರು ಈ ಆಚಾರಗಳನ್ನೇ ಅನುಷ್ಠಿಸತಕ್ಕದ್ದು' ಎಂಬ ಕಟ್ಟಳೆ ಮಾಡಿದರು. ಆ ನಿಯಮರೂಪವಾಕ್ಯಗಳೇ ಆ ಆ ಶಾಖೀಯರ ಸಲುವಾಗಿ ಬೇರೆ ಬೇರೆ ಸೂತ್ರರೂಪಗಳಾಗಿವೆ. ಇವೇ ಆಚಾರಸೂತ್ರಗಳು. ಇವು ಶ್ರೌತ ಸೂತ್ರಗಳೆಂದೂ ಗೃಹ್ಯಸೂತ್ರಗಳೆಂದೂ ಧರ್ಮಸೂತ್ರಗಳೆಂದೂ ಶುಲ್ಬ

ಸೂತ್ರಗಳೆಂದೂ ಈಗ ಪ್ರಚಾರದಲ್ಲಿವೆ. ಈ ಎಲ್ಲ ಸೂತ್ರಗಳಿಗೂ ಕಲ್ಪ ಸೂತ್ರಗಳೆಂಬ ಒಂದೇ ಹೆಸರಿರುವುದು. ಅಂದರೆ ಇವೆಲ್ಲ ಸೂತ್ರಗಳೂ ಕಲ್ಪಸೂತ್ರಗಳ ಅವಾಂತರ ಭೇದಗಳು.

ಈ ಸೂತ್ರಗ್ರಂಥಗಳಲ್ಲಿ ಮೀಮಾಂಸಕರು ಸೂಕ್ಷ್ಮರೀತಿಯಿಂದ ಕಲ್ಪಗಳೂ ಸೂತ್ರಗಳೂ ಎಂಬ ಎರಡು ಭಾಗಗಳನ್ನು ಕಲ್ಪಿಸಿದ್ದಾರೆ. ಹೇಗೆಂದರೆ, ಕುಮಾರಿಲಭಟ್ಟಕೃತ ತಂತ್ರವಾರ್ತಿಕವ ಸೂತ್ರಾಧಿಕರಣ ದಲ್ಲಿ (೨-೩-೬)—

**ಆಹ। ಕೇ ಪುನಃ ಕಲ್ಪಾಃಕಾನಿ ಸೂತ್ರಾಣೀತಿ। ಉಚ್ಯತೇ।**

ಕಲ್ಪಗಳೂ ಸೂತ್ರಗಳೂ ಆವವು ? ಎಂದರೆ, ಯಾವುಗಳಿಂದ ಸಿದ್ಧಪ್ರಯೋಗದ ಜ್ಞಾನವಾಗುವುದೋ ಅವು ಕಲ್ಪಗಳೆಂದೂ, ಲಕ್ಷಣ ಪ್ರದರ್ಶಕಗಳೇ ಸೂತ್ರಗಳೆಂದೂ ತಿಳಿಯತಕ್ಕದ್ದು. ಸಿದ್ಧಪ್ರಯೋಗಬೋಧಕವಾದುದೆನಿಸಿ ಕಲ್ಪವೆಂಬುದು ಅನುಷ್ಠಾನ ಸಾಧನವಾಗಿರುವುದು. ಸೂತ್ರದಲ್ಲಿ ಪ್ರಯೋಗದ ಸೂಚನೆಯಿರುವುದು, ಆದರಿಂದ ಪ್ರಯೋಗದ ಕಲ್ಪನೆಯು ಮಾಡಲ್ಪಡುವುದು. ಕಲ್ಪಗಳು ಪಠಿತಸಿದ್ಧಗಳು ಅಂದರೆ ಅವುಗಳು ಪಠಿಸಲ್ಪಟ್ಟಂತೆಯೇ ಪ್ರಯೋಗಗಳ ಅನುಷ್ಠಾನವು ಪ್ರತಿಯೊಂದು ಯಜ್ಞದಲ್ಲಿಯೂ ಮಾಡಲ್ಪಡುವುದು. ಈ ವಿಷಯದಲ್ಲಿ ಬೋಧಾಯನೀಯ, ವಾರಾಹ, ಮಾಶಕ ಮೊದಲಾದ ಸೂತ್ರಗಳು ಉದಾಹರಣೆಗಳಾಗಿವೆ. ಸೂತ್ರಗಳ ಸರ್ವ ಉದಾಹರಣೆಗಳಿಗೆ ಸಂಬಂಧಿಸಿದ ಲಕ್ಷಣವಾದರೋ ಆ ಆ ಸೂತ್ರಕಾರರಿಂದ ಸ್ವಸಂಜ್ಞೆಯ ಪರಿಭಾಷೆಯು ಮೂಲಕವಾಗಿ ಉತ್ಸರ್ಗಾಪವಾದಗಳೂ ಹೇತುದೃಷ್ಟಾಂತಗಳೂ ಹೇಳಲ್ಪಡುವುದೇ ಆಗಿರುವುದು. ಸೂತ್ರಗಳೂ— ಆಶ್ವಲಾಯನೀಯ, ಬೈಜವಾಪೀಯ, ದ್ರಾಹ್ಯಾಯಣೀಯ, ಲಾಟ್ಯಾಯನೀಯ, ಕಾತ್ಯಾಯನೀಯ; ಎಂಬಿವು.

ಈ ರೀತಿಯಾಗಿ ಮೀಮಾಂಸಕರು ಕಲ್ಪಗಳೂ ಸೂತ್ರಗಳೂ ಎಂಬ ಭೇದವನ್ನು ತೋರಿಸುವುದರ ಹೇತುವೇನಂದರೆ, 'ಕಲ್ಪ'ವೂ 'ಸೂತ್ರ'ವೂ ಎಂಬಿವೆರಡೂ ಶಬ್ದಗಳು ಪ್ರಾಮಾಣಿಕ ಪರಂಪರೆಯಲ್ಲಿ ಕಾಣಬರುತ್ತವೆ. ಜೈಮಿನಿಯ '**ಪ್ರಯೋಗಶಾಸ್ತ್ರಮಿತಿ ಚೇತ್**' ಎಂಬ ಸೂತ್ರದ ಭಾಷ್ಯದಲ್ಲಿ ಶಬರಸ್ವಾಮಿಯು, '**ಇಹ ಕಲ್ಪಸೂತ್ರಾಣಿ, ಉದಾಹರಣಮ್**' ಎಂದು ನುಡಿದು '**ಮಾಶಕಂ, ಹಾಸ್ತಿಕಂ, ಕೌಂಡಿನ್ಯಕಂ; ಇತ್ಯೇವಂ ಲಕ್ಷಣಾನಿ**' ಎಂದು ನಪುಂಸಕಲಿಂಗೀಪ್ರಯೋಗವನ್ನು ತೋರಿಸಿದ್ದಾನೆ.

'ಕಲ್ಪ'ವೆಂಬ ಶಬ್ದವಾದರೂ ತೈತ್ತಿರೀಯಾರಣ್ಯಕದಲ್ಲಿ (೨-೯) ಬ್ರಹ್ಮಯಜ್ಞವಿಧಿಪ್ರಸಂಗದೊಳು ಯಾವ ಯಾವ ಗ್ರಂಥಗಳು ಪಠಿಸಲ್ಪಡತಕ್ಕುವೆಂಬುದನ್ನು ಸೂಚಿಸುವಾಗ **'ಕಲ್ಪಾನ್ ಗಾಥಾ ನಾರಾಶಂಸೀಃ'** ಎಂಬುದಾಗಿ ನಿರ್ದೇಶಮಾಡಲ್ಪಟ್ಟಿದೆ; ಇದುವೇ ಆಶ್ವಲಾಯನಸೂತ್ರದಲ್ಲಿ ಅನುವಾದಿಸಲ್ಪಟ್ಟಿರುವುದು. ಈ ಸೂತ್ರದ ದೇವತ್ರಾತಕೃತಸಿದ್ಧಾಂತಭಾಷ್ಯದಲ್ಲಿ ಕಲ್ಪಶಬ್ದದ ಊಹಾಪೋಹವು ಮಾಡಲ್ಪಟ್ಟಿದೆ. ಅದರಲ್ಲಿ 'ಕಲ್ಪ' ಶಬ್ದದಿಂದ ಬ್ರಾಹ್ಮಣಭಾಗದೊಳಗಿನ ವಿಧಿವಾಕ್ಯಗಳನ್ನೂ 'ಬ್ರಾಹ್ಮಣ' ಶಬ್ದದಿಂದ ಬ್ರಾಹ್ಮಣಾಂತರ್ಗತಗಳಾದ ಅರ್ಥವಾದವಾಕ್ಯಗಳನ್ನೂ ಪರಿಗ್ರಹಿಸಬೇಕೆಂಬ ಒಂದು ಮತ (ಅಭಿಪ್ರಾಯ) ವನ್ನು ಪ್ರತಿಪಾದಿಸಿ, ಅನ್ಯಾಭಿಪ್ರಾಯದಿಂದಾದರೋ ಕಲ್ಪಶಬ್ದದಿಂದ ಸೂತ್ರಗಳೇ ಗ್ರಹಿಸಲ್ಪಡುವುವೆಂದು ನಿರೂಪಿಸಲ್ಪಟ್ಟಿದೆ. ಶಬ್ದಶಾಸ್ತ್ರಪ್ರವರ್ತಕರಲ್ಲಿ ಮುಂದಾಳುವೆನಿಸುವ ಭರ್ತೃಹರಿಯು—

**ಇನ್ದ್ರಿಯಾಣಾಂ ಸ್ವವಿಷಯೇಷ್ವನಾದಿರ್ಯೋಗ್ಯತಾ ಯಥಾ ।**
**ಅನಾದಿರರ್ಥೈಃ ಶಬ್ದಾನಾಂ ಸಂಬಂಧೋ ಯೋಗ್ಯತಾ ತಥಾ ॥**

ಎಂದು ಹೇಳುವ ಮೇರೆಗೆ, ವೇದಗಳಿಗೂ ಕಲ್ಪಸೂತ್ರಗಳಿಗೂ ಇರುವ ಸಂಬಂಧವಾದರೋ ವಿಷಯೇಂದ್ರಿಯಗಳಿಗೂ, ಶಬ್ದಾರ್ಥಗಳಿಗೂ, ಗುಣಗುಣಿಗಳಿಗೂ ಹೇಗೋ ಹಾಗೆ ನಿತ್ಯವಾದುದೆಂದರಿಯಲ್ಪಡುವುದು.

ವೇದಗಳು ಅಪೌರುಷೇಯಗಳಾದುದರಿಂದ, ಅವುಗಳಲ್ಲಿ ಪ್ರಯೋಗಪ್ರಾಶುಭಾವ ಬೋಧಕತ್ವವು [ಅಂದರೆ ಪ್ರಯೋಗಗಳಲ್ಲಿರುವ ವಿಧಿಗಳನ್ನು ಒಂದರಹಿಂದೆ ಒಂದು ಮಾಡಲ್ಪಡತಕ್ಕ ತಿಳಿವಳಿಕೆಯನ್ನುಂಟು ಮಾಡಿಕೊಡುವಿಕೆಯೆಂಬುದು] ಇರುವುದಿಲ್ಲ; ಕಲ್ಪಸೂತ್ರಗ್ರಂಥಗಳಾದರೋ ಆ ಅನುಷ್ಠೇಯ ಪದಾರ್ಥಗಳ ವ್ಯವಸ್ಥೆಯನ್ನು ಮಾಡುವುದರಿಂದ ಅವು ವೇದಗಳೊಡನೆ ನಿತ್ಯಸಂಬಂಧ ಭೂತಗಳಾಗಿವೆ; ಎಂದು ಯಾಜ್ಞಿಕರ ಮತವು.

ಈ ಕಲ್ಪಗ್ರಂಥಗಳಲ್ಲಿರುವ ವಿಷಯಗಳನ್ನು ಪರಾಮರ್ಶಿಸಿದರೆ ಇವುಗಳನ್ನು ವೇದಾಂಗವಾಙ್ಮಯದಲ್ಲಿ ಸಮಾವೇಶಗೊಳಿಸಲಭ್ಯಂತರವಿಲ್ಲೆಂದು ಹೇಳಬಹುದಾಗಿದೆ. ಇವುಗಳಲ್ಲಿ ಯಾಜ್ಞಿಕಕರ್ಮ ವಿಧಿಗಳು ಪರಿವಿಡಿದು ಬಣ್ಣಿಸಲ್ಪಟ್ಟಿವೆ. ಆದ್ದರಿಂದ, ಕಲ್ಪಗ್ರಂಥಗಳಲ್ಲಿ ಪ್ರಾಮುಖ್ಯವಾಗಿ ಬ್ರಾಹ್ಮಣಪ್ರತಿಪಾದ್ಯವಿಷಯಗಳೇ ಸಮಾವಿಷ್ಟಗಳಾಗಿರುವುವೆಂಬ

ಸಂಗತಿಯು ಮಾತ್ರ ವಾಚಕಮಹಾಶಯರ ಸ್ಮೃತಿಪಥದಿಂದ ಚ್ಯುತ ವಾಗದಿರಲಿ! ಋತ್ವಿಜರು ಯಜ್ಞಯಾಗಾದಿನಿಯಮಗಳ ಮಂತ್ರಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ಸುಲಭವಾಗುವುದಕ್ಕೋಸ್ಕರ ಸ್ವಲ್ಪವಾದ ಸಾಂಕೇತಿಕ ಶಬ್ದಗಳಿಂದ ಪದ್ಧತಿಯನ್ನನುಸರಿಸಿ ರಚಿಸಲ್ಪಟ್ಟ ಸೂತ್ರಗಳು ಅತ್ಯಂತಾವಶ್ಯಕಗಳೆಂದು ತಿಳಿದುಬಂದಾಗಲೇ ಈ ಗ್ರಂಥಗಳು ಬರೆಯ ಲ್ಪಟ್ಟವು. ಬ್ರಾಹ್ಮಣಗಳಲ್ಲಿ ಹೇಳಲ್ಪಡುವ ಶ್ರೌತಸಂಸ್ಕಾರಗಳೂ, ನಿತ್ಯ ವ್ಯವಹಾರೋಪಯುಕ್ತಗಳಾದ ಗೃಹ್ಯಸಂಸ್ಕಾರಗಳೂ, ಅಥವಾ ವಿಧಿ ಗಳೂ ಯಾವ ಕಲ್ಪಸೂತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುವೋ ಆ ಆ ವಿಷಯಾನುಸಾರವಾಗಿ ಅವುಗಳಿಗೆ ಕಲ್ಪಸೂತ್ರಗಳೂ ಗೃಹ್ಯಸೂತ್ರಗಳೂ ಎಂಬ ಬೇರೆ ಬೇರೆ ಸಂಜ್ಞೆಗಳಿವೆ.

ಗೃಹ್ಯಸೂತ್ರಗಳೂ, ಧರ್ಮಸೂತ್ರಗಳೂ, ಕಲ್ಪಸೂತ್ರಗಳ ಅಂತ ರ್ಭೂತವಾಗಿರುವುವೆಂದೇ ಅರಿಯಲ್ಪಡುತ್ತವೆ; ಆದರೆ ಪಾರಮಾರ್ಥಿಕ ವ್ಯವ ಹಾರವು ಅನುಷ್ಠಿಸಲು ಸುಗಮವಾಗಬೇಕೆಂದೂ, ಅಂಗಾಂಗೀಭಾವ ಗಳು ಸ್ಪಷ್ಟವಾಗಿ ತಿಳಿಯಲ್ಪಡಬೇಕೆಂದೂ, ಯೋಚಿಸಿ ಸ್ಮೃತಿಕಾರರೂ, ಕಲ್ಪನಿಬಂಧಕಾರರೂ. ಅಲ್ಲಲ್ಲಿ ಗೃಹ್ಯಸೂತ್ರಗಳಿಂದಲೂ ಧರ್ಮಸೂತ್ರಗ ಳಿಂದಲೂ ವಿಹಿತಗಳಾದ ಕರ್ಮಗಳ ವಿಷಯದಲ್ಲಿ ಹೇಳಲ್ಪಟ್ಟ ಶಾಸ್ತ್ರಾ ರ್ಥದ ಸಾಫಲ್ಯವು ಅನುಷ್ಠಿಸತಕ್ಕವರಿಗೆ ವ್ಯವಸ್ಥಿತರೀತಿಯಿಂದ ಗೋಚ ರವಾಗಲೆಂಬುದ್ದಿಶ್ಯವಾಗಿ ಗೃಹ್ಯಸೂತ್ರಗಳನ್ನೂ, ಧರ್ಮಸೂತ್ರಗಳನ್ನೂ ಮುಖ್ಯಸೂತ್ರಗ್ರಂಥಗಳಿಂದ ಬೇರ್ಪಡಿಸಿದ್ದಾರೆ.

ಈ ವಿಷಯಕವಾಗಿ ಕೆಲವರು ಶಂಕಿಸುವುದೇನಂದರೆ, ಗೃಹ್ಯಸೂ ತ್ರಗಳೂ ಧರ್ಮಸೂತ್ರಗಳೂ ಬೇರೆ ಬೇರೆಯೇ ಇರುತ್ತವೆ? ಏಕೆಂ ದರೆ, ಕೆಲವು ಶ್ರೌತಸೂತ್ರಗ್ರಂಥಗಳ ಕೊನೆಯಲ್ಲಿ ಆಚಾರ್ಯ ನಮ ಸ್ಕಾರದ ದ್ವಿರುಕ್ತಿಯಿರುವುದು; ಆಶ್ವಲಾಯನ ಶ್ರೌತಸೂತ್ರಗ್ರಂಥದ ೧೨ ನೆಯ ಅಧ್ಯಾಯದ ಕೊನೆಯಲ್ಲಿ — '**ನಮಃ ಶೌನಕಾಯ, ನಮಃ ಶೌನಕಾಯ**' ಎಂಬುದಾಗಿ ಶಾಸ್ತ್ರವು ಸಮಾಪ್ತಿಗೊಳಿಸಲ್ಪಟ್ಟಿದೆ: ಮತ್ತು ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಅಧ್ಯಾಯ ಸಮಾಪ್ತಿಯದ್ಯೋ ತಕವೆಂದು ಕಡೆಯ ಶಬ್ದದ ದ್ವಿರುಕ್ತಿಯಿರುವುದು. ಪ್ರಥಮಾಧ್ಯಾಯದ ಸಮಾಪ್ತಿಯಲ್ಲಿ— '**ಉಪತಿಷ್ಠನ್ತ ಉಪತಿಷ್ಠನ್ತೆ**' ಎಂದೂ ದ್ವಿತಿಯಾ ಧ್ಯಾಯದ ಕೊನೆಯಲ್ಲಿ — '**ಚಾತುರ್ಮಾಸ್ಯಾನಿ ವಾ ಪುನಶ್ಚಾತು ರ್ಮಾಸ್ಯಾನಿ ವಾ ಪುನಃ**' ಎಂದೂ, ಹೀಗೇಯೇ ಪ್ರತಿಯೊಂದು ಅಧ್ಯಾ

ಯದ ಕೊನೆಯಲ್ಲಿಯೂ ದ್ವಿರುಕ್ತಿಯುಂಟು. ಮತ್ತು ಹನ್ನೆರಡನೆಯ ಅಧ್ಯಾಯದ ಕೊನೆಯಲ್ಲಿಯೂ— **'ಪ್ರಕೃತಿಭಾವೆ ಪ್ರಕೃತಿಭಾವೆ'** ಎಂದು ದ್ವಿರುಕ್ತಿಯನ್ನು ತೋರಿಸಿ ಸರ್ವ ಅಧ್ಯಾಯಗಳ ನಿಯಮವು ಒಂದೇ ವಿಧವಾಗಿ ಪಾಲಿಸಲ್ಪಟ್ಟ ಬಳಿಕ— **'ನಮೋಬ್ರಹ್ಮಣೆ ನಮೋಬ್ರಹ್ಮಣೆ ನಮಃ ಆಚಾರ್ಯೇಭ್ಯೋ ನಮಃ ಶೌನಕಾಯ ನಮಃ ಶೌನಕಾಯ'** ಎಂದು ಆಚಾರ್ಯ ನಮಸ್ಕಾರಪೂರ್ವಕವಾಗಿ ಶಾಸ್ತ್ರವು ಸಮಾಪ್ತಿಗೊಳಿಸಲ್ಪಟ್ಟಿದೆ. ಇದರಿಂದ ಗೃಹ್ಯಾದಿ ಸೂತ್ರಗಳನ್ನು ಬೇರೆಯಾಗಿರತಕ್ಕವುಗಳೆಂದೇ ಹೇಳಲು ಶಕ್ಯವಿದೆ ? ಎಂಬೀ ಆಕ್ಷೇಪವು ಯುಕ್ತಿಯುಕ್ತವಲ್ಲ. ಹನ್ನೆರಡನೆಯ ಅಧ್ಯಾಯದ ಕೊನೆಯಲ್ಲಿ ಮಾಡಲ್ಪಡುವ ನಮಸ್ಕಾರವೆಂಬುದು ಒಂದು ವಿಧವಾದ ಮಂಗಲಾಚರಣವೆಂದು ಹೇಳಲ್ಪಡುವುದು. ಅದಾದರೋ 'ಗ್ರಂಥಾದೌ ಗ್ರಂಥಮಧ್ಯೇ ಚ' ಎಂಬ ಮೊದಲಾದ ಸ್ಮೃತಿ ವಾಕ್ಯಗಳನ್ನೂ, ಶಿಷ್ಟಾಚಾರವನ್ನೂ ಅನುಸರಿಸಿರುವುದು. ಪಾತಂಜಲಮಹಾಭಾಷ್ಯದಲ್ಲಿಯೂ (೧-೧-೩)— **'ಮಂಗಲಾದೀನಿ ಮಂಗಲಮಧ್ಯಾನಿ ಮಂಗಲಾಂತಾನಿ ಚ ಶಾಸ್ತ್ರಾಣಿ ಪ್ರಥನ್ತೆ।'** ಯಾವ ಶಾಸ್ತ್ರಗಳ ಆರಂಭದಲ್ಲಿಯೂ, ಮಧ್ಯದಲ್ಲಿಯೂ, ಕೊನೆಯಲ್ಲಿಯೂ, ಮಂಗಲವು ಅನುಷ್ಠಿಸಲ್ಪಡುವುದೋ ಆ ಶಾಸ್ತ್ರಗಳು ಪ್ರಸಿದ್ಧಿಯನ್ನು ಹೊಂದುತ್ತವೆ. ಎಂಬುದಾಗಿ ಹೇಳಲ್ಪಡುವುದರಿಂದ ಆಶ್ವಲಾಯನ ಗೃಹ್ಯಸೂತ್ರದ ಕೊನೆಯಲ್ಲಿ ಶೌನಕಾಚಾರ್ಯನನ್ನು ಕುರಿತು ಮಾಡಲ್ಪಟ್ಟ ನಮಸ್ಕಾರಾತ್ಮಕವಾದ ಅಂತಿಮ ಮಂಗಲವೇ ಶಾಸ್ತ್ರಸಮಾಪ್ತಿದ್ಯೋತಕವಾಗಿರುವುದು. ಅದುಕಾರಣವೇ ಶ್ರೌತವೂ ಗೃಹ್ಯವೂ, ಧರ್ಮವೂ. ಶುಲ್ಬವೂ ಎಂಬಿವೆಲ್ಲ ಕೂಡಿ ಒಂದೇ ಸೂತ್ರಗ್ರಂಥವೆಂದು ಹೇಳುವುದು ಯುಕ್ತಿಸಿದ್ಧವಾದುದು.

ಗೃಹ್ಯಸೂತ್ರಗಳ ರಚನೆಯಾದರೋ ಶ್ರೌತಸೂತ್ರಗಳಲ್ಲಿ ಹೇಳಲ್ಪಟ್ಟ ಕರ್ಮಗಳ ಸಾಮಾನ್ಯ, ವಿಶೇಷ, ಅತಿದೇಶ, ದೃಷ್ಟಾಂತ, ಪರಿಭಾಷೆಗಳೆಂಬೀ ಮುಂತಾದ ವಿವಿಧ ರೂಪಗಳುಳ್ಳದ್ದಾಗಿದೆ; ಅಂದರೆ ಶ್ರೌತಸೂತ್ರಗಳಲ್ಲಿ ಹೇಳಲ್ಪಡತಕ್ಕ ಕರ್ಮಗಳ ಇತಿ ಕರ್ತವ್ಯತೆಯ ಸಂಪೂರ್ಣಜ್ಞಾನವಿಲ್ಲದೆ ಗೃಹ್ಯಸೂತ್ರಗಳೊಳಗಿನ ಒಂದಾದರೂ ಕರ್ಮವನ್ನು ಸಾಂಗೋಪಾಂಗವಾಗಿ ಮಾಡಲಿಕ್ಕೆ ಬರುವಂತಿಲ್ಲ. ಅದು ಹೇಗೆಂದರೆ, ಅಶ್ವಲಾಯನಗೃಹ್ಯಸೂತ್ರವು **'ತಸ್ಯಾಗ್ನಿಹೋತ್ರೇಣ ಪ್ರಾದುಷ್ಕರಣಹೋಮಕಾಲಾ ವ್ಯಾಖ್ಯಾತಾ'** ಗೃಹ್ಯಾಗ್ನಿ ಸಂಬಂಧವಾದ ಪ್ರಾದು

ಪ್ಕರಣವನ್ನೂ ಹೋಮಕಾಲವನ್ನೂ ಅಗ್ನಿಹೋತ್ರದಿಂದೇ ತಿಳಿಯತ ಕ್ಕದ್ದು ಎಂದು ಸೂಚಿಸುವುದರಿಂದ ಶ್ರೌತಸೂತ್ರದಲ್ಲಿ ಹೇಳಲ್ಪಟ್ಟ— " **ಉತ್ಸರ್ಗೇಽಪರಾಹ್ಣೇ ಗಾರ್ಹಪತ್ಯಂ ಪ್ರಜ್ವಲ್ಯ** " ಎಂಬ ಮೊದಲಾದ ಕಾಲಗಳು ಇಲ್ಲಿ ಗ್ರಹಿಸಲ್ಪಡುತ್ತವೆ. ಆಶ್ವಲಾಯನ ಗೃಹ್ಯಸೂತ್ರವು— ' **ಅಥಾಗ್ನೌ ಜುಹೋತಿ ಯಥೋಕ್ತಂ ಪುರಸ್ತಾತ್** ' ಎಂಬುದಾಗಿ ಶ್ರೌತೋಕ್ತವಾದ (೪-೮-೪) ಪಿಂಡ ಪಿತೃಯಜ್ಞದಲ್ಲಿ ವಿಧಿಸಲ್ಪಟ್ಟಿರುವ ಮೇರೆಗೆ ಅಗ್ನೌಕರಣವನ್ನು ಮಾಡತಕ್ಕದೆಂದು ಸೂಚಿಸುವಲ್ಲಿ ಸ್ಪಷ್ಟವಾಗಿಯೇ— ' **ಯಥೋಕ್ತಂ ಪುರಸ್ತಾತ್** ' ಎಂಬ ವಾಕ್ಯವಿರುವುದು. ಆಶ್ವಲಾಯನ ಗೃಹ್ಯಸೂತ್ರವು, " **ಪಿಂಡೈರ್ವ್ಯಾಖ್ಯಾತಮ್** " (೪-೭-೪) ಶ್ರೌತಸೂತ್ರದಿಂದ ಪಿಂಡಯಜ್ಞಪ್ರಕರಣದಲ್ಲಿ ನಿರೂಪಿಸಲ್ಪಡುವ ಪಿಂಡಪ್ರದಾನ ವಿಷಯಕಗಳಾದ ಪಕ್ಷಗಳೆಲ್ಲವೂ ಪಾರ್ವಣಾದಿಶ್ರಾದ್ಧಗಳನ್ನನುಲಕ್ಷಿಸಿರುತ್ತವೆ. ಎಂಬುದಾಗಿ ಶ್ರೌತಸೂತ್ರಗಳ ಆಧಾರವನ್ನು ತೋರಿಸುವುದು. ಪಾರಸ್ಕರಗೃಹ್ಯಸೂತ್ರದಲ್ಲಿ— ' **ಚಾತುಷ್ಪ್ರಾಶ್ಯ ಪಚನವತ್ಸರ್ವಮ್** ' ಶ್ರೌತಸೂತ್ರದಿಂದ ಆಧಾನವಿಧಿಯಲ್ಲಿ ಹೇಳಲ್ಪಟ್ಟ ಚಾತುಷ್ಪ್ರಾಶ್ಯಪಚನಕರ್ಮದಂತೇ ಇಲ್ಲಿಯೂ ಅನುಷ್ಠಿಸತಕ್ಕದ್ದು; ಎಂಬೀ ಸೂಚನೆಯಿಂದ ಶ್ರೌತಸೂತ್ರದ ಕಡೆಗೆ ಬೊಟ್ಟುಮಾಡಿ ತೋರಿಸಲ್ಪಟ್ಟಿದೆ. ಇದೂ ಅಲ್ಲದೆ— " **ಉಕ್ತಾನಿ ವೈತಾನಿಕಾನಿ ಗೃಹ್ಯಾಣಿ ವಕ್ಷ್ಯಾಮಃ** " ಎಂಬುದಾಗಿ ಅಶ್ವಲಾಯನ ಪ್ರಥಮ ಗೃಹ್ಯಸೂತ್ರವಿರುವುದು. ಮೊದಲು ತ್ರೇತಾಗ್ನಿಸಾಧ್ಯಗಳಾದ ಕರ್ಮಗಳನ್ನು ಹೇಳಿ, ಇನ್ನು ನಾವು ಗೃಹ್ಯಾಗ್ನಿಸಾಧ್ಯ ಕರ್ಮಗಳನ್ನು ಹೇಳುವೆವು; ಎಂಬುದಾಗಿ ಈ ಸೂತ್ರದಲ್ಲಿರುವ ಶಬ್ದಗಳಿಂದ ಯಾವ ಪೂರ್ವದ ಸಂಬಂಧವು ತೋರಿಸಲ್ಪಟ್ಟಿದೆಯೋ ಅದು ಪೂರ್ವಗ್ರಂಥವನ್ನು ಅಂದರೆ ಶ್ರೌತಸೂತ್ರವನ್ನು ಅನುಲಕ್ಷಿಸಿರುವುದು. ಕಾತ್ಯಾಯನ ಶ್ರೌತಸೂತ್ರವು— " **ಅಥಾತೋಽಧಿಕಾರಃ** " ಎಂಬ ವಾಕ್ಯದಿಂದಾರಂಭಿಸಲ್ಪಟ್ಟು, ಮುಂದೆ ಗೃಹ್ಯಸೂತ್ರವಾದರೋ— " **ಅಥಾತೋ ಗೃಹ್ಯಸ್ಥಾಲೀಪಾಕಾನಾಂ ಕರ್ಮ** " ಎಂದು ಆರಂಭವಾಗಿದೆ. ಈ ಗೃಹ್ಯಸೂತ್ರದಲ್ಲಿರುವ '**ಅಥ**' ಶಬ್ದದ ಅರ್ಥವನ್ನು— ಕರ್ಕ, ಹರಿಹರ, ಗದಾಧರ, ಜಯರಾಮ, ವಿಶ್ವನಾಥನೆಂಬೀ ಐದು ಮಂದಿ ಭಾಷ್ಯಕಾರರೂ, 'ಶ್ರೌತಸೂತ್ರಗಳನ್ನು ಹೇಳಿದ ತರುವಾಯ ಸ್ಮಾರ್ತಸೂತ್ರಗಳನ್ನು ಹೇಳುವೆವು' ಎಂದು ಏಕಕಂಠದಿಂದ ನುಡಿಯುತ್ತಾರೆ. ಇದರಿಂದ ಯಾವನು ಅಗ್ನಿತ್ರಯಸಾಧ್ಯಕರ್ಮಗಳ ಅನುಷ್ಠಾನಕ್ಕೋಸ್ಕರ ಶ್ರೌತಸೂತ್ರಗಳನ್ನು ರಚಿಸಿದನೋ ಅವನೇ ಗೃಹ್ಯಾಗ್ನಿಸಾ

ಧ್ಯಕರ್ಮಾನುಷ್ಠಾನಸಿದ್ಧಿಗಾಗಿ ಗೃಹ್ಯಸೂತ್ರಗಳನ್ನು ಮಾಡಿದನೆಂಬ ತಾತ್ಪ ರ್ಯವು ಸಿದ್ಧಿಸುವುದು. ಹೀಗೆ ಶ್ರೌತಸೂತ್ರಗಳೂ, ಗೃಹ್ಯಸೂತ್ರಗಳೂ, ಒಬ್ಬ ಆಚಾರ್ಯನಿಂದೇ ರಚಿಸಲ್ಪಟ್ಟವುಗಳಾದ್ದರಿಂದ ಅವೆರಡೂಕೂಡಿ ಒಂದೇ ಸೂತ್ರಗ್ರಂಥವೆಂದು ಹೇಳಲಭ್ಯಂತರವಿಲ್ಲ. ಮತ್ತು ಆ ಆಚಾ ರ್ಯನಿಂದೇ ಗೃಹ್ಯಾಗ್ನಿ ಸಾಧ್ಯಗಳಲ್ಲದ ಕರ್ಮಗಳ ನಿರೂಪಣೆಗಾಗಿ ಧರ್ಮ ಸೂತ್ರಗಳೂ ವಿಹಾರ, ಅಗ್ನ್ಯಾಯತನ, ವೇದಿಕೆ ಮುಂತಾದ ಯಜ್ಞೋ ಪಯುಕ್ತಸ್ಥಳಗಳ ಮಾಪನೆಗಾಗಿ ಶುಲ್ಬಸೂತ್ರಗಳೂ ರಚಿಸಲ್ಪಟ್ಟಿವೆ. ಅದುಕಾರಣವೇ, ವಸ್ತುತಃ ಏಕಕರ್ತೃಕಗಳಾದ ಇವೆಲ್ಲ ಸೂತ್ರಗಳೂ ಕಲ್ಪಸೂತ್ರಾಂತರ್ಭೂತಗಳೆಂದು ಹೇಳಲ್ಪಡುತ್ತವೆ. ಇನ್ನು ನಾಮಪಾ ರ್ಥಕ್ಯದಿಂದ ಶ್ರೌತಗೃಹ್ಯಾದಿಸೂತ್ರಗಳು ಭಿನ್ನಕರ್ತೃಕಗಳಾಗಿರುವುವೆಂದು ಹೇಳುವುದಾದರೆ, ಬೋಧಾಯನಸೂತ್ರಗಳಲ್ಲಿಯೂ ಕೂಡ ಭಿನ್ನಕರ್ತೃ ಕತೆಯು ಸಂಭವಿಸಬಹುದಲ್ಲವೇ ? ಏಕೆಂದರೆ ಅವು ಈಗ ೧ ದ್ವೈಧ ಸೂತ್ರಗಳು ೨ ಕರ್ಮಾನ್ತಸೂತ್ರಗಳು ೩ ಪ್ರಾಯಶ್ಚಿತ್ತಸೂತ್ರಗಳು ೪ ಶುಲ್ಬ ಸೂತ್ರಗಳು ೫ ಪ್ರವರಸೂತ್ರಗಳು ಎಂಬುದಾಗಿ ಐದು ವಿಧವಾದ ಸೂತ್ರ ಗಳು ಉಪಲಬ್ಧವಾಗಿವೆ. ಇವು ಅಯ್ಯೂ ಬೋಧಾಯನಸೂತ್ರಗ್ರಂಥಗ ಳೊಳಗಿನ ಬೇರೆಬೇರೆ ಪ್ರಕರಣಗಳೆಂದು ಹೇಳಲ್ಪಡುತ್ತವೆ. ಅದೇ ಮೇರೆಗೆ ಸರ್ವಕಲ್ಪಸೂತ್ರಗಳಲ್ಲಿಯೂ ೧ ಶ್ರೌತವೂ ೨ ಗೃಹ್ಯವೂ ೩ ಶುಲ್ಬವೂ ೪ ಧರ್ಮವೂ ಎಂಬ ಬೇರೆಬೇರೆ ಪ್ರಕರಣಗಳಿರುತ್ತವೆ. ಆದ್ದರಿಂದ ಗೃಹ್ಯಸೂತ್ರಾದಿಗಳು ಶ್ರೌತಸೂತ್ರಗ್ರಂಥದ ಅವಾಂತರಪ್ರಕರಣಗಳಿಗೂ ಬೇರೆಬೇರೆ ಗ್ರಂಥಗಳೇ ಎಂಬ ನುಡಿಯು ಅನವಸ್ಥೆಗೀಡಾಗದಿರದು. ಮಂಡಲಬ್ರಾಹ್ಮಣವೂ, ಉಪಸ್ಥಾನಬ್ರಾಹ್ಮಣವೂ, ಅನ್ತರ್ಯಾಮಿಬ್ರಾಹ್ಮ ಣವೂ, ವಂಶಬ್ರಾಹ್ಮಣವೂ ಎಂಬೀ ಮುಂತಾದುವು ಶತಪಥಬ್ರಾಹ್ಮಣದ ಭಾಗಗಳೆಂದು ಪ್ರಸಿದ್ಧಗಳಾಗಿರುವುದರಿಂದ ಆ ಬ್ರಾಹ್ಮಣಭಾಗಗಳು ಆ ಆ ಪ್ರಕರಣಬೋಧಕಗಳಾಗಿರುವುವು. ಮೇಲಿನ ಪದ್ಧತಿಯಿಂದ ನಾಮ ಪಾರ್ಥಕ್ಯಮೂಲಕವಾಗಿ ಗ್ರಂಥಭಿನ್ನತೆಯನೊಡಂಬಟ್ಟರೆ ಮಂಡಲಬ್ರಾ ಹ್ಮಣಾದಿಭಾಗಗಳೆಲ್ಲ ಬೇರೆಬೇರೆ ಗ್ರಂಥಗಳೆನಿಸಬಹುದಲ್ಲವೇ ? ಪ್ರಾಚೀನ ವಿಬುಧರು ಈಸರಣಿಯನ್ನೊಪ್ಪರು. ಆದ್ದರಿಂದ ಈ ಮೇಲೆ ನಾವು ಹೇಳಿದ ಸಹೇತುಕವಾಕ್ಯಗಳಿಂದ ಗೃಹ್ಯಾದಿಸೂತ್ರಗಳನ್ನು ಶ್ರೌತಸೂತ್ರ ಗ್ರಂಥಾಂತರ್ಭೂತವಾದವುಗಳೆಂದರಿವುದುಚಿತವು.

ವೇದಾರ್ಥವನ್ನರಿತುಕೊಳ್ಳಲು ಶ್ರೌತಸೂತ್ರಗಳೂ ಗೃಹ್ಯಸೂತ್ರಗಳೂ ಉಪಯುಕ್ತಗಳಾಗಿವೆ. ಇವುಗಳಲ್ಲಿ ಕೇವಲ ಯಜ್ಞಯಾಗಾದಿಗಳ ನಿಯಮಗಳೇ ಇರುವುದಿಲ್ಲ, ಮಂತ್ರಗಳ ವಿನಿಯೋಗರೀತಿಯೂ ಹೇಳಲ್ಪಟ್ಟಿದೆ. ಆ ಆ ವೇದಸಂಹಿತೆಗಳ ಮಂತ್ರಗಳೇ ಈ ಸೂತ್ರಗ್ರಂಥಗಳಲ್ಲಿ ತೆಗೆದುಕೊಳ್ಳಲ್ಪಟ್ಟಿವೆ. ಹಾಗೂ, ಯಾವ ಯಾವ ಯಾಜ್ಞಿಕಕ್ರಿಯೆಗಳಲ್ಲಿ ಯಾವ ಯಾವ ಮಂತ್ರಗಳನ್ನು ಪಠಿಸಬೇಕೆಂಬುದೂ ವಿಶದೀಕೃತವಾಗಿದೆ. ಆದರೆ ಅನೇಕ ವೈದಿಕಮಂತ್ರಗಳಿಗೂ ಯಾಜ್ಞಿಕಕರ್ಮಗಳಿಗೂ ಏನೊಂದೂ ಸಂಬಂಧವೇ ಇರುವುದಿಲ್ಲ ! ಕೆಲವೆಡೆಯಲ್ಲಿ ಒಂದು ಕಾರ್ಯವನ್ನು ಸಾಧಿಸಲೋಸುಗ ಯಾವ ಮಂತ್ರವು ಉಪಯೋಗಿಸಲ್ಪಟ್ಟದಾಗಿ ಕಂಡುಬರುವುದೋ ಆ ಮಂತ್ರಕ್ಕೂ ಆ ಕಾರ್ಯಕ್ಕೂ ಯಾವ ವಿಧವಾದ ಸಂಬಂಧವೂ ಇಲ್ಲ ! ಕೆಲವು ಪ್ರಸಂಗಗಳಲ್ಲಿ ಮಂತ್ರಗಳ ಅರ್ಥವನ್ನೇ ವಿಪರ್ಯಾಸಗೊಳಿಸಿ ಅವುಗಳಿಗೆ ವೈರೂಪ್ಯವನ್ನುಂಟುಮಾಡಿದುದೂ ಆಶ್ಚರ್ಯಜನಕವಾಗಿದೆ ! ಇರಲಿ. ಈ ಸೂತ್ರವಾಙ್ಮಯದಿಂದ ಕೆಲವು ಮಂತ್ರಗಳ ವಿನಿಯೋಗಜ್ಞಾನಮೂಲಕ ವೇದಗಳಲ್ಲಿಯ ಕಠಿಣಭಾಗಗಳನ್ನರಿತುಕೊಳ್ಳಲು ಸ್ವಲ್ಪವಾದರೂ ಸುಲಭವೆನಿಸದಿರಲಾರದೆಂದು ಹೇಳಲಡ್ಡಿಯಿಲ್ಲ.

ಶ್ರೌತ, ಗೃಹ್ಯ, ಧರ್ಮ, ಶುಲ್ಬಬೋಧಕ ಸೂತ್ರಗಳ ಲಕ್ಷಣವೆಂತೆಂದರೆ, ಅನೇಕಾಗ್ನಿಸಾಧ್ಯಕರ್ಮಗಳನ್ನು ಪ್ರತಿಪಾದಿಸುವ ಗ್ರಂಥಗಳು ಶ್ರೌತಸೂತ್ರಗಳೆಂದೂ, ಏಕಾಗ್ನಿಸಾಧ್ಯಕರ್ಮಗಳನ್ನು ಪ್ರತಿಪಾದಿಸುವ ಗ್ರಂಥಗಳು ಗೃಹ್ಯಸೂತ್ರಗಳೆಂದೂ ಹೇಳಲ್ಪಡುತ್ತವೆ. ಇದೇ ಅರ್ಥವು ಆಶ್ವಲಾಯನೀಯ ಗೃಹ್ಯಸೂತ್ರವೃತ್ತಿಯ ಆರಂಭದಲ್ಲಿ ಗಾರ್ಗ್ಯನಾರಾಯಣನಿಂದ ಹೀಗೆ ಹೇಳಲ್ಪಟ್ಟಿದೆ— '**ವಿತಾನೋಽಗ್ನೀನಾಂ ವಿಸ್ತಾರಃ, ತತ್ರಭವಾನಿ ವೈತಾನಿಕಾನಿ; ಬಹ್ವಗ್ನಿಸಾಧ್ಯಾನಿಕರ್ಮಾಣೀತ್ಯರ್ಥಃ । ಗೃಹನಿಮಿತ್ತೋಽಗ್ನಿರ್ಗೃಹ್ಯಃ, ತತ್ರಭವಾನಿ ಕರ್ಮಾಣ್ಯಪಿ ಲಕ್ಷಣಯಾಗೃಹ್ಯಾಣೀತ್ಯುಚ್ಯನ್ತೇ ।**'

ಧರ್ಮಸೂತ್ರಗಳೆಂದರೆ, ತತ್ತತ್ಕಾಲೀನಗಳಾದ ತತ್ತದಾಚಾರಗಳಿಗೆ ಸಂಬಂಧಿಸಿದ ಧರ್ಮಗಳನ್ನು ಪ್ರತಿಪಾದಿಸತಕ್ಕ ಗ್ರಂಥಗಳು. ಇದೇ ಅರ್ಥವು ಆಪಸ್ತಂಬೀಯ ಧರ್ಮಸೂತ್ರಗ್ರಂಥದ ಪ್ರಾಥಮಿಕ ಸೂತ್ರದಿಂದ ಸೂಚಿಸಲ್ಪಡುವುದು — '**ಅಥಾತಃ ಸಾಮಯಾಚಾರಿಕಾನ್ ಧರ್ಮಾನ್ ವ್ಯಾಖ್ಯಾಸ್ಯಾಮಃ ।**' ಎಂಬ ಸೂತ್ರದ ಉಜ್ವಲರೂಪ

ವಾದ ವೃತ್ತಿಯಲ್ಲಿ ಹರದತ್ತನು—'**ಪೌರುಷೇಯೀ ವ್ಯವಸ್ಥಾ ಸಮಯಃ, ಸಮಯ ಮೂಲಾ ಆಚಾರಾಃ ಸಮಯಾಚಾರಾಃ; ತೇಷು ಭವಾಃ ಸಾಮಯಾಚಾರಿಕಾಃ, ಏವಂಭೂತಾನ್ ಧರ್ಮಾನಿತಿ** |' ಎಂದು ನಿರೂಪಿಸಿದ್ದಾನೆ.

ಧರ್ಮಸೂತ್ರಗ್ರಂಥಗಳು ಗೃಹ್ಯಸೂತ್ರಗಳೊಡನೆ ವಿಶೇಷ ಸಂಬಂಧ ವುಳ್ಳವುಗಳಾಗಿವೆ. ಹೇಗೆಂದರೆ, ಆ ಸೂತ್ರಗ್ರಂಥಗಳಲ್ಲಿರುವ ಮಂತ್ರ ಗಳೇ ಈ ಗ್ರಂಥಗಳಲ್ಲಿ ಸ್ಪಷ್ಟೀಕರಿಸಲ್ಪಡುತ್ತವೆ. ಇವುಗಳಲ್ಲಿ ಬ್ರಾಹ್ಮ ಣಾದಿ ನಾಲ್ಕುವರ್ಣಗಳ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳ ನಿಯ ಮಗಳೂ ಧರ್ಮಗಳೂ ವಿಶೇಷತಃ ವರ್ಣಿಸಲ್ಪಡುತ್ತವೆ.

ಶುಲ್ಬಸೂತ್ರಗಳೆಂದರೆ ಅಗ್ನ್ಯಾಯತನ, ವಿಹಾರ, ಪ್ರಾಗ್ವಂಶ, ಮಂಡಪಾದಿಗಳ ನಿರ್ಮಾಣದಲ್ಲಿ ಅವುಗಳ ಅಳತೆಗೋಸ್ಕರ ದಾರದ ಪ್ರಮಾಣವನ್ನು ಹೇಳತಕ್ಕ ಸೂತ್ರಗಳು. ಈ ವಿಷಯವು ಕಾತ್ಯಾಯನ ಪ್ರಣೀತ ಶುಲ್ಬಸೂತ್ರದ ಆರಂಭದಲ್ಲಿ:– '**ರಜ್ಜುಸಮಾಸಂ ವಕ್ಷ್ಯಾಮಃ**' ಎಂದು ಹೇಳಲ್ಪಡುವ ವಾಕ್ಯದಿಂದಲೂ, ಇದನ್ನು ಸ್ಪಷ್ಟೀಕರಿಸತಕ್ಕ ಕರ್ಕಾಚಾರ್ಯನ ಭಾಷ್ಯದಿಂದಲೂ ಅರಿಯಲ್ಪಡುವುದು.

ಕಲ್ಪಸೂತ್ರಾದಿಗ್ರಂಥಗಳ ರಚನೆಯ ವೈಶಿಷ್ಟ್ಯವು ಮನನೀಯವಾ ಗಿರುವುದರಿಂದ ಅದನ್ನೂ ಸ್ವಲ್ಪ ಇಲ್ಲಿ ತೋರಿಸುತ್ತೇವೆ. ಕಲ್ಪಸೂತ್ರ ಗಳು ಶ್ರುತಿ, ನ್ಯಾಯ, ಮಂತ್ರ, ಲಿಂಗವೆಂಬೀ ಮುಂತಾದ ಸಹಕಾರಿ ಸಾಧನ ಸಾಮಗ್ರಿಗಳಿಂದ ಸುಶೋಭಿತಗಳೂ, ೧ ಅಧಿಕಾರಸೂತ್ರ ೨ ಪರಿಭಾಷಾಸೂತ್ರ ೩ ಉತ್ಸರ್ಗಸೂತ್ರ ೪ ಅಪವಾದಸೂತ್ರ ೫ ಉದಾ ಹರಣಸೂತ್ರಗಳೆಂಬ ಅಯ್ದು ಬಗೆಯ ವಿಭಾಗಾತ್ಮಕಗಳೂ ಆಗಿರುತ್ತವೆ. ಇವು ಸರ್ವಜ್ಞಕಲ್ಪಪುರುಷಪ್ರಣೀತಗಳಾದುದರಿಂದ ಪ್ರಕೃತಿಭೂತಗ ಳಾದ ಕರ್ಮಗಳ ಇತಿಕರ್ತವ್ಯತೆಯ ಪ್ರಯೋಗವನ್ನು ಸುಕರವೆನಿಸುವ ಹಾಗೆ ಪರಿವಿಡಿದು ಪ್ರತಿಪಾದಿಸಿ, ಬಳಿಕ ವಿಕೃತಿಭೂತಕರ್ಮಗಳ ಇತಿ ಕರ್ತವ್ಯತೆಯನ್ನು ನಿರೂಪಿಸುತ್ತವೆ, ಹೇಗೆಂದರೆ ದರ್ಶ, ಪೂರ್ಣಮಾಸ, ಆಧಾನ, ಅಗ್ನಿಹೋತ್ರ, ಪ್ರಾಯಶ್ಚಿತ್ತ, ಪಶುಕಲ್ಪ, ಸೋಮಯಾಗವು ಎಂಬೀ ಕ್ರಮವು ಸೂತ್ರಕಾರರಿಂದ ಅಂಗೀಕೃತವಾಗಿದೆ. ಈ ಹಿಂದೆ ಹೇಳಿದ ಮೇರೆಗೆ, ಅರ್ಥವಾದರಹಿತಗಳಾದ ಸ್ವಶಾಖೀಯಬ್ರಾಹ್ಮಣಾಂತ ರ್ಗತಕರ್ಮಗಳು ಸಾಂಗವಾಗಲು ಯಾವ ಪರಶಾಖೀಯ ಮಂತ್ರ ಗಳಪೇಕ್ಷೆಯಿರುವುದೋ ಆ ಮಂತ್ರಗಳನ್ನು ಸಂಪೂರ್ಣವಾಗಿ ತೆಗೆದು

ಕೊಂಡು, ( ಇದುವೇ ಗುಣೋಪಸಂಹಾರ, ಅಥವಾ ಗುಣಸಂಗ್ರಹವೆ ನ್ನಲ್ಪಡುವುದು. ) ಸ್ವಶಾಖೀಯ ಮಂತ್ರಗಳ ಪ್ರತೀಕಗಳನ್ನು ಮಾತ್ರ ತೋರಿಸುವುದರೊಡನೆ ಕಲ್ಪಸೂತ್ರಗ್ರಂಥಗಳಲ್ಲಿ ಕರ್ಮಗಳ ರಚನೆಯು ಮಾಡಲ್ಪಟ್ಟಿರುವುದು ! ಇದರಿಂದ ಯಾವ ಶಾಖೆಯ ಮಂತ್ರವು ಇದ ರಲ್ಲಿ ಪ್ರತೀಕರೂಪವಾಗಿ ಪರಿಗ್ರಹಿಸಲ್ಪಡುವುದೋ ಈ ಸೂತ್ರವು ಆ ಶಾಖೀ ಯವಾದುದೆಂದರಿತುಕೊಳ್ಳಲು ಸುಲಭವಾಗಿರುವುದು. ಹೀಗೆ ಸರ್ವ ರೀತಿಯಿಂದಲೂ ಉಪಬೃಂಹಿತಗಳಾದ ಈ ಸೂತ್ರಗಳ ವ್ಯಾಖ್ಯಾನಾವ ಸರದಲ್ಲಿ ಭಾಷ್ಯಕಾರರು :—

ಉಪೋದ್ಘಾತಃ ಪದಂ ಚೈವ ಪದಾರ್ಥಃ ಪದ ವಿಗ್ರಹಃ ।
ಆಕ್ಷೇಪಃಪ್ರತ್ಯವಸ್ಥಾನಂ ವ್ಯಾಖ್ಯಾ ಸೂತ್ರಸ್ಯ ಷಡ್ವಿಧಾ ॥

ಎಂಬ ಷಡ್ವಿಧಪದ್ಧತಿಯನ್ನು ಅನುಸರಿಸಲೇಬೇಕಾಗುವುದು.

ಗೃಹ್ಯಸೂತ್ರಗಳು—

ಈ ನಿಬಂಧಗಳಲ್ಲಿ ಶ್ರೌತ, ಧರ್ಮ, ಶುಲ್ಬಗಳೆಂಬ ಪ್ರತಿಪಾದಿಸ ಲ್ಪಡುವ ಕರ್ಮಗಳ ವಿಚಾರವಿರುವುದಿಲ್ಲ. ಮತ್ತೇನೆಂದರೆ, 'ಗೃಹೇ ಭವಾನಿ ಗೃಹ್ಯಾಣಿ, ಗೃಹೆ-ಭಾರ್ಯಾಸಂಯೋಗಾದುತ್ಪನ್ನಾಗ್ನೌ ಭವಾನೀ ಮಾನೀ ಕರ್ಮಾಣಿ' ಎಂಬಂತೆ 'ಗೃಹ' ವೆಂಬ ಶಬ್ದಕ್ಕೆ ಪತ್ನಿಯೂ ಶಾಲೆ (ಮನೆ) ಯೂ ಎಂಬೆರಡು ಅರ್ಥಗಳಿವೆ. ಹೇಗೆಂದರೆ, 'ಸಗೃಹೋ ಗೃಹಮಾಗತಃ' ಎಂಬ ವಾಕ್ಯದಲ್ಲಿರುವ ಮೊದಲನೆಯ ಗೃಹಶಬ್ದವು ಭಾರ್ಯಾವಾಚಕವೂ, ಎರಡನೆಯ ಗೃಹಶಬ್ದವು ಶಾಲೆ ( ಮನೆ ) ಯ ವಾಚಕವೂ ಆಗಿರುವುದು. 'ದಾರಕಾಲೇ ದಾಯಾದ್ಯಕಾಲೇ ವಾ ಏಕೇ ಷಾಮ್' ( ಪಾರ. ಗೃ. ಸೂ. ) 'ಭಾರ್ಯಾದಿರಗ್ನಿರ್ದಾಯಾದಿರ್ವಾ ತಸ್ಮಿನ್ ಗೃಹ್ಯಾಣಿ' (ಗೌ. ಗ್ರ. ಸೂ.) ಇತ್ಯಾದಿ ಪ್ರಮಾಣಗಳಿಂದ ವಿವಾಹ ಸಮಯದಲ್ಲಿಯೂ, ಪಿತೃದ್ರವ್ಯವಿಭಾಗಕಾಲದಲ್ಲಿಯೂ ಅಗ್ನಿಸಂಧಾನ ಪ್ರಸಂಗವು ಹೀಗೆ ಎರಡು ವೇಳೆ ಒದಗುತ್ತದೆ. ಆದ್ದರಿಂದ 'ಗೃಹ ನಿಮಿತ್ತೋ ಯಃ ಸಗೃಹ್ಯಃ' ಎಂಬ ವಿಗ್ರಹದಿಂದ ಎರಡೂ ನಿಮಿತ್ತಗಳ ಸಂಗ್ರಹವು ಗೃಹ್ಯವೆಂಬ ಶಬ್ದದಲ್ಲಿರುವುದು. ಅದುಕಾರಣವೇ, ವಿವಾಹ ಕಾಲದಲ್ಲಿ ಅಗ್ನಿಸಂಧಾನವು ಮಾಡಲ್ಪಡುವಾಗ ಗೃಹಶಬ್ದದರ್ಥವು ಭಾರ್ಯೆ ಯೆಂದೂ ದ್ರವ್ಯವಿಭಾಗಸಮಯದಲ್ಲಿ ಅಗ್ನಿಸಂಧಾನವು ಮಾಡಲ್ಪಡು ವಾಗ ಗೃಹಶಬ್ದಾರ್ಥವು ಶಾಲೆ ( ಮನೆ ) ಯೆಂದೂ ತಿಳಿಯಬೇಕೆಂಬ ತಾತ್ಪರ್ಯವನ್ನು ಈ ಮೇಲೆ ಹೇಳಿದೆವು. ಈ ಅರ್ಥಗಳನ್ನನುಲಕ್ಷಿ

ಸಿಯೇ ಗೃಹ್ಯಸೂತ್ರಗಳೂ ಗೃಹ್ಯಕರ್ಮಗಳೂ ಎಂಬ ಸಂಜ್ಞೆಗಳು ಉಪ ಪನ್ನವಾಗಿವೆ. ಈ ಗೃಹ್ಯಕರ್ಮಗಳು ಆವವು ? ಮತ್ತು ಅವನ್ನು ಹೇಗೆ ಅನುಷ್ಠಿಸಬೇಕು ? ಎಂಬೀ ವಿಷಯಕವಾದ ಜಿಜ್ಞಾಸೆಯನ್ನು ಸಫಲಗೊಳಿಸತಕ್ಕ ವಿಚಾರಪ್ರತಿಪಾದಕ ಸೂತ್ರಗಳೇ ಗೃಹ್ಯಸೂತ್ರಗಳು. **'ಯಜ್ಞಂವ್ಯಾಖ್ಯಾಸ್ಯಾಮಃ'** ಎಂದು ಪ್ರವೃತ್ತರಾದ ಸೂತ್ರಕಾರರು ಶ್ರೌತಗಳೂ ಗೃಹ್ಯಗಳೂ ಎಂಬುದಾಗಿ ಒಟ್ಟು ೨೧ ವಿಧವಾದ ಯಾವ ಚಿಕ್ಕ ದೊಡ್ಡ ಮುಖ್ಯ ಯಜ್ಞಗಳನ್ನು ಪ್ರತಿಪಾದಿಸುವರೋ, ಅವುಗಳಲ್ಲಿ ೧ ಅಗ್ನಿಷ್ಟೋಮ ೨ ಅತ್ಯಗ್ನಿಷ್ಟೋಮ ೩ ಉಕ್ಥ ೪ ಷೋಡಶೀ ೫ ವಾಜಪೇಯ ೬ ಅತಿರಾತ್ರ ೭ ಆಪ್ತೋರ್ಯಾಮ ಎಂಬಿವೇಳು ಸೋಮ ಸಂಸ್ಥೆಗೆ ಸೇರಿದುವು; ೮ ಅಗ್ನಿಹೋತ್ರ ೯ ದರ್ಶಪೂರ್ಣಮಾಸ ೧೦ ಆಗ್ರಯಣ ೧೧ ಪಿಂಡಪಿತೃಯಜ್ಞ ೧೨ ಚಾತುರ್ಮಾಸ್ಯ ೧೩ ನಿರೂಢಪಶುಬಂಧ ೧೪ ಸೌತ್ರಾಮಣಿ ಎಂಬಿವೇಳು ಹವಿರ್ಯಜ್ಞಸಂಸ್ಥೆಗೆ ಸಂಬಂಧಿಸಿದವು. ಎಂಬುದಾಗಿರುವ ಹದಿನಾಲ್ಕು ಪ್ರಕಾರಗಳಾದ ಯಜ್ಞ ಗಳನ್ನು ಶ್ರೌತಸೂತ್ರಗಳಲ್ಲಿ ಹೇಳಿ ಉಳಿದ ೧ ಅಷ್ಟಕಾಃ ೨ ಪಾರ್ವಣಃ (ಸ್ಥಾಲೀಪಾಕಃ) ೩ ಶ್ರಾದ್ಧಮ್. ೪ ಶ್ರಾವಣೀ. ೫ ಆಗ್ರಹಾಯಣೀ. ೬ ಚೈತ್ರೀ. ೭ ಆಶ್ವಯುಜೀ ಎಂಬುದಾಗಿರುವ ಪಾಕಯಜ್ಞಸಂಸ್ಥೆಗೆ ಸಂಬಂಧಿಸಿದ ಏಳು ಯಜ್ಞಗಳನ್ನು ನಿರೂಪಿಸುವುದಕ್ಕಾಗಿ ಪ್ರಾಧಾನ್ಯ ದಿಂದ ಗೃಹ್ಯಸೂತ್ರಗಳನ್ನು ರಚಿಸಿದರು. ಈ ಸಂಸ್ಥೆಯ ಹೆಸರುಗಳೇ ಅನೇಕ ಗೃಹ್ಯಸೂತ್ರಗಳಲ್ಲಿ ಬೇರೆಬೇರೆಯಾಗಿ ಕಂಡುಬರುತ್ತವೆ. 'ಸಂಸ್ಥಾ' ಅಂದರೆ ಸಮಾಪ್ತಿಯು; ಯಾವುದರ ಮೂಲಕವಾಗಿ ಕರ್ಮವು ಸಮಾ ಪ್ತಿಗೊಳಿಸಲ್ಪಡುವುದೋ ಆ ಕರ್ಮಕ್ಕೆ ಆ ಹೆಸರೇ ಬರುವುದು. ಆದ್ದ ರಿಂದ ಸೋಮಪ್ರಕೃತಿ ಸಂಸ್ಥೆಯನ್ನು ಸೋಮಸಂಸ್ಥೆಯೆಂದೂ, ಹವಿ ರ್ಯಜ್ಞದಿಂದ ಅಂದರೆ ಹವಿರ್ದ್ರವ್ಯಗಳನ್ನು ದೇವತೆಗಳಿಗರ್ಪಿಸಿ ಹೋಮ ಮಾಡಲ್ಪಡುವ ಮೂಲಕ ಯಾವುದರ ಸಮಾಪ್ತಿಯಾಗುವುದೋ ಅದನ್ನು ಹವಿರ್ಯಜ್ಞಸಂಸ್ಥೆಯೆಂದೂ ತಿಳಿಯತಕ್ಕದ್ದು. ಪಾಕಯಜ್ಞವು ಅಂದರೆ **"ಪಚ್ಯತೆ ಶ್ರಪ್ಯತೆ ಓದನಾದಿಕಮಸ್ಮಿನ್ನಿತಿ, ಪಾಕೋಗೃಹ್ಯಾಗ್ನಿಸ್ತ ಸ್ಮಿನ್ ಪಾಕೇ ಯಜ್ಞಃ, ತತ್ಸಂಸ್ಥಾಃ ಪಾಕಯಜ್ಞಸಂಸ್ಥಾಃ"** ಎಂದು ಕೆಲವರು ಹೇಳುತ್ತಾರೆ. ಬೇರೆ ಕೆಲಂಬರು ಪಾಕವು ಅಂದರೆ ಪ್ರಶಸ್ತವು. ಪಾಕಯಜ್ಞಸಂಸ್ಥೆಗಳೆಂದರೆ ಪ್ರಶಸ್ತಗಳಾದ ಯಜ್ಞಸಂಸ್ಥೆಗಳೆನ್ನುವರು. ಮತ್ತೆ ಮಿಕ್ಕವರು ಪಾಕಯಜ್ಞವೆಂದರೆ ಸ್ವಲ್ಪವಾದ ಇತಿಕರ್ತವ್ಯತೆ ಯಿಂದ ನೆರವೇರಿಸಲ್ಪಡುವ ಯಜ್ಞವೆಂದು ಅರ್ಥಮಾಡುವರು. ಇರಲಿ;

ಭಾರತೀಯರಿಂದ ಏಕಾಗ್ನಿಯನ್ನವಲಂಬಿಸಿ ನೆರವೇರಿಸಲ್ಪಡತಕ್ಕ ವಿಧಿಗಳೂ ಹಳೆಯ ನಡವಳಿಕೆಗಳೂ ಗೃಹ್ಯಸೂತ್ರಗಳಿಂದೇ ಅರಿಯಲ್ಪಡುತ್ತವೆ. ಜನ್ಮ ಸಂಸ್ಕಾರ ಮೊದಲು ಮಾಡಿ ಅಂತ್ಯ ಸಂಸ್ಕಾರದವರೆಗಿರುವ ಸರ್ವವಿಧಸಂಸ್ಕಾರಗಳೂ ಈ ಸೂತ್ರಗಳಲ್ಲಿ ಬಣ್ಣಿಸಲ್ಪಟ್ಟಿವೆ. ಆದರೆ ಕೆಲವು ಸೂತ್ರೋಕ್ತಸಂಸ್ಕಾರಗಳು ( ಶೂಲಗವ ಮಾಂಸಮಧುಪರ್ಕಾದಿಗಳು ) ಈಗ ಆಚರಿಸಲ್ಪಡುವುದಿಲ್ಲ. ಗರ್ಭಾದಾನ, ಪುಂಸವನ, ಅನವಲೋಭನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ ಅನ್ನಪ್ರಾಶನ, ಚೌಲ, ಉಪನಯನ, ವೇದಾರಂಭ, ಉಪನಿಷದ್ವ್ರತ, ಸಮಾವರ್ತನ, ವಿವಾಹ ಅಂತ್ಯಸಂಸ್ಕಾರ, ಶ್ರಾದ್ಧವಿಧಿಯೇ ಮುಂತಾದ ವಿಷಯಗಳು ಗೃಹ್ಯಸೂತ್ರಗಳಿಂದ ನಿರೂಪಿಸಲ್ಪಡುತ್ತವೆ. ಶತಪಥಬ್ರಾಹ್ಮಣದಲ್ಲಿ (೧೧-೫-೬) ಹೇಳಲ್ಪಡುವ ಪಂಚಮಹಾಯಜ್ಞಗಳು ಪ್ರತಿಯೊಬ್ಬ ದ್ವಿಜನಿಂದಲೂ ಅನುಷ್ಠಿಸಲ್ಪಡತಕ್ಕವುಗಳೆಂದು ಸನಾತನ ಆರ್ಯವಂಶೀಯರು ತಿಳಿಯುತ್ತಾರೆ. ಇವುಗಳನ್ನು ಧರ್ಮಾಚರಣದ ಅಂಗಗಳೆಂದು ಭಾವಿಸಿ ದಿನಾಲೂ ಅನುಷ್ಠಿಸುವವರು ಈಗಲೂ ದ್ವಿಜರಲ್ಲಿ ಎಷ್ಟೋ ಜನರಿದ್ದಾರೆ. ಈ ಅಯ್ದು ಯಜ್ಞಗಳಲ್ಲಿ ದೇವ ಯಜ್ಞ ಪಿತೃಯಜ್ಞ, ಅಸುರಯಜ್ಞವೆಂಬಿವುಗಳಿಗೆ ಮಾತ್ರ ಅಗ್ನಿ ಕುಂಡದಲ್ಲಿ ಹಾಕುವುದಕ್ಕೆ ಸಮಿತ್ತೂ, ಅನ್ನದುಂಡೆಯೂ, ನೀರೂ ಬೇಕಾಗುತ್ತವೆ. ಅತಿಥಿಗೆ ಅನ್ನದಾನ ಮಾಡುವುದೇ ನಾಲ್ಕನೆಯ ಮನುಷ್ಯಯಜ್ಞವು. ವೇದವನ್ನು ( ಸ್ವಶಾಖೆಯನ್ನು ) ಪಠಿಸುವುದೇ ಅಯ್ದನೆಯ ಬ್ರಹ್ಮಯಜ್ಞವು. ಸಾಯಂಪ್ರಾತರ್ಯಜ್ಞಗಳೂ, ದರ್ಶಪೂರ್ಣಮಾಸೇಷ್ಟಿಗಳೂ ವಾರ್ಷಿಕಯಜ್ಞಯಾಗಾದಿಮಹೋತ್ಸವಗಳೂ ಗೃಹ್ಯಸೂತ್ರಗಳಲ್ಲಿ ಹೇಳಲ್ಪಡುತ್ತವೆ. ಅಗ್ನಿಹೋತ್ರವೂ, ದರ್ಶಪೂರ್ಣಮಾಸಗಳೂ ಚಾತುರ್ಮಾಸ್ಯ ಮುಂತಾದುವೂ ಮಹೋತ್ಸವಾಂತರ್ಗತಗಳಾಗಿವೆ. ಈ ಗೃಹ್ಯಸೂತ್ರಗ್ರಂಥಗಳಲ್ಲಿ ರೋಗಾದಿಪರಿಹಾರಕಮಂತ್ರಗಳೂ ವಶೀಕರಣವಿದ್ಯೆಯ ಮಂತ್ರತಂತ್ರಗಳೂ ಪ್ರತಿಪಾದಿಸಲ್ಪಟ್ಟಿವೆ.

ಮನ್ವಾದಿ ಸ್ಮೃತಿಗಳಲ್ಲಿಯೂ ಗರ್ಭದಾನಾದಿ ಸಂಸ್ಕಾರಗಳು ಹೇಳಲ್ಪಟ್ಟಿವೆ. ಆದರೂ ಆ ಸ್ಮೃತಿಗಳು ೧. ಆಚಾರ. ೨. ವ್ಯವಹಾರ. ೩. ಪ್ರಾಯಶ್ಚಿತ್ತಗಳನ್ನು ಹೇಳುವುದಕ್ಕಾಗಿಯೇ ಪ್ರವೃತ್ತಗಳಾಗಿರುವುವಲ್ಲದೆ ಸಂಸ್ಕಾರಾದಿಗೃಹ್ಯಕರ್ಮಗಳನ್ನು ಪ್ರತಿಪಾದಿಸುವುದೇ ಅವುಗಳ ಮುಖ್ಯವಾದ ಧ್ಯೇಯವಲ್ಲ. ಧಾರ್ಮಿಕಾಚರಣೆಗಳಿಂದ ಪುರುಷರು

ಸುಸಂಸ್ಕೃತರಾಗಬೇಕೆಂಬ ಸದುದ್ದೇಶದಿಂದ, ಆ ಧಾರ್ಮಿಕಾಚಾರಗಳ ಸ್ವರೂಪವನ್ನೂ ಅರಸನ ಕರ್ತವ್ಯಗಳಾದ ಪ್ರಜಾಪಾಲನಾದಿ ವ್ಯವಹಾರಗಳನ್ನೂ ಬೇರೆ ಬೇರೆ ಪಾಪಗಳನ್ನೂ ಅವು ಸಂಭವಿಸಲು ಅವುಗಳ ಪ್ರಾಯಶ್ಚಿತ್ತಗಳನ್ನೂ ಹೇಳುವುದಕ್ಕೋಸ್ಕರವೇ ಸ್ಮೃತಿಕಾರರ ಪ್ರವೃತ್ತಿಯಿರುವುದು. ಮಧ್ಯದಲ್ಲಿ ಕೆಲವು ಸಂಸ್ಕಾರಗಳೂ ಅವುಗಳ ಅಂಗಗಳೂ ಹೇಳಲ್ಪಟ್ಟಿರುವುವಾದರೂ ಆ ಸರ್ವಸಂಸ್ಕಾರಾದಿ ಗೃಹ್ಯೋಕ್ತ ವಿಧಿಗಳು ಮುಖ್ಯವಾಗಿ ಸೂತ್ರಗಳಲ್ಲಿಯೇ ಹೇಳಲ್ಪಟ್ಟಿವೆ. '**ವರ್ಣಾಶ್ರಮೇತರಾಣಾಂ ನೋ ಬ್ರೂಹಿ ಧರ್ಮಾನಶೇಷತಃ।**' (ಯಾಜ್ಞ ೧-೨) ಎಂದು ಪ್ರಾರ್ಥಿಸುವ ಶಿಷ್ಯರ ಜಿಜ್ಞಾಸೆಗೆ ಉತ್ತರವೆಂದು ಸ್ಮೃತಿಗಳು ಬೋಧಿಸಲ್ಪಟ್ಟಿವೆ. '**ಗೃಹಾಣಿವಕ್ಷ್ಯಾಮಃ**' (ಆಶ್ವ. ಗೃ. ಸೂ. ೧-೧) '**ಅಥಾತೋ ಗೃಹ್ಯಸ್ಥಾಲೀಪಾಕಾನಾಂ ಕರ್ಮ**' (ಪಾರ. ಗೃ. ಸೂ. ೧-೧) ಎಂಬುದಾಗಿ ಪ್ರತಿಜ್ಞೆಮಾಡಿ ಗೃಹ್ಯಕರ್ಮಗಳನ್ನು ಹೇಳುವುದಕ್ಕೆ ಸೂತ್ರಗಳು ಪ್ರವೃತ್ತಗಳಾಗಿವೆ; ಅಂದರೆ ಸ್ಮೃತಿಗಳು ಪುರುಷಾರ್ಥಬೋಧಕಗಳೂ ಸೂತ್ರಗಳು ಕ್ರತ್ವರ್ಥಬೋಧಕಗಳೂ ಆಗಿವೆ. ಯಾವ ಕರ್ಮಗಳಿಂದ ಅನುಷ್ಠಿಸುವ ಯಜಮಾನನಿಗೆ ಅಧಿಕಾರ ಸಂಪತ್ತಿಯುಂಟಾಗುವುದೋ ಅವುಗಳನ್ನು ಪುರುಷಾರ್ಥಕರ್ಮಗಳೆಂದೂ, ಯಾವುಗಳ ಮೂಲಕ ಕರ್ಮಸಾದ್ಗುಣ್ಯವುಂಟಾಗುವುದೋ ಅವುಗಳನ್ನು ಕ್ರತ್ವರ್ಥಗಳೆಂದೂ ಹೇಳುತ್ತಾರೆ.

ಹಾಗೂ ಸ್ಮೃತಿಗಳು ಪ್ರಯೋಗಶಾಸ್ತ್ರಗಳೆನಿಸಲಾರವು. ಏಕೆಂದರೆ ಉತ್ಪತ್ತಿವಿಧಿಯನ್ನೂ ಮಿಕ್ಕ ಅಂಗಗಳನ್ನೂ ಪ್ರತಿಪಾದಿಸುವುದೇ ಪ್ರಯೋಗಶಾಸ್ತ್ರವು. ಈ ಲಕ್ಷಣವು ಸೂತ್ರಗ್ರಂಥಗಳಲ್ಲಿಯೇ ಅನ್ವಯಿಸುವುದರಿಂದ ಅವುಗಳನ್ನು ಪ್ರಯೋಗಶಾಸ್ತ್ರಗಳೆಂದು ತಿಳಿಯಲಭ್ಯಂತರವಿಲ್ಲ. ವಿಧಿಗಳು ಉತ್ಪತ್ತಿ, ಅಧಿಕಾರ, ವಿನಿಯೋಗ, ಪ್ರಯೋಗಗಳೆಂಬುದಾಗಿ ನಾಲ್ಕು ವಿಧವಾಗಿವೆ. ಅವುಗಳಲ್ಲಿ ಯಾವುದು ಕೇವಲ ಕರ್ಮದ ಸ್ವರೂಪವನ್ನು ಬೋಧಿಸುವುದೋ ಅದು ಉತ್ಪತ್ತಿವಿಧಿಯು. ಹೇಗೆಂದರೆ— '**ಆಗ್ನೇಯೋಽಷ್ಟಾಕಪಾಲೋ ಭವತಿ**' ಅಗ್ನಿದೇವತೆಯನ್ನುದ್ದೇಶಿಸಿ ಎಂಟು ಕಪಾಲಗಳಲ್ಲಿ ಕುದಿಸಿ ಪುರೋಡಾಶವನ್ನು ಮಾಡುತ್ತಾರೆ ಆದ್ದರಿಂದ ಆಗ್ನೇಯಪುರೋಡಾಶವು ಅಷ್ಟಾಕಪಾಲವಾಗಿದೆ. ಇಲ್ಲಿ ಕೇವಲ ಕರ್ಮದ ಸ್ವರೂಪವು ಬೋಧಿಸಲ್ಪಟ್ಟಿದೆ. ಇತಿಕರ್ತವ್ಯತೆಯೊಡನೆ ಯಾಗಾದಿಕರಣಗಳ ಫಲಸಂಬಂಧವನ್ನು ನಿರೂಪಿಸುವುದೇ ಅಧಿಕಾರ

ವಿಧಿಯು ಉದಾಹರಣೆಯು— '**ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ**' ಯಾವನಿಗೆ ಸ್ವರ್ಗದಪೇಕ್ಷೆಯುಂಟೋ ಅವನು ದರ್ಶಪೂರ್ಣಮಾಸಗಳಿಂದ ಯಾಗವನ್ನು ಮಾಡತಕ್ಕದ್ದು. ಅಂಗದ ಸಂಬಂಧವನ್ನು ಬೋಧಿಸುವುದೇ ವಿನಿಯೋಗ ವಿಧಿಯು ಹೇಗೆಂದರೆ :— '**ವ್ರೀಹಿಭಿರ್ಯಜೇತ**' ವ್ರೀಹಿಗಳಿಂದ ಯಾಗವನ್ನು ಮಾಡತಕ್ಕದ್ದು. ಈ ಪೂರ್ವೋಕ್ತ ಮೂರು ವಿಧಿಗಳೂ ಕೂಡಿ ಒಂದು ಪ್ರಯೋಗವಿಧಿಯಾಗುವುದು. ಅಂದರೆ ಪ್ರಯೋಗವಿಧಿಯೆಂಬುದು ಅಂಗಗಳೊಡನೆ ಪ್ರಧಾನಕರ್ಮ ಪ್ರಯೋಗೈಕ್ಯ (ಅನುಷ್ಠಾನೈಕ್ಯ) ವನ್ನು ಬೋಧಿಸುವುದು. ಈ ಪ್ರಯೋಗವಿಧಿಯು ಶ್ರೌತ ( ಶ್ರುತಿಬೋಧಿತ ) ವೆಂದು ಕೆಲವರೂ ಕಲ್ಪ್ಯ (ಕಲ್ಪಸೂತ್ರಬೋಧಿತ) ವೆಂದು ಕೆಲಂಬರೂ ಹೇಳುತ್ತಿರುವರು.

ಪ್ರಕೃತದಲ್ಲಿ ನಾವು ಹೇಳಬೇಕಾದುದಿಷ್ಟೇ ! ಏನೆಂದರೆ ಸ್ಮೃತಿಗಳಲ್ಲಿ ಅಲ್ಪ ಸ್ವಲ್ಪ ಅಂಗಗಳು ನಿರೂಪಿಸಲ್ಪಟ್ಟಿರುವುವಾದರೂ ಉತ್ಪತ್ತಿ ವಿಧಿಯು ಹೇಳಲ್ಪಡುವುದಿಲ್ಲವಾದಕಾರಣ ಅವು ( ಸ್ಮೃತಿಗಳು ಪ್ರಯೋಗ ಶಾಸ್ತ್ರಗಳಲ್ಲ. ಅನುಷ್ಠಾನಪರಾಯಣರಿಗೆ ಸೂತ್ರಗ್ರಂಥಗಳೇ ಸರ್ವ ರೀತಿಯಿಂದ ಅನುಕೂಲಗಳಾಗಿವೆ. ಕೇವಲ ಸ್ಮೃತಿಗಳನ್ನವಲಂಬಿಸಿದರೆ ಅನುಷ್ಠಾನವು ಸಾಂಗವಾಗಿ ಕೊನೆಗಾಣದು. ಮತ್ತು ಆ ವಿಧಿಗಳ ಅನುಷ್ಠಾನ ಪ್ರವೃತ್ತಿಹೇತುಭೂತವಾಕ್ಯಗಳೂ ಅವುಗಳಲ್ಲಿರುವುದಿಲ್ಲ. ಸ್ಮೃತ್ಯಾಧಾರದಿಂದ ರಚಿಸಲ್ಪಟ್ಟ ಹೇಮಾದ್ರಿ, ಪಾರಿಜಾತ ಮೊದಲಾದ ನಿಬಂಧಗ್ರಂಥಗಳ ಮೇಲೆಯೇ ಕೈಯೂರಿದರೂ ಸಾಗದು. ಏಕೆಂದರೆ ಅವುಗಳಲ್ಲಿ ಪರಸ್ಪರ ವಿರೋಧವಾಕ್ಯಗಳು ಮನವಾರೆ ಇರುವ ಪರಿಯನ್ನು ಅವೆರಡೇ ಗ್ರಂಥಗಳ ಅವಲೋಕನದಿಂದಾದರೂ ಅರಿತುಕೊಳ್ಳಬಹುದಾಗಿದೆ. ಆ ನಿಬಂಧಗ್ರಂಥಗಳನ್ನವಲಂಬಿಸಿ ಕರ್ಮಗಳನ್ನು ಮಾಡುವುದಕ್ಕಿಂತಲೂ ಸ್ವಶಾಖಾನುಸಾರವಾದ ಸೂತ್ರೋಕ್ತಪ್ರಕಾರವಾಗಿಯೇ ಕರ್ಮಗಳನ್ನು ನೆರವೇರಿಸುವುದು ಲೇಸು. ನಿಬಂಧಕಾರರು ಯಾವದೊಂದು ಕರ್ಮವಿಧಿಯನ್ನು ವಿವರಿಸುವಾಗ ಬೇರೆಬೇರೆ ಸ್ಮೃತಿವಚನ ಜಾಲವನ್ನೇ ತಂದೊಡ್ಡಿ, ಸೂತ್ರೋಕ್ತವಾದ ಮೂಲಸಂಸ್ಕಾರಾನುಷ್ಠಾನದ ಮುಖ್ಯಭಾಗಕ್ಕಿಂತಲೂ ಅವಾಂತರವಿಷಗಳನ್ನೇ ಹಬ್ಬಿಸಿರುವರು. ಇಲ್ಲಿ ಉದಾಹರಣೆಗಾಗಿ ಜಾತಕರ್ಮವೆಂಬ ಸಂಸ್ಕಾರವಿಧಿಯೊಂದನ್ನು ತೆಗೆದುಕೊಳ್ಳುವಾ ! ಈ ಸಂಸ್ಕಾರವು ಹುಡುಗನು ಹುಟ್ಟಿದಾಕ್ಷಣವೇ ಮಾಡಲ್ಪಡುವುದು. ಗೃಹಸ್ಥರ ಈ ಸಂಸ್ಕಾರವಿಧಿಯನ್ನು ಸ್ವಶಾಖಾನು

ಸಾರವಾದ ಗೃಹ್ಯಸೂತ್ರೋಕ್ತಪ್ರಕಾರವಾಗಿ ಮಾಡುವರು. ಅಂದರೆ ಗಂಡುಕೂಸು ಹುಟ್ಟಿದಾಕ್ಷಣವೇ ನಾಲಚ್ಛೇದಕ್ಕಿಂತ ಮುಂಚಿತವಾಗಿ ತಂದೆಯು (ಯಜಮಾನನು) ಆಯುಷ್ಯಮೇಧಾ ಜನನವೆಂಬೆರಡು ಕ್ರಿಯೆಗಳನ್ನು ಮಾಡುತ್ತಾನೆ. ಹೇಗೆಂದರೆ, ಉದಾಹರಣೆಗಾಗಿ ಅಶ್ವಲಾಯನಗೃಹ್ಯಸೂತ್ರೋಕ್ತಪ್ರಕಾರವಾದ ಜಾತಕರ್ಮಪ್ರಯೋಗವನ್ನು ನಾವಿಲ್ಲಿ ತೋರಿಸುತ್ತೇವೆ. ಪದ್ಧತಿಯಂತೆ ತಂದೆಯು ಸಂಕಲ್ಪವನ್ನು ನುಡಿದು ಜೇನನ್ನೂ ಹಸುವಿನ ತುಪ್ಪವನ್ನೂ ಕಲಿಸಿ ಕಲ್ಲಿನಮೇಲಿರಿಸಿ ಮಿಸುನಿಯಿಂದುಜ್ಜಿ ಚಿಕ್ಕ ಬಟ್ಟಲಿನಲ್ಲಿ ಹಾಕಿ :—

ಪ್ರತೇ ದದಾಮಿ ಮಧುನೋ ಘೃತಸ್ಯ
ವೇದಂ ಸವಿತ್ರಾ ಪ್ರಸೂತಂ ಮಘೋನಾಮ್ ॥
ಆಯುಷ್ಮಾನ್ ಗುಪ್ತೋ ದೇವತಾಭಿಃ
ಶತಂ ಜೀವ ಶರದೋ ಲೋಕೇ ಅಸ್ಮಿನ್ ॥

ಎಂಬ ಮಂತ್ರೋಚ್ಚಾರಪೂರ್ವಕವಾಗಿ ಆ ಚಿನ್ನದಿಂದೇ ಅದನ್ನು ಪರಿಗ್ರಹಿಸಿ ಚಿಣ್ಣನ ಬಾಯ್ಗಿಟ್ಟು ಸೀಪಿಸಿ, ತರುವಾಯ ಆ ಬಂಗಾರವನ್ನು ತೊಳೆದು ಕೂಸಿನ ಬಲಗಿವಿಗೆ ಸೋಂಕಿಸಿ ಅವನ ಮುಖದ ಬಳಿಗೆ ತನ್ನ ಮುಖವನ್ನು ಚಾಚಿ—

ಮೇಧಾಂ ತೇ ದೇವಃಸವಿತಾ ಮೇಧಾಂ ದೇವೀ ಸರಸ್ವತೀ ।
ಮೇಧಾಂ ತೇ ಅಶ್ವಿನೌ ದೇವಾವಾಧತ್ತಾಂ ಪುಷ್ಕರಸ್ರಜೌ ॥

ಎಂಬ ಮಂತ್ರವನ್ನು ಜಪಿಸಿ ಮತ್ತೆ ಆ ಹೊನ್ನನ್ನು ಎಡಗಿವಿಗೆ ಮುಟ್ಟಿಸಿ ಇದೇ ಮಂತ್ರವನ್ನು ಪಠಿಸಬೇಕು. ಬಳಿಕ—

ಅಶ್ಮಾಭವ ಪರಶುರ್ಭವ ಹಿರಣ್ಯಮಸ್ತೃತಂಭವ ।
ವೇದೋವೈ ಪುತ್ರನಾಮಾಸಿ ಸಜೀವ ಶರದಃ ಶತಮ್ ॥
ಇನ್ದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ ಚಿತ್ತಿಂ ದಕ್ಷಸ್ಯ
ಸುಭಗತ್ವಮಸ್ಮೆ ।
ಪೋಷಂ ರಯೀಣಾಮರಿಷ್ಟಿಂ ತನೂನಾಂ ಸ್ವಾದಾನಂ
ವಾಚಃ ಸುದಿನತ್ವಮಹ್ನಾಮ್ ॥
ಅಸ್ಮೆಪ್ರಯಂಧಿಮಘವನ್ನೃಜೀಷಿನ್ನಿನ್ದ್ರ ರಾಯೋ ವಿಶ್ವ
ವಾರಸ್ಯ ಭೂರೇಃ ॥

**ಅಸ್ಮೈಶತಂ ಶರದೋ ಜೀವಸೇಥಾ ಅಸ್ಮೈವೀರಾ ಇಾಛಶ್ಶತ ಇನ್ದ್ರಶಿಪ್ರಿನ್ ||**

ಎಂಬ ಮಂತ್ರವನ್ನು ಜಪಿಸುತ್ತ ಶಿಶುವಿನ ಸ್ತನ ಬಾಹುಗಳ ಮಧ್ಯಭಾಗಗಳನ್ನು ಏಕಕಾಲದಲ್ಲಿಯೇ ಸೋಂಕಿದನಂತರ :—

**ಅಙ್ಗಾದಙ್ಗಾತ್ಸಂಭವಸಿ ಹೃದಯಾದಧಿಜಾಯಸೆ ।**
**ಆತ್ಮಾವೈ ಪುತ್ರನಾಮಾಸಿ ಸಜೀವ ಶರದಃ ಶತಮ್ ||**

ಎಂಬ ಮಂತ್ರ ಪಠನದೊಡನೆ ಪಸುಳನ ನೆತ್ತಿಯನ್ನು ಮೂರು ಸಾರೆ ಆಘ್ರಾಣಿಸಬೇಕು. ಕೊನೆಗೆ '**ಅನೇನಜಾತಕರ್ಮಾಖ್ಯೇನ ಕರ್ಮಣಾ ಶ್ರೀ ಪರಶಿವಃಪ್ರೀಯತಾಮ್**' ಎಂದು ನುಡಿದರಾಯ್ತು.

ಇಷ್ಟು ವಿಧಿಯನ್ನು ಕೆಲವು ನಿಮಿಷಗಳಲ್ಲಿಯೇ ಮಾಡಬಹುದಲ್ಲವೇ ? ಆಗ ತಾನೇ ಹುಟ್ಟಿರುವ ಕೂಸು ಇನ್ನೂ ಹೊಕ್ಕಳ ಹುರಿಯು ಕೊಯ್ಯಲ್ಪಟ್ಟಿಲ್ಲ; ಇಂತಹ ಪರಿಸ್ಥಿತಿಯಲ್ಲಿ ಸೂತ್ರೋಕ್ತಪ್ರಕಾರ ಈ ವಿಧಿಯನ್ನು ಮೇಲೆ ಹೇಳಿದಂತೆ ಮಾಡಲು ಸಾಧ್ಯವಿದೆ. ಆದರೆ ಕೆಲವು ಪ್ರಯೋಗಗ್ರಂಥಗಳಲ್ಲಿ ಈ ಜಾತಕರ್ಮ ಸಂಸ್ಕಾರದಲ್ಲಿಯುಕೂಡ ಪುಣ್ಯಾಹವಾಚನ, ನಾಂದೀ ಶ್ರಾದ್ಧ ಮೊದಲಾದ ಕರ್ಮಗಳ ಸಮುಚ್ಚಯವು ಹೇಳಲ್ಪಟ್ಟಿದೆ. ಇದರಿಂದ ಕೆಲವು ನಿಮಿಷಗಳಲ್ಲಿಯೇ ಮುಗಿಯಿಸಲ್ಪಡತಕ್ಕ ಈ ವಿಧಿಯನ್ನು ಆ ಪ್ರಯೋಗಗ್ರಂಥಗಳನ್ನು ಮುಂದಿಟ್ಟುಕೊಂಡು ಮಾಡಲಿಕ್ಕೆ ಪ್ರಾರಂಭಿಸಿದರೆ ಬಹುಮಟ್ಟಿಗೆ ಎರಡು ಘಂಟೆಕಾಲಾವಧಿಯಾದರೂ ಬೇಡವೇ ? ಪ್ರಸೂತಿಸಮಯವು ! ಬಾಣತಿಯ ಗತಿಯೇನು ? ಇದನ್ನೆಲ್ಲ ಪರ್ಯಾಲೋಚಿಸಿದರೆ ಆರೋಗ್ಯ ದೃಷ್ಟಿಯಿಂದ ಈ ವಿಧಿಯನ್ನು ಪ್ರಯೋಗಕಾರರು ಹೇಳಿದಂತೇ ಮಾಡಲು ಸಾಧ್ಯವಿದೆಯೇ ? ಬಾಣತಿಯು ಮತ್ತು ಕೂಸಿನ ಅವಸ್ಥೆಯು ಏನಾದರೂ ಆಗಲಿ, ನಾವು ಮಾತ್ರ ಎರಡು ಗಂಟೆ ವೇಳೆಯತನಕವೇಕೆ, ಅದಕ್ಕೂ ಹೆಚ್ಚು ವೇಳೆಯುವರೆಗಾದರೂ ಕುಳಿತು ಪ್ರಯೋಗಾನುಷ್ಠಾನವನ್ನು ಸಮಾಪ್ತಿಗೊಳಿಸಿಯೇ ಬಿಡುವಾ ! ಎಂಬುದಾಗಿ ಹೇಳುವ ಅಲೌಕಿಕರ ನುಡಿಯು:— '**ನಹಿ ವರವಿಘಾತಾಯ ಕನ್ಯೋದ್ವಾಹಃ ಕ್ರಿಯತೆ**' ಎಂಬ ವಾಕ್ಯದೊಳಗಣ ಉದಾಹರಣೆಯಂತೆ ಅಯೋಗ್ಯವಾಗಿರುವುದು. ಈ ಮೂಲಕವಾಗಿಯೇ ಎಷ್ಟೋ ಶ್ರದ್ಧಾಳು ಜನರಾದರೂ ಬೇಸರಗೊಂಡು ಬರಬರುತ್ತ ಈ ಸಂಸ್ಕಾರವನ್ನೇ ಲೋಪಗೊಳಿಸಿದುದರಿಂದ ಈಗ ಎಲ್ಲ ದೇಶಗಳಲ್ಲಿಯೂ ಆ ಬಗ್ಗೆ ಮೌಂಜೀಬಂಧನ ಕ್ರಿಯೆಯಲ್ಲಿ

ಪ್ರಾಯಶ್ಚಿತ್ತವನ್ನನುಷ್ಠಿಸುವುದೇ ಹೇರಳವಾಗಿದೆ. ಹೀಗೆ ಮಾಡಲ್ಪಡುವುದರಿಂದ ಸಕಾಲಕ್ಕೆ ಆ ಸಂಸ್ಕಾರವು ನೆರವೇರಿಸಲ್ಪಟ್ಟಂತಾಯಿತೇ ? ಈ ರೀತಿಯಾಗಿ ಆಚರಿಸುವುದಕ್ಕಿಂತ ಈ ಮೇಲೆ ನಾವು ಹೇಳಿದ ಮೇರೆಗೆ ಆ ಆ ಸೂತ್ರಾನುಯಾಯಿಗಳು ತಮ್ಮ ಗೃಹಗಳಲ್ಲಿ ಸ್ವಸೂತ್ರೋಕ್ತಪ್ರಕಾರವಾಗಿಯೇ ಸಕಾಲಕ್ಕೆ ಪ್ರಯೋಗವಿಧಿಗಳನ್ನು ನೆರವೇರಿಸುವುದೇ ಶ್ರೇಯಸ್ಕರವು.

ಸಾರಾಂಶ— ಶ್ರೌತ ಸೂತ್ರಗಳು ಅಂದರೆ ಮೂರಾಗಲಿ ಅದಕ್ಕೂ ಹೆಚ್ಚಾಗಲಿ ಅಗ್ನಿಗಳಿಂದ ಆಚಾರ್ಯರ ಮುಖೇನ ಮಾಡಲ್ಪಡತಕ್ಕ ಶ್ರುತಿ ಮೂಲಕಗಳಾದ ಕರ್ಮಗಳನ್ನು ಬೋಧಿಸುವ ಗ್ರಂಥಗಳು.

ಗೃಹ್ಯಸೂತ್ರಗ್ರಂಥಗಳಾದರೋ ಗಾರ್ಹಪತ್ಯಾಗ್ನಿಯಿಂದ ( ಒಂದೇ ಅಗ್ನಿಯಿಂದ ) ದಿನಾಲೂ ಗೃಹಸ್ಥರು ಮನೆಗಳಲ್ಲಿ ಅನುಷ್ಠಿಸತಕ್ಕ ಕರ್ಮಗಳನ್ನು ಉಪದೇಶಿಸುತ್ತವೆ. ಈ ಕರ್ಮಗಳನ್ನು ಮಾಡುವಾಗ ಆಚಾರ್ಯರ ಆವಶ್ಯಕತೆಯಿರುವುದಿಲ್ಲ. ಮನೆಯ ಯಜಮಾನನೇ ತನ್ನ ಪತ್ನಿಯೊಡನೆ ನೆರವೇರಿಸುತ್ತಾನೆ. ಈ ಕರ್ಮಗಳು ಸ್ಮೃತಿಮೂಲಕಗಳಾದ್ದರಿಂದ ಇವುಗಳನ್ನು ಸ್ಮಾರ್ತಕರ್ಮಗಳೆನ್ನುತ್ತಾರೆ. ಜನ್ಮ, ವಿವಾಹ, ಮೃತ್ಯು ಮುಂತಾದ ಪ್ರಸಂಗಗಳಲ್ಲಿ ಮಾಡಲ್ಪಡತಕ್ಕ ಸಣ್ಣ ಪುಟ್ಟ ಸಂಸ್ಕಾರಗಳಿಗೂ ನಿತ್ಯದ ಹೋಮಹವನಗಳಿಗೂ ಸಂಬಂಧಪಟ್ಟ ನಿಯಮಗಳು ಈ ಗೃಹ್ಯಸೂತ್ರಗಳಲ್ಲಿ ದೊರೆಯುತ್ತವೆ. ಗೃಹ್ಯಸೂತ್ರಗಳು ಅನೇಕವಾಗಿವೆಯಷ್ಟೇ ! ಆ ಎಲ್ಲವುಗಳಲ್ಲಿಯೂ ಸಮಾನವಾದ ವಿಷಯಗಳೇ ಪ್ರತಿಪಾದಿಸಲ್ಪಡುತ್ತವೆ. ಆದರೆ ಆ ಆ ಕ್ರಿಯೆಗಳಲ್ಲಿ ಪಠಿಸಲ್ಪಡುವ ಮಂತ್ರಗಳಾದರೋ ಆ ಆ ಗೃಹ್ಯಸೂತ್ರಗಳಿಗೆ ಸಂಬಂಧಿಸಿದ ವೇದ ಶಾಖೆಗಳಿಂದುದ್ಧೃತವಾಗಿಹವೆಂಬುದಿಷ್ಟೇ ವಿಶೇಷವು. ಈ ಗೃಹ್ಯಸೂತ್ರ ಗ್ರಂಥಗಳು ತಮ್ಮ ತಮ್ಮ ಶಾಖೀಯಗಳಾದ ಶ್ರೌತಸೂತ್ರಗ್ರಂಥಗಳನ್ನು ಪರಾಮರ್ಶಿಸುವುವುಗಳಾಗಿ ತಮಗೂ ಅವುಗಳಿಗೂ ಇರುವ ಪರಿಚಯವನ್ನು ಸೂಚಿಸುತ್ತವೆ. ಆದರೂ 'ಶ್ರೌತ' ಮತ್ತು 'ಗೃಹ್ಯ' ವೆಂಬಿವೆರಡು ಮಾರ್ಗಗಳು ಒಂದೇ ಆಗಿರುವುದಿಲ್ಲ.

ಧರ್ಮಸೂತ್ರಗಳು ಅಂದರೆ, ಇವೂ ಸ್ಮೃತಿಮೂಲಕವಾದವುಗಳೇ; ಆದರೂ ಈ ಸೂತ್ರಗಳಿಗೂ ವೇದಗಳಿಗೂ ಸಾಕ್ಷಾತ್ಸಂಬಂಧವಿದ್ದುದಾಗಿ

ತೋರುವುದು. ಹೇಗೆಂದರೆ ಇವು ವೇದವಾಕ್ಯಗಳನ್ನೇ ಮಿಗಿಲಾದ ಪವಣಗಳೆಂದೊಪ್ಪುತ್ತವೆ. ಈ ಧರ್ಮಸೂತ್ರಗ್ರಂಥಗಳು ಭಾರತೀಯರ ಲೌಕಿಕವ್ಯವಹಾರಗಳಿಗೆ ಮೂಲಪ್ರಮಾಣಭೂತಗಳಾಗಿವೆ. 'ಧರ್ಮ' ವೆಂಬ ಶಬ್ದವು ವರ್ಣಾಶ್ರಮಧರ್ಮ, ಸದಾಚಾರವೆಂಬರ್ಥದ್ವಯವಾಚಕ ವಾಗಿದೆ. ಆದರೂ ಇಲ್ಲಿ ವರ್ಣಾಶ್ರಮಧರ್ಮವೇ ಪ್ರಾಧಾನ್ಯವಾಗಿ ವಿವಕ್ಷಿತ ವಾಗಿರುವುದರಿಂದ ಅದುವೇ ಪ್ರಕೃತಕ್ಕೆ ಸರಿಯಾಗಿ ಹೆಚ್ಚು ಸಮನಿ ಸುವುದು.

ಈ ರೀತಿಯಾಗಿ, ಸಾರತರ ವಿಷಯಗಳನ್ನು ಅತಿಪರಿಮಿತಶಬ್ದ ಗಳಿಂದ ಸಂಕ್ಷೇಪಗೊಳಿಸುವ ವಿಕೃತವೂ ಕ್ಲಿಷ್ಟವೂ ಆದ ಭಾಷೆಯ ಸರ ಣಿಯನ್ನನುಸರಿಸುವವುಗಳೂ ವೈದಿಕಸಾಹಿತ್ಯಕೋಟಿಯಲ್ಲಿ ಸೇರಿಸಿ ವಿಮರ್ಶಿಸಲ್ಪಡತಕ್ಕವುಗಳೂ ಆದ ಈ ಸೂತ್ರಗ್ರಂಥಗಳೆಲ್ಲವೂ ಬ್ರಾಹ್ಮಣ ಗ್ರಂಥಗಳಿಗೆ ಸಮಾನವಾದವುಗಳಲ್ಲವಾದರೂ ಬುನಾದಿ ಬ್ರಾಹ್ಮಣ ಗ್ರಂಥಗಳಲ್ಲಿ ವಿಷಯಗಳ ಸೇರುಧಿಕೆಯು ಸರಿಯಾಗಿಲ್ಲದಿದ್ದುದರಿಂದ ಕರ್ಮಗಳ ಸಂಬಂಧವಾದ ತಿಳಿವಳಿಕೆಗೆ ಬಲು ತೊಂದರೆಯಾಗುತ್ತಿರಲು ಸೂತ್ರಗ್ರಂಥಗಳು ಆ ಆ ಪ್ರಕರಣಗಳನ್ನು ಸಂದರ್ಭಕ್ಕೆ ಸರಿಯಾಗಿ ಸೇರುವೆಮಾಡಿ ವಿಷಯಗಳನ್ನು ವ್ಯವಸ್ಥೆಗೊಳಿಸಿದವುಗಳಾಗಿ ಅನುಷ್ಠಿಸ ಲ್ಪಡತಕ್ಕ ಬೇರೆ ಬೇರೆ ಕರ್ಮಗಳ ನಿಜಸ್ವರೂಪವನ್ನು ನಿರಾಯಾಸ ವಾಗಿ ತಿಳಿದುಕೊಳ್ಳಲನುಕೂಲವಾಗುವಂತೆ ಮಾಡಿದುದರಿಂದ ಯಾಗ ಗಳನ್ನು ನೆರವೇರಿಸುವ ಪದ್ಧತಿಯನ್ನು ಪ್ರತ್ಯಕ್ಷವಾಗಿ ನೋಡದೆಯಾದರೂ ಇವುಗಳ ಪರಿಶೀಲನ ಬಲದಿಂದ ಸಾಂಗೋಪಾಂಗಗಳಾದ ಆ ಯಜ್ಞ ಗಳನ್ನು ಸರಿಯಾಗಿ ಮಾಡಲಿಕ್ಕೆ ಬರುವುದಾದ ಕಾರಣವೇ ಈ ಸೂತ್ರ ಗ್ರಂಥಗಳು ಧರ್ಮದ ಸ್ವರೂಪವನ್ನು ಕಂಡುಕೊಳ್ಳಬೇಕೆಂಬ ಬಯಕೆಯುಳ್ಳ ವರಿಗೆ ಪರಮೋಪಕಾರವನ್ನು ಮಾಡತಕ್ಕವುಗಳಾಗಿರುವುವೆಂದು ಧಾರಾ ಳವಾಗಿ ಹೇಳಬಹುದು.

ಇಂತಪ್ಪ ಸೂತ್ರಗ್ರಂಥಗಳು ರಚಿಸಲ್ಪಟ್ಟ ಬಳಿಕ ಪರಿಶಿಷ್ಟಗಳೂ, ತರುವಾಯ ಪ್ರಯೋಗ ಪದ್ಧತಿ ಮುಂತಾದುವೂ ಬರೆಯಲ್ಪಟ್ಟವು. ಈ ಸೂತ್ರಗ್ರಂಥಗಳು ಋಗಾದಿ ನಾಲ್ಕು ವೇದಗಳ ಆ ಆ ಶಾಖೆ ಯೊಡನೆ ನಿಕಟಸಂಬಂಧವುಳ್ಳವುಗಳಾಗಿರುವುದರಿಂದೇ ಆ ಆ ಶಾಖಾನು ವರ್ತಿಗಳು ಸ್ವಶಾಖೀಯಸೂತ್ರಗಳನ್ನಾದರೂ ಬೇರೆ ಬೇರೆ ಹೇಳುವುದು ವಿಹಿತವಾಗಿದೆ.

ಆ ಆ ವೇದಕ್ಕೆ ಸಂಬಂಧಿಸಿದ ಶ್ರೌತಸೂತ್ರಗಳೂ, ಗೃಹ್ಯಸೂತ್ರಗಳೂ, ಧರ್ಮಸೂತ್ರಗಳೂ ಈಗ ಉಪಲಬ್ಧ ವಿರುವವುಗಳೇ ಈ ಕೆಳಗೆ ಬರೆದಂತಿವೆ :—

| | ಶ್ರೌತಸೂ. | ಗೃಹ್ಯಸೂ. | ಧರ್ಮಸೂ. |
|---|---|---|---|
| ಋ. ವೇ :— | | | |
| | ೧ ಆಶ್ವಲಾಯನ | ೧ ಆಶ್ವಲಾಯನ | ೧ ವಶಿಷ್ಠ |
| | ೨ ಸಾಂಖ್ಯಾಯನ (ಅಥವಾ ಕೌಷೀತಿಕೀ) | ೨ ಸಾಂಖ್ಯಾಯನ (ಕೌಷೀತಿಕಿ) | |
| ಕ. ಯ. ವೇ— | | | |
| | ೧ ಆಪಸ್ತಂಬ | ೧ ಆಪಸ್ತಂಬ | ೧ ಆಪಸ್ತಂಬ |
| | ೨ ಬೋಧಾಯನ | ೨ ಬೋಧಾಯನ | ೨ ಬೋಧಾಯನ |
| | ೩ ಹಿರಣ್ಯಕೇಶೀ (ಸತ್ಯಾಷಾಢ) | ೩ ಹಿರಣ್ಯಕೇಶೀ | ೩ ಹಿರಣ್ಯಕೇಶೀ |
| | ೪ ಭಾರದ್ವಾಜ | ೪ ಭಾರದ್ವಾಜ | |
| | ೫ ವೈಖಾನಸ | ೫ ವೈಖಾನಸ | |
| | ೬ ವಾಧೂಲ | ೬ ಕಾಠಕ | |
| | ೭ ಮಾನವ | ೭ ಮಾನವ | |
| ಶು. ಯ. ವೇ.— | | | |
| | ೧ ಕಾತ್ಯಾಯನ (ಪಾರಸ್ಕರ) | ೧ ಕಾತ್ಯಾಯನ (ಪಾರಸ್ಕರ) | ೧ ಕಾತ್ಯಾಯನ |
| | ೨ ವೈಜವಾಪ | ೨ ಕಾತೀಯ | |
| ಸಾ. ವೇ.— | | | |
| | ೧ ಖಾದಿರ | ೧ ಖಾದಿರ | ೧ ಗೌತಮ |
| | ೨ ಲಾಟ್ಯಾಯನ | ೨ ಗೋಭಿಲೀಯ | |
| | ೩ ದ್ರಾಹ್ಯಾಯಣ | ೩ ಗೌತಮ | |
| | | ೪ ಜೈಮಿನೀಯ | |
| ಅ. ವೇ.— | | | |
| | ೧ ವೈತಾನ | ೧ ಕೌಶಿಕ | ೧ ಆಂಗಿರಸ |

ಇನ್ನು ಸಾಂಖ್ಯ, ಯೋಗ, ಪಾಶುಪತ, ವೈಷ್ಣವಾದಿ ದರ್ಶನಗಳು ಧರ್ಮಶಾಸ್ತ್ರಗಳಲ್ಲಿಯೇ ಪರಿಗಣಿಸಲ್ಪಡುವವೆಂದು ಕೆಲವರ ಅಭಿಪ್ರಾಯ ವಿರುವುದು; ಆದರೆ ತತ್ತ್ವಜ್ಞಾನವನ್ನೂ ತತ್ಸಾಧನ ವಿಚಾರಗಳನ್ನೂ ಲಕ್ಷೀಕರಿಸಿ ಬೇರೆ ಬೇರೆ ಮತಸಿದ್ಧಾಂತ ಬೋಧಕಗಳಾಗಿರುವುದರಿಂದ ಅವುಗಳನ್ನು ಕೇವಲ ಶ್ರುತ್ಯುಪಬೃಂಹಣಾತ್ಮಕವಾದುವೆಂದೇ ಹೇಳುವುದ ಕ್ಕಿಂತಲೂ ಭಿನ್ನವಿಟ್ಟು ನಿರ್ದೇಶಿಸುವುದುಚಿತವು.

ಸಾಂಖ್ಯಶಾಸ್ತ್ರವು— ಪೌಷ್ಕರಸಂಹಿತೆಯಲ್ಲಿಯೂ, ಶ್ವೇತಾಶ್ವತರೋಪ ನಿಷತ್ತಿನಲ್ಲಿಯೂ, ಸಾಂಖ್ಯಮತವು ನಿರ್ದೇಶಿಸಲ್ಪಟ್ಟಿದೆ. ಮಹಾಭಾರತ ದಲ್ಲಿಯೂ, ತದಂತರ್ಗತವಾದ ಭಗವದ್ಗೀತೆಯಲ್ಲಿಯೂ ಸಾಂಖ್ಯಮತವು ಆದರದೊಡನೆ ಉಲ್ಲೇಖಿಸಲ್ಪಟ್ಟಿರುವುದು. ಸಾಂಖ್ಯಮತಪ್ರವರ್ತಕನು ಕಪಿಲಮಹಾಮುನಿಯು. ಶ್ವೇತಾಶ್ವತರೋಪನಿಷತ್ತಿನಲ್ಲಿ (೫-೨)— **'ಋಷಿಂ ಪ್ರಸೂತಂ ಕಪಿಲಂಯಸ್ತಮಗ್ರೇ ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್ ।'** ಎಂಬುದಾಗಿ ಅವನ ಹೆಸರು ಕಾಣಿಸಲ್ಪಟ್ಟಿದೆ. ಭಗವದ್ಗೀತೆಯಲ್ಲಿಯೂ— **"ಸಿದ್ಧಾನಾಂ ಕಪಿಲೋ ಮುನಿಃ ।"** ಎಂಬ ವಾಕ್ಯವಿದೆ. ಅವನ ಜನನ ಸಂಬಂಧವಾದ ಆಖ್ಯಾಯಿಕೆಯು ಇಂತಿರುವುದು— ಪುರಾತನ ಕಾಲದಲ್ಲಿ ಸ್ವಾಯಂಭುವ ಮುನಿಯ ಮಗಳಾದ ದೇವಹೂತಿಯೆಂಬ ಕನ್ನೆಯು ಕರ್ದಮಮುನಿ ಯೊಡನೆ ತನ್ನ ಮದುವೆಯಾಗಬೇಕೆಂಬ ಲವಲವಿಕೆಯುಳ್ಳವಳಾಗಿ ದ್ದಳು. ಅವಳ ಮನೋಭಿಪ್ರಾಯವನ್ನರಿತವನಾದ ಸ್ವಾಯಂಭುವ ಮುನಿಯು ಅವಳಿಗೆ ಕರ್ದಮಮುನಿಯ ಸೇವೆಯನ್ನು ಮಾಡುತ್ತಿರೆಂಬು ದಾಗಿ ಅಜ್ಞಾಪಿಸಿದನು. ಜನಕನ ಅನುಜ್ಞೆಯ ಮೇರೆಗೆ ದೇವ ಹೂತಿಯು ಕರ್ದಮಮುನಿಯ ಸಾನ್ನಿಧ್ಯದಲ್ಲಿ ಕೆಲವು ವರುಷಗಳ ವರೆಗೆ ವ್ರತಾಚರಣೆಗಳಿಂದಲೂ, ತಪಶ್ಚರ್ಯದಿಂದಲೂ, ಕಾಲಕಳೆದಳು. ಕೊನೆಗೆ ಕರ್ದಮನು ತನ್ನ ಮನದ ಕಟ್ಟಿನದೊಂದು ಮಾತನ್ನು ಅವಳಿ ಗರುಹಿದನು. ಅದಾವುದೆಂದರೆ— 'ಒಂದು ಪುತ್ರಸಂತಾನವಾಗುವ ವರೆಗೆ ಮಾತ್ರವೇ ವೈವಾಹಿಕದ ಸೀಮೆಯು, ನೀನದನ್ನೊಡಂಬಟ್ಟರೇನೇ ನಾನು ನಿನ್ನನ್ನು ಲಗ್ನವಾಗುವೆನು;' ಎಂದು ನುಡಿಯಲು ದೇವಹೂತಿಯು ಆಮಾತಿಗೊಪ್ಪಿದಬಳಿಕ ಇಬ್ಬರ ವಿವಾಹವಾಯಿತು. ಆ ವಿವಾಹದ ಉತ್ಕೃಷ್ಟಫಲವೇ ಕಪಿಲಮಹಾಮುನಿಯು.

ಮತ್ತು, ಭರತಕುಲೋತ್ಪನ್ನನಾದ ಸಗರ ಚಕ್ರವರ್ತಿಯ ಅರವತ್ತು ಸಾವಿರಮಕ್ಕಳ ಔದ್ಧತ್ಯವನ್ನು ಸಹಿಸದೆ ಅವರನ್ನು ತನ್ನ ತಪಸ್ಸಿನ ತೇಜೋಬಲದಿಂದ ನಾಶಗೊಳಿಸಿದನೆಂಬುದಾಗಿ ಕಪಿಲಮುನಿಯ ಸಂಬಂಧವಾದ ಬೇರೊಂದು ಕಥೆಯುಂಟು. ಇದರಿಂದ ಸಾಂಖ್ಯಶಾಸ್ತ್ರ ಪ್ರವರ್ತಕಕಪಿಲನೂ, ಸಗರಪುತ್ರನಾಶಕಕಪಿಲನೂ ಎಂಬುದಾಗಿ ಕಪಿಲಾಭಿಧಾನವುಳ್ಳ ವ್ಯಕ್ತಿಗಳಿಬ್ಬರೋ ? ಮೇಲಿನ ಎರಡೂ ಸಂಗತಿಗಳು ಒಬ್ಬನಲ್ಲಿಯೇ ಸಂಭವಿಸುವುವೋ ? ಎಂಬ ಶಂಕೆಯುಂಟಾಗುವುದು. ಭಾಗವತಾದಿ ಭಕ್ತಿಮಾರ್ಗೀಯ ಗ್ರಂಥಗಳಲ್ಲಿ ಸಾಂಖ್ಯ ಮತಬೋಧಕನೂ ಸಗರಾತ್ಮಜನಾಶಕನೂ ಆದ ಕಪಿಲನೊರ್ವನೇ ಎಂಬರ್ಥವು ಸೂಚಿಸಲ್ಪಟ್ಟಿದೆ. ಆದರೆ ಶಂಕರಾಚಾರ್ಯರು (ಬ್ರ. ಸೂ. ಭಾ. ೨-೧-೧-೧)— **'ಯಾತು ಶ್ರುತಿಃ ಕಪಿಲಸ್ಯ ಜ್ಞಾನಾತಿಶಯಂ ಪ್ರದರ್ಶಯತಿಪ್ರದರ್ಶಿತಾನತಯಾಶ್ರುತಿವಿರುದ್ಧಮಪಿ ಕಾಪಿಲಂಮತಂ ಶ್ರದ್ಧಾತುಂ ಶಕ್ಯಂ, ಕಪಿಲಮಿತಿಶ್ರುತಿ ಸಾಮಾನ್ಯ ಮಾತ್ರತ್ವಾತ್। ಅನ್ಯಸ್ಯ ಚ ಕಪಿಲಸ್ಯ ಸಗರಪುತ್ರಾಣಾಂ ಪ್ರತಪ್ತುರ್ವಾಸುದೇವನಾಮ್ನಃ ಸ್ಮರಣಾತ್ ॥'** ಎಂಬ ವಾಕ್ಯಗಳಿಂದ ಕಪಿಲಾಭಿಧಾನವುಳ್ಳ ಪುರುಷರು ಇಬ್ಬರಿರುವರೆಂಬಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಅದಂತಿರಲಿ. ಕಪಿಲನ ಸಾಂಖ್ಯಮತವು ಭಗವದ್ಗೀತೆಗಿಂತ ಮುನ್ನವೇ ಶೈವಾಗಮೋಪನಿಷದ್ವಾಙ್ಮಯ ಪ್ರಚಾರಕಾಲದಲ್ಲಿ ಪ್ರಸಿದ್ಧವಾಗಿದ್ದಿತೆಂದು ಹೇಳಲಭ್ಯಂತರವೇನು ?

ಕಪಿಲಸಿದ್ಧನ ಮತಕ್ಕಿರುವ 'ಸಾಂಖ್ಯ'ವೆಂಬ ಹೆಸರು 'ಸಂಖ್ಯಾ' ಶಬ್ದದಿಂದಾಗಿರುವುದು. ಪೌಷ್ಕರ ಸಂಹಿತೆಯ ವಿದ್ಯಾಪಾದದಲ್ಲಿ— **'ಸಾಂಖ್ಯಂ ಸಂಖ್ಯಾತ್ಮಕತ್ವಾಚ್ಚ ಕಪಿಲಾದಿಭಿರುಚ್ಯತೇ।'** ಎಂಬುದಾಗಿ ಸಾಂಖ್ಯಶಬ್ದದುಪಪತ್ತಿಯು ತೋರಿಸಲ್ಪಟ್ಟಿದೆ. ಸಾಂಖ್ಯಮತಪ್ರವರ್ತಕರು ಸರ್ವಸೃಷ್ಟಿಯ ವಿಸ್ತಾರವೆಲ್ಲವೂ ಒಟ್ಟಿಗೆ ಪಂಚವಿಂಶತಿ (೨೫) ತತ್ತ್ವಾತ್ಮಕವೆಂಬ ಸಂಖ್ಯಾನಿರ್ಣಯವನ್ನು ಪ್ರತಿಪಾದಿಸುವುದರಿಂದ ಅವರಿಗೆ ಸಾಂಖ್ಯರೆಂಬ ಹೆಸರುಂಟಾಗಿರುವುದೆಂದು ಮೇಲಿನ ವಾಕ್ಯದ ತಾತ್ಪರ್ಯವು. ಅವರ ವಿಚಾರಸರಣಿಗೊಳಪಟ್ಟ ಇಪ್ಪತ್ತೈದು ತತ್ತ್ವಗಳಾವವು ? ಅವುಗಳ ವಿಸ್ತಾರವೆಂತಾದುದು ? ಎಂಬ ಈ ಜಿಜ್ಞಾಸೆಯನ್ನು ಈಗ ಸರ್ವತ್ರ ಉಪಲಬ್ಧವಾದ ಸಾಂಖ್ಯಮತಬೋಧಕ ಗ್ರಂಥಾಧಾರದಿಂದ ಸ್ವಲ್ಪವಾದರೂ ಸಾರ್ಥಕಗೊಳಿಸಬೇಕೆಂಬ ಹವಣಿಕೆಯಿದೆ. ಈಶ್ವರ ಕೃಷ್ಣನು ಹೀಗೆ ಹೇಳುತ್ತಾನೆ—

**ಮೂಲಪ್ರಕೃತಿರವಿಕೃತಿರ್ಮಹದಾದ್ಯಾ ವಿಕೃತಯಃ ಸಪ್ತ ।**
**ಷೋಡಶಕಸ್ತು ವಿಕಾರೋ ನ ಪ್ರಕೃತಿರ್ನವಿಕೃತಿಃ ಪುರುಷಃ ॥**

ಈ ಕಾರಿಕೆಯಲ್ಲಿ ಸಾಂಖ್ಯಾಭಿಮತಗಳಾದ ೨೫ ತತ್ತ್ವಗಳು ಗ್ರಥಿತಗಳಾಗಿವೆ. ಈ ತತ್ತ್ವಗಳಲ್ಲಿ ಮೊದಲಿನದೆನಿಸುವ ಪ್ರಕೃತಿಯು (ಪ್ರಧಾನವು) ಅವಿಕೃತಿಯಾಗಿರುವುದು; ಅಂದರೆ ಅದು ಅನ್ಯಯಾವುದ ರಿಂದಲೂ ಜನಿಸಿದುದಲ್ಲ. ಮಹತ್ತು ಮೊದಲಾದ ಏಳು ದ್ರವ್ಯಗಳು ಅಂದರೆ ಮಹತ್ (ಬುದ್ಧಿ) ಎಂಬುದೂ, ಅಹಂಕಾರವೂ, ಪಂಚತನ್ಮಾತ್ರಗಳೂ ಎಂಬಿವೇಳು ಪದಾರ್ಥಗಳು ಪ್ರಕೃತಿಯ ವಿಕೃತಿಗಳು; ಅಂದರೆ ಒಂದು ವಸ್ತುವಿನ ಕಾರ್ಯಗಳು ಇತರ ವಸ್ತುಗಳಿಗೆ ಕಾರಣಭೂತ ಗಳೂ ಆಗಿವೆ. ಇತರ ವಸ್ತುಗಳು ಅಂದರೆ ಷೋಡಶ (೧೬) ಪದಾರ್ಥ ಗಳು ಇವು ಕೇವಲ ವಿಕೃತಿ ಅಂದರೆ ವಿಕಾರ (ಕಾರ್ಯ) ರೂಪವಾದುವು. ಆದ್ದರಿಂದ ಇವು ಅನ್ಯ ಯಾವುದಕ್ಕೂ ಕಾರಣಗಳಾಗಿರುವುದಿಲ್ಲ. ಶ್ರೋತ್ರ ನೇತ್ರ, ಸ್ಪರ್ಶ, ರಸನೆ, ಘ್ರಾಣವೆಂಬ ಪಂಚಜ್ಞಾನೇಂದ್ರಿಯಗಳೂ, ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥವೆಂಬ ಪಂಚಕರ್ಮೇಂದ್ರಿಯಗಳೂ, ಮನಸ್ಸು ಎಂಬುದಾಗಿರುವ ಈ ಹನ್ನೊಂದು ಇಂದ್ರಿಯಗ ಳನ್ನು ಪಂಚಮಹಾಭೂತಗಳೊಡನೆ ಸೇರಿಸಿ ಎಣಿಸಿದರೆ ಹದಿನಾರು ಪದಾರ್ಥಗಳೂ, ಆ ಪ್ರಕೃತಿಯೂ ಅದರ ವಿಕೃತಿಗಳೇಳೂ, ಒಟ್ಟುಗೂಡಿ ದರೆ ೨೪ ಪದಾರ್ಥಗಳಾಗುತ್ತವೆ. ಇಪ್ಪತ್ತೈದನೆಯ ತತ್ತ್ವವಾದರೋ ಪುರುಷನು. ಇವನು ಯಾವುದಕ್ಕೂ ಪ್ರಕೃತಿಯೂ ಅಲ್ಲ, ಯಾವುದರ ವಿಕೃತಿಯೂ ಅಲ್ಲ. ಈ ರೀತಿಯಾಗಿ ಸಾಂಖ್ಯರಿಗಭಿಮತಗಳಾದ ೨೫ ತತ್ತ್ವಗಳಿರುತ್ತವೆ. ಈಶ್ವರ ಕೃಷ್ಣನು ತನ್ನಿಂದ ರಚಿಸಲ್ಪಟ್ಟ ಕಾರಿಕೆ ಗಳಲ್ಲಿ ಗ್ರಥಿತಗಳಾದ ಈ ತತ್ತ್ವಗಳನ್ನು ಪರಿವಿಡಿದು ವಿವರಿಸಿದ್ದಾನೆ. ಈ ತಾತ್ತ್ವಿಕ ವಿಚಾರಕ್ಕೆ ಪ್ರತ್ಯಕ್ಷ, ಅನುಮಾನ ಆಪ್ತವಚನ (ಶಬ್ದ ಪ್ರಮಾಣ) ವೆಂಬಿವು ಮೂರು ಪ್ರಮಾಣಗಳು ಸಾಧನಗಳಾಗಿರುವುವೆಂಬು ದನ್ನು ಮೊದಲು ಪ್ರತಿಪಾದಿಸಿ ಬಳಿಕ ಸೃಷ್ಟಿಯ ಮೊದಲನೆಯ ತತ್ತ್ವವೆನಿಸುವ ಪ್ರಧಾನದ ವಿವೇಚನೆಯಲ್ಲಿ ತೊಡಗಿದ್ದಾನೆ. ಶಂಕರಾ ಚಾರ್ಯರು ಶಾರೀರಕಾದಿ ಭಾಷ್ಯಗಳಲ್ಲಿ ಆ ಕಾರಿಕೆಗಳನ್ನು ಉಲ್ಲೇ ಖಿಸಿದ್ದಾರೆ. ಸಾಂಖ್ಯಾದಿ ಸರ್ವಮತಗಳಿಗಾಧಾರಭೂತವಾದ ಶೈವಾಗಮ ವಾಙ್ಮಯದಲ್ಲಿ ಈ ೨೫ ತತ್ತ್ವಗಳೂ, ಇವುಗಳಿಗಾಚೆಗಿರುವ ೧೧ ತತ್ತ್ವ ಗಳೂ ಪ್ರತಿಪಾದಿಸಲ್ಪಟ್ಟಿವೆ. ಬ್ರಾಹ್ಮಣಭಾಗವು ವೇದೈಕದೇಶವಾದುದು.

ಅದನ್ನವಲಂಬಿಸಿರುವ 'ತ್ರಯಿಯ' ಮತವು ವೇದೈಕದೇಶವರ್ತಿಯೆನಿಸು ವುದು. ಇದೇ ಮೇರೆಗೆ ಪ್ರಕೃತಿವಿಕೃತಿರೂಪತಾತ್ತ್ವಿಕವಿಚಾರವೇ ಮುಖ್ಯ ಧ್ಯೇಯವಾಗಿ ಉಳ್ಳ ಸಾಂಖ್ಯಾದಿಮತಗಳಾದರೂ ವೇದೈಕದೇಶವರ್ತಿ ಗಳಾದುದರಿಂದ, ಅವು ಪರಮಪುರುಷಾರ್ಥ ಪ್ರಾಪ್ತಿಸಾಧನಗಳಲ್ಲವೆಂಬು ದಾಗಿ ಶ್ರೀ ರೇಣುಕ ಭಗವತ್ಪಾದರು- (ಸಿ.) ವೇದೈಕದೇಶವಿಚಾರಪರಾ ಯಣಮತಗಳಲ್ಲಿರುವ ನ್ಯೂನತೆಯನ್ನು ಉಪದೇಶಿಸಿದುದು ಸೋಪಪತ್ತಿ ಕವಾಗಿರುವುದಲ್ಲವೇ ?

**ಯೋಗಶಾಸ್ತ್ರವು—** ಇದು ಪತಂಜಲಮುನಿಯಿಂದ ರಚಿಸಲ್ಪ ಟ್ಟಿದೆ. ಇದರಲ್ಲಿ ನಾಲ್ಕು ಪಾದಗಳಿರುತ್ತವೆ **"ಅಥ ಯೋಗಾನುಶಾಸ ನಮ್"** ಎಂಬುದು ಈ ಶಾಸ್ತ್ರದ ಮೊದಲನೆಯ ಸೂತ್ರವು. ಯೋಗ ಶಾಸ್ತ್ರದ ಮೊದಲನೆಯ ಪಾದದಲ್ಲಿ ಚಿತ್ತವೃತ್ತಿನಿರೋಧಾತ್ಮಕಸಮಾಧಿಯೂ, ಅಭ್ಯಾಸ ವೈರಾಗ್ಯಗಳೆಂಬ ಸಮಾಧಿಸಾಧನಗಳೂ ನಿರೂಪಿಸಲ್ಪಟ್ಟಿವೆ. ಎರಡನೆಯ ಪಾದದಲ್ಲಿ ವಿಕ್ಷಿಪ್ತಚಿತ್ತಕ್ಕಾದರೂ ಸಮಾಧಿಯು ಸಿದ್ಧಿಸಲೆಂಬ ಹೇತುವಿನಿಂದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾ ಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಅಷ್ಟಾಂಗಗಳು ಹೇಳಲ್ಪ ಟ್ಟಿವೆ. ಮೂರನೆಯ ಪಾದದಲ್ಲಿ ಯೋಗಿಗೆ ಲಭಿಸುವ ಅಣಿಮಾದಿ ವಿಭೂತಿ (ಸಿದ್ಧಿ) ಗಳು ಪ್ರತಿಪಾದಿಸಲ್ಪಟ್ಟಿವೆ. ನಾಲ್ಕನೆಯ ಪಾದದಲ್ಲಿ ಕೈವಲ್ಯದ ಸ್ವರೂಪವು ಪ್ರತಿಪಾದಿಸಲ್ಪಟ್ಟಿದೆ. ಈ ಕಾರಣದಿಂದ ಮೊದ ಲನೆಯ ಪಾದಕ್ಕೆ ಸಮಾಧಿಪಾದವೆಂದೂ, ಎರಡನೆಯ ಪಾದಕ್ಕೆ ಸಾಧನ ಪಾದವೆಂದೂ, ಮೂರನೆಯದಕ್ಕೆ ವಿಭೂತಿಪಾದವೆಂದೂ, ನಾಲ್ಕನೆಯದಕ್ಕೆ ಕೈವಲ್ಯಪಾದವೆಂದೂ ಹೇಳುತ್ತಾರೆ.

ವಿಜಾತೀಯ ಪ್ರತ್ಯಯನಿರೋಧದಿಂದ ನಿಧಿಧ್ಯಾಸವು ಸಿದ್ಧಿಸಬೇ ಕೆಂಬುದೇ ಈ ಯೋಗಶಾಸ್ತ್ರದ ಪ್ರಯೋಜನವು. ಶೈವಾಗಮಗಳ 'ಯೋಗ ಪಾದ' ವೆಂಬ ಭಾಗದಲ್ಲಿ ಯೋಗವಿಷಯವು ವಿಸ್ತೃತವಾಗಿ ಪ್ರತಿಪಾದಿ ಸಲ್ಪಟ್ಟಿದೆ. ಮತ್ತು, ಪ್ರಾಚೀನ ವೀರಮಾಹೇಶ್ವರಾಚಾರ್ಯರೂ ಶಿವಸಿ ದ್ಧಾಂತಾನುಮತವಾದ ಯೌಗಿಕ ವಿಷಯವನ್ನು ಪ್ರತಿಪಾದಿಸತಕ್ಕ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ.

**ಪಾಶುಪತಶಾಸ್ತ್ರವು—** ಇದುವೇ ಪಶುಪತಿಮತವೆಂದು ಹೇಳ ಲ್ಪಡುವುದು. ಈ ಶಾಸ್ತ್ರವು ಐದು ಅಧ್ಯಾಯಗಳುಳ್ಳದ್ದಾಗಿದೆ. ಇದರಲ್ಲಿ **'ಅಥಾತಃ ಪಾಶುಪತಂ ಯೋಗವಿಧಿಂ ವ್ಯಾಖ್ಯಾಸ್ಯಾಮಃ'** ಎಂಬುದು

ಮೊದಲನೆಯ ಸೂತ್ರವು. ಐದು ಅಧ್ಯಾಯಗಳಲ್ಲಿಯೂ ಅನುಕ್ರಮವಾಗಿ ಪಶು, ಪತಿ, ಪಾಶ, ಯೋಗ, ವಿಧಿಗಳೆಂಬ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಪಾಶುಪತಮತವು ವೈದಿಕವೂ, ಅವೈದಿಕವೂ ಎಂಬುದಾಗಿ ಎರಡು ವಿಧವಾಗಿರುವುದು.

ವೈಷ್ಣವಶಾಸ್ತ್ರವು— ನಾರದಾದಿಗಳಿಂದ ರಚಿಸಲ್ಪಟ್ಟುದೆಂದು ಹೇಳಲ್ಪಡುವ ಪಾಂಚರಾತ್ರವೆಂಬುದೇ ವೈಷ್ಣವಶಾಸ್ತ್ರವು. ಇದರಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧವೆಂಬ ನಾಲ್ಕು ಪದಾರ್ಥಗಳು ನಿರೂಪಿಸಲ್ಪಡುತ್ತವೆ. ವಾಸುದೇವನೇ ಸರ್ವಕಾರಣನಾದ ಪರಮೇಶ್ವರನು. ಅವನಿಂದ ಸಂಕರ್ಷಣನೆಂಬ ಜೀವನುದಯಿಸುವನು. ಆ ಜೀವನಿಂದ 'ಪ್ರದ್ಯುಮ್ನ' ಸಂಜ್ಞಕವಾದ ಮನವೆಂಬ ಕರಣವು ಹುಟ್ಟುವುದು. ಆ ಮನಸ್ಸಿನಿಂದ ಅನಿರುದ್ಧ ಸಂಜ್ಞಿತವಾದ ಅಹಂಕಾರವು ಜನಿಸುವುದು. ಇವೆಲ್ಲವೂ ಭಗವಂತನಾದ ವಾಸುದೇವನ ಅಂಶಗಳಾದುದರಿಂದ ತದ್ರೂಪವೇ ಆಗಿರುತ್ತವೆ; ಆದ್ದರಿಂದ ಜೀವನು ವಾಸುದೇವನನ್ನು ಮನೋವಾಕ್ಕಾಯಕರ್ಮಗಳಿಂದಾರಾಧಿಸಲು ಕೃತಕೃತ್ಯನಾಗುವನು. ಎಂಬೀ ಮುಖ್ಯ ವಿಷಯಗಳನ್ನೊಳಗೊಂಡ ಪಾಂಚರಾತ್ರವೆಂಬ ಈ ವೈಷ್ಣವಶಾಸ್ತ್ರದಲ್ಲಿ ವೇದ ವಿಷಯಕ ಪುರಸ್ಕಾರ ವಿಚಾರವಿಲ್ಲದುದರಿಂದ ಅವೈದಿಕ ಪಾಶುಪತಮತದಂತೇ ಪಾಂಚರಾತ್ರವಾದರೂ ವಿಚಾರಸೂತ್ರಗಳಿಂದ ಪ್ರತ್ಯಾಖ್ಯಾತವಾದುದೆಂದು 'ಶಿವಾದ್ವೈತಿ' ಗಳ ಅಭಿಪ್ರಾಯವಿರುವುದು.

ಇನ್ನು ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರಗಳೆಂಬ ವೇದೋಪಾಂಗಗಳಲ್ಲಿ ಪುರಾಣವೆಂಬುದು ಸರ್ಗ ( ಸೃಷ್ಟಿ ) ಪ್ರತಿಸರ್ಗ ( ಪ್ರತಿಸೃಷ್ಟಿ ) ಗಳ ವರ್ಣನೆಯನ್ನೂ, ವಂಶಕಥನವನ್ನೂ ಮನ್ವಂತರಗಳಲ್ಲಿ ಜರುಗಿದ ವಿಶಿಷ್ಟ ಸಂಗತಿಯನ್ನೂ ಒಳಗೊಂಡಿರುವುದು. ಇಂತಹ ಪುರಾಣೋಪಪುರಾಣಗಳ ಹೆಸರುಗಳು:—

**ಮದ್ವಯಂ ಭದ್ವಯಂ ಚೈವ ಬ್ರತ್ರಯಂ ವಚತುಷ್ಟಯಂ ।**
**ಅಲಿಂಪಾಗ್ನಿಪುರಾಣಾನಿ ಕೂಸ್ಕಂ ಗಾರುಡಮೇವಚ ॥**

ಎಂಬ ಪೌರಾಣಿಕ ಶ್ಲೋಕದಲ್ಲಿ ತೋರಿಸಲ್ಪಟ್ಟಿವೆ. ಇವುಗಳಲ್ಲಿ, ಕೆಲವು ಶೈವಮತವನ್ನೂ ಕೆಲವು ವೈಷ್ಣವಾದಿ ಮತಗಳನ್ನೂ ಪುರಸ್ಕರಿಸುವವುಗಳಾಗಿರುತ್ತವೆ.

**ನ್ಯಾಯಶಾಸ್ತ್ರವು**— 'ಪದಾರ್ಥಾನಾಂ ಸರ್ವೇಷಾಮನುಗಮರೂಪೇಣ ಪ್ರಕಾಶಕೋ ಗ್ರಂಥೋನ್ಯಾಯಶಾಸ್ತ್ರಮ್'। ಪ್ರಮಾಣ ಪ್ರಮೇಯಾದಿ ಸರ್ವಪದಾರ್ಥಗಳನ್ನು ಅನುಗಮರೂಪದಿಂದ ಪ್ರಕಾಶಗೊಳಿಸತಕ್ಕ ಗ್ರಂಥವು ನ್ಯಾಯಶಾಸ್ತ್ರವು. ಗೌತಮಮುನಿಪ್ರಣೀತವಾದ ನ್ಯಾಯಶಾಸ್ತ್ರವು ಐಯ್ದು ಅಧ್ಯಾಯಗಳುಳ್ಳದ್ದಾಗಿದೆ. ಇದರಲ್ಲಿ ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ಕರ್ತ, ನಿರ್ಣಯ, ವಾದ, ಜಲ್ಪ, ವಿತಂಡ, ಹೇತ್ವಾಭಾಸ, ಛಲ, ಜಾತಿ. ನಿಗ್ರಹಸ್ಥಾನವೆಂಬ ಈ ಹದಿನಾರು ಪದಾರ್ಥಗಳ ಉದ್ದೇಶವೂ, ಲಕ್ಷಣ ಪರೀಕ್ಷೆಗಳೂ ಪ್ರತಿಪಾದಿಸಲ್ಪಡುತ್ತವೆ. ಪ್ರತಿಪಾದ್ಯ ಪದಾರ್ಥಗಳ ಹೆಸರನ್ನು ಕ್ರಮವಾಗಿ ನಿರ್ದೇಶಿಸುವುದು ಉದ್ದೇಶವೆಂದೂ, ಪ್ರತಿಯೊಂದು ಪದಾರ್ಥದ 'ಅಸಾಧಾರಣಧರ್ಮ'ವೇ ಲಕ್ಷಣವೆಂದೂ, ಆ ಲಕ್ಷಣವು ಸಂಭವಿಸುವುದೋ ಇಲ್ಲವೋ ಎಂಬ ವಿಷಯಕವಾದ ವಿಚಾರವೇ ಪರೀಕ್ಷಣವೆಂದೂ, ಇದರಿಂದೇ ತತ್ತ್ವಜ್ಞಾನವುಂಟಾಗುವುದೆಂದೂ ನೈಯಾಯಿಕರು ಹೇಳುತ್ತಾರೆ. ಕಣಾದಮುನಿಯು ವೈಶೇಷಿಕ ಶಾಸ್ತ್ರವನ್ನು ರಚಿಸಿದ್ದಾನೆ. ಇದು ಹತ್ತು ಅಧ್ಯಾಯಗಳುಳ್ಳದ್ದಾಗಿದೆ. ಇದರಲ್ಲಿ ದ್ರವ್ಯ, ಗುಣ, ಕರ್ಮ, ಸಾಮಾನ್ಯ ವಿಶೇಷಸಮವಾಯ ಎಂಬ ಆರು ಭಾವ ಪದಾರ್ಥಗಳೂ, ಅಭಾವವೆಂಬುದೂ, ಹೀಗೆ ಏಳು ಪದಾರ್ಥಗಳು ಪ್ರತಿಪಾದಿಸಲ್ಪಡುತ್ತವೆ. ಸಾಧರ್ಮ್ಯವೈಧರ್ಮ್ಯಗಳಿಂದವುಗಳ ವ್ಯುತ್ಪಾದನ ಮಾಡುವುದೇ ಈ ಶಾಸ್ತ್ರದ ಪ್ರಯೋಜನವು. ಇದಕ್ಕೂ ನ್ಯಾಯಶಾಸ್ತ್ರವೆನ್ನುತ್ತಾರೆ. ವೇದಾರ್ಥವಿಚಾರದಲ್ಲಿ ನ್ಯಾಯಶಾಸ್ತ್ರದ ಸಾಕ್ಷಾತ್ಸಂಬಂಧವಿರುವುದಿಲ್ಲವಾದರೂ ಪದಾರ್ಥನಿರೂಪಣದ್ವಾರಾ ಪರಂಪರೆಯಿಂದ ಉಪಯುಕ್ತವಾಗಿರುವುದು.

**ಮೀಮಾಂಸಾಶಾಸ್ತ್ರವು**— ಇದು ವೇದದ ಉಪಾಂಗಗಳಲ್ಲಿ ಮೂರನೆಯದು. ಈ ಶಾಸ್ತ್ರವು ಕರ್ಮಮೀಮಾಂಸಾಶಾಸ್ತ್ರವೆಂದೂ, ಬ್ರಹ್ಮಮೀಮಾಂಸಾಶಾಸ್ತ್ರವೆಂದೂ ದ್ವಿವಿಧವಾಗಿದೆ. ಹೀಗೆ ಎರಡು ಪ್ರಕಾರವಾಗಿರುವ ಮೀಮಾಂಸಾಶಾಸ್ತ್ರಗಳಿಗೆ ಪೂರ್ವೋತ್ತರ ಮೀಮಾಂಸಾಶಾಸ್ತ್ರಗಳೆಂದೂ ಹೇಳುತ್ತಾರೆ. ಜೈಮಿನಿಮುನಿಪ್ರಣೀತವಾದ ಕರ್ಮಮೀಮಾಂಸೆಯ ಸ್ವರೂಪವು ಸಾಮಾನ್ಯತಃ ಹಿಂದಿನ ಪ್ರಕರಣದಲ್ಲಿ ತೋರಿಸಲ್ಪಟ್ಟಿದೆ. ಬಾದರಾಯಣ ಮುನಿಯಿಂದ ಉತ್ತರಮೀಮಾಂಸೆಯು ರಚಿಸಲ್ಪಟ್ಟಿದೆ. ಇದರಲ್ಲಿ ನಾಲ್ಕು ಅಧ್ಯಾಯಗಳೂ ಪ್ರತಿಯೊಂದು ಅಧ್ಯಾ

ಯಕ್ಕೆ ನಾಲ್ಕರಂತೆ ಒಟ್ಟು ೧೬ ಪಾದಗಳೂ ಇರುತ್ತವೆ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬುದು ಮೊದಲಾಗಿ 'ಅನಾವೃತ್ತಿಃಶಬ್ದಾತ್' ಎಂಬುದರವರೆಗೆ ೫೫೬ ಸೂತ್ರಗಳೂ ೧೯೨ ಅಧಿಕರಣಗಳೂ ಇವೆ. ಈ ಶಾಸ್ತ್ರದ ಪ್ರಥಮಾಧ್ಯಾಯದಲ್ಲಿ ಉಪನಿಷದ್ವಚನಗಳ ತಾತ್ಪರ್ಯವು ಸಾಕ್ಷಾತ್ತಾಗಿಯೂ ಪರಂಪರೆಯಿಂದಲೂ ಪರಬ್ರಹ್ಮಸಂಜ್ಞಿತವಾದ 'ಲಿಂಗ' ದಲ್ಲಿಯೇ ಇರುವುದೆಂಬುದಾಗಿ ಸಮನ್ವಯಗೊಳಿಸಲ್ಪಟ್ಟಿರುವುದರಿಂದ ಈ ಅಧ್ಯಾಯವನ್ನು ಸಮನ್ವಯಾಧ್ಯಾಯವೆಂದು ಹೇಳುತ್ತಾರೆ. ಎರಡನೆಯ ಅಧ್ಯಾಯದಲ್ಲಿ 'ಸಮನ್ವಯವು ಇತರ ಉಪನಿಷದ್ವಚನಗಳಿಗೂ ಸ್ಮೃತಿಪ್ರಯುಕ್ತತರ್ಕಕ್ಕೂ ಕೇವಲ ತರ್ಕಕ್ಕೂ ವಿರೋಧವಾಗಿರುವುದು' ಎಂಬ ಆಕ್ಷೇಪವನ್ನು ತೋರಿಸಿ ಆ ಆಕ್ಷೇಪವು ಸೋಪಪತ್ತಿಕವಾಗಿ ಪರಿಹರಿಸಲ್ಪಡುವುದರಿಂದ ಈ ಅಧ್ಯಾಯವು 'ಅವಿರೋಧಾಧ್ಯಾಯ' ವೆನಿಸುವುದು. ಮೂರನೆಯಅಧ್ಯಾಯವು 'ಸಾಧನಾಧ್ಯಾಯ' ವೆಂದು ಹೇಳಲ್ಪಡುವುದು. ಇದರಲ್ಲಿ ಬ್ರಹ್ಮಾತ್ಮೈಕ್ಯಶಬ್ದಿತ ಲಿಂಗಾಂಗ ಸಾಮರಸ್ಯಜ್ಞಾನದ ಬಾಹ್ಯಾಭ್ಯಂತರಸಾಧನರೂಪಗಳಾದ ಶಿವಯೋಗಾಚರಣೆಗಳು ನಿರೂಪಿಸಲ್ಪಡುತ್ತವೆ. ನಾಲ್ಕನೆಯ ಅಧ್ಯಾಯವು 'ಫಲಾಧ್ಯಾಯ' ವೆಂದು ಹೇಳಿಸಿಕೊಳ್ಳಲ್ಪಡುವುದು. ಇದರಲ್ಲಿ ಪರಶಿವಾಭಿಧ ಬ್ರಹ್ಮದ ಮೂರ್ತಾಮೂರ್ತಸ್ವರೂಪೋಪಾಸನೆಯ ಪರಿಪಾಕತೆಯೂ ಪರಾವಿದ್ಯೆಯ ಪರಿಣತೆಯೂ ಜೀವನ್ಮುಕ್ತಿಯೂ ಎಂಬೀ ಫಲರೂಪವಿಚಾರಗಳು ಪ್ರತಿಪಾದಿಸಲ್ಪಡುತ್ತವೆ.

ಈ ರೀತಿಯಾಗಿ, ಅಂಗೋಪಾಂಗಗಳ ರೂಪವಾದ ವೇದವಿದ್ಯಾವಿಸ್ತಾರವು ವೈದಿಕಜನತೆಯ ಉಪಕಾರಾರ್ಥವಾಗಿರುವುದು. ವೈದಿಕ ವಾಙ್ಮಯವನ್ನು ಶುದ್ಧವಾಗಿ ಪಠಿಸುವ ತಿಳಿವಳಿಕೆಯನ್ನುಂಟುಮಾಡಿಕೊಡತಕ್ಕ ಶಿಕ್ಷಾಶಾಸ್ತ್ರವೂ, ಪದಪದಾರ್ಥಗಳನ್ನರಿಯಲು ಸಾಧನಗಳಾದ ವ್ಯಾಕರಣನಿರುಕ್ತಾದಿಗ್ರಂಥಗಳೂ, ನಿರ್ದುಷ್ಟವಾಕ್ಯಾರ್ಥಬೋಧಕಗಳಾದ ಪೂರ್ವೋತ್ತರಮೀಮಾಂಸೆಗಳೂ, ಕರ್ಮಾನುಷ್ಠಾನಪ್ರತಿಪಾದಕಗಳಾದ ಕಲ್ಪಾದಿಸೂತ್ರಗಳೂ, ಆಚಾರವ್ಯವಹಾರಾದಿಗಳನ್ನುಪದೇಶಿಸುವ ಧರ್ಮಶಾಸ್ತ್ರಗಳೂ, ಪ್ರಮಾಣಜ್ಞಾನಹೇತುವಾದ ನ್ಯಾಯವೂ, ವೇದಾಗಮಪ್ರಮಾಣಪೂರ್ವಕವಾಗಿಯೂ ಉದಾಹರಣೆಗಳೊಡನೆಯೂ ಧರ್ಮಬ್ರಹ್ಮವಿವೇಚನಾತ್ಮಕಗಳಾದ ಪುರಾಣೇತಿಹಾಸಗಳೂ, ನಾಸ್ತಿಕಾದಿಗಳಿಂದ ಮಾಡಲ್ಪಡುವ ವೇದಾಗಮವಿರುದ್ಧಗಳಾದ ತರ್ಕಗಳನ್ನು ನಿರಸನಗೊಳಿಸುವುದಕ್ಕೋಸ್ಕರ ಭಾಷ್ಯ ವಾರ್ತಿಕಾದಿ ಪ್ರಬಂಧಗಳೂ, ಆತ್ಮಾನಾತ್ಮ

ಪ್ರತ್ಯಯಸಿದ್ಧಿಗಾಗಿ ಯೋಗದರ್ಶನಾದಿಗಳೂ ಎಂಬೀ ವೇದವಿಧ್ಯಾವಿಸ್ತಾರವು ಅತ್ಯಂತೋಪಯುಕ್ತವಾಗಿರುವುದು.

ವೈದಿಕಸಾಹಿತ್ಯವು ಅಪರಿಮಿತವಾಗಿರುವುದರಿಂದ ನಾವು ಅದೆಲ್ಲವನ್ನೂ ಅವಲಂಬಿಸಿ ವ್ಯವಹರಿಸುವುದು ಸಾಧ್ಯವಿಲ್ಲ. ಅದುಕಾರಣ ಶಿಷ್ಟರೆಂದು ಹೇಳಿಸಿಕೊಳ್ಳಲ್ಪಡತಕ್ಕವರ ನಡೆವಳಿಕೆಯೊಂದನ್ನು ಅನುಕರಣಮಾಡುವುದರಿಂದ ಬಾಧಕವೇನು ? ಎಂಬ ಆಕ್ಷೇಪದ ಸಮಾಧಾನ ವಿಂತಿರುವುದು. ನಾವು ಈಶ್ವರೋಪದಿಷ್ಟ ವೇದಾಗಮಗಳು ಯಾವುದನ್ನು ವಿಧಿಸುವುವೋ ಅದನ್ನು ಅನುಷ್ಠೇಯವಾದ ಧರ್ಮವೆಂದೂ, ಯಾವುದನ್ನು ನಿಷೇಧಿಸುವುವೋ ಅದನ್ನು ಅನನುಷ್ಠೇಯ ( ಅಧರ್ಮ ) ವೆಂದೂ ತಿಳಿಯುತ್ತೇವೆ. ವೇದಗಳೂ ಆಗಮಗಳೂ ಅಪೌರುಷೇಯಗಳಾದುದರಿಂದ ಅವು ಧರ್ಮ ಬ್ರಹ್ಮಪ್ರತಿಪಾದಕಗಳಾಗಿರುತ್ತವೆ. ಮತ್ತು ಅವುಗಳನ್ನನುಸರಿಸುವ ಮನ್ವಾದಿಸ್ಮೃತಿಗಳೂ, ಪುರಾಣೇತಿಹಾಸಗಳೂ ಧರ್ಮ ಬ್ರಹ್ಮ ಪ್ರತಿಪಾದಕಗಳಾದ ಪ್ರಮಾಣಗ್ರಂಥಗಳೆನಿಸುತ್ತವೆ. ಹೀಗೆ ಅಂಗೋಪಾಂಗಸಹಿತವಾದ ವೈದಿಕಸಾಹಿತ್ಯವು ಅಪರಿಮಿತವಾಗಿರುವುದಾದರೂ ತತ್ಪ್ರತಿಪಾದ್ಯಗಳಾದ ಅನೇಕ ವಿಷಯಗಳಲ್ಲಿ ಮಾನವರು ತಮ್ಮ ತಮ್ಮ ಬುದ್ಧಿತಾರತಮ್ಯಾನುಗುಣವಾಗಿ ಅಧಿಕೃತರಾಗಿರುವರೆಂಬ ಸಂಗತಿಯನ್ನು ಈ ಹಿಂದೆ ಹೇಳಿದ್ದೇವೆ. ಆದ್ದರಿಂದ ಅಪರಿಮಿತ ವೈದಿಕ ಸಾಹಿತ್ಯಾಂತರ್ಗತ ಧರ್ಮಾಚರಣೆಗಳನ್ನು ಓರ್ವನೇ ಅನುಷ್ಠಿಸಬೇಕಾಗುವುದೆಂಬ ವಿಪರೀತಕಲ್ಪನೆಗೊಳಗಾಗಿ ಮುಮುಕ್ಷುಜನವು ವೈದಿಕ ಸಾಹಿತ್ಯದಲ್ಲಿ ಅನುಪಾದೇಯವೃತ್ತಿಯುಳ್ಳದ್ದಾಗುವುದುಚಿತವಲ್ಲ. ಶಿಷ್ಟಾಚಾರವಾದರೂ ಪ್ರಮಾಣವಾಗಿರುತ್ತದೆ. ಆದರೆ ಶಿಷ್ಟರ ಲಕ್ಷಣವನ್ನು ಮನುವು (೧೨) ಹೀಗೆ ಹೇಳುತ್ತಾನೆ.

**ಧರ್ಮೇಣಾಧಿಗತೋ ಯೈಸ್ತು ವೇದಃ ಸಪರಿಬೃಂಹಣಃ ।**
**ತೇ ಶಿಷ್ಟಾ ಬ್ರಾಹ್ಮಣಾ ಜ್ಞೇಯಾಃ ಶ್ರುತಿಪ್ರತ್ಯಕ್ಷ ಹೇತವಃ ॥**

ಬ್ರಹ್ಮಚರ್ಯಾದಿ ವಿಹಿತಧರ್ಮಾನುಷ್ಠಾನಪೂರ್ವಕ ವೇದಾಗಮಗಳನ್ನು ಚೆನ್ನಾಗಿ ಅಧ್ಯಯನಮಾಡಿ ಅವುಗಳ ರಹಸ್ಯಾರ್ಥವನ್ನು ಪ್ರತ್ಯಕ್ಷವಾಗಿ ತಿಳಿಯುವ ಸಾಮರ್ಥ್ಯವುಳ್ಳವರೂ ಆ ರಹಸ್ಯಾರ್ಥವನ್ನು ಪರರಿಗುಪದೇಶಿಸುವವರೂ ತಾವೂ ಅದರಂತೆ ಆಚರಿಸುವವರೂ ಆದ ಬ್ರಾಹ್ಮಣರೇ ಶಿಷ್ಟರು.

ಅಂತಹ ಶಿಷ್ಟರ ಆಚಾರವೇ 'ಧರ್ಮ' ವಿಷಯದಲ್ಲಿ ಪ್ರಮಾಣವು ಅರ್ಥಾತ್ ವೇದಾಗಮ ಪ್ರಮಾಣವಿರುದ್ಧವಾದ ಶಿಷ್ಟರ ಆಚರಣೆಯಾದರೂ 'ಧರ್ಮ' ವಿಷಯದಲ್ಲಿ ಪ್ರಮಾಣವಲ್ಲ. ಸಾರಾಂಶ—ವೇದಾಗಮಪ್ರಮಾಣಾನುಸಾರವಾದ ಆಚಾರವುಳ್ಳ ನಿರ್ಮಲಾತ್ಮರೇ ಶಿಷ್ಟರೆಂದು ಹೇಳಲ್ಪಡುತ್ತಾರೆ. ಅವರ ಆಚರಣೆಯು 'ಧರ್ಮ' ರೂಪವಾದುದರಿಂದ ಅದು ಆಸ್ತಿಕಜನರಿಗೆ ಅನುಕರಣೀಯವೂ, ಅವರ ವಾಕ್ಯಗಳು ಉಪಾದೇಯಗಳೂ ಆಗಿರುತ್ತವೆ. ವೇದಾಗಮಗಳನ್ನು ಪುರಸ್ಕರಿಸದವರ ಆಚಾರವು 'ಅಧರ್ಮ' ರೂಪವಾದುದರಿಂದ ಅದು ಶಿಷ್ಟಾಚಾರವಲ್ಲ; ಅಂತಹ ಪಾಷಂಡಿಗಳ ವಚನನಿಚಯವಾದರೂ ಪ್ರಮಾಣವಲ್ಲ. ಹೀಗೆ ಸನಾತನ ವೈದಿಕಧರ್ಮಾವಲಂಬಿಗಳ ಭೂಮಿಕೆಯಿರುವುದು. ಅವರು ಈ ವಿಧವಾದ ಸರಣಿಯನ್ನು ಅಲ್ಲಗಳೆಯಲು ಎಂದೂ ಸಂಮತಿಸರು, ಈ ಶಾಸ್ತ್ರಮರ್ಯಾದೆಯನ್ನು ಉಲ್ಲಂಘಿಸುವವರು ವೇದಬಾಹ್ಯರೇ ಸರಿ. ಇನ್ನು, ಸ್ವಧರ್ಮದಲ್ಲಿ ನಿಷ್ಠೆಯುಳ್ಳವರಾಗಿದ್ದರೂ ದೇಶಕಾಲಾನುಸಾರವಾಗಿ ಹಲಕೆಲವು ಸ್ವಧರ್ಮಾಚರಣೆಗಳನ್ನು ಅನುಷ್ಠಿಸಲು ತೊಂದರೆಯುಂಟಾದಲ್ಲಿ ಆಪದ್ಧರ್ಮಾನುಕೂಲತೆಯು ಶಾಸ್ತ್ರದಿಂದೇ ಕಲ್ಪಿಸಲ್ಪಟ್ಟಿರುವುದು. ಆದರೆ, 'ಆಪದ್ಧರ್ಮ' ವೆಂಬ ಶಬ್ದದರ್ಥವು ಅತಿವ್ಯಾಪ್ತಿಯುಳ್ಳದ್ದಾಗದಂತೆ ಎಚ್ಚರಿಕೆಯಿರಬೇಕು. ಅಂದರೆ ಆಪತ್ಕಾಲವು ತೊಲಗಿದೊಡನೆಯೇ ಪುನಃ ಸ್ವಧರ್ಮನಿಷ್ಠನಾಗಬೇಕು. ಹಾಗಾದರೇನೇ ಅದು 'ಆಪದ್ಧರ್ಮ' ವೆನಿಸುವುದು, ಇಲ್ಲವಾದರೆ ಅದನ್ನು ಧರ್ಮಭ್ರಷ್ಟವವೆಂದೇ ತಿಳಿಯತಕ್ಕದ್ದು. ಈ ವಿಚಾರಪದ್ಧತಿಯನ್ನಾದರೋ ಅಭ್ಯುದಯಾಕಾಂಕ್ಷಿಗಳು ಮರೆಯಕೂಡದು.

ಶಾಸ್ತ್ರಪ್ರಾಮಾಣ್ಯವನ್ನು ಅಂಗೀಕರಿಸುವುದರಿಂದ ಮತಿವಿಕಾಸವು ಕುಂಠಿತವಾಗಬಹುದಲ್ಲವೇ ? ಎಂಬಾಕ್ಷೇಪವು ತರವಲ್ಲ. ಪ್ರತ್ಯಕ್ಷ, ಅನುಮಾನ, ಶಬ್ದವೆಂಬಿವು ಮೂರು ಪ್ರಮಾಣಗಳು ಮುಖ್ಯವಾದುವು. ವ್ಯವಹಾರದಲ್ಲಿ ಪ್ರತ್ಯಕ್ಷಪ್ರಮಾಣವು ಮುಖ್ಯವಾಗಿದೆ. ಅನುಮಾನವೂ ಆಪ್ತವಚನವೂ ಮುಖ್ಯವಾದುವಲ್ಲ. ಅಲೌಕಿಕ ವಿಷಯಗಳಲ್ಲಾದರೋ ಶ್ರುತಿಯೇ ಮುಖ್ಯಪ್ರಮಾಣವು. ಧರ್ಮಾಧರ್ಮಗಳೆಂಬ ವಿಷಯಗಳು ಅಲೌಕಿಕಗಳಾದುದರಿಂದ ಅವುಗಳ ಬಗ್ಗೆ ಶ್ರುತಿಯೇ ಮುಖ್ಯ ಪ್ರಮಾಣವಾಗಿರುವುದು. ಬುದ್ಧಿಯು ಸ್ವಾತಂತ್ರ್ಯವನ್ನೊಪ್ಪಿ ಅದು ಶಾಸ್ತ್ರಪ್ರಮಾಣಾಧೀನವಾಗುವುದರಿಂದ ಅದರ ವಿಕಾಸವು ಕುಂಠಿತವಾಗುವುದೆಂದು

ಪ್ರತ್ಯಯಸಿದ್ಧಿಗಾಗಿ ಯೋಗದರ್ಶನಾದಿಗಳೂ ಎಂಬೀ ವೇದವಿಧ್ಯಾವಿಸ್ತಾರವು ಅತ್ಯಂತೋಪಯುಕ್ತವಾಗಿರುವುದು.

ವೈದಿಕಸಾಹಿತ್ಯವು ಅಪರಿಮಿತವಾಗಿರುವುದರಿಂದ ನಾವು ಅದೆಲ್ಲವನ್ನೂ ಅವಲಂಬಿಸಿ ವ್ಯವಹರಿಸುವುದು ಸಾಧ್ಯವಿಲ್ಲ. ಅದುಕಾರಣ ಶಿಷ್ಟರೆಂದು ಹೇಳಿಸಿಕೊಳ್ಳಲ್ಪಡತಕ್ಕವರ ನಡೆವಳಿಕೆಯೊಂದನ್ನು ಅನುಕರಣಮಾಡುವುದರಿಂದ ಬಾಧಕವೇನು ? ಎಂಬ ಆಕ್ಷೇಪದ ಸಮಾಧಾನವಿಂತಿರುವುದು. ನಾವು ಈಶ್ವರೋಪದಿಷ್ಟ ವೇದಾಗಮಗಳು ಯಾವುದನ್ನು ವಿಧಿಸುವುವೋ ಅದನ್ನು ಅನುಷ್ಠೇಯವಾದ ಧರ್ಮವೆಂದೂ, ಯಾವುದನ್ನು ನಿಷೇಧಿಸುವುವೋ ಅದನ್ನು ಅನನುಷ್ಠೇಯ ( ಅಧರ್ಮ ) ವೆಂದೂ ತಿಳಿಯುತ್ತೇವೆ. ವೇದಗಳೂ ಆಗಮಗಳೂ ಅಪೌರುಷೇಯಗಳಾದುದರಿಂದ ಅವು ಧರ್ಮ ಬ್ರಹ್ಮಪ್ರತಿಪಾದಕಗಳಾಗಿರುತ್ತವೆ. ಮತ್ತು ಅವುಗಳನ್ನನುಸರಿಸುವ ಮನ್ವಾದಿಸ್ಮೃತಿಗಳೂ, ಪುರಾಣೇತಿಹಾಸಗಳೂ ಧರ್ಮ ಬ್ರಹ್ಮ ಪ್ರತಿಪಾದಕಗಳಾದ ಪ್ರಮಾಣಗ್ರಂಥಗಳೆನಿಸುತ್ತವೆ. ಹೀಗೆ ಅಂಗೋಪಾಂಗಸಹಿತವಾದ ವೈದಿಕಸಾಹಿತ್ಯವು ಅಪರಿಮಿತವಾಗಿರುವುದಾದರೂ ತತ್ಪ್ರತಿಪಾದ್ಯಗಳಾದ ಅನೇಕ ವಿಷಯಗಳಲ್ಲಿ ಮಾನವರು ತಮ್ಮ ತಮ್ಮ ಬುದ್ಧಿತಾರತಮ್ಯಾನುಗುಣವಾಗಿ ಅಧಿಕೃತರಾಗಿರುವರೆಂಬ ಸಂಗತಿಯನ್ನು ಈ ಹಿಂದೆ ಹೇಳಿದ್ದೇವೆ. ಆದ್ದರಿಂದ ಅಪರಿಮಿತ ವೈದಿಕ ಸಾಹಿತ್ಯಾಂತರ್ಗತ ಧರ್ಮಾಚರಣೆಗಳನ್ನು ಓರ್ವನೇ ಅನುಷ್ಠಿಸಬೇಕಾಗುವುದೆಂಬ ವಿಪರೀತಕಲ್ಪನೆಗೊಳಗಾಗಿ ಮುಮುಕ್ಷುಜನವು ವೈದಿಕ ಸಾಹಿತ್ಯದಲ್ಲಿ ಅನುಪಾದೇಯವೃತ್ತಿಯುಳ್ಳದ್ದಾಗುವುದುಚಿತವಲ್ಲ. ಶಿಷ್ಟಾಚಾರವಾದರೂ ಪ್ರಮಾಣವಾಗಿರುತ್ತದೆ. ಆದರೆ ಶಿಷ್ಟರ ಲಕ್ಷಣವನ್ನು ಮನುವು (೧೨) ಹೀಗೆ ಹೇಳುತ್ತಾನೆ.

**ಧರ್ಮೇಣಾಧಿಗತೋ ಯೈಸ್ತು ವೇದಃ ಸಪರಿಬೃಂಹಣಃ ।**
**ತೇ ಶಿಷ್ಟಾ ಬ್ರಾಹ್ಮಣಾ ಜ್ಞೇಯಾಃ ಶ್ರುತಿಪ್ರತ್ಯಕ್ಷ ಹೇತವಃ ॥**

ಬ್ರಹ್ಮಚರ್ಯಾದಿ ವಿಹಿತಧರ್ಮಾನುಷ್ಠಾನಪೂರ್ವಕ ವೇದಾಗಮಗಳನ್ನು ಚೆನ್ನಾಗಿ ಅಧ್ಯಯನಮಾಡಿ ಅವುಗಳ ರಹಸ್ಯಾರ್ಥವನ್ನು ಪ್ರತ್ಯಕ್ಷವಾಗಿ ತಿಳಿಯುವ ಸಾಮರ್ಥ್ಯವುಳ್ಳವರೂ ಆ ರಹಸ್ಯಾರ್ಥವನ್ನು ಪರರಿಗುಪದೇಶಿಸುವವರೂ ತಾವೂ ಅದರಂತೆ ಆಚರಿಸುವವರೂ ಆದ ಬ್ರಾಹ್ಮಣರೇ ಶಿಷ್ಟರು.

ಅಂತಹ ಶಿಷ್ಟರ ಆಚಾರವೇ 'ಧರ್ಮ' ವಿಷಯದಲ್ಲಿ ಪ್ರಮಾಣವು ಅರ್ಥಾತ್ ವೇದಾಗಮ ಪ್ರಮಾಣವಿರುದ್ಧವಾದ ಶಿಷ್ಟರ ಆಚರಣೆಯಾದರೂ 'ಧರ್ಮ' ವಿಷಯದಲ್ಲಿ ಪ್ರಮಾಣವಲ್ಲ. ಸಾರಾಂಶ—ವೇದಾಗಮಪ್ರಮಾಣಾನುಸಾರವಾದ ಆಚಾರವುಳ್ಳ ನಿರ್ಮಲಾತ್ಮರೇ ಶಿಷ್ಟರೆಂದು ಹೇಳಲ್ಪಡುತ್ತಾರೆ. ಅವರ ಆಚರಣೆಯು 'ಧರ್ಮ' ರೂಪವಾದುದರಿಂದ ಅದು ಆಸ್ತಿಕಜನರಿಗೆ ಅನುಕರಣೀಯವೂ, ಅವರ ವಾಕ್ಯಗಳು ಉಪಾದೇಯಗಳೂ ಆಗಿರುತ್ತವೆ. ವೇದಾಗಮಗಳನ್ನು ಪುರಸ್ಕರಿಸದವರ ಆಚಾರವು 'ಅಧರ್ಮ' ರೂಪವಾದುದರಿಂದ ಅದು ಶಿಷ್ಟಾಚಾರವಲ್ಲ; ಅಂತಹ ಪಾಷಂಡಿಗಳ ವಚನನಿಚಯವಾದರೂ ಪ್ರಮಾಣವಲ್ಲ. ಹೀಗೆ ಸನಾತನ ವೈದಿಕಧರ್ಮಾವಲಂಬಿಗಳ ಭೂಮಿಕೆಯಿರುವುದು. ಅವರು ಈ ವಿಧವಾದ ಸರಣಿಯನ್ನು ಅಲ್ಲಗಳೆಯಲು ಎಂದೂ ಸಂಮತಿಸರು, ಈ ಶಾಸ್ತ್ರಮರ್ಯಾದೆಯನ್ನು ಉಲ್ಲಂಘಿಸುವವರು ವೇದಬಾಹ್ಯರೇ ಸರಿ. ಇನ್ನು, ಸ್ವಧರ್ಮದಲ್ಲಿ ನಿಷ್ಠೆಯುಳ್ಳವರಾಗಿದ್ದರೂ ದೇಶಕಾಲಾನುಸಾರವಾಗಿ ಹಲಕೆಲವು ಸ್ವಧರ್ಮಾಚರಣೆಗಳನ್ನು ಅನುಷ್ಠಿಸಲು ತೊಂದರೆಯುಂಟಾದಲ್ಲಿ ಆಪದ್ಧರ್ಮಾನುಕೂಲತೆಯು ಶಾಸ್ತ್ರದಿಂದೇ ಕಲ್ಪಿಸಲ್ಪಟ್ಟಿರುವುದು. ಆದರೆ 'ಆಪದ್ಧರ್ಮ' ವೆಂಬ ಶಬ್ದದರ್ಥವು ಅತಿವ್ಯಾಪ್ತಿಯುಳ್ಳದ್ದಾಗದಂತೆ ಎಚ್ಚರಿಕೆಯಿರಬೇಕು. ಅಂದರೆ ಆಪತ್ಕಾಲವು ತೊಲಗಿದೊಡನೆಯೇ ಪುನಃ ಸ್ವಧರ್ಮನಿಷ್ಠನಾಗಬೇಕು. ಹಾಗಾದರೇನೇ ಅದು 'ಆಪದ್ಧರ್ಮ' ವೆನಿಸುವುದು, ಇಲ್ಲವಾದರೆ ಅದನ್ನು ಧರ್ಮಪ್ರಚ್ಯವವೆಂದೇ ತಿಳಿಯತಕ್ಕದ್ದು. ಈ ವಿಚಾರಪದ್ಧತಿಯನ್ನಾದರೋ ಅಭ್ಯುದಯಾಕಾಂಕ್ಷಿಗಳು ಮರೆಯಕೂಡದು.

ಶಾಸ್ತ್ರಪ್ರಾಮಾಣ್ಯವನ್ನು ಅಂಗೀಕರಿಸುವುದರಿಂದ ಮತಿವಿಕಾಸವು ಕುಂಠಿತವಾಗಬಹುದಲ್ಲವೇ ? ಎಂಬಾಕ್ಷೇಪವು ತರವಲ್ಲ. ಪ್ರತ್ಯಕ್ಷ, ಅನುಮಾನ, ಶಬ್ದವೆಂಬಿವು ಮೂರು ಪ್ರಮಾಣಗಳು ಮುಖ್ಯವಾದುವು. ವ್ಯವಹಾರದಲ್ಲಿ ಪ್ರತ್ಯಕ್ಷಪ್ರಮಾಣವು ಮುಖ್ಯವಾಗಿದೆ. ಅನುಮಾನವೂ ಆಪ್ತವಚನವೂ ಮುಖ್ಯವಾದುವಲ್ಲ. ಅಲೌಕಿಕ ವಿಷಯಗಳಲ್ಲಾದರೋ ಶ್ರುತಿಯೇ ಮುಖ್ಯಪ್ರಮಾಣವು. ಧರ್ಮಾಧರ್ಮಗಳೆಂಬ ವಿಷಯಗಳು ಅಲೌಕಿಕಗಳಾದುದರಿಂದ ಅವುಗಳ ಬಗ್ಗೆ ಶ್ರುತಿಯೇ ಮುಖ್ಯ ಪ್ರಮಾಣವಾಗಿರುವುದು. ಬುದ್ಧಿಯು ಸ್ವಾತಂತ್ರ್ಯವನ್ನೊಪ್ಪಿ ಅದು ಶಾಸ್ತ್ರಪ್ರಮಾಣಾಧೀನವಾಗುವುದರಿಂದ ಅದರ ವಿಕಾಸವು ಕುಂಠಿತವಾಗುವುದೆಂದು

ತಿಳಿವುದನುಚಿತವು. ಏಕೆಂದರೆ ಬುದ್ಧಿಗೆ ಸ್ವಾತಂತ್ರ್ಯವಿಲ್ಲ. ( ಮತಿಯು ಸ್ವತಂತ್ರವಾಗಿರದು. ) ಅದು ಪೂರ್ವಸಂಸ್ಕಾರಾಧೀನವಾದುದು; ಅದು ಕಾರಣವೇ ' ಪಿಣ್ಡೇ ಪಿಣ್ಡೇ ಮತಿರ್ಭಿನ್ನಾ ' ಎಂಬ ಪ್ರತ್ಯಯವು ಸರ್ವತ್ರಾನುಭವಗಮ್ಯವಾಗಿರುವುದು. ಮತ್ತು ಬುದ್ಧಿಯ ಬೆಳವಣಿಗೆಯು ಅಂದರೆ ವಿಕಾಸವಾಗುವಿಕೆಯಲ್ಲವೇ ? ಅಲೌಕಿಕ ವಿಷಯಗೋಚರ ಸಾಧನವಾದ ಶಬ್ದ ( ಶಾಸ್ತ್ರ ) ಪ್ರಮಾಣವು ಬುದ್ಧಿಯ ಲೌಕಿಕ (ವ್ಯಾವಹಾರಿಕ) ಜ್ಞಾನವಿಕಾಸತೆಗೆ ಪ್ರತಿಬಂಧಕವಾದುದೆಂದು ತಿಳಿವುದು ಆ ಬುದ್ಧಿಮಾಂದ್ಯದ ಲಕ್ಷಣವು. ಅಲೌಕಿಕಜ್ಞಾನಪ್ರಾಬಲ್ಯದಿಂದ ಲೌಕಿಕ ಜ್ಞಾನದ ಕೊರತೆಯು ಸಂಭವಿಸುವುದೆಂಬುದನ್ನು ಯಾವನಾದರೂ ಸ್ವಾನುಭವದಿಂದ ಹೇಳಬಲ್ಲನೇ ? ಮತ್ತು ಭೌತಿಕಶಾಸ್ತ್ರಜ್ಞಾನದಿಂದ ಆಸ್ತಿಕಬುದ್ಧಿಯು ಕೆಡುವುದೆಂದು ಭಾವಿಸುವುದಾದರೂ ಯುಕ್ತವಲ್ಲ. ವ್ಯಾವಹಾರಿಕಜ್ಞಾನದ ಬೆಳವಣಿಗೆಗೆ ಅಲೌಕಿಕವಿಷಯಜ್ಞಾನಾತ್ಮಕ ಬುದ್ಧಿ ವಿಕಾಸವು ಸಹಾಯವಾಗಿರುವಂತೇ ಭೌತಿಕಶಾಸ್ತ್ರಜ್ಞಾನ (ವಿಜ್ಞಾನ) ದಿಂದ ಅಲೌಕಿಕ ವಿಷಯಕವಾದ ಆಸ್ತಿಕಬುದ್ಧಿಯು ಮತ್ತಿಷ್ಟುವೃದ್ಧಿಯನ್ನೇ ಹೊಂದುವುದು. ಏಕೆಂದರೆ ಪರಶಿವನ ವಿಚಿತ್ರಶಕ್ತಿಯು ಈ ಭೌತಿಕ ವಿಭೂತಿಗಳಲ್ಲಿ ಹೇಗೆ ಗೂಢವಾಗಿರುವುದೆಂಬುದರ ತಿಳಿವಳಿಕೆಯಿಂದ ಆ ಮಹಾದೇವನ ಸರ್ವಶಕ್ತಿತ್ವದ ಕಲ್ಪನೆಯು ವೃದ್ಧಿಯನ್ನೈದುವುದು ಅಪರಿಹಾರ್ಯವಾಗಿದೆ. ಆದಿಭೌತಿಕಶಾಸ್ತ್ರಜ್ಞಾನವು ಸದ್ಯಃ ಯಾವ ಪ್ರಕಾರವಾಗಿಯೂ ಯಾವ ಭಾವನೆಯಿಂದಲೂ ಬೋಧಿಸಲ್ಪಡುವುದೋ ಮತ್ತು ಂಪಾದಿಸಲ್ಪಡುವುದೋ ಆ ಪ್ರಕಾರವೂ ಆ ಭಾವನೆಯೂ ವಿಪರೀತವಾಗಿರುವುದರಿಂದೇ ಅಂತಹ ಅನಿಷ್ಟಪರಿಣಾಮವು ಆಗುತ್ತಿರಬಹುದು ! ದೃಷ್ಟದ (ದೃಶ್ಯ ಪದಾರ್ಥದ) ಆಚೆಗೆ ಒಂದಾನೊಂದು ಸರ್ವಾಧಾರವಾದ ಅದೃಷ್ಟವಸ್ತುವಿನ ( ಪರಶಿವನ ) ಅಸ್ತಿತ್ವಭಾವನೆಯನ್ನು ದೃಢವಾಗಿಟ್ಟುಕೊಂಡು ನವೀನಭೌತಿಕಶೋಧದಲ್ಲಿ ತೊಡಗಿದರೆ ಭೌತಿಕಜ್ಞಾನದ ಅನಿಷ್ಟಪರಿಣಾಮವಾದರೂ ಆಗಲಾರದು. ಇನ್ನು, ಸಾರಾಸಾರ ವಿಚಾರಾತ್ಮಕ ಬುದ್ಧಿವೃತ್ತಿಗೆ ಹೇಯೋಪಾದೇಯ ವಿಷಯಗಳಲ್ಲಿ ಸ್ವಾತಂತ್ರ್ಯವಿದೆ.

ವ್ಯಕ್ತಿಧರ್ಮವೂ ಸಮಾಜಧರ್ಮವೂ ಬೇರೆಬೇರೆಯಾಗಿರುತ್ತವೆ. ನಮ್ಮ ಸಮಾಜವು ಈ ಎರಡೂ ಧರ್ಮಗಳನ್ನು ಯೋಗ್ಯರೀತಿಯಿಂದ ಪಾಲಿಸುತ್ತಿದ್ದರೂ ಈ ಸಮಾಜಕ್ಕೆ ಈ ವಿಧವಾದ ಗ್ಲಾನಿಯುಂಟಾಗು

ದೇಕೆ ? ಎಂಬ ಸಂದೇಹವನ್ನು ಹೀಗೆ ಹೋಗಲಾಡಿಸಬಹುದು. ಧರ್ಮವಾದರೋ ಅಂತರಾತ್ಮನಂತೆ ಸ್ವಭಾವತಃ ಸ್ವಚ್ಛ (ನಿರ್ಮಲ) ವೇ ಆಗಿರುವುದು. ಆದ್ದರಿಂದ ಅದರ ಸ್ವರೂಪಕ್ಕೆ ಮಾತ್ರ ಗ್ಲಾನಿಯು ಎಂದೂ ಸಂಭವಿಸದು; ಆದರೆ ಧರ್ಮದ ಶರೀರರೂಪವಾದ ಸಮಾಜವಾದರೋ ಸ್ವಾಭಾವಿಕವಾಗಿಯೇ ದೈನಂದಿನ ಗತಿಯನ್ನನುಸರಿಸಿ ಮಾಲಿನ್ಯವನ್ನು ಪಡೆವುದು. ಯೋಗ್ಯವಾದ ವ್ಯವಸ್ಥೆಯ ಅಭಾವದಿಂದಲೂ ಅದು ಅನಿಯತಕಾಲದಲ್ಲಿಯೂ ಮಲಿನವಾಗುತ್ತಿರುವುದು. ಸಮಾಜ ಸಂರಕ್ಷಣೆಯ ಯೋಗ್ಯವಾದ ವ್ಯವಸ್ಥೆಯಿಲ್ಲದುದರಿಂದೇ ನಮ್ಮ ಸಮಾಜಕ್ಕೆ ವರ್ತಮಾನ ಸ್ಥಿತಿಯು ಪ್ರಾಪ್ತವಾಗಿರುವುದು.

ಮತ್ತು ವ್ಯಕ್ತಿಧರ್ಮಕ್ಕಿಂತಲೂ ಸಮಾಜಧರ್ಮವು ಅತ್ಯಂತ ಭಿನ್ನವಾದುದೆಂಬುದನ್ನು ನಾವರಿಯೆವು. ಅನೇಕ ವ್ಯಕ್ತಿಗಳ ಧರ್ಮವೇ ಸಮಾಜಧರ್ಮವೆಂದು ಹೇಳಲ್ಪಡುವುದು. ಅದರ ಅನುಷಂಗದಿಂದೇ ವ್ಯಕ್ತಿಗಳ ಪಾರಸ್ಪರಿಕಾಂತರ್ಗತಧರ್ಮಗಳು ನಿಯತಗೊಳಿಸಲ್ಪಟ್ಟಿವೆ. ಈಗ ಜಾತಿಧರ್ಮ, ಕುಲಧರ್ಮ, ಮೊದಲಾದವುಗಳಿಗೆ ಗ್ಲಾನಿಯು ಸಂಭವಿಸಿರುವುದಿಲ್ಲ; ಅವುಗಳನ್ನು ಅನುಷ್ಠಿಸತಕ್ಕ ವ್ಯಕ್ತಿಗಳಲ್ಲಿ ಕಾಮಕ್ರೊಧಾದಿ ದೋಷಗಳಾವಿರ್ಭವಿಸಿದುದರಿಂದೇ ಅವರು ಸ್ವಧರ್ಮತ್ಯಾಗವನ್ನೂ ಪ್ರತಿಷಿದ್ಧ ಸೇವೆಯನ್ನೂ ಮಾಡತೊಡಗಿದ್ದಾರೆ.

ಹೇಗೆ ಹಳೆಯದಾದೊಡವೆಯನ್ನು ಬಿಸುಟುವೆವೋ ಹಾಗೆ ನಮ್ಮ ಹಳೆಯ ಸಂಸ್ಕೃತಿಯನ್ನಾದರೂ ತ್ಯಜಿಸಬಾರದೇಕೆ ? ಎಂಬುದಾಗಿ ಆಧುನಿಕ ತರುಣರು ನಮ್ಮನ್ನು ಕುರಿತು ಪ್ರಶ್ನೆಮಾಡುತ್ತಾರೆ. ಮತ್ತು ನಮ್ಮ ಸ್ಥಿತಿಯು ಹಾದಿನಲ್ಲಿ ಬಹಳದಿನಗಳವರೆಗಿದ್ದು ಮಲೆತಿರುವ ನೀರಿನಂತಾಗಿರುವುದರಿಂದ ನಮ್ಮ ಸಂಸ್ಕೃತಿಯನ್ನು ನೂತನ ಸಂಸ್ಕಾರದಿಂದ ನಿರ್ಮಲಗೊಳಿಸುವುದು ಯುಕ್ತವಾದುದೆಂದೂ ಅವರ ಹೇಳಿಕೆಯು. ಆದರೆ ನಮ್ಮ ವೈದಿಕಧರ್ಮವು ಸನಾತನವಾದುದು. ನಾವೂ ಹಳೆಯದಾದ ವಸ್ತುವನ್ನು ಬಿಸುಟಲೇಬೇಕೆಂಬ ಮಾತನ್ನು ಅಪ್ಪಗೆಯೆವು; ಇನ್ನು ಯಾವ ವಸ್ತುವು ಎಂದೂ ಹಳೆಯದಾಗುವಂತಹದಲ್ಲವೋ ಅದರ ತ್ಯಾಗವೆಂತು ಸಂಭವಿಸುವುದು ? **"ಧರ್ಮೋ ನಿತ್ಯಃ ಸುಖದುಃಖೇತ್ವನಿತ್ಯೇ"** ಎಂದು ನಮ್ಮ ಹಿರಿಯರ ಹೇಳುವಿಕೆಯು. 'ತರುಣಸಂಘವು ಇರಲಿ ! ತರುಣ ಜನತೆಯೋ ಧರ್ಮ ನಿರ್ಣಾಯಕಪ್ರಮಾಣವಾಗಬಲ್ಲುದೇ ? ವಸ್ತುತಃ ಆಧುನಿಕರ ಸ್ಥಿತಿಯೇ ಸ್ವಧರ್ಮತ್ಯಾಗ

ಮೂಲಕವೇ ಮಲಿತನೀರಿನಂತಾಗಿರುವುದಾಗಿ ತೋರಿಬರುವುದು. ಅದಕ್ಕೆ ಸ್ವಧರ್ಮಾನುಷ್ಠಾನವೇ ಶ್ರೇಷ್ಠವಾದ ಔಷಧವು. 'ಅಗ್ನಿಯು ಶೀತಲವಾಗಿದೆ' ಎಂಬುದಾಗಿ ನೂರಾರು ಶ್ರುತಿಗಳು ಹೇಳಿದರೂ ಅವುಗಳನ್ನು ಪ್ರಮಾಣಭೂತಗಳನ್ನಾಗಿ ತಿಳಿಯಕೂಡದಷ್ಟೇ ! ಆದ್ದರಿಂದ ಜಾತಿಸಾಂಕರ್ಯ ಮೊದಲಾದ ಸಂಗತಿಗಳು ಬಹುಜನ ಸಮಾಜದ ಹಿತಕ್ಕೆ ಪೋಷಕಗಳಾಗಿರುತ್ತವೆಂದು ಸಮಾಜಧುರೀಣರ ಅನುಭವಗಮ್ಯಗಳಾಗಿರುತ್ತಿರಲು 'ಆ ಸಂಗತಿಗಳು ದುಷ್ಪರಿಣಾಮಕಾರಕಗಳಾಗಿರುತ್ತವೆ' ಎಂದು ಪ್ರತ್ಯಕ್ಷಶ್ರುತಿಯೇ ಹೇಳಿದರೂ ಸಹ ಅದನ್ನು ಹೇಗೆ ತಾನೇ ಒಡಂಬಡಬೇಕು ? ಎಂದು ನುಡಿಯುವವರ ಮಾತಿಗುತ್ತರವಿಂತಿರುರುವುದು. 'ತನಿಗೆಂಡವು ತಂಪಾಗಿದೆ' ಎಂಬುದಾಗಿ ಪ್ರತಿಪಾದಿಸುವ ಶ್ರುತಿವಚನವೇ ಇರಲಾರದು. ಮನುಷ್ಯ ಪ್ರಾಣಿಗಳ ಹಿತಕ್ಕೋಸ್ಕರವೇ ಪ್ರವೃತ್ತವಾದ ಶ್ರುತಿಯು ಅವರ ಅಹಿತವನ್ನು ಎಂದೂ ಬೋಧಿಸದು; ತಾಯಿಯು ತನ್ನ ಮಕ್ಕಳಿಗೆ ಕೇಡನ್ನೆಣಿಸುವಳೇ ? ಶ್ರುತಿಮಾತೆಯು ತನ್ನ ಮಕ್ಕಳಾದ ನಮ್ಮಗಳ ಚಿರಕಾಲಿಕ ಕಲ್ಯಾಣವನ್ನೇ ಬಯಸುವಳು. ಆದ್ದರಿಂದ ಜಾತಿಸಾಂಕರ್ಯಾದಿ ಸಂಗತಿಗಳು ಬಹುಜನ ಸಮಾಜದ ಹಿತಕ್ಕೆ ನಿಶ್ಚಯವಾಗಿಯೂ ಕಾರಣಗಳಾಗಿರುತ್ತವೆಂದು ಸಮ್ಮತಿಸಲು ಯಾವದೊಂದು ಪ್ರಮಾಣವೂ ಇರುವುದಿಲ್ಲ. 'ಸಮಾಜಧುರೀಣರ ಅನುಭವವು' ಧರ್ಮಕ್ಕೆ ಪ್ರಮಾಣವೆನಿಸಲಾರದು, ಏಕೆಂದರೆ ಅವರ ಅನುಭವದ ಏಕವಾಕ್ಯತೆಯಿಲ್ಲ; ಮತ್ತು 'ಧರ್ಮ' ವಿಷಯದಲ್ಲಿ ನಾವು ಪುರುಷರ ಲೌಕಿಕಾನುಭವವನ್ನು ಪ್ರಮಾಣವೆಂದು ಪುರಸ್ಕರಿಸುವುದಿಲ್ಲ, ಆದರೆ ಅಪೌರುಷೇಯ ಶ್ರುತ್ಯನುಸಾರವಾದ ಧರ್ಮಜ್ಞರ ಅನುಭವವನ್ನಾದರೋ 'ಧರ್ಮ' ವಿಷಯಕವಾದ ಪ್ರಮಾಣವೆಂದು ಹೇಳಲಭ್ಯಂತರವಿಲ್ಲ.

ಇನ್ನು, ರೂಢಿಯೂ, ಶಾಸ್ತ್ರವೂ ಎಂಬಿವೆರಡರಲ್ಲಿ ಬಲಿಷ್ಠವಾವುದು ? ಪರಂಪರಾಪ್ರಾಪ್ತವಾದ ರೂಢಿಯನ್ನೇ ಧರ್ಮವೆಂದು ತಿಳಿಯಬಹುದೇನು ? ಎಂದರೆ ಶ್ರುತಿಸ್ಮೃತಿಗಳೂ ಇವೆರಡನ್ನು ಅನುಸರಿಸಿರುವ ಶಿಷ್ಟರ ಆಚಾರವೂ ಎಂಬಿವು ಮೂರೂ ಪ್ರಮಾಣಭೂತವಾದುವು. ರೂಢಿಯೆಂಬುದಾದರೋ ಈ ಮೂರು ಪ್ರಮಾಣಗಳಿಗಿಂತಲೂ ದುರ್ಬಲಪ್ರಮಾಣವಾಗಿದೆ. ರೂಢಿಯಾದರೂ ಸರ್ವಥಾ ನಿಷ್ಪ್ರಮಾಣವೂ ನಿಷ್ಕಾರಣವೂ ಆಗಿರುವುದೆಂದೇ ಹೇಳಲಾಗದು; ಆದರೂ ಪ್ರತಿಯೊಂದು ರೂಢಿಗೆ ಶಾಸ್ತ್ರಪ್ರಮಾಣವೂ ಕಾರಣವೂ ಇದ್ದೇ ಇರುತ್ತವೆಂಬುದಾಗಿ

ತ್ಯಿಳಿಯಕೂಡದು. ಶಾಸ್ತ್ರಪ್ರಮಾಣ ಶೂನ್ಯವಾದ ಹಲಕೆಲವು ರೂಢ ಧರ್ಮಗಳು ಅಹಿತಕರವಾಗಿರುವುವೆಂದು ಪ್ರಮಾಣದಿಂದ ಸಿದ್ಧವಾಗು ತ್ತಿರಲು ಶಾಸ್ತ್ರಜ್ಞರ ಸಮ್ಮತಿಯಿಂದ ದೇಶಕಾಲಾನುಸಾರವಾಗಿ ಅವುಗ ಳಲ್ಲಿ ಬದಲಾವಣೆಯನ್ನು ಮಾಡಬಹುದು.

ಈಗಲಾದರೋ ದುರಾಚಾರ ಮಾಡಲೆಳಿಸುವ ಕೆಲಂಬರು ದೇವ ತೆಗಳಿಂದಲೂ ಮಹರ್ಷಿಗಳಿಂದಲೂ ಈ ವಿಧವಾದ ದುರಾಚಾರವು ಮಾಡ ಲ್ಪಟ್ಟಿತೆಂಬ ದೃಷ್ಟಾಂತವನ್ನು ಮುಂದೆಮಾಡಿ ತಾವೂ ಅನ್ಯರೂ ಹಾಗೆ ಆಚರಿಸಬಾರದೇಕೆ ? ಎಂಬುದಾಗಿ ನುಡಿಯುತ್ತಾರೆ. ಅಂಥವರು ನಮ್ಮ ಸಮಾಜದಲ್ಲಿಯೂ ತಲೆದೋರಿದರೆ ಅವರಿಗೆ ನಾವು ಹೀಗೆ ಸಮಾಧಾ ನವನ್ನು ಹೇಳುತ್ತೇವೆ. ಪ್ರಾಚೀನರ ನಡವಳಿಕೆಯು ನಮಗೆ ಪ್ರಾಧಾ ನ್ಯವಾಗಿ ಉಪಜೀವ್ಯವಾದುದಲ್ಲ. ಪ್ರಾಚೀನ ಋಷಿಗಳ ಅನುಷ್ಠಾನವು ಪೂರ್ವೋಕ್ತಪ್ರಮಾಣಾವಿರುದ್ಧವಾಗಿರುವ ಪಕ್ಷದಲ್ಲಿ ಅದನ್ನು ನಾವು ಅನು ಸರಣ ಮಾಡಬಹುದು; ಇಲ್ಲವಾದರೆ ಸಲ್ಲದು. ಈ ವಿಷಯದಲ್ಲಿ—

**ಅನುಷ್ಠಿತಂ ಯದ್ದೇವೈರ್ಮುನಿಭಿರ್ಯದನುಷ್ಠಿತಂ ।**
**ನಾನುಷ್ಠೇಯಂ ಮನುಷ್ಯೈಸ್ತದುಕ್ತಂ ಕರ್ಮ ಸಮಾಚರೇತ್ ॥**

ಎಂಬುದಾಗಿ ಬೋಧಾಯನಾನುಶಾಸನವಿದೆ. ಇದರಿಂದ ಪ್ರಾಚೀನರು ಅನುಷ್ಠಿಸಿದ ಕರ್ಮಾಚರಣದ ಪ್ರತಿಷೇಧಕಾರಣವು ಸುಲಭವಾಗಿ ಊಹಿ ಸಲ್ಪಡುವುದು. ನಮ್ಮ ಅನುಗ್ರಹಕ್ಕೋಸ್ಕರವೇ ( ಜೀವರನ್ನುದ್ದೇಶಿಸಿ ) ಪ್ರವೃತ್ತಗಳಾದ ಪ್ರಮಾಣಗ್ರಂಥಗಳು ಸರ್ವಜ್ಞರೂ ವಿಸ್ಮಯನೀಯ ತಪೋನಿಧಿಗಳೂ ವಿಚಿತ್ರಾತಿಮಾನುಷಾನೇಕಕರ್ಮಕ್ಷಮರೂ ಆದ ಆ ಮಹರ್ಷಿಗಳನ್ನು ನಿರ್ಬಂಧಿಸಲಾರವು. ತಮ್ಮಿಚ್ಛಾನುಸಾರವಾಗಿ ಒಳ್ಳೆಯ ದನ್ನಾಗಲೀ ಕೆಟ್ಟದ್ದನ್ನಾಗಲೀ ಮಾಡಲಿಕ್ಕೂ ತಪಃಪ್ರಭಾವದಿಂದ ಅದನ್ನು ಪರಿಹರಿಸಲಿಕ್ಕೂ ಅವರಿಗೆ ಈಶ್ವರದತ್ತವಾದಶಕ್ತಿಯಿರುವುದು. ಅದು ಕಾರಣವೇ ಅವರು ಯಾವದೊಂದು ಸಾಹಸಕಾರ್ಯವನ್ನಾದರೂ ಮಾಡ ಬಲ್ಲರು. ಅದನ್ನರಿತು ನಮ್ಮಂತಹ ಪರಿಮಿತಶಕ್ತಿಯುಳ್ಳವರು ಹಾಗೆ ಮಾಡಕೂಡದೆಂಬುದಾಗಿ ಬೋಧಾಯನವಚನದ ತಾತ್ಪರ್ಯವಿರುವುದು. ಇದೇ ವಿಷಯವನ್ನು ಆಪಸ್ತಂಬನು ಮೂರು ಸೂತ್ರಗಳಿಂದ ವಿಶದೀಕರಿಸಿ ದ್ದಾನೆ—**'ದೃಷ್ಟೋ ಧರ್ಮವ್ಯತಿಕ್ರಮಃ ಸಾಹಸಂಚ ಪೂರ್ವೇಷಾಂ'** (೨-೬-೭) **'ತೇಷಾಂ ತೇಜೋವಿಶೇಷೇಣ ಪ್ರತ್ಯವಾಯೋ ನ ವಿದ್ಯತೇ'** (೨-೬-೮) **'ತದನ್ವೀಕ್ಷ್ಯ ಪ್ರಯುಂಜಾನಸ್ಸೀದತ್ಯವರಃ'** (೨-೬-೯)

ಶಾಸ್ತ್ರಗಳು ಈ ವಿಧವಾದ ವ್ಯವಸ್ಥೆಯನ್ನು ಮಾಡದಿದ್ದ ಪಕ್ಷದಲ್ಲಿ ಮುಂದಿನ ಮಾನವಪೀಳಿಗೆಯಲ್ಲಿ ಬಹ್ವನರ್ಥಗಳು ಸಂಭವಿಸದಿರುವುವೇ ? ಪರಾಶರ ಮಹರ್ಷಿಯು ಅತ್ತಿತ್ತ ಸಂಚರಿಸುತ್ತಿರುವಾಗ ಒಂದೆಡೆಯಲ್ಲಿ ಧೀವರಮಂದಿರದೊಳಿರುವ ಯಾವಳೋ ಒಬ್ಬ ರಾಜಕನ್ಯೆಯಲ್ಲಿ ಅನುರಾಗವುಳ್ಳವನಾದನಂತೆ ! ಮತ್ತೊಬ್ಬ ಋಷಿಯು ಪಿತೃವಾಕ್ಯವನ್ನು ಪುರಸ್ಕರಿಸಿ ತನ್ನ ತಾಯಿಯನ್ನು ಕೊಂದನೆಂಬುದೊಂದುವ್ಯಾಖ್ಯಾನವು ಪ್ರಸಿದ್ಧವಾಗಿರುವುದು. ಯಾವಳೋ ಓರ್ವ ಬ್ರಾಹ್ಮಣಸ್ತ್ರೀಯು ಸಮುಚಿತ ವಯಸ್ಸಿನಲ್ಲಿ ವಿವಾಹವನ್ನು ಮಾಡಿಕೊಳ್ಳದೆ ವೃದ್ಧಾಪ್ಯದಲ್ಲಿ ಲಗ್ನವಾದಳಂತೆ ! ಪ್ರಾಚೀನರ ಈ ಬಗೆಯ ಶಾಸ್ತ್ರವಿರುದ್ಧಗಳಾದ ಅನೇಕ ದುರಾಚಾರಗಳನ್ನರಿತು ಹೀಗೇಯೇ ಸರ್ವರ ಪ್ರವೃತ್ತಿಯುಂಟಾದರೆ ಲೋಕವ್ಯವಸ್ಥೆಯು ಒಂದೇ ಕ್ಷಣದಲ್ಲಿ ಯಾವ ಸ್ಥಿತಿಗೀಡಾಗುವುದೆಂಬ ಸಂಗತಿಯನ್ನು ಯಾರು ಅರಿಯರು ? ಕತರನೂ ಭರದ್ವಾಜನೂ ಎಂಬ ಮುನಿಪ್ರವರರೀರ್ವರೂ ಪರಸ್ಪರ ಭಾರ್ಯಾವಿನಿಮಯವುಳ್ಳವರಾಗಿದ್ದರು. ದ್ರೌಪದಿಯು ಪತಿವ್ರತಾ ಲಲಾಮಭೂತಳೂ, ಅವಳಿಗೆ ಐವರು ಪತಿಗಳೆಂಬುದಾಗಿ ಮಹಾಭಾರತದಲ್ಲಿ ಹೇಳಿಲ್ಲವೇ ? ನಾವು ಇಂತಹ ಕೃತಿಗಳನ್ನೇ ಪ್ರಮಾಣಗಳನ್ನಾಗಿ ಭಾವಿಸಿ ಈ ಕಾಲದಲ್ಲಿ ನಮ್ಮ ಸ್ತ್ರೀಯರಿಗೆ ಹಲವುಮಂದಿ ಪತಿಗಳಿರಬೇಕೆಂಬಭಿಪ್ರಾಯವುಳ್ಳವರಾದರೆ ವಿಹಿತವಾಗಬಹುದೇನು ? ಈ ವಿಧಗಳಾದ ಅನರ್ಥಗಳ ಪರಿಹಾರಕ್ಕೋಸ್ಕರವೇ ಆಪಸ್ತಂಬಾದಿಗಳು ಪೂರ್ವೋಕ್ತರೀತಿಯಾಗಿ ವ್ಯವಸ್ಥೆಗೊಳಿಸಿದ್ದಾರೆ. ಆದ್ದರಿಂದ ಈ ಶಾಸ್ತ್ರವ್ಯವಸ್ಥೆಯನ್ನು ನಮ್ಮ ಪೂರ್ವಪಕ್ಷಿಗಳಾದರೂ ಅರಿತುಕೊಂಡು ಇತಃಪರ ಪ್ರಾಚೀನಾಚಾರಗಳನ್ನು ಯಾವುದಕ್ಕೂ ದೃಷ್ಟಾಂತರೂಪವಾಗಿ ತೋರಿಸದಿರಲೆಂದು ಹಾರೈಸುತ್ತೇವೆ. ಪ್ರಾಚೀನಾಚಾರಗಳು ಶಾಸ್ತ್ರಸಮ್ಮತವಾಗಿರುವ ಪಕ್ಷದಲ್ಲಿ ಅವು ನಮಗೂ ಉಪಾದೇಯವಾದುವು.

ಇನ್ನು, ಭಟ್ಟಪಾದರು — ವೇದವಾಙ್ಮಯದಲ್ಲಿ ಅಶ್ಲೀಲವಾದುವೆಂದರಿಯಲ್ಪಡುವ 'ಪ್ರಜಾಪತಿಯು ತನ್ನ ಕನ್ನೆಯನ್ನೇ ಬೆರೆಯುವಿಕೆ' ಮತ್ತು 'ಇಂದ್ರನ ಅಹಲ್ಯಾಜಾರತ್ವವು' ಮುಂತಾದ ವಿಷಯಗಳ ಬಗ್ಗೆ ತತ್ಪ್ರತಿಪಾದಕ ವೈದಿಕ ವಾಕ್ಯಗಳ ರಹಸ್ಯಾರ್ಥವನ್ನು ಪ್ರಕಾಶಪಡಿಸುವ ಮೂಲಕ ವೇದವಾಙ್ಮಯದಲ್ಲಿ ಅಶ್ಲೀಲಾನುಕರಣ ಬೈಜಿಕವಚನಗಳಿಗೆಡೆಯಿಲ್ಲವೆಂದು ಘಂಟಾಘೋಷವಾಗಿ ಸಾರಿದ್ದಾರೆ. ಆ

ಮಹಾತ್ಮರ ಎರಡು ನುಡಿಗಳನ್ನು ಮಾದರಿಗಾಗಿ ನಾವಿಲ್ಲಿ ಉಲ್ಲೇಖಿಸುತ್ತೇವೆ:—

**ಪ್ರಜಾಪತಿಸ್ತಾವತ್ ಪ್ರಜಾಪಾಲನಾಧಿಕಾರಾದಾದಿತ್ಯ ಏವೋಚ್ಯತೆ, ಸಚಾರುಣೋದಯ ವೇಲಾಯಾಮುಷಃ ಸಮುದ್ಯನ್ನಭ್ಯೇತಿ; ಸಾ ತದಾಗಮನಾದೇವೋಪೂಜಾಯತ ಇತಿ ದುಹಿತೃತ್ವೇನ ವ್ಯಪದಿಶ್ಯತೆ । ತಸ್ಯಾಂಚಾರುಣಕಿರಣಾಖ್ಯ ಬೀಜನಿಕ್ಷೇಪಾತ್ ಸ್ತ್ರೀಪುರುಷ ಸಂಯೋಗವದುಪಚಾರಃ ॥೧॥**

"ಸೂರ್ಯನು ಪ್ರಜೆಗಳನ್ನು ಪಾಲಿಸು ( ಕಾಪಾಡು ) ವವನಾದುದರಿಂದ ಅವನು ಇಲ್ಲಿ ಪ್ರಜಾಪತಿಯೆಂದು ಹೇಳಲ್ಪಡುವನು. ಅವನಿಂದ ( ನೇಸರನಿಂದ ) ಉಷೆಯು ( ಉಷಃಕಾಲವು ) ಸಂಭವಿಸುವುದರ ಮೂಲಕ ಆ ಉಷೆಯು ಅವನ ಕನ್ನೆ (ಮಗಳು) ಎಂದು ಹೇಳಲ್ಪಡುತ್ತಾಳೆ. ತರುವಾಯ ಆ ಸೂರ್ಯನು ಉಷೆಯಲ್ಲಿ ತನ್ನ ಅರುಣ ಕಿರಣ ರೂಪ ಬೀಜವನ್ನೂರುವುದರಿಂದ (ಸೂರ್ಯನ ತೇಜಸ್ಸೇ ಉಷೆಯ ಹೊಟ್ಟೆಯೊಳಗಿಂದ ಹಾಯ್ದು ಅರುಣೋದಯ ರೂಪದಿಂದ ಹೊರಹೊಮ್ಮಿ ಹಬ್ಬುವುದರಿಂದ) ಇಲ್ಲಿ ಪ್ರಜಾಪತಿಯು ( ಸೂರ್ಯನು ) ತನ್ನ ಕನ್ನೆ ( ಉಷೆ ) ಯೊಡನೆ ಕೂಡುವನೆಂಬ ಸ್ತ್ರೀ ಪುರುಷ ಸಂಯೋಗರೂಪವಾದರ್ಥವು ಕಾಣಬರುವುದಾದರೋ ಔಪಚಾರಿಕ (ಗೌಣ) ವಾದುದು.'

**ಏವಂ ಸಮಸ್ತತೇಜಃ ಪರಮೇಶ್ವರತ್ವನಿಮಿತ್ತೇಂದ್ರಪದವಾಚ್ಯಂ । ಸವಿತೈವ ಅಪನೀಲಿಯ ಮಾನತಯಾ ರಾತ್ರೇ ರಹಲ್ಯಾ ಶಬ್ದವಾಚ್ಯಾಯಾಃ । ಕ್ಷಯಾತ್ಮಕ ಜರಣ ಹೇತುತ್ವಾಜ್ಜೀರ್ಯತ್ಯಸ್ಮಾದನೇನೇವೋದಿತೇನ ವ್ಯೇತ್ಯಹಲ್ಯಾಜಾರ ಇತ್ಯುಚ್ಯತೆ, ನ ಪರಸ್ತ್ರೀ ವ್ಯಭಿಚಾರಾತ್ ॥೨॥**

"ಮತ್ತು 'ಇನ್ದ್ರಃ' ಎಂಬುದಕ್ಕೆ ಸಮಸ್ತತೇಜೋ ನಿಧಿತ್ವ ಮೂಲಕ ಸೂರ್ಯನೇ ಎಂಬರ್ಥವು; 'ಅಹಲ್ಯಾ' ಎಂಬ ಶಬ್ದಕ್ಕೆ ರಾತ್ರಿ ಎಂಬರ್ಥವು; ಏಕೆಂದರೆ 'ಅಹಃ' ಅಂದರೆ ದಿವಸವು (ಹಗಲು), ಈ ಹಗಲು ಅವಳಲ್ಲಿ (ರಾತ್ರಿಯಲ್ಲಿ) ಲೀನವಾಗುವುದು, ಅಥವಾ ಅವಳು (ರಾತ್ರಿಯು) ದಿವಸದಲ್ಲಿ ಅಡಗುವವಳು ( ಬೆರೆಯುವವಳು ): ಆದ್ದರಿಂದ ರಾತ್ರಿ ಎಂಬವಳನ್ನು ಜರಣ (ಕ್ಷೀಣ) ಮಾಡತಕ್ಕವನು ಸೂರ್ಯನಾದುದರಿಂದ ಅವನಿಗೆ ( ಇಂದ್ರಪದವಾಚ್ಯನಾದ ಸೂರ್ಯನಿಗೆ ) ಅಹಲ್ಯೆಯ ಜಾರನೆಂದು ಹೇಳಿರುತ್ತದೆ. ವಾಸ್ತವಿಕವಾಗಿ ಇಂದ್ರ (ಸೂರ್ಯನು) ಪರಸ್ತ್ರೀ ಸಂಭೋ

ಗಮಾಡಿದನೆಂದೇ ಅವನನ್ನು ಜಾರನೆಂದು ಹೇಳುವ ತಾತ್ಪರ್ಯವಿರುವುದಿಲ್ಲ."

ಇನ್ನು '**ಜಾತೋ ವ್ಯಾಸಸ್ತು ಕೈವರ್ತ್ಯಾ**' ಇತ್ಯಾದಿ ವಾಕ್ಯಗಳಿಂದ ಕೆಲವು ಋಷಿಗಳುತ್ಪತ್ತಿಯು ನೀಚಜಾತಿಯಿಂದಾಗಿರುವುದೆಂದು ತಿಳಿದುಬರುತ್ತದೆ. ಆದ್ದರಿಂದ 'ಜಾತಿಯು ಜನ್ಮಸಿದ್ಧವಾದುದಲ್ಲ' ವೆಂದು ಕೆಲವರು ನುಡಿಯುತ್ತಾರೆ, ಪೂರ್ವಪಕ್ಷಿಗಳಿಂದ ದಾಹೃತವಾದ '**ಋಷ್ಯಶೃಂಗಸ್ತ್ವ ಭೂನ್ಮೃಗ್ಯಾ**' ಎಂಬ ವಚನವೇ ಅವರ ನುಡಿಗಳ ಸಮಾಧಿಯಾಗಿರುತ್ತದೆ. ಆ ವಚನದಲ್ಲಿಯೇ ಶುಕಕುಶಾಗಸ್ತ್ಯರುಶುಕೀ ದರ್ಭಘಟಗಳಿಂದ ಜನಿಸಿದರೆಂದು ಪ್ರತಿಪಾದಿಸಲ್ಪಟ್ಟಿರುವುದಿಲ್ಲವೇ ? ಇದು ಹೇಗೆತಾನೇ ಸಂಘಟಿಸುವುದು ? ಮೃಗ ಪಕ್ಷಿತೃಣಗಳಲ್ಲಿ ಅನುರಕ್ತನಾಗುವನೆಂದೂ ಅವು ಮನುಷ್ಯರನ್ನು ಹಡೆದವೆಂದೂ ಹೇಳುವ ಮಾತಿನಲ್ಲಿ ಯಾರಾದರೂ ವಿಶ್ವಾಸವನ್ನಿಡಬಹುದೇ ? ದರ್ಭೆಯೂ ಘಟವೂ ಪ್ರಸವಧರ್ಮವುಳ್ಳವುಗಳೇ ? ಹೀಗೆ ಅನುಭವವಿರುದ್ಧವಾದ ಸಂಗತಿಯನ್ನು ನಮ್ಮ ಪೂರ್ವಪಕ್ಷಿಗಳು ಅದೇತು ನಂಬುವರು ? ಇನ್ನು, ಅವರು ತಿರ್ಯಗನುರಾಗವಾದರೂ ಬಾಧಕವಲ್ಲವೆಂದು ನುಡಿಯುವುದಕ್ಕಾದರೂ ಹೇಸದ ಮಾನಿಸರಾಗಿರಲಿಕ್ಕಿಲ್ಲವಷ್ಟೇ ! ನಮ್ಮ ಅಭಿಪ್ರಾಯವೇನೆಂದರೆ ಪ್ರಾಚೀನ ಋಷಿಗಳು ತಪೋನಿಧಿಗಳು. ಅವರು ಅತಿಮಾನುಷಕರ್ಮಗಳನ್ನು ಅಪ್ರತಿಹತವಾಗಿ ಆಚರಿಸಲು ಅಧಿಕಾರವನ್ನು ಪಡೆದವರಾಗಿದ್ದರು. ವರ್ತಮಾನಕಾಲದಲ್ಲಿ ನಾವು ಅಂತಹ ಕಾರ್ಯಗಳನ್ನು ಮಾಡಲಸಾಧ್ಯವೆಂಬುದನ್ನು ಅಂಗೀಕರಿಸದಿರುವ ಪರ್ಯಂತವೂ ಪೂರ್ವಪಕ್ಷ್ಯುದಾಹೃತ ಪ್ರಮಾಣವನ್ನು ಅಸಾರ್ಥಕವಾದುದೆಂದೇ ಹೇಳತಕ್ಕದ್ದು.

ಮತ್ತು, ಗುಣಕರ್ಮಾನುರೋಧದಿಂದೇ ಜಾತಿಯು ಸಿದ್ಧಿಸುವುದೆಂಬಭಿಪ್ರಾಯವನ್ನು ಅಂಗೀಕರಿಸಿ ಬ್ರಹ್ಮಜ್ಞಾನಿಯು ಬ್ರಾಹ್ಮಣ್ಯವುಳ್ಳವನೆಂದೂ, ಯುದ್ಧದಿಂದಾತ್ಮರಕ್ಷಣಪ್ರವೀಣನಾದವನು ಕ್ಷತ್ರಿಯತ್ವವುಳ್ಳವನೆಂದೂ, ಕೃಷಿವಾಣಿಜ್ಯಾದಿಗಳಲ್ಲಿ ವ್ಯಾಪೃತನಾದವನು ವೈಶ್ಯತ್ವವುಳ್ಳವನೆಂದೂ, ಶುಶ್ರೂಷೆಯನ್ನು ಮಾಡುವಾತನು ಶೂದ್ರತ್ವವುಳ್ಳವನೆಂದೂ ಹೇಳುವುದರಲ್ಲಿ ದೋಷವೇನು ? ಎಂಬುದಾಗಿ ಪೂರ್ವಪಕ್ಷಿಗಳು ನುಡಿವಲ್ಲಿಯೂ ಅನೇಕ ಆಕ್ಷೇಪಗಳು ಸಂಭವಿಸುತ್ತವೆ. ಹೇಗೆಂದರೆ, ಒಬ್ಬ ವ್ಯಕ್ತಿಯೇ ಬ್ರಹ್ಮಜ್ಞಾನ ಸಮರವ್ಯಾಪಾರ ಕೃಷಿವ್ಯಾಪಾರವುಳ್ಳವನಾಗಿರು

ವಾತನು ಯಾವ ಯಾವ ಜಾತಿಯನ್ನವಲಂಬಿಸಿ ವ್ಯವಹರಿಸತಕ್ಕದ್ದು ? ಬ್ರಹ್ಮಜ್ಞಾನವಿರುವುದರಿಂದ ಅದನ್ನು ಪುರಸ್ಕರಿಸಿ 'ಬ್ರಾಹ್ಮಣ' ನೆಂದು ಹೇಳಲ್ಪಡುವನಾದರೆ, ಕ್ಷತ್ರಿಯವ್ಯಾಪಾರವಾದ ಯುದ್ಧಮಾಡುವಿಕೆಯೂ, ವೈಶ್ಯವ್ಯವಹಾರವೆನಿಸುವ ಕೃಷ್ಯಾದಿಗಳೂ ಅವನಲ್ಲಿ ಕಂಡುಬರುವುದರಿಂದ ಅವನೊಬ್ಬನನ್ನೇ ಮೂರು ಜಾತಿಶಬ್ದಗಳಿಂದ ['ಬ್ರಾಹ್ಮಣ ಕ್ಷತ್ರಿಯ ವೈಶ್ಯ' ಎಂಬ ಶಬ್ದಗಳಿಂದ] ಕರೆಯಬೇಕಾಗುವುದಲ್ಲವೇ ? ಇದಾದರೋ ಶಾಸ್ತ್ರಕ್ಕೂ ಲೋಕಾಚಾರಕ್ಕೂ ಒಪ್ಪಿಗೆಯಾದುದೇ ಹೇಗೆಂಬುದನ್ನು ಪರಾಮರ್ಶಿಸತಕ್ಕದ್ದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ನಾಮಗಳ ಅಂತ್ಯದಲ್ಲಿ ಕ್ರಮವಾಗಿ ಶರ್ಮ, ವರ್ಮ, ಗುಪ್ತವೆಂಬ ಪದಗಳನ್ನು ಜೋಡಿಸಿ ನುಡಿಯಬೇಕೆಂಬ ಒಂದು ವಿಧಿಯಿರುವುದು. ಪೂರ್ವೋಕ್ತ ರೀತಿಯಿಂದ ಪರಿಭಾವಿಸಿದರೆ ಜಾತಿತ್ರಯ ಧರ್ಮವುಳ್ಳ ಪುರುಷನ ಹೆಸರಿನ ಕೊನೆಯಲ್ಲಿ ಯಾವ ಪದವನ್ನು ಪ್ರಯೋಗಿಸತಕ್ಕದ್ದೆಂಬ ವಿಷಯದಲ್ಲಿ ಅದಾವನು ನಿರ್ಧರಿಸಿ ಹೇಳಬಲ್ಲನ್ನು ? ಈ ವಿಧಗಳಾದ ಆಕ್ಷೇಪಗಳು ಅನೇಕವಾಗಿರುತ್ತವೆ. ಇವುಗಳಿಗುತ್ತರವೇನು ? ಪ್ರಮಾಣಶೂನ್ಯವೂ ಕುತರ್ಕಪ್ರಚುರವೂ ಆದ ಅಪಲಾಪವು ಸಮಂಜಸವಾದ ಸಮಾಧಾನವೆನಿಸಬಹುದೇ ? ಆದ್ದರಿಂದ ಜಾತಿಯ ಜನ್ಮಸಿದ್ಧತ್ವಾಂಗೀಕಾರದ ಹೊರತು ಗತ್ಯಂತರವೇ ಇಲ್ಲ.

ಕುರುಕುಲಪ್ರದೀಪಾಯಮಾನನಾದ ಭೀಷ್ಮಾಚಾರ್ಯನು ಸರ್ವಜ್ಞನಾದರೂ ತಾನು ಬ್ರಾಹ್ಮಣನೆಂದು ವ್ಯವಹರಿಸಲಿಲ್ಲ, ಮತ್ತು—

**ಮುಖಾಗ್ರೇ ಚತುರೋ ವೇದಾಃ ಕರಾಗ್ರೇಸಶರಂ ಧನುಃ**
**ಉಭಯೋರ್ದ್ರೋಣಸಾಮರ್ಥ್ಯಂ ಶಾಪಾದಪಿಶರಾದಪಿ ॥**

ಎಂಬಂತೆ ಬ್ರಾಹ್ಮಣಾತ್ಮಜನಾದ ದ್ರೋಣಾಚಾರ್ಯನು ಬ್ರಹ್ಮಜ್ಞಾನಿಯಾಗಿದ್ದರೂ ಕ್ಷತ್ರೋಚಿತವಾದ ಯುದ್ಧಕರ್ಮದಲ್ಲಿಯೇ ತೊಡಗಿದ್ದನು; ಆದರೂ ಅವನು ತನ್ನನ್ನು ಕ್ಷತ್ರಿಯನೆಂದು ಹೇಳಿಕೊಳ್ಳಲಿಲ್ಲ. ತನ್ನಜನ್ಮಸಿದ್ಧವಾದ ಜಾತಿಯನ್ನಾಶ್ರಯಿಸಿಯೇ 'ಬ್ರಾಹ್ಮಣ' ನೆಂದು ವ್ಯವಹರಿಸಿದನು. ಅಲ್ಲಿ '**ಅಪಿಚಾಹಂ ಪುರಾವಿಪ್ರೈರ್ಗರ್ಹಿತೋ ಬ್ರಾಹ್ಮಣೋವಸೇ**' ಎಂಬುದಾಗಿ ದ್ರೋಣಾಚಾರ್ಯನು ಕ್ಷತ್ರಿಯ ವ್ಯಾಪಾರಾವಲಂಬನದಲ್ಲಿಯೂ ತನ್ನನ್ನು ಬ್ರಾಹ್ಮಣನೆಂದೇ ಪ್ರತಿಪಾದಿಸುವುದು ಪರಮಪ್ರಮಾಣವಾಗಿದೆ. ಈ ರೀತಿಯಾಗಿ ಯಾವುದಾದರೊಂದು ಕರ್ಮವು

ಮಾಡಲ್ಪಡುತ್ತಿದ್ದರೂ ಸ್ವಜನ್ಮಸಿದ್ಧವಾದ ಜಾತಿಯೇ ಹೇಳಲ್ಪಡುವುದು ನ್ಯಾಯವಾದುದೆಂಬ ವಿಷಯದಲ್ಲಿ ಇಂತಹ ನಿದರ್ಶನಗಳು ಬಹಳವಾಗಿವೆ. ಆದ್ದರಿಂದ ಜಾತಿಯು ಗುಣಕರ್ಮಾನುಸಾರವಾದುದೆಂಬ ವಾದವು ಪ್ರಮಾಣಕ್ಕೂ ಯುಕ್ತಿಗೂ ಲೋಕಾಚಾರಕ್ಕೂ ಸರ್ವಥಾ ವಿರುದ್ಧವಾದುದೆಂದರಿಯತಕ್ಕದ್ದು.

ಮತ್ತು ಜಾತಿಯು ಜನ್ಮಸಿದ್ಧವಾದುದಲ್ಲವೆಂಬಭಿಪ್ರಾಯವನ್ನು ಬೋಧಿಸುವುದಕ್ಕಾಗಿಯೇ :—

ಜನ್ಮನಾ ಜಾಯತೇ ಶೂದ್ರಃ ಕರ್ಮಣಾದ್ವಿಜ ಉಚ್ಯತೇ ।
ವಿದ್ಯಯಾ ಯಾತಿ ವಿಪ್ರತ್ವಂ ಬ್ರಹ್ಮವಿದ್ಬ್ರಾಹ್ಮಣೋ ಭವೇತ್ ॥

ಎಂಬೀ ಮುಂತಾದ ವಾಕ್ಯಗಳು ಪ್ರವೃತ್ತವಾಗಿರುವುವಲ್ಲವೇ ? ಎಂಬ ನುಡಿಗೆ ಮಾರುತ್ತರವೇನೆಂದರೆ, ಈ ಮೇಲಿನ ಶ್ಲೋಕವು ಜಾತಿಯು ಗುಣಕರ್ಮಸಿದ್ಧವಾದುದೆಂಬಾಶಯವನ್ನು ಸಮರ್ಥಿಸುವುದಿಲ್ಲ. ಮತ್ತೇನೆಂದರೆ ಬ್ರಾಹ್ಮಣವರ್ಣದಲ್ಲಿ ಜನಿಸಿದ ಮಾತ್ರದಿಂದೇ ತನ್ನನ್ನು ಕೃತಕೃತ್ಯನನ್ನಾಗಿ ಭಾವಿಸಿಕೊಳ್ಳಬಾರದು. ಬ್ರಾಹ್ಮಣ್ಯಪರಿಪೋಷಕವಾದ ಶರೀರಸಂಸ್ಕಾರವನ್ನೂ ವೇದಾಧ್ಯಯನವನ್ನೂ ಬ್ರಹ್ಮಜ್ಞಾನವನ್ನೂ ಪಡೆದುಕೊಳ್ಳಲುದ್ಯುಕ್ತನಾಗಬೇಕೆಂದೂ, ಶರೀರಸಂಸ್ಕಾರಶೂನ್ಯನು ಶೂದ್ರನಂತೇ ಭಾವಿಸಲ್ಪಡುವನೆಂದೂ, ಬೋಧಿಸುವುದಕ್ಕೋಸ್ಕರವೇ ಅಲ್ಲದೆ ಜಾತಿಯ ವಿಪರ್ಯಾಸವನ್ನು ಬೋಧಿಸಲು ಪ್ರವೃತ್ತವಾದುದಲ್ಲ.

"ಅಸ್ಯಾಕಾರ ಸಮುತ್ಪನ್ನಾ ಮಣಿಜಾತಿರ ಸಂಸ್ಕೃತಾ ।
ಜಾತರೂಪೇಣ ಕಲ್ಯಾಣಿ ನಹಿ ಸಂಯೋಗಮರ್ಹತಿ ॥"

( ಮಾಲ. ನಾಟ. ೫ )

ಎಂಬುದಾಗಿರುವ ಕಾಲಿದಾಸೋಕ್ತಿಯು ನಮ್ಮ ಅಭಿಪ್ರಾಯಕ್ಕೆ ಬಹ್ವಂಶದಿಂದ ಉಪೋದ್ಬಲಕವಾಗಿದೆ.

ಬ್ರಾಹ್ಮಣ್ಯಪರಿಪೂರ್ತಿಯು ಸಂಸ್ಕಾರದಿಂದೇ ಅಲ್ಲದೆ ಬೇರೊಂದರಿಂದ ಸಂಭವಿಸದೆಂಬಾಶಯವು ಯಾಜ್ಞವಲ್ಕ್ಯಸ್ಮೃತಿಯಲ್ಲಿ:—

ಚಿತ್ರಕರ್ಮ ಯಥಾನೇಕೈರಂಗೈರುನ್ಮೀಲ್ಯತೇಪೃಥಕ್ ।
ಬ್ರಾಹ್ಮಣ್ಯಮಪಿತದ್ವತ್ಸ್ಯಾತ್ಸಂಸ್ಕಾರೈರ್ವಿಧಿಪೂರ್ವಕೈಃ ॥

ಎಂಬುದಾಗಿ ಉಪಮಾನದೊಡನೆ ಹೇಳಲ್ಪಟ್ಟಿದೆ. ಅದೇ ಮೇರೆಗೆ ಇಲ್ಲಿಯೂ ಸಂಸ್ಕಾರಶಬ್ದಿತಗಳಾದುಪನಯನಾದಿಗಳಿಂದ ದ್ವಿಜತ್ವವು ಸಿದ್ಧಿಸುವುದೆಂದು ಹೇಳಲ್ಪಡುವುದು. ಸಂಸ್ಕಾರದಿಂದಲೂ ವಿದ್ಯೆಯಿಂದಲೂ ಯುಕ್ತನಾದ ಬ್ರಾಹ್ಮಣನಾವನೋ ಅವನಿಗೆ ತಕ್ಕ ಗೌರವವಾದ ಹೆಸರನ್ನು ಕೊಡುವುದು ವೈದಿಕಶಾಸ್ತ್ರಪದ್ಧತಿಯುಂಟು. ಸಂಸ್ಕಾರಸಂಸ್ಕೃತನನ್ನು ದ್ವಿಜನೆಂದೂ ವೇದಾಧ್ಯಯನ ಮಾಡಿದವನನ್ನು ವಿಪ್ರನೆಂದೂ ಹೀಗೆ ಯೋಗ್ಯತಾನುಗುಣವಾದ ನಾಮಧೇಯದಿಂದ ಗೌರವಿಸುವುದು ಶಾಸ್ತ್ರಸಿದ್ಧವು. 'ಜನ್ಮನಾ ಜಾಯತೇ ಶೂದ್ರಃ' ಎಂಬ ಶ್ಲೋಕದಲ್ಲಿ ಯಾವರೂ ಇದೇ ಅರ್ಥವು ಹೇಳಲ್ಪಟ್ಟಿದೆ. ಹಾಗೂ, 'ಸಂಸ್ಕಾರಾ ದ್ವಿಜ ಉಚ್ಯತೆ' ಎಂಬಲ್ಲಿ 'ದ್ವಿಜ' ಶಬ್ದವು 'ಮಾತುರಗ್ರೇऽಧಿಜನನಂ ದ್ವಿತೀಯಂ ಮೌಂಜಿಬಂಧನೇ' ಎಂಬ ಮನುವಚನಾನುಸಾರವಾಗಿ ಜನನೋಪನಯನ ಪ್ರಯುಕ್ತವಾದ ಜನ್ಮದ್ವಯವುಳ್ಳವನೆಂಬರ್ಥಪ್ರದವಾಗಿದೆ. ಈ ದ್ವಿಜಭಾವವು ಉಪನಯನಾಧಿಕಾರಿಗಳಾದ ತ್ರೈವರ್ಣಿಕರಲ್ಲಿಯೇ ಸಿದ್ಧಿಸುವುದು. ನಾಲ್ಕನೆಯವನಾದ ಶೂದ್ರನಿಗೆ ಉಪನಯನವಿಲ್ಲದುದರಿಂದ ಅವನನ್ನು ಕುರಿತು 'ದ್ವಿಜ' ನೆಂಬ ವ್ಯಪದೇಶವಿರದು. ಆದರೆ ಮಾತೆಯಿಂದುದಯಿಸಿದ ಪ್ರಯುಕ್ತವಾದ ಜನ್ಮ ಮಾತ್ರದಿಂದೇ ಶೂದ್ರನಿಗೆ ಏಕಜಾತಿಯು ಹೇಳಲ್ಪಡುವುದು. ಇದೇ ಅರ್ಥವನ್ನು ಸ್ಮೃತಿಕಾರರು—

ಬ್ರಾಹ್ಮಣಃ ಕ್ಷತ್ರಿಯೋವೈಶ್ಯಸ್ತ್ರಯೋವರ್ಣಾದ್ವಿಜಾತಯಃ ।
ಚತುರ್ಥ ಏಕಜಾತಿಸ್ತು ಶೂದ್ರೋऽನಾಸ್ತಿತುಪಂಚಮಃ ॥

ಎಂದು ಪ್ರತಿಪಾದಿಸುತ್ತಾರೆ. ಹಾಗೂ, 'ಅಶೂದ್ರಾಣಾಮದುಷ್ಟಕರ್ಮಣಾಮುಪನಯನಮ್' ಎಂಬೀ ಮುಂತಾದ ಪ್ರಮಾಣಗಳಿಂದ ದ್ವಿಜಭಾವಾಪಾದಕಗಳಾದ ಉಪನಯನಾದಿ ಸಂಸ್ಕಾರಗಳು ಶೂದ್ರನಿಗಿರುವುದಿಲ್ಲವೆಂಬುದೂ ನಿರ್ಧರಿಸಲ್ಪಟ್ಟಿದೆ. ಈ ವಿಷಯದಲ್ಲಿ ಯಾವ ಮುನಿಯ ಮತಭೇದವೂ ಇರುವುದಿಲ್ಲ. ಶಾಸ್ತ್ರಸ್ಥಿತಿಯು ಇಂತಿರಲು ಪೂರ್ವಪಕ್ಷಿಗಳು 'ಜನ್ಮನಾ ಜಾಯತೆ' ಎಂಬ ಪದ್ಯವು ಉಪನಯನಾದಿಸಂಸ್ಕಾರಾರ್ಹತಾ ಸೂಚಕವಾದರ್ಥವುಳ್ಳುದೆಂದು ನುಡಿವುದು ಪೂರ್ವಾಪರವಿರೋಧಾತ್ಮಕವಾಗಿದೆ. ಅವರು 'ಉಪನಯನಸಕ್ಕಿಂತ ಮುಂಚೆ ಸರ್ವರೂ ಶೂದ್ರರೇ' ಎಂಬರ್ಥವನ್ನು ಸ್ವಚ್ಛಂದವಾಗಿ ಕಲ್ಪಿಸುತ್ತಾರಲ್ಲವೇ?

ಹಾಗಾದರೆ ಅದಕ್ಕೂ ಪೂರ್ವದಲ್ಲಿ ಬ್ರಾಹ್ಮಣಕ್ಷತ್ರಿಯಾದಿ ಭೇದಸದ್ಭಾವ ವನ್ನು ಪ್ರತಿಪಾದಿಸುತ್ತಿರುವ ಶ್ರುತಿಸ್ಮೃತಿವಚನಗಳಿಗೆ ವಿರೋಧವು ಸಂಭ ವಿಸುವುದರಿಂದ ಅದರ ಪರಿಹಾರವೆಂತು ? ಬ್ರಾಹ್ಮಣಾದಿಗಳ ಉಪನ ಯನಕಾಲವು ವೇದದಲ್ಲಿ ಹೀಗೆ ನಿರ್ಧರಿಸಲ್ಪಟ್ಟಿರುವುದು— '**ಗರ್ಭಾ ಷ್ಟಮೇ ಬ್ರಾಹ್ಮಣಮುಪನೀಯತ, ಗರ್ಭೈಕಾದಶೇರಾಜನ್ಯಂ, ಗರ್ಭದ್ವಾದಶೇವೈಶ್ಯಂ**' ಇಲ್ಲಿ ಪೂರ್ವಪಕ್ಷಿಭಾಷಿತಾನುರೋಧದಿಂದ ಅದಕ್ಕೂ ಮುಂಚೆ ಸರ್ವರೂ ಶೂದ್ರರೇ ಆಗಿದ್ದಪಕ್ಷದಲ್ಲಿ ಆ ಆ ಜಾತಿ ಯನ್ನು ಪೃಥಕ್ಕಾಗಿ ನಿರ್ದೇಶಿಸಿ ಒಂದೊಂದು ಜಾತಿಯ ಬೇರೆ ಬೇರೆ ಕಾಲವನ್ನು ವಿಧಿಸುವುದು ಅದೆಂತು ಸಂಘಟಿಸುವುದು ? ಅವರ ಅಭಿ ಪ್ರಾಯಾನುಸಾರವಾಗಿ ಸಂಸ್ಕಾರವೂ ಬ್ರಹ್ಮಜ್ಞಾನವೂ ಸಿದ್ಧಿಸಿದ ತರು ವಾಯವೇ ಬ್ರಾಹ್ಮಣಾದಿ ಜಾತಿಗಳು ಸಿದ್ಧಿಸಬಹುದಲ್ಲವೇ ? ವೇದಾಗ ಮಗಳು ಸಂಸ್ಕಾರಲೇಶಶೂನ್ಯನೂ ಗುಣಗಂಧವಿಧುರನೂ ಆದ ಕುಮಾ ರನ ವಿಷಯದಲ್ಲಿ ಬ್ರಾಹ್ಮಣಾದಿ ಜಾತಿಶಬ್ದಗಳಿಂದೇ ಪ್ರತಿಪಾದಿಸುವು ದನ್ನು ದುರಭಿನಿವೇಶವನ್ನುಳಿದು ಪರಾಮರ್ಶಿಸಿದರೆ ಪೂರ್ವಪಕ್ಷಿಗಳಿಂದ ಹೇಳಲ್ಪಡುವ ಅರ್ಥವು ಅಬದ್ಧವಾದುದೆಂದೇ ತೋರದಿರದು.

ಪೂರ್ವೋಕ್ತಪ್ರಮಾಣಸ್ಥವಾದ '**ಜನ್ಮನಾ ಜಾಯತೆ ಶೂದ್ರಃ**' ಎಂಬುದರ ಸಮಾಧಾನವಾದರೋ ಅತೀವ ಸುಕರವಾಗಿದೆ. ಬ್ರಾಹ್ಮಣ ಸಮಾಜದಲ್ಲಿ ಯಾವನಾದರೊಬ್ಬನು ಬ್ರಾಹ್ಮಣೋಚಿತವಾದ ಕರ್ಮಗ ಳನ್ನನುಷ್ಠಿಸದೆ ಪಾಮರಾಚಾರವುಳ್ಳವನಾಗಿರುವನೋ ಅವನನ್ನು ಕುರಿತು ಸರ್ವರೂ ಶೂದ್ರನಿವನೆಂದು ಅಣಕವಾಡುತ್ತಾರೆ, ಇದರ ತಾತ್ಪರ್ಯ ವೇನು ? ಅವನು ಶೂದ್ರಜಾತಿಯಲ್ಲಿಯೇ ಹುಟ್ಟಿದವನೆಂಬಭಿಪ್ರಾಯ ದಿಂದ ಹಾಗೆ ಹೀಯಾಳಿಸಲ್ಪಡುವನೇ ? ಇಲ್ಲ. ಹೇಗೆ ಶೂದ್ರಯೋನಿ ಯಲ್ಲಿ ಹುಟ್ಟಿದವನು ವೈದಿಕಕರ್ಮಾನುಷ್ಠಾನಹೀನನಾಗಿರುವನೋ ಹಾಗೇ ಇವನಾದರೂ ಇರುತ್ತಾನೆ; ಇಷ್ಟುಮಾತ್ರದಿಂದೇ ಇವನನ್ನು ಶೂದ್ರನೆಂಬ ಶಬ್ದದಿಂದಲ್ಲಗಳೆಯುತ್ತೇವೆ. ಇಲ್ಲಿ ಶೂದ್ರನಂತಿರುವನೆಂಬ ವ್ಯವಹಾರ ಪ್ರತಿನಿಧಿತ್ವದಿಂದ ಶೂದ್ರ ಶಬ್ದವು ವ್ಯವಹರಿಸಲ್ಪಡುತ್ತದೆ. '**ದೇವದತ್ತಃ ಸಿಂಹವದಸ್ತಿ**' '**ಋಷಿರಗ್ನಿವದಸ್ತಿ**' ಎಂದು ಹೇಳಲ್ಪಡುವಲ್ಲಿ ದೇವ ದತ್ತನು ಸಿಂಹನೇ, ಋಷಿಯು ಅಗ್ನಿಯೇ ಎಂಬ ವ್ಯಪದೇಶವಿರು ವಂತೇ ಮೇಲ್ಕಂಡ ಪ್ರಮಾಣಶ್ಲೋಕದಲ್ಲಿಯೂ ಜನನಕುಲದೊಳು ಶೂದ್ರನಂತಿರುವನೆಂದು ಹೇಳುವುದಕ್ಕಾಗಿಯೇ 'ಶೂದ್ರ' ನೆಂಬ ವ್ಯಪದೇ

ಶವಿದೆ. ಆದರೆ ಈ ಶ್ಲೋಕವು ಅವನನ್ನು ಶೂದ್ರಜಾತಿಯವನೆಂದು ಹೇಳಲು ತೊಡಗಿರುವುದಿಲ್ಲ.

ಬ್ರಾಹ್ಮಣಾದಿ ಜಾತಿಯವರಲ್ಲಿ ಜನಿಸಿದವರಿಗೆ ಉಪನಯನಕ್ಕಿಂತ ಮುಂಚೆ ಕರ್ಮಾನುಷ್ಠಾನವೂ ಆಹಾರಾದಿ ನಿರ್ಬಂಧವೂ ಅನಾವಶ್ಯಕ ವಾದುದೆಂಬುದಾಗಿ ಧರ್ಮ ಸೂತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದರಿಂದ ಅವರ ಸ್ವಾಚ್ಛಂದ್ಯವು ಅನುಮತವಾಗಿದೆ. ಹೀಗೆ ಸ್ವಾಚ್ಛಂದ್ಯದಿಂದ ವರ್ತಿಸುವವರೇ ಲೋಕದಲ್ಲಿಯೂ ಶಾಸ್ತ್ರದಲ್ಲಿಯೂ 'ಶೂದ್ರ'ರೆಂಬ ಔಪ ಚಾರಿಕ ಶಬ್ದದಿಂದ ಕರೆಯಲ್ಪಡುತ್ತಾರೆ. ಈ ಅಭಿಪ್ರಾಯವು ಬೋಧಾ ಯನ ಧರ್ಮ ಸೂತ್ರದಲ್ಲಿ (೧-೨-೭)—

ನಾಸ್ಯ ಕರ್ಮ ನಿಯಚ್ಛನ್ತಿ ಕಿಂಚಿದಾಮೌಂಜಿ ಬಂಧನಾತ್ ।
ವೃತ್ತ್ಯಾ ಶೂದ್ರಸಮೋ ಹ್ಯೇಷ ಯಾವದ್ವೇದೇಷು ಜಾಯತೇ ॥

ಎಂಬುದಾಗಿ ಹೇಳಲ್ಪಟ್ಟಿದೆ. ಈ ಸೂತ್ರವ್ಯಾಖ್ಯಾನವು ಮನನೀಯವಾ ಗಿರುವುದರಿಂದ ಅದರಲ್ಲಿ ಬಹ್ವಂಶವನ್ನು ನಾವು ಇಲ್ಲಿ ಎತ್ತಿಬರೆಯು ತ್ತೇವೆ.— [ಯಾವತಾ ಸೋಽಪಿ ತ್ರೈವರ್ಣಿಕ ಏವ! ಸತ್ಯಂ, ತಥಾಪಿ 'ವೃತ್ತ್ಯಾ ಶೂದ್ರಸಮೋಹ್ಯೇಷಃ' ವೃತ್ತಿರ್ವರ್ತನಮಾಚಾರಃ। ವೇದ ಜನನಮುಸ್ಯೋಪನಯನಂ । ನನುಪ್ರಾಗುಪನಯನಾಚ್ಛೂದ್ರ ಸಾಮ್ಯೇ ಪಾನಾದಿಷ್ವಪ್ಯದೋಷಸ್ಸ್ಯಾತ್ ? ನೈತದೇವಂ; 'ಶೂದ್ರ ಸಮ ಇತ್ಯತಿದೇಶಾನ್ನಸ್ವಯಂ ಶೂದ್ರಃ, ತತಶ್ಚ ನ ಸ್ವಜಾತ್ಯಾ ಶ್ರಯ ಧರ್ಮನಿವೃತ್ತಿರ್ಭವತಿ, ಜಾತ್ಯಾಶ್ರಯಶ್ಚ ಮಧುಪಾನಾದಿ ಪ್ರತಿಷೇಧಃ । ]

ಈ ಮೇಲಿನ ಸೂತ್ರವಾಕ್ಯದಿಂದ ಅನುಪನೀತರಿಗೆ ಶೂದ್ರಸಾಮ್ಯವು ಸುಸ್ಪಷ್ಟವಾಗಿ ಹೇಳಲ್ಪಟ್ಟಿರುವುದು. ಹಾಗೂ ಉಪನಯನಕ್ಕಿಂತ ಮುಂಚೆ ಆಚಾರಾಹಾರ ನಿರ್ಬಂಧವಿಲ್ಲದುದರಿಂದ ಅನುಪನೀತನಾದ ದ್ವಿಜಕು ಮಾರನು ಮದ್ಯವನ್ನು ಕುಡಿದರೂ ದೋಷವಿಲ್ಲವೇ ? ಎಂಬಾಕ್ಷೇಪ ವನ್ನು ಗೌತಮನು— "ನಿತ್ಯಂ ಮದ್ಯಂ ಬ್ರಾಹ್ಮಣಸ್ಯ" ಎಂಬ ಮುಂದಿನ ಸೂತ್ರದಿಂದ ಬ್ರಾಹ್ಮಣನಿಗೆ ಸುರಾಪಾನವು ಯಾವಾಗಲೂ ತ್ಯಾಜ್ಯವಾದುದೆಂದು ನಿರಸನಗೊಳಿಸಿದ್ದಾನೆ. ಉಪನಯನಕ್ಕಿಂತ ಮುಂಚೆ ಸರ್ವರೂ ಶೂದ್ರರೇ ಆಗಿದ್ದಪಕ್ಷದಲ್ಲಿ ಈ ಸೂತ್ರದಲ್ಲಿರುವ 'ಬ್ರಾಹ್ಮ ಣಸ್ಯ' ಎಂಬ ವಾಕ್ಯಕ್ಕೆ ಬದಲಾಗಿ 'ಶೂದ್ರಸ್ಯ' ಎಂದು ಹೇಳಲ್ಪಡಬೇ ಕಾಗಿದ್ದಿತಲ್ಲವೇ ? ಹಾಗೆ ಹೇಳಲ್ಪಡದೆ ಕೇವಲ ಏಕಜಾತೀಯನಾಮ

ವನ್ನು ನಿರ್ದೇಶಿಸಿ ಆ ಜಾತಿಗೆ ಸುರಾಪಾನವು ದೋಷಾರ್ಹವೆಂದು ಹೇಳಲ್ಪಡುವುದರಿಂದ ಅದಕ್ಕೂ ಮುಂಚೆಯಾದರೂ ಜಾತಿಭೇದವಿದ್ದಿ ತೆಂಬುದು ನಿರ್ವಿವಾದ ಸಿದ್ಧವಾಗುವುದು. ಆದ್ದರಿಂದ 'ಜಾತಿಯು ಕರ್ಮದಿಂದ ಸಿದ್ಧಿಸುವುದು. ಜನ್ಮದಿಂದಲ್ಲ'ವೆಂಬ ನುಡಿಯು ಆಪಾತ ರಮಣೀಯವಾಗಿದೆ.

ಯಾರಿಗಾದರೂ ಇದೇ ಶರೀರದಲ್ಲಿಯೇ ಜಾತಿವಿಪರ್ಯಾಸವು ಸಂಭವಿಸದೆಂಬ ವಿಷಯದಲ್ಲಿ ವೈದಿಕಸಾಹಿತ್ಯದೊಳಗನೇಕ ಉದಾಹರಣೆಗಳುಂಟು. ಅವುಗಳಲ್ಲಿ ಸರ್ವತ್ರ ವಿದಿತವಾದ ರಾಮಾಯಣವೆಂಬ ಐತಿಹಾಸಿಕಗ್ರಂಥದೊಳಗಿನ ಪ್ರಸ್ತಾಪವನ್ನಿಲ್ಲಿ ಉದಾಹರಣೆಗಾಗಿ ತೆಗೆದು ಕೊಳ್ಳುವಾ. ಒಂದಾನೊಂದು ಸಮಯದಲ್ಲಿ ದಶರಥನು ಸರಯೂ ನದೀ ತೀರ್ಥದಿಂದ ಕೊಡವನ್ನು ತುಂಬುತ್ತಲಿದ್ದ ಒಬ್ಬಾನೊಬ್ಬ ಋಷಿ ಯನ್ನು ಕಾಣದೆ ಗಜಭ್ರಾಂತಿಯಿಂದ ಅವನನ್ನು ಬಾಣದಿಂದ ಹೊಡೆದು ನೆಲಕ್ಕುರುಳಿಸಿ ಬಳಿಕ ಅವನ ಆರ್ತಧ್ವನಿಯನ್ನು ಕೇಳಿ ಹತ್ತಿರಕೆ ಬಂದು ಋಷಿಯೆಂದರಿದು ಖೇದದಿಂದ ಪಶ್ಚಾತ್ತಾಪವುಳ್ಳವನಾಗಲು ಆ ಋಷಿಯು ಸ್ವಲ್ಪ ಪ್ರಜ್ಞೆಯುಳ್ಳವನಾಗಿ ಕಣ್ಣೆರೆದು ದಶರಥನನ್ನವ ಲೋಕಿಸಿ:—

**ನದ್ವಿಜಾತಿರಹಂ ರಾಜನ್ ! ಮಾಭೂತ್ತೇ ಮನಸೋ ವ್ಯಥಾ ।**
**ಬ್ರಹ್ಮಹತ್ಯಾಕೃತಂ ಪಾಪಂ ಹೃದಯಾದಪನೀಯತಾಮ್ ॥**

ಎಂಬ ವಾಕ್ಯಗಳಿಂದ ಅರಸನನ್ನು ಸಮಾಧಾನಪಡಿಸಿದನು. ವಾಲ್ಮೀಕಿಮಹರ್ಷಿಯು ಅದಾವ ಪುಣ್ಯಾತ್ಮನನ್ನು 'ಮುನಿಯು' 'ಋಷಿಯು' ಎಂಬ ಶಬ್ದಗಳಿಂದ ವರ್ಣಿಸುತ್ತಿಹನೋ ಅಂತಪ್ಪ ತಪೋಜ್ಞಾನಾದಿ ಸಂಪನ್ನನಾದರೂ '**ನದ್ವಿಜಾತಿರಹಂ**' '**ಬ್ರಹ್ಮಹತ್ಯಾಕೃತಂ ಪಾಪಂ ಹೃದಯಾದಪನೀಯತಾಮ್**' ಎಂದು ಅದೇಕೆ ನುಡಿದನು ? ಬ್ರಾಹ್ಮ ಣ್ಯಪ್ರಾಪಕ ಗುಣಕರ್ಮಗಳಿರುತ್ತಿದ್ದರೂ ಅವನು ತನಗೆ ಬ್ರಾಹ್ಮಣ್ಯವು ಪ್ರಾಪ್ತವಾಗಿರುವುದೆಂದು ತಿಳಿಯಲಿಲ್ಲವಷ್ಟೇ ? ಆದ್ದರಿಂದ ಒಂದೇ ಶರೀ ರದಲ್ಲಿ ಯಾವನ ಜಾತಿಯಾದರೂ ವಿಪರ್ಯಾಸವನ್ನು ಹೊಂದುವದಿ ಲ್ಲವೆಂದು ಸಿದ್ಧವಾಗುವುದು.

ಹೇಗೆ ಸತ್ಕರ್ಮಗಳಿಂದ ಶೂದ್ರನ ಜಾತಿಯು ಅದೇ ಶರೀರದಲ್ಲಿಯೇ ಬದಲಾವಣೆಯನ್ನು ಹೊಂದದೋ ಹಾಗೇ ದುಷ್ಕರ್ಮಗಳಿಂದ ಉತ್ತಮ ಜಾತಿಯ ವಿಪರ್ಯಾಸವು ವರ್ತಮಾನಶರೀರದಲ್ಲಿ ಸಂಭವಿಸದು.

'ಉತ್ಕರ್ಷಂಚಾಪಕರ್ಷಂಚ' 'ಬ್ರಾಹ್ಮಣಃ ಶೂದ್ರತಾಮಪಿ' ಇತ್ಯಾದಿ ವಚನಾನುಸಾರವಾಗಿ ಹೇಗೆ ಗುಣಶಾಲಿಗಳಾದ ನಿಕೃಷ್ಟಜಾತಿಯವರಿಗಾದರೂ ಒಂದೇ ಜನ್ಮದಲ್ಲಿ 'ದುರ್ಲಭಾಜಾತಿರುತ್ತಮಾ' ಎಂದು ಹೇಳಲ್ಪಟ್ಟಿರುವುದೋ ಹಾಗೇ ಹೀನಕರ್ಮಗಳನ್ನಾಚರಿಸುವ ಬ್ರಾಹ್ಮಣರಿಗಾದರೂ ಆ ಕರ್ಮಗಳ ಫಲರೂಪವಾದ ಅಧಮ ಜಾತಿಯು ಅನ್ಯ ಶರೀರದಲ್ಲಿಯೇ ಸಂಭವಿಸುವದಲ್ಲದೆ ವರ್ತಮಾನ ಶರೀರದಲ್ಲಿ ಸಂಭವಿಸದೆಂಬುದಾಗಿ ಮನುಯಾಜ್ಞವಲ್ಕ್ಯಾದಿ ವಚನಗಳಿಂದ ಸ್ಪಷ್ಟವಾಗುತ್ತದೆ. ಈ ವಿಷಯದಲ್ಲಿ :— 'ಅಧರ್ಮಚರ್ಯಯಾ ಪೂರ್ವೋವರ್ಣೋ ಜಘನ್ಯಂ ವರ್ಣಮಾಪದ್ಯತೆ ಜನ್ಮ ಪರಿವೃತ್ತೌ' ಎಂಬ ಆಪಸ್ತಂಬ ವಚನವಾದರೂ ನಮ್ಮ ಅಭಿಪ್ರಾಯವನ್ನು ದೃಢಪಡಿಸುತ್ತದೆ. ಸ್ಮೃತಿಗಳಲ್ಲಿ ನೀಚಕರ್ಮಗಳನ್ನು ಮಾಡುತ್ತಿರುವ ಬ್ರಾಹ್ಮಣನನ್ನು ಶೂದ್ರನೆಂದೂ ಅಥವಾ ಪತಿತನೆಂದೂ ಹೇಳಿರುವುದೇನೋ ನಿಜ. ಆದರೂ ಅವನು ಬ್ರಾಹ್ಮಣಕರ್ಮಗಳನ್ನು ಅನುಷ್ಠಿಸದಿರುವ ಮೂಲಕವೇ ಹೇಳಲ್ಪಡುತ್ತಾನಲ್ಲದೆ ವರ್ತಮಾನಜನ್ಮದಲ್ಲಿಯೇ ಅವನು ಶೂದ್ರನಾಗಿರುವನೆಂಬಭಿಪ್ರಾಯವಿರುವುದಿಲ್ಲ. ಮನುಸ್ಮೃತಿಯಲ್ಲಿ—

ಯೋನಧೀತ್ಯದ್ವಿಜೋ ವೇದಮನ್ಯತ್ರಕುರುತೇಶ್ರಮಂ ।
ಸ ಜೀವನ್ನೇವ ಶೂದ್ರತ್ವಮಾಶು ಗಚ್ಛತಿ ಸಾನ್ವಯಃ ॥
ಸದ್ಯಃಪತತಿಮಾಂಸೇನ ಲಾಕ್ಷಯಾ ಲವಣೇನಚ ।
ತ್ರ್ಯಹೇಣಶೂದ್ರೋಭವತಿ ಬ್ರಾಹ್ಮಣಃ ಕ್ಷೀರವಿಕ್ರಯಾತ್ ॥

ಎಂಬುದಾಗಿ ಹೇಳಲ್ಪಟ್ಟಿರುವ ವಾಕ್ಯಗಳರ್ಥವನ್ನು ಪರಾಮರ್ಶಿಸಿದರೆ ಮೇಲೆ ನಾವು ಹೇಳಿದುದರ ಆಶಯವು ಚನ್ನಾಗಿ ಮನವರಿಕೆಯಾಗದಿರದು. ಈ ವಿಧವಾದ ವಾಕ್ಯಗಳು ವಿಶೇಷವಾಗಿವೆ. ಇತ್ಯಾದಿ ವಚನಗಳಲ್ಲಿಯೂ 'ಬ್ರಾಹ್ಮಣಃ ಶೂದ್ರೋ ಭವತಿ' ಎಂಬ ಮುಂತಾದುದರ ತಾತ್ಪರ್ಯವು ಇದೇ ಪ್ರಕಾರವಾಗಿರುವುದೆಂದರಿಯತಕ್ಕದ್ದು. ಆದ್ದರಿಂದ 'ಬ್ರಾಹ್ಮಣನು ಶೂದ್ರನಾಗುವನು' ಎಂಬಲ್ಲಿ ಜಾತಿಬ್ರಾಹ್ಮಣನು ನೀಚಕರ್ಮಗಳನ್ನೇ ಮಾಡುವಲ್ಲಿ ಆಸಕ್ತನಾಗಿರುತ್ತಿರಲು ಅವನು ಬ್ರಾಹ್ಮಣ ಕರ್ಮಗಳನ್ನನುಷ್ಠಿಸಲು ಅನರ್ಹನಾಗುತ್ತಾನೆ. ಅಷ್ಟುಮಾತ್ರದಿಂದೇ ಅವನ ಜಾತಿಯೇ ವಿಪರ್ಯಾಸವನ್ನು ಹೊಂದುವುದೆಂದು ಹೇಳುವುದು ಯುಕ್ತವಲ್ಲ. ಒಂದಾನೊಂದು ಉತ್ತಮ ಜಾತಿಯ ಅಶ್ವವು ಚೆನ್ನಾಗಿ ಪೋಷಣೆಯಿಲ್ಲದುದರಿಂದ ಕ್ರಮೇಣ ಕೊರಗುತ್ತಲಿ

ರುವುದನ್ನು ಕಂಡು ಜನರು ಅಯ್ಯೋ, ಪಾಪ ! ನೋಡಿದಿರಾ ? ಈ ಕುದುರೆಯು ನಾಯಿಯಾಗಿರುವುದೆಂದು ನುಡಿವುದು ವಾಡಿಕೆಯಾಗಿದೆ. ಇಲ್ಲಿ ಅಶ್ವವನ್ನುದ್ದೇಶಿಸಿ ನಾಯಿಯೆಂದು ಹೇಳುವುದರ ತಾತ್ಪರ್ಯ ವೇನು ? ಅಶ್ವದ ಸ್ವಜಾತಿಯು ನಾಶವಾಗಿ ಶುನಕ ಜಾತಿಯು ಪ್ರಾಪ್ತ ವಾಗಿರುವುದೆಂಬರ್ಥವೇನು ? ಹಾಗಲ್ಲ. ಹೇಗೆ ಶುನಕವು ಭಾರವನ್ನು ಹೊರುವುದಕ್ಕೂ ಎಳೆವುದಕ್ಕೂ ಅಶಕ್ತವಾದುದೋ ಹಾಗೇ ಇದರ ಸ್ಥಿತಿ ಯಾಗಿರುವುದೆಂಬಭಿಪ್ರಾಯವಿರುವುದು. ಇದೇ ಮೇರೆಗೆ ಮನುಷ್ಯರ ಲ್ಲಿಯೂ ಯಾವನಾದರೊಬ್ಬನು ಕೆಟ್ಟಕೆಲಸಗಳನ್ನೇ ಮಾಡುತ್ತಿರುವು ದನ್ನು ನೋಡಿ ಜನರು 'ಇವನು ಪಶುವು !' ಎಂದು ನುಡಿಯುತ್ತಿರು ವತಲ್ಲವೇ ? ಹೀಗೆ ನುಡಿವಲ್ಲಿ ಆ ಮೂರ್ಖನು ಮನುಷ್ಯತ್ವವನ್ನು ನೀಗಿ 'ದನವೇ' ಆಗಿರುವನೆಂದು ತಿಳಿಯಲ್ಪಡುವನೇ ? ಆದ್ದರಿಂದ ಕುಕ ರ್ಮಗಳನ್ನಾಚರಿಸುವ ಬ್ರಾಹ್ಮಣನ ಜನ್ಮಸಿದ್ಧವಾದ ಬ್ರಾಹ್ಮಣ್ಯವು ವರ್ತ ಮಾನಕಾಲದಲ್ಲಿ ಲೋಪವಾಗದು. ಈ ಆಶಯವನ್ನು ಹೃದಯದಲ್ಲಿರಿ ಸಿಕೊಂಡೇ '**ವಿದ್ಯಾತಪೋಭ್ಯಾಂ ಹೀನಸ್ತು ಜಾತಿಬ್ರಾಹ್ಮಣ ಉಚ್ಯತೇ|**' ಎಂಬ ವಾಕ್ಯವು ಪ್ರತಿಪಾದಿಸಲ್ಪಟ್ಟಿದೆ. ಅದುಕಾರಣವೇ ಆವಾವ ಶಾಸ್ತ್ರ ವಚನಗಳು ಬ್ರಾಹ್ಮಣನಿಗೆ ಶೂದ್ರತ್ವವನ್ನೂ ಶೂದ್ರನಿಗೆ ಬ್ರಾಹ್ಮಣತ್ವ ವನ್ನೂ ಪ್ರತಿಪಾದಿಸುವುವೋ ಅವೆಲ್ಲಾ ಪೂರ್ವೋಕ್ತ ಸರಣಿಯನ್ನನು ಸರಿಸಿರುವುವೆಂದರಿಯತಕ್ಕದ್ದು. ಶೈವಪುರಾಣಗಳಲ್ಲಿಯೂ ಪರಮಶಿವ ಭಕ್ತರಾದ ಬೇಡರ ಕನ್ನಪ್ಪನೇ ಮುಂತಾದ ಪುರಾತನರ ಚರಿತ್ರೆಗಳನ್ನು ಬಣ್ಣಿಸುವ ಭಕ್ತಿಪ್ರಧಾನ ಗ್ರಂಥಗಳಲ್ಲಿಯೂ, ಶಿವಭಕ್ತಿಯಿಲ್ಲದ ಬ್ರಾಹ್ಮಣ ನನ್ನು ಶೂದ್ರನೆಂದೂ ಅದುಳ್ಳ ಶೂದ್ರನನ್ನು ಬ್ರಾಹ್ಮಣನೆಂದೂ ಪ್ರತಿಪಾ ದಿಸುವಲ್ಲಿ '**ನ ಶೂದ್ರಾ ಭಗವದ್ಭಕ್ತಾಃ**' ಎಂದು ಮೊದಲಾಗಿರುವ ವಾಕ್ಯಗಳರ್ಥವಾದರೂ ಮೇಲೆ ಹೇಳಲ್ಪಟ್ಟಿರುವಂತೇ ಶೈವಾಚಾರ್ಯರಿಂದ ವ್ಯವಸ್ಥಾಪಿತವಾಗಿರುವುದು.

ಮನುವು—

**ಸರ್ವ ವರ್ಣೇಷು ತುಲ್ಯಾಸು ಪತ್ನೀಷ್ವಕ್ಷತಯೋನಿಷು ।**
**ಆನುಲೋಮ್ಯೇನ ಸಂಭೂತಾ ಜಾತ್ಯಾ ಜ್ಞೇಯಾಸ್ತ ಏವತೇ ॥**

ಎಂದು ಹೇಳುವ ಮೇರೆಗೆ ಗಂಡನೂ ಹೆಂಡತಿಯೂ ಒಂದೇ ವರ್ಣದವರಿದ್ದು ಅವರಿಂದ ಉತ್ಪನ್ನವಾದ ಪ್ರಜೆಯು ಆ ಜಾತಿಯದು. ಮತ್ತು, ವರ್ಣಸಂಕರ ಕಾರಣಗಳನ್ನೂ ಅವನೇ ಹೀಗೆ ನಿರೂಪಿಸುತ್ತಾನೆ—

**ವ್ಯಭಿಚಾರೇಣ ವರ್ಣಾನಾಮವೇದ್ಯಾವೇದನೇನಚ।**
**ಸ್ವಕರ್ಮಣಾಂಚ ತ್ಯಾಗೇನ ಜಾಯತೇ ವರ್ಣಸಂಕರಃ ||**

ಬ್ರಾಹ್ಮಣಾದಿ ವರ್ಣಗಳ ಪರಸ್ಪರ ಸ್ತ್ರೀಗಮನದಿಂದಲೂ, ಸ್ವಗೋತ್ರಾದಿ ಅವಿವಾಹ್ಯಕನ್ಯೆಯ ವಿವಾಹದಿಂದಲೂ, ಉಪನಯನಾದಿರೂಪ ಸ್ವಕರ್ಮತ್ಯಾಗದಿಂದಲೂ ವರ್ಣಸಂಕರವಾಗುತ್ತದೆ.

ತ್ರೈವರ್ಣಿಕ ಬಾಲಕರು ಯೋಗ್ಯಕಾಲದಲ್ಲಿ ಉಪನಯನವನ್ನು ಪಡೆಯದೆ ಹಾಗೆಯೇ ಇದ್ದುದಾದರೆ ಶೂದ್ರಸಮಾನರಾದ ಆ ಬಾಲಕರು ಪ್ರತ್ಯಕ್ಷ ಶೂದ್ರರೆನಿಸದೆ ತಮ್ಮ ತಮ್ಮ ವರ್ಣದ ವ್ರಾತ್ಯರೆನಿಸಿಕೊಳ್ಳುತ್ತಾರೆ. ( ಮನು. ೧೦ ) ಉಪನಯನ ಸಂಸ್ಕಾರವು ಒಂದು ತಲೆಯವರೆಗೆ ಇಷ್ಟೇ ಅಲ್ಲ, ಬಹು ಕಾಲದಿಂದ ಲುಪ್ತವಾಗಿದ್ದರೂ ಮೂಲವರ್ಣವು ನಷ್ಟವಾಗುವುದಿಲ್ಲ. ಪ್ರಾಯಶ್ಚಿತ್ತಾನಂತರದಲ್ಲಿ ಆ ವ್ರಾತ್ಯರು ತಮ್ಮ ತಮ್ಮ ಮೂಲ ವರ್ಣದವರೆನಿಸುವರು. ಈ ಬಗ್ಗೆ ಬೇರೆ ಬೇರೆ ಸ್ಮೃತಿಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಆದುದರಿಂದ ಮೇಲಿನ ವಿಷಯವು ನಮ್ಮ ನಿಶ್ಚಿತ ಮತವಲ್ಲ. ಇರಲಿ.

ಭಾರತವರ್ಷದಲ್ಲಿ ವರ್ಣಾಶ್ರಮಧರ್ಮಾನುಯಾಯಿಗಳು ಅಗಣಿತವಾಗಿದ್ದಾರೆ. ಆದರೆ ಅವರೆಲ್ಲಾ ವಿಶ್ಲಲಿತರಾಗಿದ್ದಾರೆ. ಸಂಘಟಿತವಾಗಿರುವುದಿಲ್ಲ. ಈ ಕಾಲದಲ್ಲಿ ಸಂಘಟನೆಯು ಆವಶ್ಯಕವಾದುದು. **‘ ಸಂಘೇ ಶಕ್ತಿಃ ಕಲೌಯುಗೇ ’** ಕಲಿಯುಗದಲ್ಲಿ ಸಂಘದಲ್ಲಿಯೇ ಶಕ್ತಿಯಿರುವುದು, ಎಂಬುದಾಗಿ ಪ್ರಾಚೀನರಾದ ದೀರ್ಘದರ್ಶಿಗಳು ಮೊದಲೇ ಹೇಳಿದ್ದಾರೆ. ಆದ್ದರಿಂದ ವರ್ತಮಾನಕಾಲದಲ್ಲಿ ಆರ್ಯ ಜನಾಂಗವು ಪಾರಸ್ಪರಿಕವಾದ ವೈಯಕ್ತಿಕ ದ್ವೇಷವೇ ಮುಂತಾದ ದುರ್ಭಾವನೆಗಳಿಗಿಂಬುಗೊಡದೆ ಐಕಮತ್ಯದಿಂದ ವ್ಯವಹರಿಸುವುದೇ ಲೇಸು. ಸಮಾಜದಲ್ಲಿ ಪ್ರತಿಯೊಬ್ಬನು ತಾನೂ ಬಲ್ಲವನೇ, ತನಗಾರು ಬುದ್ಧಿಯನ್ನು ಕಲಿಸಶಕ್ಕವರಿದ್ದಾರೆ; ಎಂಬೀ ಮುಂತಾದ ವೃತ್ತಿಯುಳ್ಳವನಾಗಿ ಯೋಗ್ಯ ಮಾರ್ಗದರ್ಶಕರ ನುಡಿಗಳಿಗೆ ಕಿವಿಗೊಡದೆ ತನ್ನ ಮನಬಂದಂತೆ ನಡೆಯುವವನಾದರೆ ಆ ಸಮಾಜದಲ್ಲಿ ಸಂಘ ಶಕ್ತಿಯು ಸಂಭವಿಸುವ ಬಗೆ ಹೇಗೆ ? ಸಂಘಶಕ್ತಿಯಿಲ್ಲದ ಸಮಾಜವು ಅವನತಿ ಪ್ರವಾಹ ಪತಿತವಾಗಿರುವುದೆಂದೇ ತಿಳಿಯಲಭ್ಯಂತರವಿಲ್ಲ. ಈ ವಿಷಯದಲ್ಲಿ ಒಂದು ಬೋಧಪ್ರದವಾದ ಕಥೆಯುಂಟು. ಮಹಾಭಾರತಾಂತರ್ಗತವಾದ ಉದ್ಯೋಗಮಹಾಪರ್ವದೊಳಗಿನ ಸೈನ್ಯ ನಿರ್ಣಯಪರ್ವದಲ್ಲಿ ದುರ್ಯೋಧನನು

ಭೀಷ್ಮನಿಗೆ ಆ ಕಥೆಯನ್ನು ಹೇಳಿದ್ದಾನೆ. ಭೀಷ್ಮನು ಸೇನಾಪತಿಯಾಗ ಬೇಕೆಂದು ಪ್ರಾರ್ಥಿಸುವ ಪ್ರಸಂಗದಲ್ಲಿ ದುರ್ಯೋಧನನಿಂದ ಆ ಕಥೆಯು ಹೇಳಲ್ಪಟ್ಟಿದೆ. ವಾಚಕಮಹಾಶಯರು ಅದನ್ನು ಅವಶ್ಯವಾಗಿ ಓದಿ ಅದರಿಂದ ತಮಗುಚಿತವಾದ ಬೋಧವನ್ನು ಗ್ರಹಿಸಬೇಕೆಂದು ಸೂಚಿಸಿ, ಆ ಕಥೆಯನ್ನು ಇಲ್ಲಿ ವಿವರಿಸಲುದ್ಯುಕ್ತರಾಗುತ್ತೇವೆ.

ದುರ್ಯೋಧನನು ಕುರುಕ್ಷೇತ್ರದ ಯೋಗ್ಯವಾದ ಸ್ಥಳವಲ್ಲಿ ತನ್ನ ಸರ್ವಸೈನ್ಯವನ್ನೂ ಒಟ್ಟುಗೂಡಿಸಿ, ಅದನ್ನು ಸಂಘಶಃ ಸುವ್ಯವಸ್ಥೆಗೊಳಿಸಿ, ಅಕ್ಷೋಹಿಣೀ ಪತಿಗಳನ್ನೂ ನೇಮಿಸಿ, ಆ ಪ್ರಧಾನ ವೀರರೊಡನೆ ಭೀಷ್ಮನ ಬಳಿಗೆ ಬಂದು ವಿನಯದಿಂದ ನುಡಿಯುತ್ತಾನೆ. ಈಗ ನಾವು ಒಬ್ಬ ಮುಖ್ಯ ಸೇನಾಪತಿಯನ್ನು ನೇಮಿಸಿಕೊಳ್ಳಬೇಕಾಗಿದೆ. ಏಕೆಂದರೆ ಅವನಿಲ್ಲದಿದ್ದರೆ ಬಹು ದೊಡ್ಡ ಸೇನೆಯಾದರೂ ಸುವ್ಯವಸ್ಥಿತೆಯಿಂದಿರದೆ ಇರುವೆಗಳಂತೆ ಅತ್ತಿತ್ತ ಹರಿದಾಡಿ ಪರಾಭವವನ್ನೇ ಹೊಂದುವುದು. ಇಬ್ಬರು ಮಾನವರ ಬುದ್ಧಿಯೂ ಶೌರ್ಯವೂ ಎಂದೂ ಒಂದೇ ವಿಧವಾಗಿ ಇರಲಾರದಷ್ಟೇ ! ಬಲಾಢ್ಯರಾದ ವೀರರಲ್ಲಿ ಪರಸ್ಪರ ಸ್ಪರ್ಧೆಯು ಹುಟ್ಟುವುದು; ಆದ್ದರಿಂದ ಮುಖ್ಯನಾದ ಸೇನಾಪತಿಯೊಬ್ಬನಿರುವುದುಚಿತವು. ಈ ಬಗ್ಗೆ ಒಂದು ಕಥೆಯು ಶ್ರುತವಿದೆ. ಅದಾವುದೆಂದರೆ, ಪೂರ್ವದಲ್ಲಿ ಒಂದಾನೊಂದು ಸಮಯದೊಳು ಸರ್ವಬ್ರಾಹ್ಮಣರೂ ಹೈಹಯಕುಲೋತ್ಪನ್ನರಾದ ಕ್ಷತ್ರಿಯರ ತ್ರಾಸದಿಂದುದ್ವಿಗ್ನರಾಗಿ ಅವರೊಡನೆ ಹೋರಾಡಲು ಹೊರಟರು. ಬ್ರಾಹ್ಮಣರು ತಮ್ಮ ತಮ್ಮ ವಿಚಿತ್ರಗಳಾದ ದರ್ಭಾದ್ಯಾಸನಗಳ ಧ್ವಜಗಳನ್ನೆತ್ತಿ ಹಿಡಿದರು. ಕ್ಷತ್ರಿಯರ ಬಲತ್ಕಾರದಿಂದ ತ್ರಸ್ತರಾದ ವೈಶ್ಯರೂ ಶೂದ್ರರೂ ಅವರನ್ನು ಕೂಡಿಕೊಂಡರು. ಹೀಗೆ ಒಂದು ಕಡೆ ಬ್ರಾಹ್ಮಣರೂ, ವೈಶ್ಯರೂ, ಶೂದ್ರರೂ ಮತ್ತೊಂದು ಕಡೆ ಕ್ಷತ್ರಿಯರೂ ಎಂಬ ಎರಡು ಪಕ್ಷಗಳಾಗಿ ಆಗಾಗ್ಗೆ ಯುದ್ಧಮಾಡತೊಡಗಿದರು. ಆದರೆ ಪ್ರತಿಯೊಂದು ಸಮಯದಲ್ಲಿಯೂ ಬ್ರಾಹ್ಮಣಾದಿಗಳ ಪಕ್ಷವು ಪರಾಭವವನ್ನು ಹೊಂದುತ್ತಿದ್ದುದರಿಂದ ಆಗ ಏನು ಮಾಡತಕ್ಕದ್ದು ? ತಮ್ಮ ಪಕ್ಷದ ವಿಜಯವೆಂತಾದಪುದು ? ಎಂಬ ಮುಂತಾದ ಯೋಚನೆಯಲ್ಲಿ ಮಗ್ನರಾದ ಬ್ರಾಹ್ಮಣರು ಕ್ಷತ್ರಿಯರ ಬಳಿಗೆ ತಾವೇ ಹೋಗಿ ಅವರನ್ನು ಕುರಿತು— 'ಪ್ರತಿಯೊಂದು ವೇಳೆಯಲ್ಲಿಯೂ ನಿಮಗೇ ಜಯವು ಸಿಕ್ಕುತ್ತಿರುವುದಲ್ಲಾ ! ಇದಕ್ಕೆ ಕಾರಣವೇನಿರಬಹುದು ? ನಮಗೆ ಒಮ್ಮೆಯಾದರೂ ಗೆಲವೆಂಬುದೇ

ಇಲ್ಲವಷ್ಟೇ ?' ಎಂಬುದಾಗ ವಿಚಾರಿಸಲು ಆಗ ಧರ್ಮಜ್ಞರಾದ ಕ್ಷತ್ರಿಯರು ಶ್ರೇಷ್ಠರಾದ ಆ ಬ್ರಾಹ್ಮಣರಿಗೆ ತತ್ತ್ವಾರ್ಥವನ್ನು ಹೀಗೆ ಅರುಹಿದರು. ( ೧೫೬-೮ ):—

ವಯಮೇಕಸ್ಯ ಶೃಣ್ವಾನಾ ಮಹಾಬುದ್ಧಿಮತೋರಣೇ।
ಭವನ್ತಸ್ತು ಪೃಥಕ್ ಸರ್ವೇ ಸ್ವಬುದ್ಧಿವಶ ವರ್ತಿನಃ ॥

ಕ್ಷತ್ರಿಯರಾದ ನಾವು ಕೂಳಗುಳದಲ್ಲಿ ಮಹಾಬುದ್ಧಿಶಾಲಿಯಾದ ಒಬ್ಬ ಮುಂದಾಳುವಿನ ಆಜ್ಞೆಯನ್ನು ಪಾಲಿಸುತ್ತೇವೆ. ಮತ್ತು ಹಾಗೆ ನಡವಳಿಕೆಯುಳ್ಳವರೂ ಆಗಿರುತ್ತೇವೆ. ಆದರೆ ನೀವೆಲ್ಲರೂ ಬೇರೆಬೇರೆ ನಿಮ್ಮ ಬುದ್ಧಿಯಂತೇ ವರ್ತಿಸುವವರಾಗಿದ್ದೀರಿ. ಅದುಕಾರಣವೇ ನಮಗೆ ಗೆಲವೂ ನಿಮಗೆ ಸೋಲೂ ಸಂಭವಿಸುವುದರಲ್ಲಿ ಸೋಜಿಗವೇನು ?

ಧರ್ಮಜ್ಞರಾದ ಕ್ಷತ್ರಿಯರ ಈ ಹೇಳಿಕೆಯಲ್ಲಿ ತತ್ತ್ವಾರ್ಥವು ಪೂರ್ಣವಾಗಿ ತುಂಬಿದೆ. ಅದರಿಂದ ತಮ್ಮ ಉತ್ಕರ್ಷತೆಗೋಸ್ಕರ ಯತ್ನಿಸುವ ಪ್ರತಿಯೊಬ್ಬ ಮನುಷ್ಯನೂ ಬುದ್ಧಿಗಲಿಯುವಂತಿರುವುದು. ಮನುಷ್ಯನು ಎಷ್ಟು ಬುದ್ಧಿಶಾಲಿಯೂ, ಸಾಮರ್ಥ್ಯಸಂಪನ್ನನೂ ಆಗಿದ್ದರೂ ಕೂಡ ಅವನು ಮನುಷ್ಯನೇ. ಅವನ ಬುದ್ಧಿಯೂ ಸಾಮರ್ಥ್ಯವೂ ಮರ್ಯಾದಿತವಾದುವೆಂಬುದು ಸ್ಪಷ್ಟವು. ಆದ್ದರಿಂದ ಅವನು ತನಗಭಿಮತವಾದ ಕರ್ತವ್ಯದಲ್ಲಿ ತನಗಿಂತಲೂ ಹೆಚ್ಚಿನ ಬುದ್ಧಿಶಾಲಿಗಳೂ ಅಧಿಕವಾದ ಸಾಮರ್ಥ್ಯವುಳ್ಳವರೂ ಆದ ಶ್ರೇಷ್ಠರ ಸಹಾಯವನ್ನು ಅವಶ್ಯವಾಗಿ ತೆಗೆದುಕೊಳ್ಳಬೇಕು. ಅದಿಲ್ಲದೆ ಅವನ ಕಾರ್ಯವು ಸಿದ್ಧಿಸಲಾರದು. ಪೂರ್ವೋಕ್ತ ಕಥೆಯಲ್ಲಿ ಮೂರು ವರ್ಣದ ಜನರದೊಂದು ಪಕ್ಷವಾಗಿಯೂ ಕ್ಷತ್ರಿಯ ಜನರದೊಂದು ಪಕ್ಷವಾಗಿಯೂ ಇರುತ್ತಿರಲು, ಅವೆರಡರಲ್ಲಿ ಎರಡನೆಯ ಪಕ್ಷವು ಪ್ರಮುಖ ಮನುಷ್ಯನಿಂದ ನಿಯಂತ್ರಿತವಾಗಿದ್ದಿತು. ಬ್ರಾಹ್ಮಣರೇ ಮುಂತಾದ ಮೊದಲನೆಯ ಪಕ್ಷದ ಜನರು ಸಂಖ್ಯೆಯಿಂದಧಿಕವಾಗಿದ್ದರೂ ಅವರೊಳಗಿನ ಪ್ರತಿಯೊಬ್ಬನೂ ತನ್ನನ್ನು ಜಾಣನೆಂದೇ ಭಾವಿಸಿಕೊಂಡು ಸ್ವಬುದ್ಧಿಯಿಂದ ವರ್ತಿಸುತ್ತಿದ್ದನು. ಪಾರಮಾರ್ಥಿಕ ಪುರುಷಾರ್ಥದಲ್ಲಿ 'ಸಂಘ' ದ ಅವಶ್ಯಕತೆಯು ಅಷ್ಟೊಂದಿರುವುದಿಲ್ಲ. ಪ್ರತಿಯೊಬ್ಬನೂ ಸ್ವೀಯಸಾಧನಾನುಷ್ಠಾನದಂತೆ ಪಾರಮಾರ್ಥಿಕ ಪುರುಷಾರ್ಥವನ್ನು ಪಡೆಯಬಹುದು; ಆದರೆ ವ್ಯಾವಹಾರಿಕ ಪುರುಷಾರ್ಥದಲ್ಲಾದರೋ 'ಸಂಘ' ವಿಲ್ಲದೆ ಬಲವು ಸಂಭವಿಸದು. ಬಲವಿಲ್ಲದೆ ಇಷ್ಟ ಕಾರ್ಯ ಸಿದ್ಧಿಸದು. ಹೈಹಯರ

ಕಾಲದಲ್ಲಿ ಈ ಮಾತು ಅನುಭವಸಿದ್ಧವಾಗಿ ಪರಿಣಮಿಸಿತಲ್ಲವೇ? ಈಗ ಲಾದರೂ ಇದುವೇ ಅಡಿಗಡಿಗೆ ಗೋಚರವಾಗುತ್ತಿರುವುದು.

ಹೈಹಯರ ಕಾಲೀನರಾದ ಬ್ರಾಹ್ಮಣರು ಧರ್ಮಜ್ಞರಾದ ಕ್ಷತ್ರಿಯರ ನುಡಿಗಳನ್ನು ಮನ್ನಿಸಿ ತಮ್ಮ ಪಕ್ಷದೊಳಗಿನವನೇ ಆದ ಒಬ್ಬ ಚತುರನನ್ನು ಮುಂದಾಳುವನ್ನಾಗಿ ಮಾಡಿಕೊಂಡು ಅವನ ಹಿರಿಯತನದಲ್ಲಿ ಯುದ್ಧಮಾಡಿದುದರಿಂದ ಕೊನೆಗೆ ಅವರು ಜಯಶಾಲಿಗಳಾದರು. ಅದೇ ಮೇರೆಗೆ ವರ್ತಮಾನಕಾಲದಲ್ಲಿಯೂ ಸದ್ಧರ್ಮವು ಲೋಪವಾಗುವ ಪ್ರಸಂಗವು ಸಂಭವಿಸಿರಲು ಸನಾತನ ಧರ್ಮಾವಲಂಬಿಗಳಾದರೂ ತಮ್ಮ ಮನಸ್ಸಿನ ವೈಷಮ್ಯಾದಿವೃತ್ತಿಗಳನ್ನು ಕೆಲವು ಕಾಲದವರೆಗಾದರೂ ಬದಿಗಿಟ್ಟು, ಸಂಘಟಿತರಾಗುವುದುಚಿತವು.

ನಮ್ಮವರಲ್ಲಿಯೇ ಈಗ ಅನೇಕ ಜನರು ಈಶ್ವರದ್ರೋಹಿಗಳೂ ಸ್ವಧರ್ಮದ್ರೋಹಿಗಳೂ ಆಗಿ ನಮಗೆ ಪ್ರತಿಪಕ್ಷಿಗಳಂತೇ ಪ್ರತಿಭಟಿಸುವುದನ್ನು ನೋಡಿ ಸಖೇದಾಶ್ಚರ್ಯವೆನಿಸುತ್ತದೆ. ಈಶ್ವರದ್ರೋಹದಿಂದ ಮಹಾಪಾಪವೇ ಸಂಭವಿಸುವಂತೆ ಸ್ವಧರ್ಮದ್ರೋಹದಿಂದಲೂ ಅಧಿಕವಾದ ಪಾಪವುಂಟಾಗುವುದು. ಜಗತ್ಕರ್ತನಾದ ಈಶ್ವರನಿಲ್ಲವೆಂದು ವಾದಿಸುವವರೂ, ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನ ನಿಯತಿವಿರುದ್ಧವಾಗಿ ಯತ್ನಮಾಡುತ್ತಿರುವವರೂ ತಮ್ಮಲ್ಲಿ ಈಶ್ವರ ಪಾರತಂತ್ರ್ಯವನ್ನು ಒಪ್ಪಿಕೊಳ್ಳದೆ ಸರ್ವ ವಿಷಯಗಳಲ್ಲಿಯೂ ಸ್ವತಂತ್ರನಾಗಿಯೇ ತಮ್ಮ ಮನೋರಥಗಳನ್ನೀಡೇರಿಸಿಕೊಳ್ಳುವ ಹವಣಿಕೆಯುಳ್ಳವರೂ ಆದ ಮಾನವರು ರಾಕ್ಷಸ (ತಾಮಸ) ಪ್ರಕೃತಿಯುಳ್ಳವರಲ್ಲವೇ? ವೇದಾಗಮಗಳು ಈಶ್ವರನ ಆಜ್ಞಾರೂಪವಾದುವು. ಹೇತುವಾದುದರಿಂದ ಅವುಗಳನ್ನುಲ್ಲಂಘಿಸುವುದು ಆ ಈಶ್ವರನ ಅಪ್ರೀತಿಗೂ ಅಧೋಗತಿಗೂ ಸಾಧನವಾಗಿರುವುದು. ಆದರೆ ಈಶ್ವರನ ಅಸ್ತಿತ್ವವನ್ನಂಗೀಕರಿಸಿ ಅವನ ಆಜ್ಞಾರೂಪಗಳಾದ ವೇದಾಗಮಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ಮೇರೆಗೆ ಆಚರಿಸುವುದರೀದ ಆ ಈಶ್ವರನ ಅನುಗ್ರಹವುಂಟಾಗುವುದು. ಅದರಿಂದ ಆತ್ಮೋನ್ನತಿಯು ಸಿದ್ಧಿಸುವುದು.

ಈಶ್ವರನ ಸರ್ವಾತಿಶಯತ್ವವು ಸ್ವಾನುಭವಗಮ್ಯವಾಗುವ ಪರ್ಯಂತವೂ 'ಅವನು ಇದ್ದಾನೆ, ವೇದಾಗಮರೂಪವಾದ ಅವನ ಆಜ್ಞೆಯು ಆಚರಣೀಯವಾದುದು.' ಎಂಬುದನ್ನು ಧರ್ಮಾಭಿಲಾಷಿಗಳು ಒಪ್ಪಲೇಬೇಕು. ಇದುವೇ ಶ್ರದ್ಧೆಯು. ಧರ್ಮಕ್ಕೆ ಶ್ರದ್ಧೆಯ ಆವಶ್ಯಕತೆ

ಯುಂಟು. ಅಮೋಘವಾದ ಶ್ರದ್ಧೆಯನ್ನು ಹೆಚ್ಚುಗೊಳಿಸಬೇಕೆಂಬ ಸದ್ಭಾವನೆಯುಳ್ಳವರು ಧರ್ಮವಿರುದ್ಧವಾದುದನ್ನೇ ಯಾವಾಗಲೂ ಉಪದೇಶಿಸುತ್ತಿರುವ ವಾಚಾಳಿಗಳ ಸಂಸರ್ಗದಿಂದ ದೂರಿರುವುದೇ ಲೇಸು. ಅಪರಿಪಕ್ವವಾದ ಮನಸ್ಸು ಸದೈವ ನೀರಿನಂತೆ ಅಧೋಗಾಮಿಯಾಗಿರುವುದಲ್ಲವೇ ? ಆದ್ದರಿಂದ ಧರ್ಮಶ್ರದ್ಧಾಳು ಜನರು ವೇದಾಗಮ ನಿಂದಕರ ದುರುಪದೇಶದಿಂದ ತಮ್ಮ ಬುದ್ಧಿಯು ವಿಪರೀತಭಾವನೆಗೊಳಗಾಗದಂತೆ ಹೆಚ್ಚು ಎಚ್ಚರವಿರಬೇಕು. ಮತ್ತು:—

**ಪಾಖಂಡಿನೋ ವಿಕರ್ಮಸ್ಥಾನ್ ಬೈಡಾಲ ವ್ರತಿಕಾನ್ ಶಠಾನ್ ।**
**ಹೈತುಕಾನ್ ಬಕವೃತ್ತೀಂಶ್ಚ ವಾಙ್ಮಾತ್ರೇಣ ನಾರ್ಚಯೇತ್ ॥**

ಎಂಬ ಮನುವಚನವನ್ನು ಅವಶ್ಯವಾಗಿ ಲಕ್ಷದಲ್ಲಿಟ್ಟುಕೊಳ್ಳತಕ್ಕದ್ದು.

ಈಗಲಾದರೋ ಕೇವಲ ಭೌತಿಕಸುಖವನ್ನು ಪುರಸ್ಕರಿಸುವ ಜನರೇ ಹೆಚ್ಚಾಗಿದ್ದಾರೆ. ಭಾರತೀಯರ ಬೇರೆ ಬೇರೆ ಭಾಷೆಗಳಲ್ಲಿ ಪ್ರಸಿದ್ಧಗೊಳಿಸಲ್ಪಡುವ ಪತ್ರಿಕೆಗಳು ಅನೇಕವಾಗಿರುತ್ತವೆ. ಅವುಗಳಲ್ಲಿ ಲೌಕಿಕ ಪುರುಷಾರ್ಥಕ್ಕೆ ಸಂಬಂಧಪಟ್ಟ ವಿಷಯಗಳನ್ನು ಪ್ರಕಾಶಪಡಿಸತಕ್ಕವುಗಳೇ ಅಧಿಕವಾಗಿವೆ. ಪಾರಮಾರ್ಥಿಕ ಪುರುಷಾರ್ಥ ಪ್ರಕಾಶಕಗಳಾದ ಪತ್ರಿಕೆಗಳು ಸಾಪ್ತಾಹಿಕಗಳಾಗಲಿ ಮಾಸಿಕಗಳಾಗಲಿ ಅಲ್ಪಸ್ವಲ್ಪವಾಗಿರುವುವಾದರೂ ಅವು ಪಾರಮಾರ್ಥಿಕಧರ್ಮಗಳನ್ನು ಪುರಸ್ಕರಿಸುವುದರಿಂದ ಅಂತಹ ಧಾರ್ಮಿಕ ಪತ್ರಿಕೆಗಳ ಗ್ರಾಹಕರು ತಕ್ಕಷ್ಟಾದರೂ ಇಲ್ಲದಿರುವ ಮೂಲಕವೇ ಅವೂ ದಿನಕ್ರಮೇಣ ಒಂದೊಂದೇ ಅಂತರ್ಧಾನಗಳಾಗತೊಡಗಿವೆ. **'ಬೋದ್ಧಾರೋ ಮತ್ಸರಗ್ರಸ್ತಾಃ ಪ್ರಭವಃ ಸ್ಮಯದೂಷಿತಾಃ । ಅಬೋಧೋಪಹತಾಶ್ಚಾನ್ಯೇ'** ಎಂಬಂತೆ ಶಾಸ್ತ್ರಿಗಳೂ ಪಂಡಿತರೂ ಎಂಬುದಾಗಿ ಹೇಳಲ್ಪಡುವ ಆಧುನಿಕ ವಿದ್ವಾಂಸರೇ ಮೊದಲಾದ ಬಲ್ಲವರೂ ಕೂಡ ಮತ್ಸರಗ್ರಸ್ತರಾಗಿರುವರು. ಮಠಾಧಿಪತಿಗಳೂ ಸಂಸ್ಥಾನಿಕರೂ ಜಾಹಾಗೀರದಾರರೂ ಸಾಹುಕಾರರೂ ಮೊದಲಾದ ಶ್ರೀಮಂತರಲ್ಲಿ ಬಹುಜನರು ತಮ್ಮ ಐಸಿರಿಹೆಮ್ಮೆಯಿಂದ ದೂಷಿತರಾಗಿರುವರು. ಅಜ್ಞಜನತೆಯಾದರೋ ಹೆಬ್ಬಟ್ಟಿನೊಕ್ಕಲಾಗಿರುವುದೇ ಹೆಚ್ಚಲ್ಲವೇ ? ಆದ್ದರಿಂದ ಅದು ಇದ್ದೂ ಇಲ್ಲದಂತೇ ಸರಿ; ಆದರೆ ಆ ಎಲ್ಲದರ ಪರಿಣಾಮವು ಮಾತ್ರ **'ಜೀರ್ಣಮಂಗೇ ಸುಭಾಷಿತಂ'** ಸುಭಾಷಿತವು ಇದ್ದಲ್ಲಿಯೇ ಇಂಗಿಹೋಯಿತು ! ಎಂಬ ಸ್ಥಿತಿಯುಳ್ಳದ್ದಾಗಿರುವುದು.

ಸ್ವಧರ್ಮಜ್ಞರೂ ಸ್ವಧರ್ಮನಿಷ್ಠರಾದ ಶಾಸ್ತ್ರಿಗಳೂ, ಪಂಡಿತರೂ, ಪುರಾಣಿಕರೂ, ಕೀರ್ತನಕಾರರೂ, ನುಡಿವುದೇನಂದರೆ— ಈ ವಿಧವಾದ ಲೇಖಗಳು ನಮ್ಮಂಥವರಿಂದ ಓದಲ್ಪಡತಕ್ಕವುಗಳಾಗಿವೆಯೇ ? ಈ ಲೇಖಕರಿಗೆ ನಮಗಿಂತಲೂ ಹೆಚ್ಚಿನದೇನುಗೊತ್ತಿದೆ ? ಅಷ್ಟೇ, ನಮಗೆ ಗೊತ್ತಿರುವ ಧಾರ್ಮಿಕ ವಿಷಯಗಳನ್ನೇ ಇವರು ಬರೆಯುತ್ತಿರುವರಲ್ಲವೇ ? ಆ ವಿಷಯಗಳಾದರೋ ನಮಗೆ ಮೊದಲೇ ಅವಗತವಾಗಿರುತ್ತವೆ; ಎಂಬುದಾಗಿ ಉದಾಸೀನರಾಗಿರುವರು.

ಶ್ರೀಮಂತರಾದರೋ ಈಗ ನಮಗಾವುದರ ಕೊರತೆಯೂ ಇಲ್ಲ. ಎಲ್ಲ ವಿಷಯಕವಾಗಿಯೂ ಸ್ವಾಸ್ಥ್ಯವಿದೆ: ಇವರಿಂದ ಬರೆಯಲ್ಪಡುವುದೆಲ್ಲವನ್ನೂ ನಾವರಿಯೆವೇ ? ಈ ಭಿಕ್ಷುಕರಲ್ಲಿ ನಮಗಿಂತಲೂ ಹೆಚ್ಚಿನ ಯೋಗ್ಯತೆಯಾದರೂ ಏನಿದೆ ? ಜಗತ್ತಿನೊಳಗಿನ ಹೊಸಹೊಸ ಸುದ್ದಿಗಳನ್ನರಿತುಕೊಳ್ಳಲು ನಾವು 'ಟಾಯಿಮ್ಸ್' 'ಕ್ರಾನಿಕಲ್' 'ಹಿಂದೂ' ಮೊದಲಾದ ಪತ್ರಿಕೆಗಳನ್ನು ಓದುತ್ತೇವೆ. ಕೆಲವು 'ಮನೋರಂಜನ' ಮೊದಲಾದ ಮಾಸಿಕಗಳೂ ನಮ್ಮಲ್ಲಿಗೆ ಬರುತ್ತಲೇ ಇವೆ. ಸಾಕು; ರೂಕ್ಷವಾದ ಧರ್ಮ ವಿಚಾರವುಳ್ಳ ಈ ಲೇಖಗಳು ನಮಗೆ ಮತ್ತೆ ಹೆಚ್ಚಿನದೇನನ್ನು ತಿಳಿಸಿಕೊಡುತ್ತವೆ. ? ಅಲ್ಲದೆ ಇಂತಹ ಧಾರ್ಮಿಕ ವಿಚಾರಪ್ರತಿಪಾದಕ ಲೇಖಗಳನ್ನು ಓದುವುದಕ್ಕೆ ಅಷ್ಟೊಂದು 'ಟಾಯಿಮ್' ಆದರೂ ಯಾರಿಗಿದೆ ? ಧರ್ಮದ ಈ ಗೂಢವಾಗಿರತಕ್ಕ ಕ್ಯಾಥಕೂಟವನ್ನು ಓದಿಯಾದರೂ ನಾವು ಏನು ಮಾಡತಕ್ಕದ್ದಿರುವುದು ? ಎಂದು ನುಡಿವರು.

ಮಿಕ್ಕಜನರಾದರೋ ಹಗಲಿರುಳು ಹೊಟ್ಟೆಹೊರಕೊಳ್ಳುವ ಚಿಂತೆಯಲ್ಲಿಯೇ ಮಗ್ನರಾಗಿದ್ದಾರೆ. ''ನಮಗೆ ಧಾರ್ಮಿಕ ವರ್ತಮಾನಪತ್ರಗಳನ್ನಾಗಲಿ ಬೇರೆ ಲೇಖಗಳನ್ನಾಗಲಿ ಓದಲಿಕ್ಕೆ ಅವಕಾಶವೆಲ್ಲಿದೆ ?'' ಎಂದು ಹೊಲೆಸಾಲಿನ ಹುಮ್ಮರೂ ಡೊಣೆಸಾಲಿನ ಡೊಣಗರೂ ಸಹಜವಾಗಿಯೇ ನುಡಿಯತ್ತಾರೆ. ಆದರೂ ಈ ಕಾಲದಲ್ಲಿ ಅವರೆಲ್ಲರನ್ನೂ ಅಂಥವರೆಂದೇ ಹೇಳಲಾಸ್ಪದವಿರುವುದೆ ? ಅವರಲ್ಲಿಯೂ ಇತ್ತೀಚೆಗೆ ಹಲ ಕೆಲವು ಒಕ್ಕಲಿಗರೇ ಮೊದಲಾದವರಿಗೂ ಸಹ ಶಿಕ್ಷಣ ಮೂಲಕ ಓದುವ ಅಭಿರುಚಿಯೂಂಟಾಗಿರುವುದು ಕಾಣಬರುತ್ತಲಿದೆ. ಅವರು ಯಾವುದಾದರೊಂದು ವೃತ್ತಪತ್ರಿಕೆಯನ್ನಾಗಲಿ ಮಾಸಿಕವನ್ನಾಗಲಿ ತೆಗೆದುಕೊಂಡು ಅದರೊಳಗಿನ ವ್ಯಾವಹಾರಿಕ ಸಂಗತಿಗಳನ್ನೋದಿ ತಮ್ಮ ತೃಷ್ಣೆಯನ್ನು

ಶಮನಮಾಡಿಕೊಳ್ಳುವರು. ಅಮೇರಿಕೆಯಲ್ಲಿ ಅತಿವೃಷ್ಟಿಯಾಗಿರುತ್ತದೆ; ಫ್ರಾನ್ಸದಲ್ಲಿ ಭೂಕಂಪವಾದುದು; ರಸಿಯಾದಲ್ಲಿ 'ಬೋಲ್ಸೆವಿಝಮ್' ಇದೀಗ ಹೆಚ್ಚುತ್ತಲಿದೆ; ಹಿಂದುಸ್ಥಾನವ 'ಸುವರ್ಣ ಪ್ರವಾಹವು'ಪಡು ಗಡಲನ್ನು ಸೇರುತ್ತಲಿದೆ. ಪಂಜಾಬಕ್ಕೆ ಸೇರಿದ ಒಂದು ಗ್ರಾಮದಲ್ಲಿ ಓರ್ವ ಹೆಂಗಸು ಎರಡು ತಲೆಗಳುಳ್ಳ ಒಂದು ಕೂಸನ್ನು ಹೆತ್ತಳು; ಸೋಜಿಗ! ಆದರೂ ಅದು ಹುಟ್ಟಿದ ಮೂರು ಘಂಟೆ ಮೂವತ್ತು ನಿಮಿಷಗಳಲ್ಲೇ ಮೃತಪಟ್ಟಿತು ವಿಷಾದಕರ ಸಂಗತಿಯು! ಎಂಬಿವೇ ಮುಂತಾದ ಸುದ್ದಿಗಳನ್ನೇ ಓದಿ ಮನಸ್ಸಿನ ಹವ್ಯಾಸವನ್ನು ಕೊನಗಾಣಿಸುವರು. ಆದ್ದರಿಂದ ಧಾರ್ಮಿಕ ವಾಙ್ಮಯದ ಅಭಿರುಚಿಯುಳ್ಳ ಜನರೇ ಬಹಳ ಕಡಿಮೆಯಾಗಿರುತ್ತಾರೆ. ಧರ್ಮದ ನಿಜವಾದ ಅಭಿಮಾನವುಳ್ಳ ಕೆಲವು ಜನರು ಮಾತ್ರ ಧಾರ್ಮಿಕ ವರ್ತಮಾನಪತ್ರಗಳನ್ನು ಆದರ ಭಾವದಿಂದ ಓದುತ್ತಿರುವುದನ್ನು ಕಾಣಬಹುದು. ಆದರೆ ಅಂತಹ ಜನರು ಪ್ರಾಯಶಃ ಮಧ್ಯಮಸ್ಥಿತಿಯುಳ್ಳವರೂ ಅಥವಾ ಅದಕ್ಕಿಂತ ಹೀನಸ್ಥಿತಿಯುಳ್ಳವರೂ ಆಗಿರುವುದರಿಂದ ಅವರಿಗೆ ಮನದ ಬಯಕೆಯಾದರೋ ಅಧಿಕವಾಗಿರುವುದಾದರೂ ಆ ಬಯಕೆಯನ್ನು ಸಾರ್ಥಕಗೊಳಿಸುವುದಕ್ಕೋಸ್ಕರ ಧಾರ್ಮಿಕ ವರ್ತನಮಾನ ಪತ್ರಗಳಿಗೂ ನೆರವಾಗಲು ತಕ್ಕಷ್ಟಾದರೂ ಅನುಕೂಲ್ಯವಿರುವುದಿಲ್ಲ.

ಇನ್ನು, 'ಧಾರ್ಮಿಕವಾಙ್ಮಯದಲ್ಲಿಯೂ ಆಕ್ಷೇಪಾಸ್ಪದಗಳಾದ ಅನೇಕ ವಿಷಯಗಳಿರುವುದರಿಂದ ಒಬ್ಬ ಲೇಖಕನಾಗಲಿ ವ್ಯಾಖ್ಯಾತನಾಗಲಿ ಧಾರ್ಮಿಕಸಂಬಂಧವಾದ ಯಾವುದಾದರೊಂದು ವಿಷಯವನ್ನು ಒಂದು ವಿಧವಾಗಿ ಪ್ರತಿಪಾದಿಸಿದರೆ ಮತ್ತೊಬ್ಬನು ಅದಕ್ಕೆ ವಿಪರೀತವಾಗಿ ಸಾರುತ್ತಾನೆ. ಪ್ರಾಚೀನ ಮಹರ್ಷಿಗಳೂ ಆಚಾರ್ಯರೂ ವಿದ್ವಾಂಸರೂ ನಿಜವಾದ ಹಾದಿಯನ್ನೇ ಅರಿತವರಲ್ಲ; ಅವರಿಗೆ ದಿಟವಾದ ಧರ್ಮರೂಪಜ್ಞಾನವೇ ಆಗಿರುವುದಿಲ್ಲ; ಇತ್ತ ಸ್ವಲ್ಪ ಕಿವಿಗೊಟ್ಟು ಕೇಳಿರಿ, ನಾನು ಮಾತ್ರ ಈಗ ನಿಮಗೆ ನಿಜವಾದ ಧರ್ಮವನ್ನು ಹೇಳುತ್ತೇನೆ. ನೀವು ಅದರಲ್ಲಿ ವಿಶ್ವಾಸವುಳ್ಳವರಾಗಿರಿ' ಎಂಬುದಾಗಿ ಸಾಮಾನ್ಯ ಜನ ಸಮೂಹದ ಬುದ್ಧಿಭೇದವನ್ನು ಮಾಡುವ ಕ್ರಮವಾದರೂ ಈಗ ಅಲ್ಲಲ್ಲಿ ನಡೆದೇ ಇದೆ !

ಇಂತಹ ವಿವಿಧ ಪ್ರತಿಕೂಲಗಳ ಮೂಲಕ ಧಾರ್ಮಿಕ ಕಾರ್ಯಗಳು ದುಷ್ಕರ್ಮಗಳಾಗಿಯೇ ಪರಿಣಮಿಸತೊಡಗಿವೆ. ಪೂರ್ವಪರಂಪರೆ

ಯನ್ನು ಬಿಡದೆ ಸ್ವಧರ್ಮವನ್ನು ಪ್ರಮಾಣಪೂರ್ವಕವಾಗಿ ಪ್ರತಿಪಾದಿಸುವುದು ಸಹ ಸಾಮಾನ್ಯ ಜನರಿಗೆ ರುಚಿಸದು. ರುಚಿಸಿದರೂ ಅದರಂತೆ ಆಚರಿಸುವುದಿಲ್ಲ. ಆಚರಿಸದರೂ ಸಾಶಂಕವೃತ್ತಿಯೇ ತೊಲಗದು; ಆದರೆ 'ಸಂಶಯಾತ್ಮಾ ವಿನಶ್ಯತಿ' ಎಂಬ ನ್ಯಾಯಾನುಸಾರವಾಗಿ ಧಾರ್ಮಿಕ ವಿಷಯಗಳಲ್ಲಿ ಸಾಶಂಕವೃತ್ತಿಯಿರುವುದು ಹಿತಾವಹವಲ್ಲ. ಪ್ರಾಚೀನ ಮಹರ್ಷಿಗಳಿಂದಲೂ ಆಚಾರ್ಯರಿಂದಲೂ ಧರ್ಮಪ್ರವರ್ತಕರಿಂದಲೂ ಉಪದಿಷ್ಟಗಳಾದ ವಾಕ್ಯಗಳಲ್ಲಿ ವಿಶ್ವಾಸವನ್ನಿರಿಸಿ ಧರ್ಮಾನುಷ್ಠಾನ ಪರಾಯಣನಾಗತಕ್ಕದ್ದು; ಯಥಾಶಕ್ತಿಯಾದರೂ ಧರ್ಮವನ್ನಾಚರಿಸದೆ ಕೇವಲವಾಪದೂಕನಾಗಿರುವುದು ಸರ್ವಥಾ ಅನಿಷ್ಟವಾದದು.

ಮತ್ತು 'ಅಜ್ಞಾನಂ ನಾಪರಾಧ್ಯತಿ'— ಅಜ್ಞಾನವೆಂಬುದು ಅಪರಾಧವಲ್ಲ, ['ಅಜ್ಞಃ ಸುಖಮಾರಾಧ್ಯತೆ'] ಅದನ್ನು ಹೋಗಲಾಡಿಸುವುದು ಸುಲಭವು. ವಿಪರೀತ ಜ್ಞಾನವು ಮಾತ್ರ ಭಯಾವಹವಾದುದು. ಆದ್ದರಿಂದ, ಅದು ಬೇಗನೇ ತೊಲಗದು. ಅಜ್ಞಾನವನ್ನು ಜ್ಞಾನವೆಂದೂ ಜ್ಞಾನವನ್ನು ಅಜ್ಞಾನವೆಂದೂ ಧರ್ಮವನ್ನು ಅಧರ್ಮವೆಂದೂ ಅಧರ್ಮವನ್ನು ಧರ್ಮವೆಂದೂ ತಿಳಿಯುವಿಕೆಯು; ಮತ್ತು ಶುದ್ಧವಾದುದನ್ನು ಅಶುದ್ಧವೆಂದೂ ಅಶುದ್ಧವಾಗಿರುವುದನ್ನು ಶುದ್ಧವಾದುದೆಂದೂ ನುಡಿವುದು; ಈ ಮುಂತಾದುದೆಲ್ಲವೂ ವಿಪರೀತಜ್ಞಾನವೆಂದು ಹೇಳಲ್ಪಡುವುದು. ಈ ಅಭಿಪ್ರಾಯವನ್ನು ಸ್ಪಷ್ಟಗೊಳಿಸತಕ್ಕ ವಚನಗಳು ಗೀತೆಯಲ್ಲಿ ಹೀಗಿರುತ್ತವೆ.

**ಅಧರ್ಮಂ ಧರ್ಮಮಿತಿ ಯಾ ಮನ್ಯತೆ ತಮಸಾವೃತಾ ।**
**ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥**

ತಮೋಗುಣದಿಂದಾವೃತವಾದ ಅಧರ್ಮವನ್ನು ಧರ್ಮವೆಂಬುದಾಗಿಯೂ, ಸರ್ವಪದಾರ್ಥಗಳನ್ನು ವಿಪರೀತವಾಗಿಯೂ ತಿಳಿಯುವುದರಿಂದ ಅದು ತಾಮಸಬುದ್ಧಿಯೆಂದು ಹೇಳಲ್ಪಡುವುದು.

ಅದೇ ಮೇರೆಗೆ—

**ಯಯಾ ಧರ್ಮ ಮಧರ್ಮಂ ಚ ಕಾರ್ಯಂ ಚಾಕಾರ್ಯ ಮೇವಚ ।**
**ಅಯಥಾವದ್ವಿಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥**

ಪುರುಷನು ಯಾವ ಬುದ್ಧಿಯ ಮೂಲಕ ಧರ್ಮಾಧರ್ಮಗಳನ್ನೂ ಕಾರ್ಯಾಕಾರ್ಯಗಳನ್ನೂ ಯಥಾರ್ಥವಾಗಿ ಅರಿತುಕೊಳ್ಳಲಾರನೋ ಆ ಬುದ್ಧಿಯು ರಾಜಸರೂಪವಾದುದು.

ಈ ವಿಪರೀತಜ್ಞಾನವೇ 'ಅವಿದ್ಯೆ' ಯೆಂದು ಹೇಳಲ್ಪಡುವುದು. ಯೋಗ ಸೂತ್ರದಲ್ಲಿ (೨-೫);— **ಅನಿತ್ಯಾಶುಚಿದುಃಖಾನಾತ್ಮಸು ನಿತ್ಯ ಶುಚಿ ಸುಖಾತ್ಮ ಖ್ಯಾತಿರವಿದ್ಯಾ'** ಅನಿತ್ಯವಾದ ಕಾರ್ಯವರ್ಗವನ್ನು ನಿತ್ಯವೆಂದು ತಿಳಿವುದೂ, ಅಶುಚಿಯಾದ ಶರೀರವನ್ನು ಶುಚಿಯೆಂದು ಭಾವಿಸುವುದೂ, ದುಃಖವನ್ನು ಸುಖವೆಂದು ನಂಬುವುದೂ, ಅನಾತ್ಮವನ್ನು ಆತ್ಮನೆಂದಭಿ ಮಾನಿಸುವುದೂ ಅವಿದ್ಯೆಯೆನಿಸುವುದು; ಎಂಬುದಾಗಿ ಪ್ರತಿಪಾದಿಸ ಲ್ಪಟ್ಟಿದೆ.

ವರ್ತಮಾನ ಸಮಯದಲ್ಲಿ ವಿದ್ವಾಂಸರೆಂದು ಹೇಳಲ್ಪಡತಕ್ಕವರ ಲ್ಲಿಯೇ ಬಹುಜನರು ಈ ವಿಪರೀತಜ್ಞಾನದಿಂದಾವೃತರಾಗಿರುವುದು ಆಶ್ಚ ರ್ಯವಲ್ಲವೇ ? ಕಾಲಮಹಿಮೆಯು ! ಹೀಗೆ ಬಲ್ಲವರೇ ತಮಗೆ ಸಲ್ಲದ ದಾರಿಯಲ್ಲಿ ಹೆಜ್ಜೆಯನ್ನಿಡಲುಪಕ್ರಮಿಸಿದುದರಿಂದ ಭಾರತೀಯ ಜನತೆ ಯಲ್ಲಿ ಅಪರಿಹಾರ್ಯವಾದ ಹಾನಿಯಾಗುತ್ತಿರುವುದು. ಸನಾತನ ಆರ್ಯ ಧರ್ಮಾನುಯಾಯಿಗಳ ಪೀಳಿಗೆಯಲ್ಲಿಯೇ ನಾಸ್ತಿಕತೆಯೂ, ಅಧಾರ್ಮಿ ಕತೆಯೂ ಅನೀಶ್ವರತೆಯೂ ವ್ಯವಹಾರಾಪ್ರಮಾಣತೆಯೂ ಮುಂತಾದ ರಾಜಸತಾಮಸ ದೋಷಗಳು ಮಳೆಗಾಲದ ನದಿಯ ವೇಗದಂತೆ ಹೆಚ್ಚು ತ್ತಲಿವೆ. ಇಂತಹ ಸ್ಥಿತಿಯಲ್ಲಿ ಆಸ್ತಿಕತೆಯೂ ಧಾರ್ಮಿಕತೆಯೂ, ಸೇಶ್ವ ರತೆಯೂ ಪರಮಾರ್ಥಪ್ರವಣತೆಯೂ ಮುಂತಾದ ಧಾರ್ಮಿಕ ಭಾವನಾ ನುಕೂಲಗುಣಗಳು ಎಷ್ಟರಮಟ್ಟಿಗೆ ಉಳಿಯಬಹುದೆಂಬುದನ್ನು ವಾಚಕ ಮಹಾಶಯರೇ ಊಹಿಸತಕ್ಕದ್ದು.

ಪ್ರಾಯಶಃ ಸರ್ವಭಾರತ ವರ್ಷದಲ್ಲಿ ಒಂದು ಶತಕದಿಂದಲೂ ಬ್ರಿಟಿಷರ ಆಳ್ವಿಕೆಯುಂಟಾಗಿ 'ಇಂಗ್ಲಿಷ್' ಶಿಕ್ಷಣವು ಆರಂಭಿಸಲ್ಪಟ್ಟಿತು ಮೊಟ್ಟಮೊದಲು ಅಲ್ಪಸ್ವಲ್ಪವಾಗಿ ಇಂಗ್ಲೀಷವನ್ನು ಕಲಿತವರಿಗೂ ಸಹ ಬೊಗಸೆ ತುಂಬಾ ಸಂಬಳವು ಸಿಕ್ಕುತ್ತಿದ್ದಿತು. ಅದನ್ನು ನೋಡಿ ಇಂಗ್ಲೀಷ್ ಶಿಕ್ಷಣವು ಸದ್ಯಃ ಫಲದಾಯಕವಾದುದರಿಂದ ಮಿಕ್ಕ ಎಲ್ಲಾ ಉದ್ದಿಮೆಗಳನ್ನು ಬಿಟ್ಟು ಇಂಗ್ಲೀಷನ್ನೇ ಕಲಿಯಬೇಕೆಂಬ ಕುತೂಹ ಲವು ಪ್ರತಿಯೊಬ್ಬನಲ್ಲಿಯೂ ಉಂಟಾದುದರಿಂದೇ ಬ್ರಾಹ್ಮಣರೇ ಮುಂತಾದ ಬುದ್ಧಿವಂತರು ಅಹಮಹಮಿಕೆಯಿಂದ ಇಂಗ್ಲೀಷ್ ಅಭ್ಯಾಸದಲ್ಲಿ ತೊಡ ಗಿದರು. ಆಳರಸರಿಗಾದರೋ ತಮ್ಮ ರಾಜಕಾರ್ಯಗಳು ಸುಸೂತ್ರವಾಗಿ ನಡೆಯಲೆಂಬುದ್ದೇಶದಿಂದ ಇಂತಹ ಜನರ ಆವಶ್ಯಕತೆಯು ಮೊದಲೇ ಇದ್ದುದರಿಂದ ಅವರು ಇಂಗ್ಲೀಷ್ ಶಿಕ್ಷಣವು ಸರ್ವತ್ರ ಸುಲಭವಾಗು

ವಂತೆ ವ್ಯವಸ್ಥೆಗೊಳಿಸಿದರು, ಭಿಕ್ಷುಕ ವರ್ಗವು ದಕ್ಷಿಣೆಗಾಗಿ ಗಡಬಿಡಿ ಯಿಂದೋಡುತ್ತಿರುವಂತೆ ಸ್ವರಾಜ್ಯವು ಪರರಾಜ್ಯವಾದುದರಿಂದ ರಾಜ್ಯ ಕಾರ್ಯವು ಕೈಬಿಟ್ಟುಹೋದ ಮೂಲಕ ದೈನ್ಯಾವಸ್ಥೆಗೀಡಾದ ಜನಸಮೂ ಹವು ಮುಖ್ಯವಾಗಿ ಜೀವನೋಪಾಯಸಾಧನೆಯು ಇಂಗ್ಲೀಷ್ ಎಂಬ ಭರ ವಸೆಯು ನೆಲೆಗೊಂಡುದರಿಂದ ಆ ಶಿಕ್ಷಣವನ್ನೇ ಪಡೆಯಲು ಹಾತೊರೆ ದುದು. ಹೀಗೆ ವಿಶೇಷತಃ ಬುದ್ಧ್ಯುಪಜೀವಿಗಳ ವರ್ಗವು ಪರಕೀಯ ಶಿಕ್ಷಣಕ್ಕೊಳಗಾದುದರಿಂದ ಸರಕಾರಿಯ ನೌಕರಿಯು ಅತಿಶಯಸುಖಾ ವಹವಾದುದೆಂದೂ, ಅದೊಂದು ಮನ್ನಣೆಯ ಸ್ಥಾನವೆಂದೂ ಅದರಿಂದ ಹಣವು ದೊರಕುವುದೆಂದೂ, ಆ ವಿಧವಾದ ಶಿಕ್ಷಣದಿಂದ ಮನಷ್ಯನು ಆಳರಸರ ಆದರಕ್ಕೆ ಪಾತ್ರನಾಗುವನೆಂದೂ ಮತ್ತು ಅವರ ರಾಜಕಾರ ಣದಲ್ಲಿ ನಮಗೂ ಪ್ರವೇಶಾವಕಾಶವುಂಟಾಗುವುದೆಂದೂ ಈ ಮುಂತಾದ ಮೇಲೆ ದಿಟವಂತೆ ತೋರಿ ಪರಿಣಾಮದಲ್ಲಿ ಸರ್ವಥಾ ಭ್ರಾಮಕವಾದು ದೆಂದೇ ನಿಶ್ಚಿತವಾಗುವ ಭಾವನೆಯು ಸಮಾಜದಲ್ಲಿ ರೂಢವಾಯಿತು. ಹಾಗೂ ಮೊದಲು ಒಮ್ಮೊಮ್ಮೆ ಅದು ಅನುಭವವೇದ್ಯವೂ ಆದುದು. ಬ್ರಿಟಿಷರ ರೀವಯೂ, ಸಂಸ್ಕೃತಿಯೂ, ಪರಾಕ್ರಮವೂ ನ್ಯಾಯವೂ, ಕಲೆಯೂ ವಿದ್ಯೆಯೂ ಎಂಬಿವು ಲೋಕೋತ್ತರವಾದುವೆಂದೂ ಅವರು ಮನುಷ್ಯರಲ್ಲ. ಒಂದುರೀತಿಯ ಅಲೌಕಿಕರಾದ ದೇವದೂತರೇ ಇರು ತ್ತಾರೆಂದೂ ನಾವೇನು ಮತ್ತು ನಮ್ಮ ಪೂರ್ವಜರೇನು ಧರ್ಮಮು ಗ್ಧರೂ ಸೋಮಾರಿಗಳೂ ಅಲ್ಪಸಂತುಷ್ಟರೂ ಆದುದರಿಂದೇ ನಮಗೀ ದೈನ್ಯಾವಸ್ಥೆಯು ಸಂಭವಿಸಿರುತ್ತದೆಂದೂ ಎಂಬೀ ವಿಧವಾದ ಅಸೂಯಾ ಮಯ ವಿಚಾರವು ನೆಲೆಗೊಂಡಿತು. ಆದರೆ ಯಾವುದಾದರೊಂದು ಮಿಥ್ಯಾವಸ್ತುವು ಕೂಡ ಮರ್ಯಾದೆಯಲ್ಲಿರುವವರೆಗೇ ಶೋಭಿಸುವುದು. ಅದು ಮರ್ಯಾದೆಯನ್ನು ಮೀರಿದರೆ ಮಾತ್ರ ತೀವ್ರವೇ ಹಸಗೆಡು ವುದು. ಕ್ರಮೇಣ ಅದರಲ್ಲಿ ಆದರಭಾವವೂ ಕಡಿಮೆಯಾಗುವುದು. ಇದೇ ಮೇರೆಗೆ ಈಗ (ಕಾಲಾಂತರದಲ್ಲಿ) ಆ ಮನುವು ಬದಲಾಗುತ್ತಿ ರುವ ಬಗೆಯಾದರೋ ಸರ್ವಾನುಭವಗಮ್ಯವಾಗಿದೆ. ಇರಲಿ.

ಈ ಮೇಲೆ ಹೇಳಿದಂತೆ ಹುಟ್ಟಿದ ಪ್ರಾಣಿಯೆಲ್ಲಾ (ಗಂಡಿರಲಿ ಹೆಣ್ಣಿ ರಲಿ) ಇಂಗ್ಲೀಷನ್ನು ಕಲಿಯಲಾರಂಭಿಸಿದುದರಿಂದ ಆ ಶಿಕ್ಷಣ ಪ್ರವಾ ಹವು ಮೇರೆದಪ್ಪಿತು. ಪರೀಕ್ಷೆಯಲ್ಲಿ ಉತ್ತೀರ್ಣರಾಗುವ ಜನರ ಸಂಖ್ಯೆಯು ಎಲ್ಲಿಯವರೆಗೆ ಸೂರರ ಕಕ್ಷೆಯಲ್ಲಿದ್ದಿತೋ ಅಲ್ಲಿಯವರೆಗೆ ಆ ಶಿಕ್ಷಣ ಪರಿ

ಣಾಮವು ಕೌತುಕವೆನಿಸಿದ್ದಿತು; ಮುಂದೆ ಪರೀಕ್ಷೆಯಲ್ಲಿ ಉತ್ತೀರ್ಣರಾಗುವವರ ಸಂಖ್ಯೆಯು ಸಾವಿರವೂ ಹತ್ತು ಸಾವಿರವೂ ಆದುದಲ್ಲದೇ ಕೊನೆಗೆ ಅದನ್ನು ಸಹ ದಾಟಿದಾಗ ಸುಶಿಕ್ಷಿತರ ಅವಸ್ಥೆಯು ಮಳೆಗಾಲದೊಳಗಿನಖದ್ಯೋತ (ಹೊನ್ನೆಹುಳ) ಗಳಂತೆಯೂ ಶ್ರಾವಣ ಮಾಸದೊಳಗಿನ ಪಾರಿಜಾತಕ ಪುಷ್ಪಗಳಂತೆಯೂ ಆದುದು. ಆಗುತ್ತಲಿದೆ. ಖದ್ಯೋತಗಳು ರಾತ್ರಿಮಟ್ಟಿಗಾದರೂ ವೃಕ್ಷಾದಿಗಳನ್ನು ಕ್ಷಣಕ್ಷಣದಲ್ಲಿಯೂ ಸುಶೋಭಿತಗಳನ್ನಾಗಿ ಮಾಡುತ್ತಿರುವುವು. ಪಾರಿಜಾತಕ ಪುಷ್ಪಗಳ ಸುಗಂಧವು ಸಾಯಂಕಾಲದಲ್ಲಿ ಸುತ್ತಲೂ ಪಸರಿಸುವುದು. ಆದರೆ ವಿಶ್ವವಿದ್ಯಾನಿಲಯದ ಪರೀಕ್ಷಾಚಕ್ರದಿಂದ ಹೊರಬಿದ್ದ ಸುಶಿಕ್ಷಿತರು ಅಷ್ಟು ಮಾತ್ರವಾದರೂ ಉಪಯೋಗವಿಲ್ಲದಂತಾಗುವ ಪರಿಸ್ಥಿತಿಯುಂಟಾದುದರಿಂದ ಪಾಪ ! ವರ್ಷಾ ಕಾಲದಲ್ಲಿ ವಿದ್ಯುದ್ದೀಪದ ಸುತ್ತಲೂ ನೆರೆವ ಅಗಣಿತ ಪತಂಗಗಳಂತೆ ಇದೀಗ ಅವರ ಸ್ಥಿತಿಯಾಗಿರುವುದಲ್ಲವೇ ?

ಪೂರ್ವಾನುಭವ ಮೂಲಕ ಈಗ ಇಂಗ್ಲೀಷ್ ಶಿಕ್ಷಣವನ್ನು ದೂರೀಕರಿಸುವುದಕ್ಕೂ ಧೈರ್ಯವು ಸಾಲದು. ಮತ್ತು ಹಿರಿಯರು ಗಳಿಸಿಟ್ಟ ಹೊಲಮನೆಗಳನ್ನು ಮಾರಿ ಸಾವಿರಾರು ರೂಪಾಯಿಗಳನ್ನು ವ್ಯಯಮಾಡಿಯೂ ೧೦-೧೫ ವರ್ಷಗಳವರೆಗೆ ಬಿಡುವಿಲ್ಲದೆ ಘೋಕಿ ಹಾಕಿ ( ಅಭ್ಯಾಸಿಸಿ ) ಯೂ ಮುಂದೆ ಏನು ತಾನೇ ಮಾಡತಕ್ಕದ್ದು ! ಎಂಬೀ ವಿವೇಚನೆಯೂ ತೋಲಗದು. ಇಂದಿಗೆ ೨೦-೨೫ ವರ್ಷಗಳ ಹಿಂದೆ ಕರ್ಣಾಟಕದಲ್ಲಿ ಬಹುತರವಾಗಿ ಬ್ರಾಹ್ಮಣರೇ ಆಂಗ್ಲಶಿಕ್ಷಣಾಧೀನರಾದರು ಅದರಿಂದ ಅವರು ದೊಡ್ಡ ನೌಕರರಾದುದನ್ನೂ ಸಂಬಳದ ಕಂಚಾಣಗಳನ್ನು ಚಂಚಿಯಲ್ಲಿ ತುಂಬಿಕೊಂಡುದುದನ್ನೂ ಕಣ್ಣಾರೆ ಕಂಡವರಾದ ಮಿಕ್ಕ ಅಣ್ಣಗಳ ಬಾಯಲ್ಲಿ ಜುಳುಜುಳು ನೀರು ಬರದಿರುವುವೇ ? ಆ ಜನರು ತಮ್ಮ ತಮ್ಮ ಪರಂಪರಾಪ್ರಾಪ್ತಗಳಾದ ಕಸಬು (ಉದ್ದಿಮೆ) ಗಳನ್ನು ಬಿಟ್ಟು ತಾವೂ ಶಿಕ್ಷಿತರಾಗುವ ಮಾರ್ಗವನ್ನೇ ಅವಲಂಬಿಸಿದರು. ಸ್ವಶಕ್ತ್ಯನುಗುಣವಾಗಿ ಶಿಕ್ಷಣವನ್ನು ಪಡೆದು ಮೇಲಿನ ವರ್ಗದವರೊಡನೆ ಸ್ಪರ್ಧೆಯನ್ನು ಮಾಡತೊಡಗಿದರು. ಅದರಿಂದ ಪರಸ್ಪರ ದ್ವೇಷ, ಅಸೂಯೆ ಮುಂತಾದ ದೋಷಗಳು ಪ್ರಾದುರ್ಭವಿಸಿದವು.

ಆದರೆ ' **ಸರ್ವಮತಿಮಾತ್ರಂ ದೋಷಾಯ** ' ಮೇಲೆ ಹೇಳಲ್ಪಟ್ಟಂತೆ ಯಾವ ಸಂಗತಿಯಾದರೂ ಮರ್ಯಾದೆಯನ್ನು ಮೀರಿಹೋದು

ದಾವರೆ ಅದು ದೋಷಾವಹವಾಗುವುದೆಂಬ ನ್ಯಾಯಾನುಸಾರವಾಗಿ ಮೂಲತಃ ಉತ್ತಮವಾದುದೆಂದರಿಯಲ್ಪಡುವ ಈಗಣ ಶಿಕ್ಷಣವಾದರೂ ದೋಷಾವಹವಾದುದೆಂಬುದು ಅನುಭವದಿಂದ ಮೆಲ್ಲ ಮೆಲ್ಲನೆ ಮನವರಿಕೆಯಾಗದಿರದು.

ಯಾವ ಶಿಕ್ಷಣವು ಸಾತ್ವಿಕ ( ಸತ್ವಪ್ರಧಾನ ) ವಾದುದೋ ಅದು ಎಂದೂ ಅನಿಷ್ಟವಲ್ಲವಾದುದರಿಂದ, ನಾವಾದರೂ ಅದನ್ನು ಮನ್ನಿಸುತ್ತೇವೆ. 'ತಜ್ಜ್ಞಾನಂ ಪ್ರಶಮಕರಂ ಯದಿಂದ್ರಿಯಾಣಾಂ' ಯಾವ ಜ್ಞಾನವು ಅಂತರ್ಬಹಿರಿಂದ್ರಿಯಗಳಿಗೆ ಶಾಂತಿಪ್ರದವಾದುದೋ ಅದುವೇ ನಿಜವಾದ ಜ್ಞಾನವು. ಎಂಬುದಾಗಿ ಅಭಿಯುಕ್ತರು ಹೇಳುತ್ತಾರೆ. ಮತ್ತು ಈ ವಿಷಯಕವಾಗಿ—

ತತ್ಪ್ರಾಜ್ಞತ್ವಂ ಹರತಿ ವಿಮಲಂ ಯೇನ ಶೀಲಂ ನ ಕಾಮ।
ಸ್ತದ್ಧೀರತ್ವಂ ಪ್ರಶಮವಶತಾಂ ಯಾನ್ತಿ ಯೇನೇಂದ್ರಿಯಾಣಿ॥
ತದ್ವೈದಗ್ಧ್ಯಂ ಭುವನಜಯಿನೀ ವಂಚ್ಯತೇ ಯೇನ ಮಾಯಾ।
ತತ್ಪಾಂಡಿತ್ಯಂ ಭವಪರಿಭವಃ ಶಾನ್ತಿ ಮಾಯಾತಿ ಯೇನ॥

ಎಂಬುದಾಗಿ ಹೇಳಲ್ಪಟ್ಟಿರುವ ವಾಕ್ಯಗಳನ್ನಾದರೂ ನಾವು ಚೆನ್ನಾಗಿ ನೆನಪಿನಲ್ಲಿಟ್ಟುಕೊಳ್ಳುವುದು ಯುಕ್ತವು.

ಆದರೆ ವರ್ತಮಾನ ಸಮಯದಲ್ಲಿ ಜನರಿಗೆ ಅಭಿನಿವೇಶಪೂರ್ವಕವಾಗಿ ಒದಗಿಸಿಕೊಡುವ ಶಿಕ್ಷಣವು ಇಂದ್ರಿಯ ಪ್ರಶಮಕರವಾದುದೇ ? ಅದಕ್ಕೆ ಬದಲು ಅವುಗಳನ್ನು ಉಚ್ಛೃಂಖಲ ( ಕ್ಷುಬ್ಧ ) ಗೊಳಿಸುತ್ತಿರುವುದೇ ವಿಶೇಷವಾಗಿ ದೃಗ್ಗೋಚರವಾಗುತ್ತಿರುವುದಿಲ್ಲವೇ ? ಅದರಿಂದ ಜನರ ಅಂತಃಕರಣಗಳಲ್ಲಿ ಹಿತಾವಹವೂ, ಉಚ್ಚತಮವೂ, ಆದ ವಿಚಾರೋತ್ಪತ್ತಿಗಾಸ್ಪದವಿಲ್ಲದಂತಾಗಿ ವಿಪರೀತ ಭಾವನೆಗಳೇ ಮೂಡುತ್ತಲಿವೆ. ಈಶ್ವರ ವಿಷಯಕವಾಗಿಯೂ, ಧರ್ಮವಿಷಯಕವಾಗಿಯೂ ಆದರಭಾವವೇ ನಶಿಸತೊಡಗಿ ಕೇವಲ ತಾರ್ಕಿಕತೆಯೂ, ವಾವದೂಕತೆಯೂ ದುರಭಿಮಾನವೂ ಮಾನ್ಯರಲ್ಲಿಯು ಸಹ ಅನಾದರಬುದ್ಧಿಯೂ ಎಂಬೀ ದೋಷಗಳು ಅತಿರೇಕವಾಗಿರುವವು. ಮಹಾಪದವೀಧರರಲ್ಲಿಯು ಕೂಡ ದೃಷ್ಟದ ಆಚೆಗೆ ಅದೃಷ್ಟವಾದುದೊಂದು ವಸ್ತುವಿರುವುದೆಂಬ ಎಚ್ಚರವೇ (ಅರಿವೇ) ಉಳಿದಿಲ್ಲ. ಅವರಂತಃಕರಣದೊಳಗಿನ ಸ್ವಾಭಾವಿಕಶ್ರದ್ಧೆಯು ನಷ್ಟವಾ

ಗಿರುವುದರಿಂದ ಅವರು 'ಧರ್ಮ' ವೆಂದರೇನು ? ಅದೊಂದು ಬೂಟಾಟಿಕೆಯೆಸ್ಸೆ ! ಎಂದು ಥಟ್ಟನೆ ನುಡಿಯುತ್ತಾರೆ. ಮಾನ್ಯರಾರಿರುವರೋ ಅವರ ಮಾನಮರ್ಯಾದೆಗಳನ್ನಾದರೂ ಉಳಿಸಬೇಕೆಂಬ ವೃತ್ತಿಯು ಆ ಸುಶಿಕ್ಷಿತ ಮಹೋದಯರಲ್ಲಿ ಸಮೂಲವಾಗಿ ನಷ್ಟವಾಗಿದೆ. ಅನಾದಿ ಕಾಲದಿಂದ ನಡೆದು ಬಂದ ವೇದಾಗಮ ಪ್ರಸಿದ್ಧವಾದ 'ಧರ್ಮ'ವನ್ನು ಇದೊಂದು ಕಲ್ಪನೆಯ ಪರಿಣಾಮವೆಂದು ಭಾವಿಸಿ, 'ಈ ಕಾಲವೇ ಬೇರೆಯಾಗಿದೆ. ಈ ನವಯುಗದಲ್ಲಿ ಆ ಹಳೆಯ ವೇದಾಗಮಗಳಿಂದೇನೂ ಪ್ರಯೋಜನವಿಲ್ಲ. ಈಗಣ ನಮ್ಮ ಸುಧಾರಣೆಯ ಪ್ರವಾಹವನ್ನು ಅಡ್ಡಗಟ್ಟುವ ಒಡ್ಡಿನಂತಿರುವ ಆ ವೇದಶಾಸ್ತ್ರರೂಪವಾದ ವೈದಿಕ ಸಾಹಿತ್ಯವನ್ನೇ ನಾಮಾವಶೇಷವನ್ನಾಗಿ ಮಾಡಿದ ಹೊರತು ನಾವು ಸುಧಾರಿಸುವ್ರದೇ ಅಸಂಭವವು;' ಎಂಬುದಾಗಿ ನವ್ಯಶಿಕ್ಷಾದೀಕ್ಷಿತರಲ್ಲಿ ಬಹು ಜನರು ನಿರ್ಭಯದಿಂದ ನುಡಿಯುತ್ತಿರುವರು.

ಅಯ್ಯೋ ! ಯಾವ ವಿದ್ಯೆಯು ಮೊದಲು ಹೊಟ್ಟೆಯ ಸಲುವಾಗಿ ಗ್ರಹಿಸಲ್ಪಟ್ಟುದೋ ಅದುವೇ ವೇದಾಗಮ ಪ್ರಸಿದ್ಧವೂ ಅನಾದಿಕಾಲದಿಂದ ನಡೆದು ಬಂದ:ದೂ ಆದ 'ಧರ್ಮ' ವನ್ನೇ ನಾಶಪಡಿಸುವುದರಲ್ಲಿ ಈಗ ಸಜ್ಜಾಗಿರುವುದು. ಅದು ಪ್ರಕೃತದಲ್ಲಿ ಸನಾತನ ಧರ್ಮವನ್ನು ಪ್ರತಿಭಟಿಸಿ ನಡೆಸಿರುವ ಗಲಭೆಯ ಸಂಬಂಧವಾದ ಅಧಿಕ ವೃತ್ತಾಂತವನ್ನು ನಾವೇ ಹೇಳಬೇಕೆನ್ನುವ ಹಾಗಿಲ್ಲವಷ್ಟೇ ?

ಇದು ನಮ್ಮ ಕರ್ನಾಟಕದ ಸ್ಥಿತಿಯು. ಇನ್ನು ಇತರ ಪ್ರಾಂತಗಳಿಗೂ ಧರ್ಮದೃಷ್ಟ್ಯಾ ನ್ಯೂನಾಧಿಕ ಪ್ರಮಾಣದಿಂದ ಇದೇ ಅವಸ್ಥೆಯುಂಟಾಗಿದೆ. ಆಂಗ್ಲಭಾಷಾಭಿಜ್ಞಮಂಡಳಿಯು ಅಧಿಕಾರಾರೂಢವೂ ಲಕ್ಷ್ಮೀಕೃಪಾಕಟಾಕ್ಷಪಾತ್ರವೂ ಆದುದರಿಂದ ಆದರ ಮುಂದೆ ಹಳೆಯ ಹೊತ್ತಿಗೆಯ (ಪಳೆವಾತಿನ) ಜಾಣತನವುಳ್ಳ 'ಶಾಸ್ತ್ರಿ' ವರ್ಗದ ಬೆಳಕು ಮಸಣಿಸಿತು. ಮೆಲ್ಲಮೆಲ್ಲನೆ ಈ ಪದವೀಧರರೇ "ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।" ಎಂಬುಕ್ತಿಯಂತೆ ಶಿಷ್ಟರೂ ಕಲ್ಯಾಣಮಾರ್ಗದರ್ಶಕರೂ ಆಗಿರುತ್ತಾರೆಂಬ ಭಾವನೆಯು ಅಜ್ಞರಲ್ಲಿ ಹುಟ್ಟಿದುದರಿಂದ ಆ ಅಜ್ಞಜನರಾದರೂ ಕ್ರಮೇಣ ಅವರನ್ನೇ ಅನುಕರಣಮಾಡುತ್ತಲಿದ್ದಾರೆ. ಹೀಗೆ ಬುದ್ಧಿವಂತರೂ ಅಜ್ಞರೂ ನೀರಸವಾದ ಆಧಿಭೌತಿಕ ಸುಖಕ್ಕೆ ಮರುಗುತ್ತಿರುವುದರಿಂದ ಮೊದಲಿನ ಧರ್ಮಸಂಬಂಧವಾದ ಉದಾತ್ತ ಕಲ್ಪನೆಯು ಅಡಗಲಾರಂಭಿಸಿದೆ, ಆ ಅಧುನಿ

ಕರ ಸ್ವೈರವೃತ್ತಿಗೆ ಸನಾತನ ಧರ್ಮವು ರುಚಿಸದಂತಾಗಿ ಅವರು ಧರ್ಮ ವೆಂಬುದು 'ರಬ್ಬರ' ಹೇಗೋ ಹಾಗೆ ಹಿಡಿದೆಳೆದರೆ ಹಿಗ್ಗಬೇಕು, ಬಿಟ್ಟರೆ ಮುದುಡಿಕೊಳ್ಳಬೇಕು; ಮತ್ತು ಅದುವೇ ತಮ್ಮನ್ನು ಹಿಂಬಾಲಿಸಬೇಕು. ತಾವು ಅದನ್ನನುಸರಿಸಿ ನಡೆವುದಾದರೋ ಸುಶಿಕ್ಷಿತರ ವ್ಯಕ್ತಿಸ್ವಾತಂತ್ರ್ಯಕ್ಕೆ ಕೊರತೆಯುಂಟಾಗುವುದು; ಎಂಬೀ ಮುಂತಾದ ತರ್ಕಪ್ರಧಾನವಾದ ವಿಚಾರ ಪ್ರವಾಹದಲ್ಲಿ ಧುಮಿಕಿದ್ದಾರೆ. ಆದರೆ 'ಇತಿಶುಶ್ರುಮ **ಪೂರ್ವೇಷಾಂ ಯೇ ನಸ್ತದ್ವ್ಯಾಚಚಕ್ಷಿರೇ'** ಎಂಬ ವಾಕ್ಯವನ್ನು ದುರ್ಲಕ್ಷಿಸಿರುವ ಮೂಲಕವೇ ಆ ತರ್ಕವು ಭ್ರಾಮಕವೂ ಅಪ್ರತಿಷ್ಠಿತವೂ ಆಗಿರುವುದೆಂಬ ವಿಚಾರವು ಅವರ ತೀಕ್ಷ್ಣಜ್ಞಾನತಂತುಗಳಲ್ಲಿ ಮೊಳೆಯಲಾಸ್ಪದವಿಲ್ಲದಂತಾಗಿರುತ್ತದೆ. ಇದರಿಂದ ಧರ್ಮದಲ್ಲಿ ಅನುಪಯುಕ್ತವಾದ ಗಲಭೆಯುಂಟಾಗಿದೆ. ಇವರ ನಡವಳಿಕೆಗಳಿಂದ ಸರ್ವಧರ್ಮಬಂಧನಗಳೂ ಜಾತಿಬಂಧನಗಳೂ ಶಿಥಿಲವಾಗಿ ಯಾರು ಯಾರನ್ನೂ ಲೆಕ್ಕಿಸದಂತಾಗಿರುವುದು. ಧರ್ಮದಲ್ಲಿ ಶ್ರದ್ಧೆಯೇ ಇಲ್ಲದವರು ಧರ್ಮದ ಯಾಥಾತ್ಮ್ಯವನ್ನು ಹೇಗೆ ತಾನೇ ಅರಿಯಬಲ್ಲರು ? ಶ್ರದ್ಧೆಯು ಇದ್ದ ಹೊರತು ಧರ್ಮದಂತೆ ನಡೆಯಲು ಸಾಧ್ಯವಿಲ್ಲ. ಮತ್ತು ಧರ್ಮದಲ್ಲಿಯೂ ಆಚಾರದಲ್ಲಿಯೂ ಬದಲಾವಣೆಯಾಗಬೇಕೆಂದು ಘೋಷಿಸುವ ಈ ಮಂಡಳಿಯ ಮನೋಭಿಪ್ರಾಯವು ಚಿಂತನೀಯವಾಗಿದೆ. ಕೋಮಲಾಂತಃಕರಣವುಳ್ಳವನಾದ ಒಬ್ಬ ಪಸುಳನನ್ನು ಮಿಶನರೀ ಶಾಲೆಗೆ ಕಳುಹಿದರೆ ಸ್ವಲ್ಪ ದಿವಸಗಳಲ್ಲಿಯೇ ಆ ಬಾಲಕನ ಸ್ಥಿತಿಯು ಯಾವ ವಿಧವಾಗಿ ಪರಿಣಮಿಸುವುದೆಂಬುದನ್ನು ಎಲ್ಲರೂ ಬಲ್ಲರು. ಈ ಮಂಡಳಿಯಾದರೂ ಧರ್ಮದಲ್ಲಿಯೂ ಆಚರಣೆಗಳಲ್ಲಿಯೂ ಬದಲಾವಣೆಯಾಗತಕ್ಕದ್ದೆಂದು ಹಾತೊರೆವ ಪರಿಯಾದರೂ ಯಾವುದರ ದ್ಯೋತಕವಿರಬಹುದು ? ಮನಸ್ಸು ಕಲುಷಿತವಾಗಿರುವುದರ ದ್ಯೋತಕವಲ್ಲವೇ ? ಶ್ರದ್ಧಾಭಾವದ ಹೆಗ್ಗುರುತಲ್ಲವೇ ? ಸದ್ಭಾವನೆಗೂ ಕೂಡ ಅಂಧ ಶ್ರದ್ಧೆಯೆಂದೇ ಹೆಸರಿಡುವ ಅಪ್ರಾಮಾಣಿಕ ಗುಣಾಭಿವ್ಯಂಜಕವಲ್ಲವೇ ?

ದೇಶದ ಸ್ಥಿತಿಗಿಂತಲೂ ಧರ್ಮದ ಸ್ಥಿತಿಯು ಮಿಗಿಲಾದುದಲ್ಲವೇ ? ದೇಶವು ಕೇವಲ ಈ ಜನ್ಮದ ಮಟ್ಟಿಗಿರುವುದು. ಧರ್ಮವಾದರೋ ಅನೇಕ ಜನ್ಮಗಳ ಪರ್ಯಂತ ಸಂಬಂಧವುಳ್ಳದ್ದಾಗಿದೆ. ದೇಶಸ್ಥಿತಿಯು ಪರಿವರ್ತನಶೀಲವಾದುದು. ಧರ್ಮದ ಸ್ಥಿತಿಯಾದರೋ ಅಂತಲ್ಲ; ದೇಶದೊಳಗಿನ ಪಕ್ಷಭೇದಗಳು ಸರ್ವಥಾ ಇಲ್ಲದಂತಾಗಿ ಐಕ್ಯವೇ ತ್ರಿಕಾಲಾ

ಬಾಧಿತವಾಗಿ ಉಳಿಯುವುದು ಶಕ್ಯವೇ ಇಲ್ಲ. ಪಕ್ಷಭೇದಗಳು ಸ್ವಾಭಾವಿಕಗಳೂ ಅಪರಿಹಾರ್ಯಗಳೂ ಆಗಿವೆ. .. ಪ್ರಕೃತಿವೈಚಿತ್ರ್ಯವನ್ನು ಅಳುಕಿಸಲು ಅದಾವನು ಸಮರ್ಥನು ? ಮುಖ್ಯಭೇದಗಳೂ ಅವಾಂತರಭೇಧಗಳೂ ಎಂಬಿವು ಒಂದು ಜನಾಂಗದ ಅಥವಾ ರಾಷ್ಟ್ರದ ಸುಧಾರಣೆಗೆ ಪ್ರತಿಬಂಧಕಗಳಾಮದರಿಂದ ಅವೆಲ್ಲಾ ಅಳಿದುಹೋಗಿ ಸರ್ವತ್ರ ಏಕರೂಪವೇ ತೋರಬೇಕೆಂಬ ಹಂಬಲದಿಂದ ಅದಕ್ಕಾಗಿಯೇ ಪ್ರಯತ್ನಿಸುತ್ತಿರುವ ಬಂಟರಿಗೆ ಇನ್ನು ಮುಂದೆ ಪ್ರಾಣಿವರ್ಗದ ಸ್ತ್ರೀ-ಪುಲ್ಲಿಂಗ ಭೇದವಾದರೂ ಅಸಹ್ಯವಾಗುವದೆಂದು ಈಗಲೇ ನಾವು ಊಹಿಸಬಾರದೇಕೆ ? ಅಂತಹ ಅಘಟನಘಟನೆಯು ಈ ಸುಶಿಕ್ಷಿತರಿಗೆ ಸಾಧ್ಯವಾದ ಪಕ್ಷದಲ್ಲಿ ಅದಾದರೂ ಸುಧಾರಣೆಯ ವೈಭವದ ಅತಿರೇಕವೆಂದೇ ಹೇಳಲ್ಪಡುವುದಲ್ಲವೇ ?

ನವಮತಾಭಿಜ್ಞಮಂಡಳಿಯಿಂದ ಪ್ರಕೃತದಲ್ಲಿ ಧರ್ಮಸಂಬಂಧವಾದ ವಿಪರೀತಭಾವನಾಮಯವಾದ ಕೋಲಾಹಲವು ಹೆಚ್ಚುತ್ತಲಿರುವುದೆಂಬುದನ್ನು ನಾವೇ ಹೇಳುತ್ತಿರುವೆವಂತಲ್ಲ. ಆಂಗ್ಲಭಾಷಾಭಿಜ್ಞರಲ್ಲಿ ಕೆಲವರು ಸ್ವಧರ್ಮನಿಷ್ಠೆಯುಳ್ಳವರೂ ಆಚಾರಶೀಲರೂ ಇದ್ದಾರೆ; ಅವರಾದರೂ ಹಾಗೇ ನುಡಿಯುತ್ತಿರುವರು. ಆದ್ದರಿಂದ 'ನವಮತಾಭಿಜ್ಞರು' ಎಂಬುದಾಗಿ ಹೇಳಲ್ಪಡುವುದಾದರೋ ' **ಛತ್ರಿಣೋ ಯಾನ್ತಿ** ' ಎಂಬ ನ್ಯಾಯಾನುಸಾರವಾಗಿರುವುದೆಂದು ತಿಳಿಯತಕ್ಕದ್ದು.

ಈ ನವಮತಾಭಿಜ್ಞರು ಧರ್ಮವೆಂಬುದು ಏಕಾಂಗಿಯಾಗಿರುವುದೆಂದೂ ತತ್ಪ್ರವರ್ತಕರೂ ಏಕಾಂಗಿಗಳಾಗಿರುವರೆಂದೂ ತಮ್ಮ ತಿಳಿವಳಿಕೆಯೋ ವ್ಯಾಪಕವಿಚಾರಪರಿಪ್ಲುತವಾದುದೆಂದೂ ಭಾವಿಸಿದ್ದಾರೆ. ಅದು ಕಾರಣವೇ ಈ ಮಹಾಭಾಗರು ಧರ್ಮವು ಸರ್ವಾಂಗಸುಂದರವಾಗಿ ತೋರಬೇಕಾದರೆ ಅದರ ಪ್ರವರ್ತಕರು ಈಗಣ ಪರಿಸ್ಥಿತಿಗನುಗುಣವಾಗಿ ನಮ್ಮಂಥವರೇ ಆಗಿರುವುದು ಯುಕ್ತವೆಂದು ನುಡಿಯುತ್ತಾರೆ. ಇಷ್ಟೇ ಅಲ್ಲ, ಧರ್ಮಪೀಠಾಧೀಶರು ನವಮತವಾದಿಗಳೇ ಇರತಕ್ಕದ್ದೆಂಬಭಿನಿವೇಶವುಳ್ಳವರಾಗಿ ಸ್ವಾಭಿಮತಸಿದ್ಧಿಗೋಸ್ಕರ ಹಂಚಿಕೆಯ ಹಲವು ಹುನ್ನಾರುಗಳನ್ನು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಮಾಡತೊಡಗಿದ್ದಾರೆ. ಸರ್ವಪೀಠಾಧೀಶರೂ ಇಂತಪ್ಪ ನವ್ಯಶಿಕ್ಷಿತರೇ ಆದ ಪಕ್ಷದಲ್ಲಿ ಕೇಳುವುದೇನು ? ಗುರುಗಳೂ ಶಿಷ್ಯರೂ ಒಂದೇ ಮಾಲೆಯೊಳಗಿನ ಮಣಿಗಳಾಗುವರು ! ಇವರ ಜ್ಞಾನತಂತುಗಳ ಚುರುಕತನವು ಕೇವಲ ತರ್ಕಪ್ರತಿಷ್ಠವಾದುದು.

ಇವರಲ್ಲಿ ಒಬ್ಬನು ಧರ್ಮವು ಅಂದರೇನು ? ಎಂಬುದಾಗಿ ಪ್ರಶ್ನೆ ಮಾಡು ವನು; ಮತ್ತೊಬ್ಬನು ತತ್‌ಕ್ಷಣವೇ ಅದಾವ ಮಹತ್ತರವಾದ ವಿಷಯವು? ಧರ್ಮವು ಅಂದರೆ ಸೋಮಾರಿಗಳಾದ ಹಳಬರಿಂದ ಕಲ್ಪಿಸಲ್ಪಟ್ಟ ಒಂದು ವಿಧವಾದ ಅಂಧಶ್ರದ್ಧಾಮಯ ಭಾವನೆಯಲ್ಲದೆ ಮತ್ತೇನು ? ಎಂದು ಸ್ವತರ್ಕಾರೂಢಬುದ್ಧಿಯ ಬೆಳಕನ್ನು ಬೀರುವನು ! ಇಂತಹ ಸ್ಥಿತಿಯು ಪರವಿದ್ಯಾಪ್ರಭಾವದಿಂದೇ ಸಂಭವಿಸಿರುವುದಲ್ಲವೇ **'ಜನಕಾದೇಃ ಕಥಂ ರಾಜ್ಯಮಿತಿಚೇದ್ದೃಢ ಬೋಧತಃ'** ಶಿವಜ್ಞಾನಸಂಪನ್ನನಾದ ಜನ ಕನು ಅದೆಂತು ರಾಜ್ಯವನ್ನಾಳಿದನು ? ಎಂಬುದಾಗಿ ಬೋಧ್ಯನು ಪ್ರಶ್ನೆಯನ್ನು ಮಾಡಲು ಬೋಧಕನು— ಜನಕರಾಜನಿಗೆ ದೃಢಬೋಧ ವಿದ್ದಿತು. ದೃಢವಾದ ಬೋಧವುಳ್ಳವನ (ಸ್ಥಿತಿ ಪ್ರಜ್ಞನ) ವೃತ್ತಿಯು ಅನ್ಯ ಯಾವುದರಿಂದಲೂ ವಿಕಳತೆಯನ್ನು ಹೊಂದದು; ಎಂದುಪದೇಶಿಸಿದನು. ಆದರೆ, ಈ ನವಮತಾಭಿಜ್ಞರಿಗೆ ದೃಢಬೋಧವಂತೂ ದೂರವಿರುವುದು; ಧರ್ಮವಿಷಯದಲ್ಲಿಯೂ ಅಲ್ಪ ಬೋಧವು ಕೂಡ ಉಂಟೋ ಇಲ್ಲವೋ ಇಂತಹ ಸ್ಥಿತಿಯಲ್ಲಿ ಧಾರ್ಮಿಕ ಸಂಬಂಧವಾದ ಪ್ರತಿಯೊಂದು ವಿಚಾ ರದಲ್ಲಿಯೂ, ಇವರ ಚಿತ್ತಸ್ಥೈರ್ಯವು ಇರುವ ಬಗೆ ಹೇಗೆ ?

ಇವರು ತಮ್ಮಲ್ಲಿ ಅದಾವ ವೈಗುಣ್ಯವಿರುವುದೆಂಬುದನ್ನು ತಾವೇ ನಿರಭಿಮಾನಪೂರ್ವಕವಾಗಿ ವಿಚಾರಿಸಿ ಅದನ್ನು ಬದಿಗಿಟ್ಟು ಶ್ರದ್ಧೆಯೊ ಡನೆ ಧರ್ಮದ ತಾತ್ವಿಕ ಸ್ವರೂಪವನ್ನು ಕಂಡುಕೊಳ್ಳಲು ಪ್ರಯತ್ನಿಸು ವುದಾದರೆ ಈಗ ಉಲ್ಬಣಾವಸ್ಥೆಯನ್ನು ಹೊಂದುತ್ತಲಿರುವ ಧಾರ್ಮಿಕ ಸಂಬಂಧವಾದ ಹುಡುದಿಯು ಶೀಘ್ರವಾಗಿಯೇ ಶಮನವಾಗಬಹುದು.

ಇನ್ನಾದರು ಸನಾತನಧರ್ಮಾನುಯಾಯಿಗಳು ತಮ್ಮ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ಧರ್ಮದ ಸಾಧಾರಣಬೋಧವಾದರೂ ದೊರಕುವ ಹಾಗೆ ಯೋಗ್ಯವಾದ ಅನುಕೂಲ್ಯವನ್ನು ಒದಗಿಸಿಕೊಡುವ ಪಕ್ಷದಲ್ಲಿ ಈಗ ಸಂಭವಿಸಿರುವ ಧಾರ್ಮಿಕ ನ್ಯೂನತೆಯು ದೂರಾಗುವದರಲ್ಲಿ ಸಂದೇಹವೇ ಇಲ್ಲ. ಕುಮಾರಿಲಭಟ್ಟರು ಸ್ವಮತಶಾಸ್ತ್ರಗಳಲ್ಲಿ ನಿಷ್ಣಾತ ರಾಗಿ ದೃಢಬೋಧವನ್ನು ಸಂಪಾದಿಸಿದ ತರುವಾಯವೇ ಜೈನಪಂಡಿತರ ಬಳಿಯಲ್ಲಿ ಜೈನಗ್ರಂಥಗಳನ್ನು ಅಭ್ಯಾಸಿಸಲಿಲ್ಲವೇ ? ಆದರೂ ಆ ಭಟ್ಟ ಪಾದರಲ್ಲಿ ಯಾವಜ್ಜೀವವೂ ಸ್ವಮತಶ್ರದ್ಧೆಯು ಅಬಾಧಿತವಾಗಿದ್ದಿತೆಂಬ ಸಂಗತಿಯು ಸುಪ್ರಸಿದ್ಧವಾಗಿರುವುದು, ಇರಲಿ.

ಈಗಣ ಲೌಕಿಕ ಶಿಕ್ಷಣದ ಪ್ರಭಾವವು ಹೇಗಿರುವುದು, ಮತ್ತು ಅದರಿಂದ ಸಂಭವಿಸುತ್ತಿರುವ ಧಾರ್ಮಿಕ ನ್ಯೂನತೆಯು ಹೇಗೆ ದೂರವಾಗಬಹುದು; ಎಂಬೀ ವಿಷಯಕವಾದ ವಿಚಾರವನ್ನು ನಾವು ಪ್ರಾಂಜಲತನದಿಂದ ಇಲ್ಲಿ ಹೇಳಿದ್ದೇವೆ. ಹೀಗೆ ನುಡಿಯಲು ಕಾರಣವೇನೆಂದರೆ, ನವಮತವಾದಿಗಳು ದುರಾಗ್ರಹದಿಂದಲೂ ಅವಿಚಾರದಿಂದಲೂ ಅದನ್ನು ಸಾಮಾನ್ಯವಾಗಿ ತಿಳಿಯದಿತ್ತಿರಬಹುದಲ್ಲವೇ ? ಹೇಗಾದರೂ ನಾವು ಅಂಗೀಕೃತವಾದ ಕಾರ್ಯವನ್ನು ಕೊನೆಯ ಉಸಿರಾಡಿಸುವ ತನಕ ಬೇಸರವಿಲ್ಲದೆ ಮಾಡಬೇಕೆಂಬ ದೃಢಸಂಕಲ್ಪವುಳ್ಳವರಾಗಿದ್ದೇವೆ. ಅದನ್ನು ಸಾರ್ಥಕಗೊಳಿಸಲು ಸಮರ್ಥನಾದ ಪರಶಿವನನ್ನು ಸ್ಮರಿಸಿ ಪ್ರಕೃತವನ್ನು ನುಸರಿಸುವಾ !

ಈ ಹಿಂದೆ ಪ್ರತಿಪಾದಿಸಲ್ಪಟ್ಟಿರುವ ಮೇರೆಗೆ ವೈದಿಕಸಾಹಿತ್ಯವು ಅಪರಿಮಿತವಾಗಿರುವುದಾದರೂ **" ಯತ್ಸಾರಭೂತಂ ತದುಪಾಸಿತವ್ಯಂ "** ಎಂಬಂತೆ ಮುಮುಕ್ಷುಜನರು ತಮಗುಪಾದೇಯವಾದುವನ್ನೇ ಸ್ವೀಕರಿಸಬೇಕೆಂಬಭಿಪ್ರಾಯವು ಸಿದ್ಧಿಸುವುದು. ಆದರೆ ಮುಮುಕ್ಷುಗಳೆಂದು ಹೇಳಿಸಿಕೊಳ್ಳಲ್ಪಡತಕ್ಕ ನಿವೃತ್ತಿಧರ್ಮನಿಷ್ಠರಾದರೂ ವೇದಾಗಮಗಳಂತೆಯೇ ತದನುಸಾರಗಳಾದ ಸೂತ್ರಗಳನ್ನೂ ಸ್ಮೃತಿಗಳನ್ನೂ ಅವಲಂಬಿಸದಿರುವದಾದರೆ ಅವರಲ್ಲಿ ವೈದಿಕತ್ವವು ಸಿದ್ಧಿಸುವುದೇ ? ಎಂಬಾಕ್ಷೇಪದ ಸಮಾಧಾನವು ಹೀಗಿರುತ್ತದೆ. ಕಲ್ಪ (ಶ್ರೌತ) ಸೂತ್ರಗಳಲ್ಲಿ ಕೇವಲ ಯಾಗಾದಿಕ್ರಿಯಾನುಷ್ಠಾನವೇ ಪ್ರತಿಪಾದಿಸಲ್ಪಟ್ಟಿರುವುದರಿಂದ ನಿವೃತ್ತಿಧರ್ಮನಿಷ್ಠರಾದ ಆತ್ಯಾಶ್ರಮಿಗಳು ಬ್ರಹ್ಮವಿದ್ಯೋಪಯುಕ್ತಗಳಾದ ಶಿವಧರ್ಮಾಚರಣೆಗಳನ್ನು ಪ್ರತಿಪಾದಿಸತಕ್ಕ ವೇದಾಗಮವಚನಗಳನ್ನೇ ಮನನಮಾಡುವರಲ್ಲದೆ ಪ್ರಾಕೃತಕರ್ಮಾನುಷ್ಠಾನ ಬೋಧಕಗಳಾದ ಕಲ್ಪಸೂತ್ರಗಳ ಮೇಲೆಯೇ ಕೈಯೂರಿರತಕ್ಕವರಲ್ಲ. ಹಾಗೂ, ವೇದಗಳಲ್ಲಿಯೂ ಆಗಮಗಳಲ್ಲಿಯೂ ಶಿವಾರ್ಚನೆ, ಶಿವವ್ರತಾದಿ ಶೈವಾಚರಣೆಗಳು ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿರಲು ಅವುಗಳ ಪರಿಜ್ಞಾನದಪೇಕ್ಷೆಯಿಂದ ಅವರು ಸ್ಮೃತಿಗಳನ್ನಾದರೂ ಅಡಿಗಡಿಗವಲಂಬಿಸಬೇಕಾದ ಆವಶ್ಯಕತೆಯಿರುವುದಿಲ್ಲ. ಇದೇ ಅಭಿಪ್ರಾಯದಿಂದೇ ಹರದತ್ತ ಶಿವಾಚಾರ್ಯರು ಹೀಗೆ ಹೇಳುತ್ತಾರೆ:-

**ಧ್ಯಾನಂ ಯಥಾ ಭವತಿ ತದ್ವಿಷಯೋ ಯಥಾತ್ಮಂ**
**ಯಾದೃಗ್ಗುಣಶ್ಚ ಭಗವನ್ನಧಿಕಾರಿವರ್ಗಃ ।**

ಸರ್ವಾಣಿ ತಾನಿ ಭವದಾಗಮಸಂಹಿತಾಭಿಃ
ಕಲ್ಪೈರಿವಾಧ್ವರವಿಧೇರುಪಪಾದಿತಾನಿ ||

ಎಲೈ ಪರಶಿವನೇ ! ನಿನ್ನನ್ನು ಧ್ಯಾನಿಸುವ ರೀತಿಯು ಹೇಗೆ ? ಧ್ಯಾನವೆಂದರೇನು ? ಆ ಧ್ಯಾನದಿಂದ ಸಾಕ್ಷಾತ್ಕರಿಸಲ್ಪಡತಕ್ಕ ನಿನ್ನ ಸ್ವರೂಪವೆಂತಿಹುದು ? ಧ್ಯಾನಮಾಡಲರ್ಹವಾದ ಅಧಿಕಾರಿ ವರ್ಗವು ಹೇಗಿರುವುದು ? ಎಂಬೀ ಮುಂತಾದ ಅತ್ಯಾಶ್ರಮ ಧರ್ಮಾಚರಣೆಗಳಿಗೆ ಸಂಬಂಧಿಸತಕ್ಕ ಸರ್ವವಿಷಯಗಳನ್ನೂ, ಕಲ್ಪಸೂತ್ರಗಳು ಯಾಗವಿಧಿಯ ತಂತ್ರಗಳನ್ನು ಹೇಗೆ ಹೇಳಿದವೋ ಹಾಗೆ ನಿನ್ನ ಆಗಮಗಳು ಹೇಳಿವೆ.

ಮೂಲಶ್ರುತೇರನುಪಲಂಭಪರಾಹತಾಯಾ
ದೂತೀವ ಯಾ ನಭವತಿ ಸ್ವರಸಾಪ್ರಮಾಣಮ್ ।
ಪ್ರತ್ಯಕ್ಷವೇದವಿಹಿತಂ ಯಜನಂ ತ್ವದೀಯಂ
ತಸ್ಯಾಃಸ್ಮೃತೇರಪಿಕಿಮಿಚ್ಛತಿ ದೃಷ್ಟಿಪಾತಮ್ ||

ವೇದವಾಕ್ಯವು ಉಪಲಬ್ಧವಿಲ್ಲದಿರುವ ಮೂಲಕ ತಿರಸ್ಕೃತವಾದ ಒಂದಾನೊಂದು ಸ್ಮೃತಿವಾಕ್ಯವು ಸ್ವತಂತ್ರವಾಗಿಯೇ ಅರ್ಥವನ್ನು ಹೇಳ ತೊಡಗಿದರೆ ಅದರ ಸ್ಥಿತಿಯು ಒಡತಿಯನ್ನು ಕಾಣದೆ ತನ್ನಷ್ಟಕ್ಕೆ ತಾನೇ ಸ್ವತಂತ್ರವಾಗಿ ನುಡಿವ ತೊತ್ತಿನ ಪರಿಯಾಗಿರುತ್ತದೆ. ಎಲೈ ಮಹಾ ದೇವನೇ ! ಪ್ರತ್ಯಕ್ಷವಾಗಿ ವೇದದಲ್ಲಿಯೇ ಭೋಗಮೋಕ್ಷಾಪೇಕ್ಷಿಗಳಾದ ಸರ್ವರೂ ನಿನ್ನನ್ನೇ ಪೂಜಿಸಬೇಕೆಂದು ಹೇಳಲ್ಪಡುತ್ತಿರಲು, ಆ ವೇದವು ( ಶ್ರುತಿಯು ) ನನ್ನ ಮೇಲೆ ಸ್ಮೃತಿಯು ದೃಷ್ಟಿಪಾತವಾಗಲೆಂದು ಹಾರೈ ಸುವುದುಂಟೇ ? ಅಂದರೆ ವೇದದಲ್ಲಿ ಶಿವಾರ್ಚನಾದಿ ಅತ್ಯಾಶ್ರಮಧರ್ಮವು ಸ್ಪಷ್ಟವಾಗಿ ನಿರೂಪಿಸಲ್ಪಡುತ್ತಿರಲು, ಆ ಬಗ್ಗೆ ಮತ್ತೆ ಸ್ಮೃತಿವಚನವನ್ನು ಪರಿಶೋಧಿಸುವ ಕೋಟಲೆಯಿಂದೇನೂ ಪ್ರಯೋಜನವಿಲ್ಲ.

ಆದ್ದರಿಂದ ಕಲ್ಪಸೂತ್ರಗಳಿಗೂ ಸ್ಮೃತಿಗಳಿಗೂ ಮೂಲಭೂತಗ ಳಾದ ವೇದಾಗಮಗಳನ್ನು ಶಿರಸಾವಹಿಸಿ ಅವುಗಳಿಂದ ಸ್ಫುಟವಾಗಿ ನಿರೂಪಿಸಲ್ಪಡುವ ಶಿವಾರ್ಚನೆ, ಶಿವವ್ರತ, ಶಿವಧ್ಯಾನವೇ ಮುಂತಾದ ಅತ್ಯಾಶ್ರಮಧರ್ಮಗಳನ್ನು ಸೂತ್ರಸ್ಮೃತಿಗಳ ಹಂಗಿಲ್ಲದೆ ಅನುಷ್ಠಿಸುತ್ತಿ ರುವ ಮುಮುಕ್ಷುಜನರಲ್ಲಿ ವೈದಿಕತ್ವವು ನಿಷ್ಪ್ರತ್ಯೂಹವಾಗಿರುವುದು.

ಇನ್ನು ಅಪ್ರಾಕೃತಮತಸರಣಿಯಾದರೋ ಹೀಗಿದೆ— ಯಾವನಿಗೆ ವರ್ಣ, ಆಶ್ರಮ, ವಯಸ್ಸು, ಅವಸ್ಥಾದಿಗಳಭಿಮಾನವಿರುವುದೋ ಅವ

ನನ್ನುದ್ದೇಶಿಸಿಯೇ ವೇದೋಕ್ತವಿಧಿನಿಷೇಧಗಳು ಪ್ರವೃತ್ತವಾಗಿವೆ. ಬ್ರಾಹ್ಮಣನೂ, ಬ್ರಹ್ಮಚಾರಿಯೂ ಎಂಬ ಮುಂತಾದ ವರ್ಣಾಶ್ರಮಗಳು ದೇಹದಲ್ಲಿ ಮಾಯೆಯಿಂದ ಕಲ್ಪಿಸಲ್ಪಟ್ಟಿವೆ. ಅವು ಬೋಧರೂಪವಾದ ಧರ್ಮಗಳಲ್ಲವೆಂಬ ದೃಢನಿಶ್ಚಯವು ಜ್ಞಾನನಿಷ್ಠನಲ್ಲಿರುವುದು. ಹೀಗೆ ಕಲ್ಪಿತಗಳಾದ ವರ್ಣಾಶ್ರಮಗಳಲ್ಲಿ ಅಭಿಮಾನವಿಲ್ಲದವನು ಅಪ್ರಾಕೃತನು. ವರ್ಣಾಶ್ರಮಾಭಿಮಾನವುಳ್ಳವರೇ ಪ್ರಾಕೃತರು, ಪ್ರಕೃತಿಯ ಕಾರ್ಯರೂಪವಾದ ದೇಹಗತಗಳಾದ ವರ್ಣಾಶ್ರಮಾದಿ ಪ್ರಾಕೃತಧರ್ಮಗಳು ಶಿವದೀಕ್ಷೆಯೆಂಬ ಅಪ್ರಾಕೃತಸಂಸ್ಕಾರದಿಂದ ಅಳಿವವು.

ಜ್ಞಾನನಿಷ್ಠೆಯೇ ನೈಷ್ಕರ್ಮ್ಯಸಿದ್ಧಿ, ಸ್ಥಿತಿಪ್ರಜ್ಞತೆ ಜೀವನ್ಮುಕ್ತಿಯೆಂಬೀ ಮುಂತಾದ ಪರ್ಯಾಯಶಬ್ದಗಳಿಂದ ಹೇಳಲ್ಪಡುವುದು. ಸಮುದ್ರದಲ್ಲಿ ಸರ್ವಜಲಾಶಯಗಳಂತರ್ಭಾವವಿರುವಂತೆ [**'ಸರ್ವಾಸಾಮಪಾಂ ಸಮುದ್ರ ಏಕಾಯನಮ್'** ಬೃ. ೨-೪-೧೧.] ಶಿವಜ್ಞಾನನಿಷ್ಠೆಯಲ್ಲಿ ಸರ್ವಸಾಧನಗಳಂತರ್ಭಾವವಿದೆ. ಈ ಜ್ಞಾನನಿಷ್ಠೆಯು ಸರ್ವವೈದಿಕವಿಧಿನಿಷೇಧಾತೀತವಾಗಿರುವುದೆಂಬಾಶಯವನ್ನು ವ್ಯಕ್ತಪಡಿಸುವ ಉದ್ದೇಶದಿಂದೇ ವೇದಾಗಮಗಳು ವರ್ಣಾಶ್ರಮೋಕ್ತಾಚಾರಗಳ ನ್ಯೂನತೆಯನ್ನೂ ಜ್ಞಾನನಿಷ್ಠೆಯ ಪ್ರಾಶಸ್ತ್ಯವನ್ನೂ ಪ್ರತಿಪಾದಿಸುತ್ತವೆ.

ಆತ್ಮನಿಗೆ ಶಿವದೀಕ್ಷೆಯಿಂದೇ ಅಪ್ರಾಕೃತಭಾವವು ಸಿದ್ಧಿಸುವುದು; ಆದ್ದರಿಂದ ಅವನು ಶಿವಸಂಸ್ಕಾರೋತ್ತರದಲ್ಲಿ 'ಅಪ್ರಾಕೃತ' ನೆಂದು ಹೇಳಲ್ಪಡುವನು. ಅಪ್ರಾಕೃತಸಂಸ್ಕಾರದಿಂದ ಪ್ರಾಕೃತಭಾವವು ನಷ್ಟವಾಗುವುದು. ಶಿವಸಂಸ್ಕಾರೋಪೇತನು 'ಅತ್ಯಾಶ್ರಮಿಯು' ಎಂದು ವರ್ಣಿಸಲ್ಪಡುತ್ತಾನೆ. ಹೇಗೆಂದರೆ ( ಸೂ. ಸಂ. ೩-೫-೩೬ )

**ತಸ್ಮಾದನ್ಯಗತಾ ವರ್ಣಾ ಆಶ್ರಮಾ ಅಪಿ ಕೇಶವ ।**
**ಆತ್ಮನ್ಯಾರೋಪಿತಾ ಏವ ಭ್ರಾನ್ತ್ಯಾತೇ ನಾತ್ಮವೇದಿನಃ ॥**

ಎಂಬುಕ್ತಿಯಂತೆ, ಶಿವೋಹಂಭಾವನಾಸಕ್ತನು ತನ್ನ ದೇಹಾದಿಗಳು ಹೇಗೋ ಹಾಗೇ ತದ್ಧರ್ಮಗಳಾದ ವರ್ಣಾಶ್ರಮಾದಿಗಳೂ ಭ್ರಾಂತಿಮೂಲಕ ಆತ್ಮನಲ್ಲಿ ಆರೋಪಿತವಾದುವೆಂಬ ದೃಢನಿಶ್ಚಯವುಳ್ಳವನಾಗಿರುತ್ತಾನೆ. **'ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಂ ಪ್ರೋವಾಚ'** ( ಶ್ವೇ. ೭-೨೧ ) ಎಂಬೀ ಮುಂತಾದುಪನಿಷದ್ವಚನಗಳಿಂದ ವರ್ಣಿಸಲ್ಪಡುವ ಅತ್ಯಾಶ್ರಮಿಗಳಾರೆಂದರೆ, 'ಅತ್ಯಾಶ್ರಮ' ವೆಂಬುದೊಂದು ವ್ರತವು

ಆ ವ್ರತನಿಷ್ಠರಾದವರನ್ನು ಕುರಿತು ಶಿವಜ್ಞಾನವು ಬೋಧಿಸಲ್ಪಡುವುದು. ಈ ವೈದಿಕಪಾಶುಪಾತವ್ರತವನ್ನೇ ಆಥರ್ವಣಿಕರು ಶಿರೋವ್ರತವೆಂದೂ, ಶ್ವೇತಾಶ್ವತರಶಾಖಿಗಳು ಶಾಂಭವವೆಂದೂ, ಜಾಬಾಲಶಾಖಿಗಳೇ ಮುಂತಾದವರು ಐಶ್ವರವೆಂದೂ ಹೇಳುತ್ತಾರೆ; ಇದೇ ಅರ್ಥವು ಕಾರಣೋತ್ತರವೆಂಬ ದಿವ್ಯಾಗಮದ ಕ್ರಿಯಾಪಾದದಲ್ಲಿ :—

ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ ।
ಇತೀದಂ ನಾಮಭಿಃಪುಣ್ಯೈರ್ನಿಗಮಾನ್ತೇಷು ಗೀಯತೇ ॥

ಎಂಬುವಾಗಿ ನಿರೂಪಿಸಲ್ಪಟ್ಟಿದೆ. ಹಾಗು :—

ಅಗ್ನಿರಿತ್ಯಾದಿಭಿರ್ಮನ್ತ್ರೈರ್ಭಸ್ಮನೋದ್ಧೂಲನಂತಥಾ ।
ತ್ರಿಪುಂಡ್ರಧಾರಣಂ ಚಾಪಿ ವದನ್ತ್ಯತ್ಯಾಶ್ರಮಂ ಬುಧಾಃ ॥

( ಸೂ. ಸಂ. ೪-೧೧-೭೦ ) ಎಂಬೀ ಮುಂತಾದ ವಚನಗಳಿಂದ ಭಸ್ಮಾವಗುಂಠನ, ರುದ್ರಾಕ್ಷಧಾರಣ, ಶಿವಮಂತ್ರಜಪ, ತತ್ಪೂಜಾದಿಕವಾದರೂ ಅತ್ಯಾಶ್ರಮವ್ರತವೆಂದು ಹೇಳಲ್ಪಡುವುದರಿಂದ 'ಅತ್ಯಾಶ್ರಮ'ವೆಂಬುದು ಬ್ರಹ್ಮವಿದ್ಯಾಂಗಭೂತವಾದ ವ್ರತವೆಂದೇ ಸಿದ್ಧವಾಗುತ್ತದೆ. ಆ ವ್ರತವು ಮುಮುಕ್ಷುಗಳಾದ ಸರ್ವವರ್ಣಾಶ್ರಮಿಗಳಿಂದಲೂ ಅನುಷ್ಠಿಸಲ್ಪಡತಕ್ಕದ್ದಾಗಿದೆ. ಇದೇ ಅಭಿಪ್ರಾಯವು ದಿವ್ಯಾಗಮದಲ್ಲಿಯೂ ( ಕಾರಣ. ಕ್ರಿ. )—

ಯದೇತಚ್ಛಾಂಭವಂ ನಾಮ ವ್ರತಂ ಶ್ರುತ್ಯಂತ ಸಮ್ಮತಂ ।
ಪುನರ್ಭವಪ್ರಹಾಣಾಯ ಮುಮುಕ್ಷುಸ್ತತ್ಸಮಾಚರೇತ್ ॥
ಬ್ರಹ್ಮಚಾರೀಗೃಹಸ್ಥೋವಾ ವನಸ್ಥೋಥ ಯತಿಸ್ತುವಾ ।
ಯೋಷಿದ್ವಾ ಪರಿಗೃಹ್ಣೀಯಾತ್ಸದ್ಯೋಮುಕ್ತಿಂ ಯದಿಚ್ಛತಿ ॥

ಎಂದು ಪ್ರತಿಪಾದಿಸಲ್ಪಟ್ಟಿದೆ. ಈ ವ್ರತವು ಭೋಗಮೋಕ್ಷಪ್ರದವಾಗಿರುವುದರಿಂದ ಸಂತತಿಸಂಪದಾದಿ ಐಹಿಕವಿಷಯಗಳ ಪ್ರಾಪ್ತಿಗಾಗಿಯೂ ಮುಕ್ತಿಗೋಸ್ಕರವೂ ಅನುಷ್ಠಿಸಲ್ಪಡುವುದು. ಇಂತಪ್ಪ ಅತ್ಯಾಶ್ರಮವ್ರತನಿರತನೇ 'ಶಿವಾಶ್ರಮಿ' ಯೆಂದೂ ಹೇಳಲ್ಪಡುತ್ತಾನೆ. ಶಿವಧರ್ಮನಿಷ್ಠರೇ ಶಿವಾಶ್ರಮಿಗಳು. ಉಪನಯನಸಂಸ್ಕಾರವನ್ನು ಪಡೆದವರಾದರೂ ಆ ಶಿವಧರ್ಮಾಚರಣಾಧಿಕಾರಪ್ರಾಪ್ತಿಗಾಗಿ ಶಿವಸಂಸ್ಕಾರವನ್ನು ಹೊಂದಲೇಬೇಕು. ಅದುಕಾರಣವೇ ವಾಯುವೀಯಸಂಹಿತೆಯ ಉತ್ತರಭಾಗದಲ್ಲಿ ( ಅ. ೧೮ )—

ನಾಶಿವಃ ಶಿವಮಭ್ಯಸೇನ್ನಾಶಿವಃ ಶಿವಮರ್ಚಯೇತ್ ।
ನಾಶಿವಸ್ತು ಶಿವಂ ಧ್ಯಾಯೇನ್ನಾಶಿವಃ ಶಿವಮಾಪ್ನುಯಾತ್
॥ ೬೭ ॥

ತಸ್ಮಾಚ್ಛೈವೀಂ ತನುಂ ಕೃತ್ವಾ ತ್ಯಕ್ತ್ವಾ ಚ ಪಶು ಭಾವನಾಂ ।
ಶಿವೋಽಹಮಿತಿ ಸಂಚಿನ್ತ್ಯ ಶೈವಂ ಕರ್ಮ ಸಮಾಚರೇತ್ ॥೬೮॥

ಎಂಬುದಾಗಿ ಹೇಳಲ್ಪಟ್ಟಿದೆ. ಈ ಶಿವಧರ್ಮಾಚರಣೆಯ ಸರ್ವಾಂಗೋಪೇತಸ್ವರೂಪವನ್ನು ಚಂದ್ರಜ್ಞಾನೋತ್ತರದಲ್ಲಿ (ಕ್ರಿ. ಪ. ೧) ಶ್ರೀಮದನಂತರುದ್ರನು ಬೃಹಸ್ಪತಿಯನ್ನು ಕುರಿತು ಹೀಗೆ ಉಪದೇಶಿಸಿದ್ದಾನೆ.

ವೇಧಾಮನುಕ್ರಿಯಾಭಿಖ್ಯದೀಕ್ಷಾತ್ರಯ ಸುಶೋಭಿತಂ ।
ಷಡಧ್ವಶುದ್ಧಿಕಲಿತಂ ಗುರುಕಾರುಣ್ಯಸಂಭೃತಂ ॥೬೯॥
ಭಸ್ಮರುದ್ರಾಕ್ಷ ಶ್ರೀಲಿಂಗಧಾರಣಾತ್ಮಕ ಮುತ್ತಮಂ ।
ಶಾಂಭವವ್ರತಮೇತದ್ಧಿ ವೇದಶಾಸ್ತ್ರೈಕ ಚೋದನಮ್ ॥೫೦॥
ಇದಂ ಶಿವಪ್ರಸಾದೈಕಕಾರಣಂ ಭವವಾರಣಂ ।

ಮತ್ತು—

ಏಕೈಕಮಪ್ಯಸ್ಯಾಂಗಂಮುಕ್ತಿದಂ ಕೀರ್ತಿತಂಶ್ರುತೌ ।
ಕಿಮುವಾಚ್ಯಂ ನು ಸರ್ವಾಂಗಕಲಿತಂ ಮೋಕ್ಷದಂತ್ವಿತಿ ॥೫೧॥

ಇಲ್ಲಿ ಕೊನೆಯ ಶ್ಲೋಕದಿಂದ ಭಸ್ಮ-ರುದ್ರಾಕ್ಷ-ಲಿಂಗಧಾರಣವೆಂಬೀ ಅತ್ಯಾಶ್ರಮಾಚರಣೆಗಳಲ್ಲಿ ಪ್ರತಿಯೊಂದಾಚರಣೆಯೂ ಬ್ರಹ್ಮವಿದ್ಯಾಂಗಭೂತವಾಗಿರುವುದರಿಂದ ಮುಕ್ತಿಸಾಧನವಾದುದೆಂದು ಶ್ರುತಿಯಲ್ಲಿ ನಿರೂಪಿಸಲ್ಪಟ್ಟಿರಲು, ಎಲ್ಲಾ ಅಂಗಗಳೊಡನೆ ಆಚರಿಸಲ್ಪಡುವ ಶಾಂಭವವ್ರತವು ಮುಕ್ತಿಪ್ರದವೆಂಬುದು ಕೈಮುತಿಕ ನ್ಯಾಯಸಿದ್ಧವೆಂಬ ತಾತ್ಪರ್ಯವು ಬೋಧಿಸಲ್ಪಟ್ಟಿದೆ. ಕೇವಲ ಭಸ್ಮಧಾರಣವ್ರತವುಳ್ಳವನಾದರೂ ಅತ್ಯಾಶ್ರಮಿಯೆನಿಸುವನೆಂಬಭಿಪ್ರಾಯವು ವ್ಯಕ್ತವಾಗುವುದು. ಈ ಶಾಂಭವವ್ರತವೇ 'ಚೀರ್ಣವ್ರತ' ವೆಂದೂ [ 'ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್' ] ಹೇಳಲ್ಪಡುವದಷ್ಟೇ ? ಇಂತಪ್ಪ ಚೀರ್ಣವ್ರತಾಧಿಕಾರವು ನಾಲ್ಕು ಆಶ್ರಮದವರಿಗೂ ಉಂಟೆಂಬಭಿಪ್ರಾಯವನ್ನೂ ಆ ವ್ರತಧಾರಣವುಳ್ಳ ಚತುರಾಶ್ರಮಿಗಳು ಮೃತಪಟ್ಟರೆ ಅವರ ಕಳೇಬರಗಳನ್ನು ದಹಿಸಕೂಡದೆಂಬರ್ಥವನ್ನೂ ಬೋಧಿಸುವ ವಚನವು ಮುಕುಟೋತ್ತರದ ಚರ್ಯಾಪಾದದಲ್ಲಿ (ಪ. ೧) ಹೀಗಿರುತ್ತದೆ :—

ಬ್ರಹ್ಮಚಾರೀ ಗೃಹಸ್ಥೋವಾ ವಾನಪ್ರಸ್ಥೋ ಯತಿಸ್ತುವಾ ।
ಚೀರ್ಣವ್ರತೋ ಯದಿಮೃತಸ್ತಸ್ಯ ದೇಹಂ ನ ದಾಹಯೇತ್ ॥

ಇನ್ನು, ಸರ್ವಾಂಗೋಪೇತವಾದ ವಿಶುದ್ಧ (ಅಪ್ರಾಕೃತ) ಸಂಸ್ಕಾರವು ತನುತ್ರಯಗತ ಮಲತ್ರಯ ನಿವೃತ್ತಿದ್ವಾರಾ ಲಿಂಗತ್ರಯೋಪದೇಶ ಮೂಲಕ ವೇಧಾದಿ ದೀಕ್ಷಾತ್ರಯರೂಪವಾದುದೆಂದೂ ಇದನ್ನು ಪಡೆಯಲು ಸರ್ವರೂ ಅರ್ಹರೆಂದೂ ಅವರಲ್ಲಿಯೂ ಶಕ್ತಿಪಾತಾವಶ್ಯಕತೆಯುಂಟೆಂದೂ ಚಂದ್ರಜ್ಞಾನ, ಕಾರಣ, ಮುಕುಟ ಮೊದಲಾದ ಶ್ರೌತಾಗಮಗಳುತ್ತರಭಾಗದಲ್ಲಿ ಹೇಳಲ್ಪಟ್ಟಿದೆ, ಆ ದಿವ್ಯಾಗಮಗಳ ಕೆಲವು ವಾಕ್ಯಗಳನ್ನು ಮಾತ್ರ ನಾವು ಈ ಕೆಳಗೆ ಬರೆದು ತೋರಿಸುತ್ತೇವೆ.

ಕಾರಣೋತ್ತರದಲ್ಲಿ (ಕ್ರಿ. ಪ. ೧)—

ದೇಹತ್ರಯಗತಾನಾದಿಮಲತ್ರಯನಿವೃತ್ತಯೇ ।
ಲಿಂಗತ್ರಯಾನುಸಂಧಾನಯೋಗ್ಯತಾವಾಪ್ತಯೇಪಿಚ ॥
ಷಡಧ್ವಶುದ್ಧಿಪೂರ್ವೇಣ ಶಾಂಭವೇನ ವ್ರತೇನತು ॥
ದೀಕ್ಷಯಿಷ್ಯ ಇಮಂ ಶಿಷ್ಯಂ ಶಕ್ತಿಪಾತವಿಧಾನತಃ ॥
ಇತಿ ಸಂಕಲ್ಪ್ಯ ತಂ ದೃಷ್ಟ್ವಾ ಶಿಷ್ಯಮೇವಂ ವದೇದ್ಗುರುಃ ।

ಹಾಗೂ, ಮುಕುಟೋತ್ತರದಲ್ಲಿ (ಕ್ರಿ. ಪ. ೧)—

ತನುತ್ರಯಗತಾನಾದಿಮಲತ್ರಯವಿಶೋಧನಾಃ ।
ಲಿಂಗತ್ರಯಾನುಸಂಧಾನವಿಶೋಷಿತಭವಾಬ್ಧಯಃ ॥೧೨॥
ಕಲ್ಯಾಣದೇಶಿಕಕೃಪಾಕರ್ತಿತಾಶೇಷಬಂಧನಾಃ ।
ಭಕ್ತಿದೂತಿಸಮಾನೀತಮುಕ್ತಿಕಾಂತಾಸಮಾಗಮಾಃ ॥
ಜ್ಞಾನಸೂರ್ಯೋದಯಕೃತತಮಃಕೂಟವಿಪಾಟನಾಃ ।
ವೇಧಾಮನುಕ್ರಿಯಾದೀಕ್ಷಾ ಯತ್ರಹ್ಯಂತರ್ಗತಾಃ ಪರಾಃ ॥೧೪॥
ಶಿರೋವ್ರತಂ ಮಹಾಗುಹ್ಯಮಿದಂತ್ತೇನೈವಲಭ್ಯತೇ ।
ಯಃ ಕರ್ಮ ಸಾಮ್ಯಸಂಗತ್ಯಾ ನ ಪುನರ್ಜನ್ಮಭಾಗ್ಭವೇತ್
॥೧೫॥

ಈ ಮೇಲೆ ನಿರ್ದಿಷ್ಟಗಳಾದ ದಿವ್ಯಾಗಮವಚನಗಳು ವೇಧಾದಿ ದೀಕ್ಷಾತ್ರಯವನ್ನು ಪಡೆದವನೇ ಬ್ರಹ್ಮವಿದ್ಯಾಂಗಭೂತವಾದ ಶಿರೋವ್ರತವನ್ನಾಚರಿಸಲರ್ಹನೆಂಬುದನ್ನೂ ಸರ್ವರೂ ಶಕ್ತಿಪಾತಾನುಸಾರವಾಗಿ ಷಡಧ್ವಶುದ್ಧಿ ಪೂರ್ವಕವಾದ ಆ ತ್ರಿವಿಧ ದೀಕ್ಷೆಗಳನ್ನು

ಹೊಂದಿಯೇ ಶಿವಧರ್ಮ (ಅತ್ಯಾಶ್ರಮ) ದ ಆಚರಣೆಗಳನ್ನನುಷ್ಠಿಸಬೇಕೆಂಬುದನ್ನೂ ಸ್ಫುಟವಾಗಿ ನಿರೂಪಿಸುತ್ತವೆ.

ಪರಬೊಮ್ಮನನ್ನು ಹೋಲುವುದೂ ಮೀರಿದುದೂ ಆದ ವಸ್ತುವು ಬೇರೊಂದಿಲ್ಲ. ಅಂತಪ್ಪ ಪರಶಿವಬ್ರಹ್ಮನ ಯಥಾತ್ಮ್ಯಜ್ಞಾನವು ಸಹ ಅಸದೃಶಪೂ [ ನಹಿಜ್ಞಾನೇನಸದೃಶಂ'ಗೀ ] ಅಧಿಕವೂ ಆಗಿದೆ. ಸರ್ವೋತ್ಕೃಷ್ಟವೂ ಶಿವಜ್ಞಾನಸಾಧಕವೂ ಆದ ವಿಶುದ್ಧಸಂಸ್ಕಾರವನ್ನಾವರೂ ಅಸಮಾನವೂ ಅಧಿಕವೂ ಆದುದೆಂದು ಹೇಳಬಾರದೇಕೆ ? ಈ ವಿಧವಾದ ಸಂಸ್ಕಾರವನ್ನು ಹೊಂದಿ ವಿಶ್ವಮೋಹವಳಿದು ವಿಶ್ವಪ್ರಕಾಶಕನಾದ ಪರಶಿವನನ್ನು ಸ್ವಾತ್ಮಭೂತನನ್ನಾಗಿ ಸಾಕ್ಷಾತ್ಕಾರಮಾಡಿಕೊಂಡು ತತ್ಸ್ವರೂಪಭೂತನಾಗಿ ವಿಹರಿಸುವ ಚರಮಶರೀರಿಯನ್ನು ಮಿಕ್ಕವರ್ಣಾಶ್ರಮಿಗಳಿಗೆ ಸರಿಗಟ್ಟಬಹುದೇ ? ಸರ್ವಸಾಧಾರಣಗಳಾದ ವರ್ಣಾಶ್ರಮಧರ್ಮಪರಾಯಣರಿಗಿಂತಲೂ ಅಧಿಕವಾದ ವೈಶಿಷ್ಟ್ಯವು ಆ ಅಪ್ರಾಕೃತಾತ್ಮನಲ್ಲಿರುವುದಷ್ಟೇ ! ಅದುಕಾರಣವೇ ಆ ಅತಿವರ್ಣಾಶ್ರಮಿಗೆ ಸಮಾನನೂ ಅಧಿಕನೂ ಬೇರೊಬ್ಬನಿಲ್ಲ. ಅವನೇ ಪ್ರಾಕೃತಾತ್ಮರಲ್ಲಿ ಗುರುಗಳೆಂದು ಹೇಳಿಸಿಕೊಳ್ಳಲ್ಪಡುವವರಿಗೂ ಸಹ ಗುರುವಾಗಿದ್ದಾನೆಂಬ ಅಭಿಪ್ರಾಯವು ಸರ್ವರಿಂದಲೂ ಪುರಸ್ಕರಿಸಲ್ಪಡತಕ್ಕದ್ದಾಗಿದೆ. ಆದ್ದರಿಂದ ಸೂತಸಂಹಿತೆಯಲ್ಲಿ—

ಯಃ ಶರೀರೇಂದ್ರಿಯಾದಿಭ್ಯೋ ವಿಭಿನ್ನಂ ಸರ್ವಸಾಕ್ಷಿಣಂ ।
ಪಾರಮಾರ್ಥಿಕವಿಜ್ಞಾನ ಸುಖಾತ್ಮಾನಂ ಸ್ವಯಂಪ್ರಭಂ ॥೧೬॥
ಪರತತ್ತ್ವಂ ವಿಜಾನಾತಿ ಸೋಽತಿವರ್ಣಾಶ್ರಮೀ ಭವೇತ್ ।
ಯೋ ವೇದಾನ್ತಮಹಾವಾಕ್ಯಶ್ರವಣೇನೈವ ಕೇಶವ ॥
ಆತ್ಮಾನಮೀಶ್ವರಂವೇದ ಸೋಽತಿವರ್ಣಾಶ್ರಮೀಭವೇತ್ ।
ಯೋಽವಸ್ಥಾತ್ರಯ ನಿರ್ಮುಕ್ತಮವಸ್ಥಾತ್ರಯ ಸಾಕ್ಷಿಣಂ ॥೧೮॥
ಮಹಾದೇವಂ ವಿಜಾನಾತಿ ಸೋಽತಿವರ್ಣಾಶ್ರಮೀ ಭವೇತ್ ।
ವರ್ಣಾಶ್ರಮಾದಯೋ ದೇಹೇ ಮಾಯಯಾ ಪರಿಕಲ್ಪಿತಾಃ ॥೧೯॥
ನಾತ್ಮನೋ ಬೋಧರೂಪಸ್ಯ ಮಮ ತೇ ಸನ್ತಿ ಸರ್ವದಾ ।
ಇತಿ ಯೋ ವೇದವೇದಾನ್ತೈಃ ಸೋಽತಿವರ್ಣಾಶ್ರಮೀ ಭವೇತ್ ॥೨೦॥

ಎಂಬುದಾಗಿರುವ ಈ ವಾಕ್ಯಗಳಿಂದ ಹೇಳಲ್ಪಡುವ ಮೇರೆಗೆ ಆದಾವನವೃತ್ತಿಯಿರುವುದೋ ಅಂತಪ್ಪ ಅಪ್ರಾಕೃತನು ( ವಿಶುದ್ಧ ಸಂಸ್ಕಾರಿಯು ) 'ಅತಿವರ್ಣಾಶ್ರಮಿ' ಯೆಂದು ಹೇಳಲ್ಪಡುತ್ತಾನೆ.

ಪಾಶುಪತಾಚರಣೆಯು ಭೋಗಮೋಕ್ಷಪ್ರದವಾದುದಷ್ಟೇ ? ಯಾರು ಐಹಿಕ ( ಸಂತತಿ ಸಂಪದಾದಿ ) ಪಾರತ್ರಿಕ ( ಸ್ವರ್ಗಾದಿ ) ಫಲಪ್ರಾಪ್ತಿಗೋಸ್ಕರ ಆ ವ್ರತವನ್ನನುಷ್ಠಿಸುವರೋ ಅವರು ಅದನ್ನು ನಿಶ್ಚಿತ ಕಾಲಾವಧಿಗೆ ಸಮಾಪ್ತಿಗೊಳಿಸುತ್ತಾರೆ. ಆದರೆ ಮುಮುಕ್ಷುಜನರಿಂದ ಪರಿಗ್ರಹಿಸಲ್ಪಡುವ ಆ ವ್ರತಕ್ಕಾದರೋ ಇಷ್ಟೇ ದಿವಸಗಳಿಗೆ ಸಮಾಪ್ತಿಗೊಳಿಸಬೇಕೆಂಬ ನಿಶ್ಚಿತ ( ಕ್ಲೃಪ್ತ ) ವಾದ ಕಾಲಾವಧಿಯಿರುವುದಿಲ್ಲ. ಆದ್ದರಿಂದ ಯಾವಜ್ಜೀವವೂ ಅವ್ಯಾಹತವಾಗಿ ಅನುಷ್ಠಿಸಲ್ಪಡುವುದು. ಏಕೆಂದರೆ:—

ಇಹ ಚಾಮುತ್ರವಾಕಾಮ್ಯಂ ಪ್ರವೃತ್ತಂ ಕರ್ಮ ಕೀರ್ತ್ಯತೆ ।
ನಿಷ್ಕಾಮಂ ಜ್ಞಾನಪೂರ್ವಂತು ನಿವೃತ್ತ ಮುಪದಿಶ್ಯತೆ ॥

ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಯಾವುದಾದರೊಂದು ಅಭಿಮತಫಲವು ದೊರಕಬೇಕೆಂಬಾಶೆಯಿಂದ ಮಾಡಲ್ಪಡುವ ಕರ್ಮವು ಪ್ರವೃತ್ತಿರೂಪವಾದುದು, ಅಂದರೆ ಫಲದ್ವಾರಾ ಸಂಸಾರಪ್ರವೃತ್ತಿಗೆ ಕಾರಣವಾದುದು; ಐಹಿಕದೃಷ್ಟಫಲವನ್ನೂ ಪಾರಲೌಕಿಕ ಅದೃಷ್ಟಫಲವನ್ನೂ ಇಚ್ಛಿಸದೆ ಶಿವಜ್ಞಾನಾನುಸಂಧಾನದೊಡನೆ ಮಾಡಲ್ಪಡುವ ಕರ್ಮವು ( ಪತಿಧರ್ಮವು) ಚಿತ್ತನೈರ್ಮಲ್ಯದ್ವಾರಾ ಸಂಸಾರನಿವೃತ್ತಿಗೆ ಹೇತುಭೂತವಾದುದರಿಂದ ನಿವೃತ್ತಿರೂಪವಾದುದು. ಎಂಬುದಾಗಿಮನುವಾದರೂ ( ೧೨-೮೯ ) ಹೇಳುತ್ತಾನೆ. ಆದ್ದರಿಂದ ಐಹಿಕ ಪಾರತ್ರಿಕವಿಷಯಾಭಿಲಾಷೆಯಿಲ್ಲದ ಪರಮ ಮುಮುಕ್ಷು ಪುರುಷನು ಶಿವಜ್ಞಾನಸಿದ್ಧಿಯೇ ಮುಖ್ಯವಾದ ಧ್ಯೇಯವುಳ್ಳವನಾಗಿರುತ್ತಾನೆ. ಅವನು ಚಿತ್ತಶುದ್ಧಿಯಮೂಲಕ ಸ್ವಸ್ವರೂಪ ಸಾಕ್ಷಾತ್ಕಾರವನ್ನು ಪಡೆಯಲೋಸುಗ ಆ ಪಾಶುಪತ ವ್ರತವನ್ನು ದೇಹವಿರುವ ಪರ್ಯಂತವೂ ಬಿಡುವಿಲ್ಲದೆ ಅನುಷ್ಠಿಸುವನಾದುದರಿಂದ ಅಪ್ರತಿಹತಶಿವವ್ರತಿಯೂ, ನೈಷ್ಠಿಕನೂ, ಮಹಾಪಾಶುಪತನೂ, ಶಿವಾಶ್ರಮಿಯೂ ಎಂಬೀ ಮುಂತಾದ ಪವಿತ್ರಾಭಿದಾನಗಳಿಂದ ಬಣ್ಣಿಸಲ್ಪಡುವನು.

ಅಂತಪ್ಪ ಶಿರೋವ್ರತಧಾರಣಾಂಗಭೂತವಾದ ಶಿವಸಂಸ್ಕಾರದ ಸ್ವರೂಪವನ್ನು ಈ ಹಿಂದೆ ನಾವು ದಿವ್ಯಾಗಮಪ್ರಮಾಣಪೂರ್ವಕವಾಗಿ

ಸ್ಪಷ್ಟೀಕರಿಸಿದ್ದೇವೆ. ಹಾಗೂ, ವಾಯವೀಯಸಂಹಿತೆಯ ಪೂರ್ವಭಾಗದ ೨೯ನೆಯ ಅಧ್ಯಾಯದಲ್ಲಿ—

ಸಮುತ್ಸೃಜಾಮಿ ಭಗವನ್ ವ್ರತಮೇತತ್ತ್ವದಾಜ್ಞಯಾ ।

ಎಂಬುದಾಗಿ ನಿಶ್ಚಿತಕಾಲಾವಧಿಯಲ್ಲಿ ಸಮಾಪ್ತಿಗೊಳಿಸಲ್ಪಡುವ ಪಾಶುಪತವ್ರತದ ಸ್ವರೂಪವು ವರ್ಣಿಸಲ್ಪಟ್ಟ ತರುವಾಯ ಯಾವಜ್ಜೀವಾನುಷ್ಠೇಯವಾದ ಪಾಶುಪತವ್ರತಧಾರಣಸಂಪನ್ನನ ಪ್ರಾಶಸ್ತ್ಯವು ಹೀಗೆ ನಿರ್ದೇಶಿಸಲ್ಪಡುವುದು.

ಯಃ ಕೃತ್ವಾತ್ಯಂತಿಕೀಂ ದೀಕ್ಷಾಮಾದೇಹಾಂತ ಮನಾಕುಲಃ ।
ವ್ರತಮೇತತ್ಪ್ರಕುರ್ವೀತ ಸತುವೈ ನೈಷ್ಠಿಕಃಸ್ಮೃತಃ ॥
ಸೋತ್ಯಾಶ್ರಮೀತಿವಿಜ್ಞೇಯೋ ಮಹಾಪಾಶುಪತಸ್ತಥಾ ।
ಸ ಏವ ತಪತಾಂಶ್ರೇಷ್ಠಃ ಸಏವತು ಮಹಾವ್ರತೀ ॥

ಇತ್ಯಾದಿ ಪ್ರಮಾಣವಚನಾನುಸಾರವಾಗಿ ಮುಮುಕ್ಷತೆಯಿಂದ ವಿಶುದ್ಧಸಂಸ್ಕಾರಪೂರ್ವಕ ಅಪ್ರಾಕೃತರೆನಿಸಿ ಯಾವಜ್ಜೀವ ವ್ರತಧಾರಿಗಳಾಗಿ ಶಿವಾರ್ಚನಾದಿ ಶಿವಭಜನಾಸಕ್ತರಾದ ಅತ್ಯಾಶ್ರಮಿಗಳಾದರೋ ಮಹಾಪಾಶುಪತರು; ಅವರೇ ಸರ್ವೋತ್ತಮರು.

ಅದು ಹೇಗೆಂದರೆ:— ಶರೀರಸಂಶೋಷವೇ ತಪವೆನಿಸುವುದು. ಪ್ರಾಕೃತರು ಕೃಚ್ಛ್ರಚಾಂದ್ರಾಯಣಾದಿ ವ್ರತಾಚರಣೆಗಳಿಂದ ತಮ್ಮ ದೇಹವನ್ನು ಸವೆಸುವರು. ಅಪ್ರಾಕೃತರು ಶಿವಸ್ವರೂಪರಾದ ಗುರುಲಿಂಗ ಜಂಗಮರ ಸೇವೆಗಾಗಿ ದೇಹವನ್ನು ದಂಡಿಸುವರು. ಹೀಗೆ ಶಿವಾಚಾರವನ್ನುದ್ದೇಶಿಸಿರುವ ದೇಹದಂಡನವೇ ಅಪ್ರಾಕೃತರಿಂದನುಷ್ಠಿಸಲ್ಪಡುವ ತಪವು. ಪ್ರಾಕೃತರು ಸ್ವರ್ಗಾದಿ ಪಾರತ್ರಿಕ ಸುಖವನ್ನಪೇಕ್ಷಿಸಿ ಜ್ಯೋತಿಷ್ಟೋಮಯಾಗಾದಿ ಕರ್ಮಗಳನ್ನನುಷ್ಠಿಸುವರು. ಅದರಿಂದ ಅವರ ಭವ ( ಜನನಮರಣಾತ್ಮಕ ದುಃಖ ) ವು ಹಿಂಗದಾದಕಾರಣ ಅವರು ಭವಿಗಳೆನಿಸುವರು. ಅಪ್ರಾಕೃತರು ಬ್ರಹ್ಮವಿದ್ಯಾಧಿಕಾರಿಗಳಾದುದರಿಂದ ನಶ್ವರಫಲಪ್ರದಗಳಾದ ಆ ಯಾಗಾದಿಕರ್ಮಗಳನ್ನನುಷ್ಠಿಸದೆ ಶಿವಯೋಗಸಾಧಕಗಳಾದ ಶಿವಾರ್ಚನಾದಿ ಸತ್ಕ್ರಿಯೆಗಳಲ್ಲಿಯೇ ನಿಷ್ಠೆಯುಳ್ಳವರಾಗಿರುತ್ತಾರೆ. ಪ್ರಾಕೃತಕರ್ಮಗಳಲ್ಲಿ ಅಧಿಕೃತರಾದವರು ಆ ಯಾಗಾದಿ ಕರ್ಮಪ್ರತಿಪಾದಕ ವೇದಭಾಗವನ್ನು ಪಠಿಸುವರು. ವಿಶುದ್ಧಸಂಸ್ಕಾರಸಂಪನ್ನರಾದರೋ ಶಿವಜ್ಞಾನ, ಶಿವಧ್ಯಾನ, ಶಿವಾರ್ಚನಾದಿ ಶಿವಯೋಗಾಚರಣೆ ( ಅತ್ಯಾಶ್ರಮ ಧರ್ಮ ) ಗಳನ್ನು ಬೋಧಿಸತಕ್ಕ ನಾಸದೀಯ

ಸೂಕ್ತ, ರುದ್ರಸೂಕ್ತ, ಮುಂತಾದ ವೇದಭಾಗಗಳನ್ನೇ ವಿಶೇಷತಃ ಅರ್ಥಾನುಸಂಧಾನದೊಡನೆ ಪಠಿಸುತ್ತಿರುವರು.

ಆದ್ದರಿಂದ ಪ್ರಾಕೃತಸಂಸ್ಕಾರೋಪೇತಚಿತ್ತರಿಂದನುಷ್ಠಿಸಲ್ಪಡುವ ಕ್ರಿಯೆಗಳಿಗಿಂತಲೂ ಭಿನ್ನವಾದ ಚಿತ್ಕ್ರಿಯಾನುಷ್ಠಾನಾಧಿಕಾರಿಗಳಾದ ಶಿವಸಂಸ್ಕಾರಸಂಪನ್ನರು ಅಧ್ಯಾತ್ಮವಿದ್ಯೆಯ ಅನುಭವ ಪ್ರಭಾವಾತಿಶಯದೀಪ ಪಾರಮಾರ್ಥಿಕರಲ್ಲಿ ಅಗ್ರಗಣ್ಯರಾಗಿದ್ದಾರೆ.

ಅಧ್ಯಾತ್ಮವಿದ್ಯೆಯನ್ನು ಬೋಧಿಸುವ ವಿಷಯದಲ್ಲಾದರೋ ಅಧಿಕಾರಿಯ ಲಕ್ಷಣವು ಹೀಗೆ ಹೇಳಲ್ಪಡುವುದು. (ಮುಂ. ಡ. ೧-೨-೧೩):—

ತಸ್ಮೈ ಸವಿದ್ವಾನುಪಸನ್ನಾಯ ಸಮ್ಯಕ್ಪ್ರಶಾನ್ತ ಚಿತ್ತಾಯ
ಶಮಾನ್ವಿತಾಯ ।
ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ
ತತ್ತ್ವತೋ ಬ್ರಹ್ಮವಿದ್ಯಾಮ್ ॥

ಅಂದರೆ ಯಥಾವಿಧಿ ಉಪಸನ್ನ (ಶರಣುಹೊಕ್ಕವ) ನೂ ಜಿಜ್ಞಾಸಾಬುದ್ಧಿಯುಳ್ಳವನೂ, ಶಮದಮಾದಿಸಂಪನ್ನನೂ ಆದ ಶಿಷ್ಯನಿಗೆ ಕ್ರಿಯಾವಂತನೂ, ಶ್ರೋತ್ರಿಯನೂ, ಬ್ರಹ್ಮ (ಲಿಂಗ) ನಿಷ್ಠನೂ ಆದ ಆಚಾರ್ಯನು ಬ್ರಹ್ಮವಿದ್ಯೆಯನ್ನು (ಶಾಂಭವ ಜ್ಞಾನವನ್ನು) ಉಪದೇಶಿಸತಕ್ಕದ್ದು. ಆ ಶಿಷ್ಯನು ಯಾವ ಜ್ಞಾನದಿಂದ ಸತ್ಯನೂ ಅಕ್ಷರನೂ ಆದ ಪುರುಷ (ಪರಶಿವ) ನನ್ನು ಸ್ವಸ್ವರೂಪಭೂತನನ್ನಾಗಿ ಸಾಕ್ಷಾತ್ಕರಿಸಿಕೊಳ್ಳುವನೋ ಆ ಜ್ಞಾನವನ್ನೇ ಬೋಧಿಸತಕ್ಕದ್ದು.

ಮತ್ತು ಅನಧಿಕಾರಿಗಳ ವಿಷಯದಲ್ಲಿ "ಇದಂ ತೇ ನಾತಪಸ್ಕಾಯ" ಎಂಬುದಾಗಿ ಗೀತೆಯಲ್ಲಿ ಹೇಳಲ್ಪಟ್ಟಿರುವುದನ್ನೂ ವಾಚಕ ಮಹಾಶಯರು ಪರಾಮರ್ಶಿಸತಕ್ಕದ್ದು. ಸಾರಾಂಶ— ಈ ಮೇಲಿನ ವಾಕ್ಯಗಳು ಅಧಿಕಾರಿಯಾದ ಶಿಷ್ಯನಲ್ಲಿ ಯಾವ ದೋಷಗಳಿರಕೂಡದು; ಯಾವ ಗುಣಗಳು ಆವಶ್ಯವಾಗಿ ಇರಬೇಕು; ಎಂಬ ಬಗ್ಗೆ ಒಳ್ಳೆಯ ಪರಿಣಾಮಕರಗಳಾದ ಶಬ್ದಗಳೊಡನೆ ನಿರೂಪಿಸಲ್ಪಟ್ಟಿವೆ. ಪ್ರತಿಯೊಬ್ಬ ಮುಮುಕ್ಷುವೂ ಆ ವಾಕ್ಯಗಳನ್ನು ಅವಶ್ಯವಾಗಿ ನೆನಪಿನಲ್ಲಿಟ್ಟುಕೊಂಡು ನಡೆವುದು ಶ್ರೇಯಸ್ಕರವಾಗಿದೆ ಹಾಗೂ ಯಾವ ವಿದ್ಯೆಯನ್ನು ಅಭ್ಯಾಸಮಾಡುವಲ್ಲಿಯೂ ಬ್ರಹ್ಮಚರ್ಯಾದ್ಯುತ್ತಮ ಗುಣಗಳ ಆವಶ್ಯಕತೆಯುಂಟೆಂಬುದನ್ನು ಯಾರೂ ಅಲ್ಲಗಳೆಯಲಾರರಷ್ಟೇ? ಅದುಕಾರಣವೇ :—

ಸಂತ್ಯಜ್ಯ ಮಾನಮವಲಂಬ್ಯ ಗುರೂಪದೇಶಂ ।
ಸಂಪ್ರಾಪ್ತಮಪ್ಯವಿಗಣಯ್ಯ ಮಹಾನ್ತರಾಯಂ ॥
ಕಾನ್ತಾವಿಲಾಸಮಪಹಾಯ ಲಭೇತ ವಿದ್ಯಾಂ ।
ಸೌಖ್ಯಪ್ರದಾಮಯಮುದಾಹರಣಂ ಕಚೋಽಸ್ಮಿನ್ ॥

ಎಂಬ ನೈತಿಕ ವಚನವಾದರೂ ಸುಪ್ರಸಿದ್ಧವಾಗಿರುತ್ತದೆ. ಈ ವಚನಾರ್ಥದಲ್ಲಿ ಉದಾಹರಣೆರೂಪನಾದ ಕಚನ (ಬೃಹಸ್ಪತಿಪುತ್ರನ) ಉಪಾಖ್ಯಾನವು ಮಹಾಭಾರತದ ಆದಿಪರ್ವದಲ್ಲಿ (ಅ. ೭೬) ಪ್ರತಿಪಾದಿಸಲ್ಪಟ್ಟಿದೆ.

ಈ ವಿದ್ಯಾಸಂಪ್ರದಾಯ ವಿಷಯದಲ್ಲಿ ಇಂತಹ ಪ್ರಮಾಣವಚನಗಳು ವಿಪುಲವಾಗಿವೆ. ಅವೆಲ್ಲವನ್ನೂ ಏಕತ್ರಗೊಳಿಸಿದರೆ ಅದೂ ಒಂದು ಗ್ರಂಥವೇ ಆಗಬಹುದು. ಗುರುಸಂಪ್ರದಾಯದಿಂದ ಸಂಪಾದಿಸಲ್ಪಟ್ಟ ವಿದ್ಯೆಯು ಎಷ್ಟು ತೇಜಸ್ವಿಯಾಗಿರುವುದೆಂಬ ಸಂಗತಿಯಾದರೂ, ಈಗಲೂ ಪ್ರತ್ಯಕ್ಷಾನುಭವಗಮ್ಯವಾಗಿರುವುದು.

ವೇದಾಗಮಗಳಲ್ಲಿರುತ್ತಿರುವ ಮೂಲಪ್ರಣವವೇ ಮುಂತಾದ ಪರಶಿವವಾಚಕಶಬ್ದಗಳನ್ನು ಸಹ ನಿರರ್ಥಕವಾದವುಗಳೆಂದು ನಿರ್ಧರಿಸಿ ಹೇಳಲು ಹೆಣಗಾಡುತ್ತಿರುವ ಪಾಶ್ಚಾತ್ಯರಲ್ಲಿ ವೈದಿಕವಿದ್ಯೆಯ ಸಂಪ್ರದಾಯವು ಎಷ್ಟರಮಟ್ಟಿಗೆ ಶುದ್ಧವಾಗುವುದೆಂಬುದಾದರೋ ಆಂಗ್ಲವಿದ್ಯಾಲಯಗಳಲ್ಲಿ ಅವರ ಶಿಕ್ಷಣಕ್ಕೆ ಬಾಯ್ದೆರೆದ ಭಾರತೀಯ ವಿದ್ಯಾರ್ಥಿಗಳ ವಿಚಾರ ಸರಣಿಯನ್ನು ವಿಚಾರಿಸಿದರೆ ವಿದಿತವಾಗುವುದು. ಮತ್ತು, ಈಗಣ ಸಂಸ್ಕೃತಪಾಠಶಾಲೆಗಳಲ್ಲಿ ಶಿಕ್ಷಣಕ್ರಮವು ಪ್ರಾಚೀನ ಗುರುಕುಲಪದ್ಧತಿಯನ್ನನುಸರಿಸಿರುವುದಿಲ್ಲ. ವ್ಯುತ್ಪತ್ತಿಶಾಸ್ತ್ರಗಳನ್ನೇ ಓದಕೂಡದೆಂದು ನಾವು ಹೇಳುವುದಿಲ್ಲ. ವ್ಯಾಕರಣಾದಿ ವ್ಯುತ್ಪತ್ತಿಗಳನ್ನು ಕಲಿಯುವುದರಲ್ಲಿಯೇ ತಮ್ಮ ಇಡೀ ಆಯುಷ್ಯವನ್ನು ಕಳೆದು ಶಿವಶಾಸ್ತ್ರಪ್ರವಚನವಿಮುಖರೆಂದು ಬಿರುದನ್ನು ತಳೆದು ಮೆರೆವುದು ಸಲ್ಲದು. ಹಾಗೂ, ಈ ಕಾಲದಲ್ಲಿ ಕೇವಲ ವೈದಿಕವಿದ್ಯೆಯಿಂದೇ ಉದರನಿರ್ವಾಹವಾಗುವಂತಿಲ್ಲವೆಂದು ನುಡಿವ ಗೃಹಸ್ಥರು ಸ್ವಧರ್ಮಾಚರಣೆಗಳಿಗೆ ಅವಿರೋಧವಾದ ವ್ಯಾವಹಾರಿಕವಿದ್ಯೆಯನ್ನಾದರೂ ಕಲಿಯಬಹುದು. ಇನ್ನು, ಕೆಲಂಬರು ಅಂದರೆ 'ಕುಕ್ಕುಟಪಾದಮಿಶ್ರ'ನ ಸಹಾಧ್ಯಾಯಿಗಳು—

ವಿದ್ಯಾಮದೇನ ಕತಿಚಿದ್ಬಹುಮನ್ಯಮಾನಾಃ
ಸ್ವಾತ್ಮಾನಮೇವ ನ ಗುರೂನಪಿ ಸನ್ನಮನ್ತಿ ||
ಸಲ್ಲಾಪಮಾತ್ರಮಪಿ ಸಾದರಮಾಗತೇಷು |
ಸಾಮ್ರಾಜ್ಯದಾನಮಿವ ದುರ್ಲಭತಾಂ ನಯನ್ತಿ ||

ಎಂಬ ವಾಕ್ಯಾನ್ವಯಭೂತರಾಗಿ ಭೂತೇಶಬೋಧಿತ ಶೈವಾಗಮ ಸಂಹಿತಾಧ್ಯಯನಾಭಾವ ಮೂಲಕ ಪ್ರಾಕೃತಜನ ಬೆಂಬಲರೆನಿಸಿದ್ದಾರೆ. ಇರಲಿ. ಇದು ಕಾಲಮಹಿಮೆಯು ! ಆದರೂ ಅದರಿಂದ ಅಧ್ಯಾತ್ಮ ವಿದ್ಯಾ ಸಂಪ್ರದಾಯದ ಮಹತ್ವವು ಕಡಿಮೆಯಾಗುವುದಿಲ್ಲ. ಸಂಪ್ರದಾಯದ ಬಲವು ಅವರ್ಣನೀಯವಾದುದು. ಸಂಪ್ರದಾಯಶುದ್ಧವಾದ ಜ್ಞಾನದಲ್ಲಿ ಏಕ ವಾಕ್ಯತೆಯುಂಟು. ಪುರುಷನು ತನ್ನ ಬುದ್ಧಿಯಿಂದ ಕಲ್ಪಿಸಲ್ಪಟ್ಟ ಜ್ಞಾನದಲ್ಲಿ ವಿವಿಧತೆಯಿರುವುದು. ಇಂತಹ ಕ್ಲೃಪ್ತಜ್ಞಾನವೇ 'ಸ್ವತಂತ್ರ ವಿಚಾರ' ವೆಂಬುದಾಗಿ ಆಧುನಿಕ ಶಿಕ್ಷಿತರಿಂದ ಗೌರವಿಸಲ್ಪಡುತ್ತದೆ. ಆದರೆ ಅದು ಅನುಪಪನ್ನವಾದುದು. ಹೇಗೆಂದರೆ, ಸ್ವತಂತ್ರವಿಚಾರ ವೆಂಬುದು ಅಪ್ರತಿಷ್ಠಿತತರ್ಕವು. ಅತೀಂದ್ರಿಯಗಳಾದ ಧರ್ಮಬ್ರಹ್ಮಗಳು ಆ ತರ್ಕಕ್ಕೆ ವಿಷಯಗಳಾಗಲಾರವು. ಮನುಷ್ಯರಿಗಿಂತ ಹೀನವಾದು ವೆಂದು ಹೇಳಲ್ಪಡತಕ್ಕ ಪಶ್ವಾದಿಗಳಿಗಿಂತಲೂ ಮಾನವೀ ಪ್ರಾಣಿಯ ಬುದ್ಧಿಯು ವಿಶಿಷ್ಟವಾದುದೆಂಬಲ್ಲಿ ಸಂದೇಹವಿಲ್ಲ; ಆದರೂ ಅದಕ್ಕೂ ಮರ್ಯಾದೆಯುಂಟಲ್ಲವೇ ? ಮನುಷ್ಯನಲ್ಲಿಯೇ ಬುದ್ಧಿಯ ಪರಮಾ ವಧಿಯನ್ನು ಹೇಳಕೂಡದು. ಮನುಷ್ಯ ಮನುಷ್ಯರಲ್ಲಿಯೇ ಬುದ್ಧಿಯ ತಾರತಮ್ಯವು ಕಾಣಬರುತ್ತಿರಲು, ಮನುಷ್ಯರು ಮೊದಲಾಗಿ ಬ್ರಹ್ಮಲೋಕ ದೊಳಗಿನ ಜೀವರ ಪರ್ಯಂತ ಆ ಬುದ್ಧಿಯ ಅಧಿಕತರತ್ವವೂ ಅಧಿ ಕತಮತ್ವವೂ ಇರುವಲ್ಲಿ ಸೋಜಿಗವೇನು ? ಆದರೆ ಆಸುರಗುಣವೇ ತಮಗಂಗವಾಗಿರುವ ಮಾನಿಸರಿಗೆ ಈ ತತ್ತ್ವವು ಗೊತ್ತಾಗದು. ಆದ್ದ ರಿಂದ ಮನುಷ್ಯರಿಗೆ ಕೇವಲ ಬುದ್ಧಿಜನ್ಯವಾದ ತರ್ಕದಿಂದ ಧರ್ಮ ಬ್ರಹ್ಮಗಳೆಂಬ ಈ ಅತೀಂದ್ರಿಯಗಳಾದ ವೇದಾರ್ಥಗಳ ಜ್ಞಾನವುಂಟಾ ಗಲು ಶಕ್ಯವಿಲ್ಲ. ಮತ್ತು, ಮಲಿನವಾದ ಬುದ್ಧಿಯಲ್ಲಿ ಧರ್ಮದ ಸೂಕ್ಷ್ಮ ವಿಷಯಗಳನ್ನು ಆಕಲನ ಮಾಡತಕ್ಕ ಸಾಮರ್ಥ್ಯವಾದರೂ ಇರುವು ದಿಲ್ಲ. ಸದಾಚಾರ, ಸ್ವಾಧ್ಯಾಯ, ಪ್ರವಚನ, ಶಿವಾರ್ಚನಾದಿಗಳಿಂದ ಶುದ್ಧವಾದ ಬುದ್ಧಿಯಲ್ಲಿಯೇ ಆ ಸಾಮರ್ಥ್ಯವು ವ್ಯಕ್ತವಾಗುವುದು. ಅದುಕಾರಣವೇ ಸಂಪ್ರದಾಯ ಶುದ್ಧವಾದ ವೇದಾಗಮಗಳ ಅರ್ಥ ಜ್ಞಾನವೂ ತದನುರೂಪವಾದ ಅನುಷ್ಠಾನವೂ ಎಂಬಿವುಗಳಿಂದೇ ಧರ್ಮ

ಬ್ರಹ್ಮಗಳ ಸಮ್ಯಗ್ಜ್ಞಾನವುಂಟಾಗುವುದಕ್ಕೋಸ್ಕರ ವಿದ್ಯಾಸಂಪ್ರದಾಯದ ಅತ್ಯಂತಾವಶ್ಯಕತೆಯುಂಟು.

ಕೇವಲ ಶಬ್ದಾರ್ಥಜ್ಞಾನವು ಪುಸ್ತಕಗಳನ್ನೋದುವುದರಿಂದುಂಟಾಗದು. ಆದರೆ ಗುರುಪರಂಪರೆಯಿಂದ ನಿಯಮಪೂರ್ವಕವಾಗಿ ಮಾಡಲ್ಪಡುವ ಸ್ವಾಧ್ಯಾಯದಿಂದುಂಟಾಗುವ ಧರ್ಮವೃತ್ತಿಯು ಅದರಿಂದುದ್ಭವಿಸದು: ಧರ್ಮವೃತ್ತಿಯಿಲ್ಲದೆ ಚಿತ್ತಶುದ್ಧಿಯೇ ಸಂಭವಿಸದು; ಚಿತ್ತನೈರ್ಮಲ್ಯವಿಲ್ಲದಿರಲು ಪರಮ ಪುರುಷಾರ್ಥೋಪಯುಕ್ತವಾದ ಜ್ಞಾನವು ದೊರೆಯದು; ಜ್ಞಾನವಿಲ್ಲದಿರಲು ಮೋಕ್ಷವಿಲ್ಲ. ಮೋಕ್ಷವಿಲ್ಲವಾದರೆ ದುಃಖದ ನಿವೃತ್ತಿಯೇ ಆಗದು.

ಪಶ್ವಾದಿಗಳಲ್ಲಿ ಧರ್ಮವನ್ನೂ ಜ್ಞಾನವನ್ನೂ ಸಂಪಾದಿಸುವ ಯೋಗ್ಯತೆಯಿರುವುದಿಲ್ಲ. ಸಕಾಮಧರ್ಮಾಚರಣಪರಾಯಣರಿಗೆ ಫಲಭೋಗಕ್ಕೋಸ್ಕರ ದೇವಾದಿಯೋನಿಗಳು ಪ್ರಾಪ್ತವಾಗುವುದರಿಂದ ಅವರಿಗಾದರೂ ಮೋಕ್ಷಸಾಧನಭೂತವಾದ ಜ್ಞಾನದ ಲಾಭವಾಗುವುದಿಲ್ಲ. ಅವರ ದೀರ್ಘಾಯುಷ್ಯವಾದರೂ ಸುಖೋಪಭೋಗದಲ್ಲಿಯೇ ವ್ಯತೀತವಾಗುವುದು, ಹೀಗೆ ಪಶ್ವಾದಿ ಅನಿಷ್ಟಜನ್ಮಗಳೂ ದೇವಾದಿ ಇಷ್ಟಜನ್ಮಗಳೂ ದುಃಖರೂಪವಾದ ಸಂಸಾರದ ನಿವೃತ್ತಿಗೆ ಕಾರಣಗಳಾಗಿರದೆ ಅದರ ಪ್ರವೃತ್ತಿಗೇ ಹೇತುಗಳಾಗಿವೆ. ಜನ್ಮಮರಣ ಸುಖದುಃಖಪ್ರಾಪ್ತಿರೂಪವಾದ ಸಂಸೃತಿಯು ತೊಲಗುವವರೆಗೆ ನಿತ್ಯಸುಖದ ಪ್ರಾಪ್ತಿಯಾಗುವುದು ಶಕ್ಯವೇ ಇಲ್ಲ. ನಿತ್ಯಸುಖದ ಪ್ರಾಪ್ತಿಯೇ ಮೋಕ್ಷವು. ನಿಷ್ಕಾಮಬುದ್ಧಿಯಿಂದನುಷ್ಠಿಸಲ್ಪಡುವ ಶಿವಾರ್ಚನಾದಿ ಸತ್ಕ್ರಿಯೆಗಳಿಂದ ಚಿತ್ತಶುದ್ಧಿಯನ್ನು ಪಡೆದು ಬ್ರಹ್ಮಾತ್ಮೈಕ್ಯಶಬ್ದಿತ ಲಿಂಗಾಂಗ ಸಾಮರಸ್ಯಜ್ಞಾನಾನುಸಂಧಾನಾಸಕ್ತನಾಗುವುದೇ ನಿತ್ಯ ಸುಖಪ್ರಾಪ್ತಿಯ ಉಪಾಯವು. ಮಾನವ ಜನ್ಮವೇ ಮೋಕ್ಷವನ್ನು ಪಡೆಯಲರ್ಹವಾದುದು. ವೀರಮಾಹೇಶ್ವರನ ಜನ್ಮವಾದರೋ ಕೇವಲ ಮೋಕ್ಷಸಾಧನವಾದ ಶಿವಜ್ಞಾನವನ್ನು ಸಂಪಾದಿಸುವದಕ್ಕೋಸ್ಕರವೇ ಇರುವುದು. ಆ ಜ್ಞಾನವಾದರೋ ವಿದ್ಯಾಸಂಪ್ರದಾಯವಿಲ್ಲದೆ ಉಂಟಾಗಲಾರದು. ವಿದ್ಯಾಸಂಪ್ರದಾಯವು ಅವಿಚ್ಛಿನ್ನವಾಗಿ ಉಳಿದರೇನೇ ಜ್ಞಾನವು ಲಭಿಸುವುದೆಂಬಾಶೆಯು ! ಆದುದರಿಂದ, ಆತ್ಮೋನ್ನತಿಗೆ ಹೇತುವಾದ ವೇದಾಗಮವಿದ್ಯಾಸಂಪ್ರದಾಯವು ವಿಚ್ಛಿನ್ನವಾಗದಂತೆ ಮುಮುಕ್ಷುಜನರು ಪ್ರಯತ್ನಿಸತಕ್ಕದ್ದು.

ಆ ವಿದ್ಯಾಸಂಪ್ರದಾಯವು ಅವಿಚ್ಛಿನ್ನವಾಗಿ ಉಳಿಯಬೇಕಾದರೆ ಅನೂಚಾನಪದ್ಧತಿಯೂ ಆವಶ್ಯವಾಗಿರಬೇಕಾದುದಲ್ಲವೇ ? ಅದುಕಾರಣವೇ ವಿದ್ಯಾರ್ಥಿಗೆ ಸಂಪ್ರದಾಯಶುದ್ಧನಾದ ಆಚಾರ್ಯನ ಉಪಸನ್ನತಿಯು ವಿಹಿತವಾಗಿರುವಂತೆ, ಆಚಾರ್ಯನಾದರೂ ವಿದ್ಯಾರ್ಥಿಯ ಗುಣಾವಗುಣಗಳನ್ನು ವಿಚಾರಿಸುವುದು ಯುಕ್ತವಾಗಿರುವದು ಲೌಕಿಕ ವಿದ್ಯೆಗಳನ್ನು ಕಲಿಸತಕ್ಕ ಸಾಲೆಗಳಲ್ಲಾದರೂ ವಿದ್ಯಾರ್ಥಿಯ ಗುಣಾವಗುಣಗಳ ವಿಷಯದಲ್ಲಿ ತಕ್ಕಮಟ್ಟಿಗಾದರೂ ವಿಚಾರಿಸುವುದುಂಟು. ಅಸಾಮಾನ್ಯವಾದ ವೈದಿಕವಿದ್ಯೆಯ ವಿಷಯವಾಗಿ ಅಧಿಕಾರಿಯ ಬಗ್ಗೆ ವಿಚಾರಮಾಡಲ್ಪಡಬೇಕಾದುದು ಉಚಿತವೇ ಸರಿ. ಆದ್ದರಿಂದ ವೈದಿಕಸಾಹಿತ್ಯರೂಪಗಳಾದ ಬಹುತರವಾಗಿ ಸಮಸ್ತದರ್ಶನ ಗ್ರಂಥಗಳ ಪ್ರಾರಂಭದಲ್ಲಿ ಸರ್ವಗ್ರಂಥಕಾರರೂ ಅಧಿಕಾರಿ, ವಿಷಯ, ಸಂಬಂಧ, ಪ್ರಯೋಜನವೆಂಬೀ ಅನುಬಂಧ ಚತುಷ್ಟಯವನ್ನು ಹೇಳುವುದು ವಾಡಿಕೆಯಾಗಿದೆ. [ ಅನುಬಂಧಃ- ಪುರುಷಮನುಬಧ್ನಾತಿ, ಸ್ವಜ್ಞಾನೇನ ಪ್ರೇರಯತೀತ್ಯನುಬಂಧಃ । ಅನುಬಂಧತ್ವಂಚ ಗ್ರಂಥಪ್ರವೃತ್ತಿ ಪ್ರಯೋಜಕಜ್ಞಾನ ವಿಷಯತ್ವಂ ॥ ] ಅಂದರೆ ಗ್ರಂಥದಲ್ಲಿ ಪುರುಷನ ಪ್ರವೃತ್ತಿಯು ಯಾವುದರ ಜ್ಞಾನದಿಂದುಂಟಾಗುವುದೋ ಅದು ಅನುಬಂಧವೆಂದು ಹೇಳಲ್ಪಡುವುದು. ಈ ಅನುಬಂಧವೆಂಬುದು ಮೇಲೆ ಹೇಳಿರುವಂತೆ ಅಧಿಕಾರಿ ಮೊದಲಾಗಿ ನಾಲ್ಕು ವಿಧವಾಗಿರುವುದು. ಇದೇ ಮೇರೆಗೆ 'ವೇದಪರಿಚಯು' ಕ್ಕೆ ಅಧಿಕಾರಿ ಯಾವನು ? ವೇದದಲ್ಲಿ ಯಾವ ವಿಷಯವಿದೆ ? ಸಂಬಂಧವಾವುದು ? ವೇದವು ಯಾವ ಪ್ರಯೋಜನವುಳ್ಳದ್ದು ? ಎಂಬ ಅನುಬಂಧಚತುಷ್ಟಯ ವಿಚಾರಾವಸರದಲ್ಲಿ ಅಧಿಕಾರಿಯ ಪ್ರಸ್ತಾಪವು ಮೊದಲನೆಯದಾಗಿರುತ್ತದೆ. ಇಲ್ಲಿ ಸಮಯದೀಕ್ಷಾ ಸಂಸ್ಕಾರ ಸಂಪನ್ನನೇ ಅಧಿಕಾರಿಯು.

ಪ್ರಾಚೀನಕಾಲದಲ್ಲಿ ವಿದ್ಯಾರ್ಥಿಗಳು ಆಚಾರ್ಯನ ಬಳಿಯಲ್ಲಿದ್ದು ವಿದ್ಯಾಭ್ಯಾಸವನ್ನು ಮಾಡುತ್ತಿದ್ದರು. ವಿದ್ಯಾರ್ಜನೆಗಾಗಿ ಗುರುಗೃಹದಲ್ಲಿಯೇ ವಾಸಮಾಡುತ್ತಿದ್ದ ಆ ವಿದ್ಯಾರ್ಥಿಗಳು ಗುರುಸೇವೆಯನ್ನಾದರೂ ಮನಮುಟ್ಟಿಮಾಡಲೇಬೇಕಾಗುತ್ತಿತ್ತು. ಇಂತಹ ಎಷ್ಟೋಜನ ವಿದ್ಯಾರ್ಥಿಗಳಲ್ಲಿ ಕೆಲವರಾದರೋ ವಿದ್ಯಾಭ್ಯಾಸವು ಪೂರ್ಣವಾಗುವವರೆಗೆ ಗುರುಗೃಹದಲ್ಲಿ ವಾಸಮಾಡಿಕೊಂಡಿರಬೇಕೆಂಬ ದೃಢನಿಶ್ಚಯಾತ್ಮಕವೃತ್ತಿಯುಳ್ಳವರಾಗುತ್ತಿದ್ದರು. ಅವರು ಗುರುಪ್ರಸನ್ನತೆಗೆ ಪಾತ್ರರಾಗಿ ಸಂಪೂರ್ಣ

ವಿದ್ಯೆಯನ್ನು ಕಲಿತು ವಿದ್ವಾಂಸರಾದ ಬಳಿಕ ಗುರುವನ್ನು ದಕ್ಷಿಣಾನ್ನಾದಿಗಳಿಂದ ಸಂತೋಷಗೊಳಿಸಿ ಅವನ ಅನುಜ್ಞೆಯನ್ನು ಪಡೆದು ಸುಮೂಹೂರ್ತದೊಳು ಆಚಾರ್ಯಗೃಹದಲ್ಲಿ ಸ್ನಾನವೆಂಬ ಅಪರಪರ್ಯಾಯನಾಮವುಳ್ಳ ಸಮಾವರ್ತನಾಖ್ಯಕರ್ಮವನ್ನು ನೆರವೇರಿಸಿ ತಮ್ಮ ತಮ್ಮ ಸ್ಥಳಗಳಿಗೆ ಹೊರಡಲುದ್ಯುಕ್ತರಾಗಲು, ಆ ಸಮಯದಲ್ಲಿ ಆಚಾರ್ಯನು ಮುಂದೆ ಅವರು ಜೀವಮಾನದಲ್ಲಿ ವ್ಯಾಹವಾರಿಕ ಪಾರಮಾರ್ಥಿಕೋನ್ನತಿಗಳನ್ನು ಯಾವ ನಡವಳಿಕೆಗಳಿಂದ ಸಾಧಿಸಿಕೊಳ್ಳಬೇಕೆಂಬುದರ ವಿಷಯದಲ್ಲಿ ನೆನಪಿನಲ್ಲಿಡತಕ್ಕ ವಾಕ್ಯಗಳನ್ನು ಉಪದೇಶಿಸುವುದರ ದಿಗ್ದರ್ಶನವು ತೈತ್ತಿರೀಯೋಪನಿಷತ್ತಿನ ಶಿಕ್ಷಾಧ್ಯಾಯದ ಹನ್ನೊಂದನೆಯ ಅನುವಾಕದಲ್ಲಿರುವುದು. ಹೇಗೆಂದರೆ :— " **ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ** " ಎಂಬ ವಾಕ್ಯದಿಂದಾರಂಭಿಸಲ್ಪಡುವುದು.

ಆ ಉಪದೇಶವಾಕ್ಯಗಳ ಸಾರಾಂಶವು ಹೀಗಿರುವುದು— ಅಸತ್ಯವನ್ನು ನುಡಿಯಕೂಡದು. ಯಾವಾಗಲೂ ಸತ್ಯವನ್ನೇ ನುಡಿಯುವುದು ಅತ್ಯಂತ ಶ್ರೇಯಸ್ಕರವಾದುದು. ಸ್ವಾಧ್ಯಾಯವನ್ನು ದುರ್ಲಕ್ಷಿಸಕೂಡದು. ಯಾವನ ಕೃಪೆಯಿಂದ ತನಗೆ ವಿದ್ವತ್ತೆಯು ಲಭಿಸಿರುವುದೋ ಆ ಆಚಾರ್ಯನಿಗೆ ಸ್ವಶಕ್ತ್ಯನುಸಾರವಾಗಿ ದ್ರವ್ಯಾದಿ ವಸ್ತುಗಳನ್ನರ್ಪಿಸತಕ್ಕದ್ದು. ಪ್ರಜಾತಂತುವನ್ನು ಉಚ್ಛೇದಿಸಕೂಡದು; ಅಂದರೆ, ವಿವಾಹವಾಗಿ ವಂಶವನ್ನು ವೃದ್ಧಿಪಡಿಸಬೇಕು. ಸತ್ಯದಿಂದ ಭ್ರಷ್ಟನಾಗಬಾರದು. ಸ್ವಧರ್ಮದಿಂದ ಚ್ಯುತನಾಗಕೂಡದು. ತನ್ನ ಮತ್ತು ತನ್ನ ಸಮಾಜದ ತನ್ನ ರಾಷ್ಟ್ರದ ಕುಶಲ ( ಸ್ವಾಸ್ಥ್ಯ ) ದ ವಿಷಯದಲ್ಲಿ ಜಾಗರೂಕನಾಗಿರತಕ್ಕದ್ದು. ಜ್ಞಾನಸಾಧನವಾದ ಭೂತಿಯನ್ನು ( ಭಸಿತವನ್ನು ) ದುರ್ಲಕ್ಷಿಸಕೂಡದು. ಅಧ್ಯಯನ ಅಧ್ಯಾಪನ ( ಸ್ವಾಧ್ಯಾಯಪ್ರವಚನ ) ವ್ಯಾಸಂಗವನ್ನು ಬಿಡಕೂಡದು. ದೇವರ ( ಪರಮೇಶ್ವರನ ) ಧ್ಯಾನ ಪೂಜಾದಿ ಕಾರ್ಯಗಳಲ್ಲಿ ಪ್ರಮಾದವು ಸಲ್ಲದು.

ಈ ಮೇಲಿನ ಮಂತ್ರದೊಳಗಿನ " **ಪ್ರಜಾತನ್ತುಂ ಮಾವ್ಯಚ್ಛೇತ್ಸೀಃ ।** " ಎಂಬ ವಾಕ್ಯದಲ್ಲಿರುವ ಕ್ರಿಯಾಪದವು ಆಜ್ಞಾರ್ಥಕವಿರುವುದು. ಇದರಿಂದ ಬ್ರಹ್ಮಚರ್ಯಾಶ್ರಮಾನಂತರದಲ್ಲಿ ವಿವಾಹವಾಗಬೇಕೆಂದೇ ಶ್ರುತಿಯು ಕಟ್ಟಪ್ಪಣೆಯಿರುವುದಾಗಿ ಕಂಡುಬರುವುದಾದರೂ ಆ ವಾಕ್ಯದ ನಿಜವಾದಭಿಪ್ರಾಯವೇನಂದರೆ ವಂಶಚ್ಛೇದವಾಗುವುದೆಂದು

ತಿಳಿದು ಬಂದರೆ ಮಾತ್ರ ಅವಶ್ಯವಾಗಿ ವಿವಾಹವಾಗಬೇಕು; ವಂಶ ಚ್ಛೇದವಾಗಗೊಡಬಾರದು. ಎಂಬ ಅಭಿಪ್ರಾಯವು "ಪ್ರಜಾತನ್ತುಮ್" ಎಂಬೀ ವಾಕ್ಯದಿಂದ ಸಿದ್ಧಿಸುವುದು. ಒಂದು ಇಡೀ ವಂಶವೇ ನಿರ್ವಂಶ ವಾಗುವಂತಿದ್ದರೆ ಆ ವಂಶದಲ್ಲುಳಿದಿರುವ ಒಬ್ಬನೇ ಒಬ್ಬನಾದ ಪುರು ಷನು ಆಜನ್ಮ ಬ್ರಹ್ಮಚಾರಿಯಾಗಿರುವೆನೆಂದು ಹಟಹಿಡಿಯಬಾರದು. ಇನ್ನು, ಆ ವಿಧವಾದ ಯಾವ ಸಂಬಂಧದ ತೊಡಕೂ ಇಲ್ಲದೆ, ಬ್ರಹ್ಮಚರ್ಯ ವನ್ನು ಪಾಲಿಸತಕ್ಕ ಯೋಗ್ಯತೆಯು ತನ್ನಲ್ಲಿರುವುದಾದರೆ ಅಂತಪ್ಪ ಪುರುಷನು ಯಾವಜ್ಜೀವವೂ ಬ್ರಹ್ಮಚರ್ಯವ್ರತವನ್ನು ಕೈಕೊಳ್ಳುವುದು ಅಧಿಕ ಶ್ರೇಯಸ್ಕರವಾದುದು. ಹಾಗಾದರೆ, ವಿದ್ಯಾಧ್ಯಯನವು ಪೂರ್ಣ ವಾದ ಬಳಿಕ ವಿವಾಹವಾಗಬೇಕೆಂಬ ಆ ವಿಧಿವಾಕ್ಯದ ಗತಿಯೇನು ? ಎಂದರೆ, ಅದು ಅನುಜ್ಞಾಪಕವಿಧಿಯು; ಅಪೂರ್ವವಿಧಿಯಲ್ಲ. ಅಂದರೆ, ವಿವಾಹವಾಗದಿದ್ದರೆ ಪಾಪವು ಸಂಭವಿಸುವುದೆಂದು ತಿಳಿಯಲ್ಪಡತಕ್ಕ ದ್ದಲ್ಲ. ವಂಶಪರಂಪರೆಯು ನಷ್ಟವಾಗದಂತೆ ಒಂದೇ ಗೋತ್ರದೊಳಗಿನ ಇತರ ಅಣ್ಣತಮ್ಮಂದಿರ ಸಂತತಿಯು ಹೆಚ್ಚಾಗಿ ಹಬ್ಬಿದರೂ ವಿವಾಹ ವಾಗಲಿಕ್ಕೇಬೇಕೆಂಬ ಕಟ್ಟಳೆಯಿರುವುದಿಲ್ಲ. ವಿವಾಹವಾಗದೆ ಬ್ರಹ್ಮಚ ರ್ಯವನ್ನು ಧರಿಸಿ ಅತ್ಯಾಶ್ರಮವ್ರತವನ್ನು ಕೈಕೊಂಡು ಧರ್ಮಾಭಿವೃದ್ಧಿ ಮೊದಲಾದ ಸರ್ವಜನಹಿತಕಾರಕಕೃತಿಗಳಲ್ಲಿಯೇ ತೊಡಗಿರುವಾತನು ಶ್ರುತಿಮಾತೆಗೆ ವಿಶೇಷಾದರಣೀಯನಾಗಿರುವನು. ಯಾವದೊಂದು ಮತದ ತತ್ವಗಳನ್ನು ಪ್ರಸಾರಮಾಡತಕ್ಕ ಕಾರ್ಯದಲ್ಲಿ ಇಂತಹ ನೈಷ್ಠಿಕಬ್ರಹ್ಮ ಚಾರಿಗಳ ಆವಶ್ಯಕತೆಯು ಎಷ್ಟಿರುವುದೆಂಬ ವಿಷಯದಲ್ಲಿ ಬೇರೆ ಬಣ್ಣಿಸ ಬೇಕಿಲ್ಲ. ಸ್ವಸುಖಾನುಭವಕ್ಕೆ ಸಾಧನೀಭೂತಗಳೆಂದರಿಯಲ್ಪಡುವ ವನಿ ತಾದಿವಿಷಯಗಳನ್ನು ಮನಃಪೂರ್ವಕವಾಗಿ ಸಂಪೂರ್ಣ ತ್ಯಜಿಸಿದವರೂ, ವಿದ್ಯಾವಂತರೂ ಸತ್ಕ್ರಿಯಾನಿಷ್ಠರೂ, ಪವಿತ್ರಾತ್ಮರೂ ಆದ ನೈಷ್ಠಿಕ ಬ್ರಹ್ಮಚಾರಿಗಳು ಯಾವ ಮತದಲ್ಲಿರುವರೋ ಆ ಮತದ ಉನ್ನತಿಯಾ ಗದಿರದು. ಏಕೆಂದರೆ, ಸ್ವಾರ್ಥತ್ಯಾಗಿಗಳೂ, ನಿರಹಂಕಾರಿಗಳೂ ಆದ ಅವರು ಆ ಮತದೇಳ್ಗೆಗಾಗಿಯೇ ತಮ್ಮ ಆಯುಷ್ಯವನ್ನೆಲ್ಲ ಅರ್ಪಿಸತ ಕ್ಕವರಾಗಿರುತ್ತಾರೆ. ಹಿಂದಿನ ಕಾಲದಲ್ಲಿ ಅಂಥವರು ಬಹುಜನರಿದ್ದರೆಂ ಬುದು ಇತಿಹಾಸದಿಂದ ತಿಳಿದು ಬರುತ್ತದೆ. ಈಗಲಾದರೂ ಅಂತೊ ಪ್ಪುವ ನೈಷ್ಠಿಕಬ್ರಹ್ಮಚಾರಿಗಳು ಅತ್ಯಲ್ಪ ಜನರಾದರೂ ಯಾವ ಮತ ದಲ್ಲಿ ವಿರಾಜಿಸುವರೋ ಆ ಮತವು ಊರ್ಜಿತಾವಸ್ಥೆಯಲ್ಲಿರುವುದೆಂಬು ದಾಗಿಯೇ ನಿಸ್ಸಂದೇಹವಾಗಿ ಹೇಳಬಹುದು. ಹೀಗೆ ಔಪನಿಷದ್ವಾಙ್ಮಯ

ಪುರಸ್ಕೃತರಾದ ನೈಷ್ಠಿಕಬ್ರಹ್ಮಚಾರಿಗಳೇ ಆಚಾರ್ಯಪಟ್ಟಾಭಿಷಿಕ್ತರಾದರೆ ಕೇಳುವುದೇನು ? ಬಂಗಾರಕ್ಕೆ ಕುಂದಣವಿಟ್ಟಂತಲ್ಲವೇ ! ಆದರೆ, ಯಾರಾದರೂ ಪ್ರಸಂಗಮಾತ್ರವನ್ನನುಸರಿಸಿ ಆ ಆ ಕಾಲಕ್ಕೆ ತಕ್ಕಷ್ಟು ತ್ಯಾಗವೃತ್ತಿಯನ್ನು ಹೊರಗೆಡಹುದರಿಂದ, ಸಮಾಜೋನ್ನತಿಯೆಂಬ ಅಕ್ಷಯಫಲವು ಅವರ ಉಡಿಯಲ್ಲಿ ಬೀಳಲಾರದೆಂಬ ಸಂಗತಿಯು ಮರೆಯಲ್ಪಡತಕ್ಕದ್ದಲ್ಲ. ಮಹಾಭಾರತದಲ್ಲಿ ( ಅನುಶಾ. ೭೫; ೩೫ )—

ಆ ಜನ್ಮಮರಣಾದ್ಯಸ್ತು ಬ್ರಹ್ಮಚಾರೀ ಭವೇದಿಹ ।
ನ ತಸ್ಯ ಕಿಂಚಿದಪ್ರಾಪ್ಯಮಿತಿ ವಿದ್ಧಿ ನರಾಧಿಪ ॥

ಎಂಬುದಾಗಿ ಹೇಳಲ್ಪಟ್ಟಿರುವ ವಾಕ್ಯವನ್ನು ಆಜನ್ಮಬ್ರಹ್ಮಚಾರಿಗಳಾಗಿರತಕ್ಕವರು ಮನನಮಾಡತಕ್ಕದ್ದು. ಮತ್ತು, ಈ ಅನುವಾಕದ ಎರಡನೆಯ ಮಂತ್ರದಲ್ಲಿರುವ ನಾಲ್ಕುವಾಕ್ಯಗಳಿಂದ ತಾಯಿ ತಂದೆ ಗುರು ಅತಿಥಿಗಳು ಪೂಜ್ಯರೆಂಬರ್ಥವು ಬೋಧಿಸಲ್ಪಡುವುದು. ಮೂರನೆಯ ಮಂತ್ರದಿಂದ ಏಳನೆಯ ಮಂತ್ರದವರೆಗಿರುವ ಉಪದೇಶವಾಕ್ಯಗಳ ಸಾರಾಂಶವು ಹೀಗಿರುವುದು. ದೋಷಯುಕ್ತಗಳಾದ ಕರ್ಮಗಳನ್ನು ತ್ಯಜಿಸಿ, ವಿಹಿತಕರ್ಮಗಳನ್ನೇ ಅನುಷ್ಠಿಸತಕ್ಕದ್ದು. ಪವಿತ್ರಾತ್ಮರಾದ ಗುರುಗಳಿಗೆ ತಾವೇ ಸರ್ವಜ್ಞರೂ ಸರ್ವೋತ್ಕೃಷ್ಟರೂ ಎಂಬ ಹೆಮ್ಮೆಯಿರುವುದಿಲ್ಲ; ಅವರು ತಮಗಿಂತ ವಯೋವೃದ್ಧರೂ ಜ್ಞಾನವೃದ್ಧರೂ ಗುರುತ್ವಾಧಿಕಾರವುಳ್ಳವರೂ ಆದ ಪೂಜ್ಯರು ಅತಿಥಿ ( ಚರ ) ರೂಪದಿಂದ ಆಗಮಿಸಿದರೆ ತಮ್ಮನ್ನು ಹೇಗೋ ಹಾಗೇ ಶಿವಭಾವನೆಯಿಂದ ಅವರನ್ನೂ ಅಭ್ಯುತ್ಥಾನ, ಅಭ್ಯುದ್ಗಮನ, ಉಚ್ಚಾಸನದಾನ, ಪಾದಪ್ರಕ್ಷಾಲನಾದಿಗಳಿಂದ ಸತ್ಕರಿಸಬೇಕೆಂದು ತಮ್ಮ ಶಿಷ್ಯರಿಗೆ ಬೋಧಿಸುತ್ತಾರೆ. ಹಾಗೂ, ಯಥಾಶಕ್ತಿದಾನಮಾಡಬೇಕು; ದಾನಮಾಡುವಲ್ಲಿ ಅಹಂಕಾರಾದಿ ಗುಣಗಳಿರಕೂಡದು. ಅಂದರೆ, ಶ್ರದ್ಧೆಯಿಂದಲೂ ಆದರಪೂರ್ವಕವಾಗಿಯೂ ಪ್ರಹ್ವೀಭಾವದೊಡನೆಯೂ ಅಧರ್ಮದ ಭೀತಿಯಿಂದಲೂ ಪಾತ್ರಾಪಾತ್ರವಿಚಾರಪೂರ್ವಕವಾಗಿಯೂ ದಾನಮಾಡತಕ್ಕದ್ದು. ಇನ್ನು, ಧಾರ್ಮಿಕಾಚರಣೆಗಳಲ್ಲಿಯೂ ವ್ಯಾವಹಾರಿಕ ನಡವಳಿಕೆಗಳಲ್ಲಿಯೂ ಅದನ್ನು ಮಾಡಬೇಕೋ ಇದನ್ನು ಮಾಡಬೇಕೋ ಎಂಬ ಸಂಶಯವುಂಟಾದರೆ, ಆ ಸಮಯದಲ್ಲಿ ವಿವೇಕಶೀಲರೂ, ಕರ್ತವ್ಯತತ್ಪರರೂ ಸ್ವತಂತ್ರ ಬುದ್ಧಿಯುಳ್ಳವರೂ ದುರಾಗ್ರಹವಿಲ್ಲದವರೂ ಸ್ವಧರ್ಮನಿಷ್ಠರೂ ಆಗಿರತಕ್ಕ ಶ್ರೇಷ್ಠಪುರುಷರ

ಆಚಾರವಿಚಾರಗಳನ್ನೇ ಅನುಸರಿಸಿ ನಡೆಯಬೇಕು. ಒಮ್ಮೊಮ್ಮೆ ಸುಸಂಸ್ಕಾರಹೀನರೂ ಪಾಪಾತ್ಮರೂ ಆದ ಜನರೊಡನೆ ವ್ಯವಹರಿಸುವ ಪ್ರಸಂಗವೊದಗಿದಲ್ಲಿ ಮೇಲ್ಕೆ ಹೇಳಲ್ಪಟ್ಟಂತೆ ಸರ್ವಸದ್ಗುಣೋಪೇತರಾದ ಜ್ಞಾನವೃದ್ಧರ ಅನುಜ್ಞೆಯ ಮೇರೆಗೆ ವರ್ತಿಸಬೇಕು. ಇದುವೇ ಆಚಾರ್ಯರ (ಗುರುಗಳ) ಆದ್ದೇಶವು (ಆಜ್ಞೆಯು). ಇದುವೇ ಉಪದೇಶವು, ಇದುವೇ ವೇದರಹಸ್ಯವು, ಇದುವೇ ನಿಯಮವು. ಈ ವಿಧವಾದ ಆಚರಣೆಯೇ ಅನುಷ್ಠಿಸಲ್ಪಡತಕ್ಕದ್ದು. ಎಂಬಲ್ಲಿಗೆ ತೈತ್ತಿರೀಯೋಪನಿಷದೊಳಗಿನ ಶಿಕ್ಷಾಧ್ಯಾಯ ಪ್ರತಿಪಾದ್ಯ ವಿಷಯವು ಸಮಾಪ್ತಿಯಾಗಿರುವುದು.

ಈ ಮೇಲ್ಲಿನ ವಿವೇಚನೆಯಿಂದ ಅಭ್ಯುದಯ ನಿಃಶ್ರೇಯಸ್ಸುಗಳೆಂಬಿವೆರಡೂ ಅಭಿಮತವಾಗಿರುವ ಗುರುಶಿಷ್ಯರ ಕರ್ತವ್ಯತತ್ಪರತೆಯಾದರೋ ವೇದಾಗಮಪಠನ ( ಅಧ್ಯಯನ ) ಪದ್ಧತಿಯಿಂದೇ ಆರಂಭಿಸಲ್ಪಡುವುದೆಂಬ ಸಂಗತಿಯು ದೃಢವಾಗುವುದು. ಪ್ರಾಚೀನ ಆರ್ಯಧರ್ಮತತ್ತ್ವಗಳು ವೇದಾಗಮಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದರಿಂದ, ವೇದಾಗಮಗಳ ಅಧ್ಯಯನವಿಲ್ಲದೆ ಅವನ್ನು ಅರಿತುಕೊಳ್ಳಲು ಶಕ್ಯವಿಲ್ಲ. ಇದರಿಂದ ವೇದಾಗಮಗಳಲ್ಲಿ ವಿಧಿಸಲ್ಪಡುವ ಸನಾತನಧರ್ಮಸ್ವರೂಪದ ವಿಚಾರವು ವೇದಾಗಮಾಧ್ಯಯನಾನಂತರದಲ್ಲಿಯೇ ಸಂಭವಿಸುವುದೆಂಬುದು ಸಿದ್ಧವಾಗುತ್ತದೆ. ಈ ರೀತಿಯಾಗಿ ಅಧಿಕಾರಿಯ ಲಕ್ಷಣಪ್ರತಿಪಾದನಾನಂತರದಲ್ಲಿ ಉಳಿದ ಅನುಬಂಧಗಳ ಸ್ವರೂಪವನ್ನೂ ನಿರೂಪಿಸಬೇಕಾದುದು ಕ್ರಮಪ್ರಾಪ್ತವಾದುದು. ಇಷ್ಟ ವಸ್ತುವಿನ ಪ್ರಾಪ್ತಿಗಾಗಿಯೂ ಅನಿಷ್ಟವಿಷಯಮೂಲಕ ಸಂಭವಿಸುವ ಕಷ್ಟ ( ದುಃಖ ) ನಿವಾರಣೆಗಾಗಿಯೂ ಅಲೌಕಿಕೋಪಾಯವನ್ನು ತಿಳುಹುಹ ಗ್ರಂಥವು ಅಥವಾ ಜ್ಞಾನವು 'ವೇದ' ವೆಂದು ಹೇಳಿಸಿಕೊಳ್ಳಲ್ಪಡುವುದೆಂಬ ವೇದದ ಸ್ವರೂಪವನ್ನು ಮೊದಲೇ ನಾವು ಹೇಳಿದ್ದೇವೆ. ಇಷ್ಟಪ್ರಾಪ್ತಿಗೂ ಅನಿಷ್ಟಪರಿಹಾರಕ್ಕೂ ಸಂಬಂಧಿಸಿದ ಲೌಕಿಕೋಪಾಯವೇ ವೇದಗ್ರಂಥದ ವಿಷಯವು ವೇದವು ಲೌಕಿಕೋಪಾಯವನ್ನು ಬೋಧಿಸುವ ಮೂಲಕ ಉಪಕಾರಿಯಾಗಿದೆ. ( ಉಪಕಾರಿ, ಉಪಕಾರಕವೆಂಬಿವೆರಡೂ ಪರ್ಯಾಯನಾಮಗಳು ) ಅಂತಪ್ಪ ಉಪಕಾರವನ್ನು ಪಡೆಯುವವನಾದ ಅಧಿಕಾರಿಯು ಉಪಕಾರ್ಯನೆನಿಸುವನು. ಹೀಗೆ ವೇದಕ್ಕೂ ವೇದಾಧಿಕಾರಿಗೂ ಉಪಕಾರಕ ಉಪಕಾರ್ಯಭಾವಸಂಬಂಧವಿದೆ. ಅಧಿಕಾರಿ ಪ್ರವೃತ್ತಿಗೆ ಗುರಿಯಾದ ವೇದವು ಅನಿಷ್ಟನಿವೃತ್ತಿಪೂರ್ವಕ ಇಷ್ಟಪ್ರಾಪ್ತಿಯೇ ಪ್ರಯೋಜನವುಳ್ಳದ್ದಾಗಿದೆ. ಇಂತು,

ಧರ್ಮಾರ್ಥಕಾಮಮೋಕ್ಷರೂಪ ಪುರುಷಾರ್ಥಾಪೇಕ್ಷಿಗಳಿಗೆ ವೇದವು ಪರಮೋಪಾದೇಯವಾದುದರಿಂದ, ನಾವಿನ್ನು ಬಳಿಕ ವೇದಚತುಷ್ಟಯಸಾರವನ್ನು ಸಂಗ್ರಹಿಸಲುದ್ಯುಕ್ತರಾಗುವಾ.

ಇಂತು ವೇದಪರಿಚಯ ಗ್ರಂಥದಪೂರ್ವಭಾಗದಲ್ಲಿ
ಮೂರನೆಯ ಉಲ್ಲಾಸವು ಮುಗಿದುದು.

---

ಶಿವಂ ಭೂಯಾತ್



"ವಿದ್ಯಾವಾಚಸ್ಪತಿ" ಪರಮಪೂಜ್ಯ ಶ್ರೀ ಶ್ರೀಗುರು ಶಂಭುಲಿಂಗ ಶಿವಾಚಾರ್ಯ ಮಹಾ ಸ್ವಾಮಿಗಳವರಿಂದ ರಚಿತವಾದ ಗ್ರಂಥಗಳು.



೧ ಅಷ್ಟಾವರಣವಿವೇಕ

೨ ಮಹಿಮ್ನಸ್ತವ ಟೀಕೆ.

೩ ಆಗಮಪರಿಜ್ಞಾನ.

೪ ವೇದಪರಿಚಯ.

೫ ವೈದಿಕವಾಙ್ಮಯ ರಹಸ್ಯ.

೬ ಶಿವಶಕ್ತಿವಿಲಾಸ.

೭ ತತ್ತ್ವಜ್ಞಾನ.

೮ ಗೋರಕ್ಷಣೆ.

೯ ನಿಜಮುಕ್ತಿತ್ರಿಪದಿ.

೧೦ ಬೋಧರತ್ನಾಕರ.

